# ಶ್ರೀ ನೃಸಿಂಹ ಸಹಸ್ರನಾಮಾವಳಿ

## ನಾಮಾನುಕ್ರಮದಲ್ಲಿ ಅರ್ಥ ತಾತ್ಪರ್ಯ ವ್ಯಾಖ್ಯಾನಗಳು

## ಸಂಪುಟ - ಒಂದು



*ಲಕ್ಷ್ಮೀನೃಸಿಂಹ ಮಮದೇಹಿ ಕರಾವಲಂಬಮ್*

ಲೇಖಕರು: ಹೆಚ್. ಎಸ್. ನರಸಿಂಹಮೂರ್ತಿ

# ಶ್ರೀ ನೃಸಿಂಹ ಸಹಸ್ರನಾಮಾವಳೀ

## ನಾಮಾನುಕ್ರಮದಲ್ಲಿ ಅರ್ಥ ತಾತ್ಪರ್ಯ ವ್ಯಾಖ್ಯಾನಗಳು

## ಸಂಪುಟ - ಒಂದು

ಲೇಖಕರು: ಹೆಚ್. ಎನ್. ನರಸಿಂಹಮೂರ್ತಿ

ಪ್ರಕಾಶಕರು
ನೃಸಿಂಹ ಪ್ರಕಾಶನ
21 ನೇ ಅಡ್ಡರಸ್ತೆ,
ಎಸ್. ಐ. ಟಿ. ಬಡಾವಣೆ,
ತುಮಕೂರು - 572102

Sree Nrushima Sahasra Namavalee
Namanu Kramadalli - Artha - Thathparya
Vyakhyanagalu - Samputa ondhu
Written by
H. N. Narsimha Murthy
Published by
Nrusimha Prakashana - Tumakur
Ph : 73073



**Rate 120/-**

This book is published with the financial assistance of Tirumala Tirupathi Devasthanams under their Scheme aid to publish relegious books.

Printed at
Sainath Graphics
205/2, Aralepete
Bangalore - 560 053
Ph : 620650

ಪುಟಸಂಖ್ಯೆ

## ಈ ಪುಸ್ತಕ ದೊರೆಯುವ ಸ್ಥಳಗಳು

1. ನೃಸಿಂಹ ಪ್ರಕಾಶನ
   C/o H. N. ನರಸಿಂಹಮೂರ್ತಿ
   21 ನೇ ಅಡ್ಡರಸ್ತೆ
   S. I. T. ಬಡಾವಣೆ
   ತುಮಕೂರು - 572 102
   Phone No. (0816) 73073

2. ಶ್ರೀ ಶ್ರೀನಿವಾಸ ಮೂರ್ತಿ
   No. 30, 1 ನೇ ಮೈನ್,
   2 ನೇ ಕ್ರಾಸ್,
   ಶ್ರೀನಿವಾಸನಗರ,
   ಬಿ. ಎಸ್. ಕೆ. 1ನೇ ಘಟ್ಟ,
   ಬೆಂಗಳೂರು - 560 050.
   Phone No. 6697071

3. ಶ್ರೀ ಬಿ. ಎಸ್. ರಾಮಶಾಸ್ತ್ರಿ
   5/2 ಶಂಕರಮಠ ರಸ್ತೆ
   ಬೆಂಗಳೂರು - 560 004.
   Phone No. 622131

4. ಸರಸ್ವತಿ ಬುಕ್ ಹೌಸ್,
   No. 71, ಮಾಸ್ತಿ ವೆಂಕಟೇಶ
   ಐಯ್ಯಂಗಾರ್ ರಸ್ತೆ
   ಗವೀಪುರಂ ಬಡಾವಣೆ
   ಬೆಂಗಳೂರು - 560 019.

**Ramakrishna-Vivekananda Ashrama** (Regd.)
4th Cross, Saptapur, Dharwad - 580 001.

ಶ್ರೀ ಶ್ರೀ ಶ್ರೀ ನಿರ್ಭಯಾನಂದ ಸರಸ್ವತಿ ಸ್ವಾಮಿಜಿ
ಅಧ್ಯಕ್ಷರು

16-03-1995

ಶ್ರೀ ರಾಮಕೃಷ್ಣ ಪ್ರಸನ್ನ

ಜೀವಿಯ ಎಲ್ಲ ಚಟುವಟಿಕೆಗಳ ಹಿಂದೆ ಇರುವ ಏಕಮಾತ್ರ ಗುರಿ ಸರ್ವಸ್ವತಂತ್ರವಾಗುವುದು. ಇಲ್ಲಿ ಸ್ವತಂತ್ರರಾಗಲು ನಾವೆಲ್ಲಾ ಬಯಸುತ್ತಿದ್ದೇವೆ ಎನ್ನುವ ಮಾತಿನಲ್ಲೇ ಇನ್ನೊಂದು ಅಂಶ ಅಡಗಿದೆ. ಅದೇನೆಂದರೆ ನಾವು ಈಗಾಗಲೇ ಸ್ವತಂತ್ರರಲ್ಲ ಎನ್ನುವುದು. ಇದಕ್ಕೆ ಕಾರಣ ನಾವು ಕ್ರಮಿಸುವ ಹಾದಿಯಲ್ಲಿ ಅಡ್ಡಿ ಆತಂಕಗಳಿವೆ ಎಂದೋ ಇಲ್ಲವೇ ಇವನ್ನೆಲ್ಲಾ ಮೀರಿ ನಾವು ಈಗಾಗ್ಲೇ ಬೆಳೆದಿಲ್ಲವೆಂದೋ ಆಗುತ್ತದೆ. ಈ ಎಲ್ಲ ಶಕ್ತಿಗಳ ಮೇಲಣ ಹಿಡಿತ ಸಾಧ್ಯವಾಗುವುದು ವಾಮನನಾಗಿರುವ ಮಾನವ ತ್ರಿವಿಕ್ರಮನಾಗಿ ಬೆಳೆದಾಗಲೇ. ಹೀಗೆ ಕ್ರಮ ಕ್ರಮವಾಗಿ ತ್ರಿವಿಕ್ರಮನಾಗಬೇಕಾದ್ದೇ ಜೀವನದ ಧ್ಯೇಯವಾಗಬೇಕು ಎನ್ನುವುದು ಸನಾತನ ಧರ್ಮ ನಮ್ಮ ಮುಂದಿಟ್ಟಿರುವ ಗುರಿ.

ಮತ್ತೆ ಇಲ್ಲಿ ಜೀವನವೆಂದಾಗ ಅದು ಲೌಕಿಕ ಹಾಗೂ ಪಾರಮಾರ್ಥಿಕಗಳೆರಡನ್ನೂ ಒಳಗೊಳ್ಳುತ್ತದೆ. ಇವೆರಡೂ ಪರಸ್ಪರ ಪೂರಕವೇ ಆದ್ದರಿಂದ ಸಮಷ್ಟಿ ಸಾಧಿಸಬೇಕಾದ್ದು ಇವೆರಡು ಕ್ಷೇತ್ರಗಳಿಗೂ ಸಂಬಂಧಿಸಿದ್ದಾಗಿರಬೇಕು. ಹೀಗಾಗಿ ಪುರುಷಾರ್ಥಗಳಲ್ಲಿ ಅರ್ಥ, ಕಾಮಗಳಿಗೂ ಸ್ಥಾನವಿದೆ. ಮೋಕ್ಷಕ್ಕೂ ಸ್ಥಾನವಿದೆ. ಒಂದು ರೀತಿಯಿಂದ ನೋಡಿದರೆ ಅರ್ಥ ಕಾಮಗಳ ಗಮನವಿರಬೇಕಾದ್ದು ಮೋಕ್ಷದ ಕಡೆಗೆಯೇ. ಮೋಕ್ಷದೆಡೆಗೆ ಕರೆದೆಯ್ಯುವ ರೀತಿಯಲ್ಲೇ ಇವೆರಡನ್ನೂ ಮನುಷ್ಯ ಅನುಭವಿಸಬೇಕಾದ್ದು. ಇದಕ್ಕೆ ವ್ಯತಿರಿಕ್ತವಾದ ರೀತಿಯಲ್ಲಿ ನಡೆದಾಗಲೆಲ್ಲಾ ಈ ಪುರುಷಾರ್ಥಗಳೇ ಅವನಿಗೆ ಮಾರಕಗಳಾಗಿವೆ. ಅವೇ ಪ್ರಚಂಡ ಬಂಧನಗಳಾಗಿವೆ.

ಇವೆಲ್ಲವನ್ನೂ ಸವಿಸ್ತಾರವಾಗಿ ಮನವೊಪ್ಪುವ ರೀತಿಯಲ್ಲಿ ತಿಳಿಸುವ ಸಾಹಿತ್ಯವೇ, ವಿಚಾರಧಾರೆಯೇ ಧರ್ಮ. ಆದ್ದರಿಂದ ಎಲ್ಲಾ ಧಾರ್ಮಿಕ ಕ್ರಿಯೆಗಳ ತಂತು ಜೀವಿಯನ್ನು ಮುಕ್ತಿಯೆಡೆಗೆ ಒಯ್ಯುವಂಥಾದ್ದಾಗಿರಬೇಕು. ಪ್ರಕೃತಿಯ ಒಡೆಯನಾದ ಪರಮೇಶ್ವರನನ್ನು ಹಾಗೂ ಪ್ರಕೃತಿಯ ಶಿಶುವಾದ ಜೀವನನ್ನೂ ಕ್ರಮೇಣ ಹತ್ತಿರಕ್ಕೆ ತಂದು ಕೊನೆಯಲ್ಲಿ ಒಂದಾಗಿಸುವ ರೀತಿಯಲ್ಲಿ ಜೀವನವನ್ನು ರೂಪಿಸಿರುವುದೇ ಯೋಗ. ಈ ಯೋಗಗಳು ನಾಲ್ಕು ವಿಧ. ಭಕ್ತಿ, ಜ್ಞಾನ, ಧ್ಯಾನ ಹಾಗೂ ಕರ್ಮ ಎಂದು. ಸರ್ವಜನಸಾಧ್ಯವಾದದ್ದು ಭಕ್ತಿಯೋಗ. ಇಲ್ಲಿ ತೀರ್ಥಯಾತ್ರೆ, ವ್ರತ, ನಿಯಮ ಉಪಾಸನೆ ಇವೆಲ್ಲಾ ಇವೆ.

ಮನಮೋಹಕವಾದ ಭಗವಂತನ ರೂಪವನ್ನೇ ಮನಸ್ಸಿನಲ್ಲಿ ಚಿಂತಿಸುತ್ತಾ ಅವನ ಅನಂತ ಕಲ್ಯಾಣ ಗುಣಗಳನ್ನು ಮೆಲ್ಲುತ್ತಾ ದಿವ್ಯಭಾವಗಳನ್ನು ಆಸ್ವಾದಿಸುತ್ತಾ, ಜೀವಿಸುವುದು ಭಕ್ತನ ಬಯಕೆ. ಇದನ್ನು ಸಾಧ್ಯವಾಗಿಸಲೋಸುಗವೇ ಭಗವಂತ ಅವತಾರವತ್ತಿ ಅಪರಿಮಿತ ಗುಣಗಳನ್ನು ಮೆರೆಯಿಸುವುದು, ಲೀಲೆಯಾಡುವುದು.

ಹೀಗೆ ಎಂದೋ ನಡೆದುಹೋದ ಈ ಲೀಲಾಜೀವನವನ್ನು ನಮ್ಮ ಮುಂದೆ ನಿರಂತರ ತರುತ್ತಿರುತ್ತೆ. ಸಹಸ್ರನಾಮಗಳು, ಪೂಜಾದಿಗಳು, ಜೀವನಚರಿತ್ರೆ ಮುಂತಾದ್ದು.

ಅವನ ಒಂದೊಂದು ಗುಣವನ್ನೂ ಪ್ರತಿಧ್ವನಿಸಿ ಭಕ್ತನ ಚಿತ್ತ ಚಕೋರವನ್ನು ಸೆಳೆಯುವ ಈ 'ಸಹಸ್ರನಾಮ' ಎಂಬ ಸ್ತೋತ್ರರೂಪ ಅನಾದಿಕಾಲದಿಂದ ಆರ್ಯಾವರ್ತದಲ್ಲಿ ಪ್ರಚುರವಿರುವ ಉಪಾಸನಾರೂಪ. ಸಾಧಕರು ವಿಷ್ಣುಸಹಸ್ರನಾಮವನ್ನೋ, ಶಿವಸಹಸ್ರನಾಮವನ್ನೋ, ಲಲಿತಾಸಹಸ್ರನಾಮವನ್ನೋ ಪ್ರತಿದಿನ ಪಠಿಸಿ ಧ್ಯಾನಗೈಯುವುದು ಪುರಾತನ ಪದ್ಧತಿ.

ಶ್ರೀ ಹೆಚ್. ಎನ್. ನರಸಿಂಹಮೂರ್ತಿಗಳು ಮಹಾವಿಷ್ಣುವಿನ ಪ್ರಧಾನ ಅವತಾರಗಳಲ್ಲಿ ಒಂದಾದ ನರಸಿಂಹಸ್ವಾಮಿಯ ಸಹಸ್ರನಾಮವನ್ನು ಅತ್ಯಂತ ಸುಂದರವಾಗಿ ಸರಳ ಭಾಷೆಯಲ್ಲಿ ನಮ್ಮ ಮುಂದಿಟ್ಟಿದ್ದಾರೆ. ಪ್ರತಿನಾಮಕ್ಕೂ ವರ್ಣನೆಯಿದೆ. ಹಲವು ದೃಷ್ಟಿಕೋನಗಳು ಇಲ್ಲಿವೆ. ತತ್ವದ ಮೆರಗು ಇದೆ. ಭಕ್ತಿ ಹಾಗೂ ಅದ್ವೈತಗಳ ರಸಾಯವನಿದೆ. ಕ್ಲಿಷ್ಟವಿಲ್ಲದೆ ಸರಳವಾಗಿಯೇ ವಾಕ್ಯಾರ್ಥಗಳನ್ನು ರೂಪಿಸಿದ್ದಾರೆ. ಅಲ್ಲಲ್ಲಿ ಅವಶ್ಯವಾದ ವಿವರಗಳೂ ಇವೆ. ಮೂಲಾರ್ಥಕ್ಕೆ ಅಪಚಾರವಾಗದಂತೆ ಸಮನ್ವಯ ಸಂದೇಶಗಳನ್ನೂ ಬಿಂಬಿಸಿದ್ದಾರೆ. ಸಂಕುಚಿತತೆ, ವಿಪರೀತಾರ್ಥ, ಒಣ ಪಾಂಡಿತ್ಯಗಳ ರಗಳೆಯಿಲ್ಲದೆ ಮನೋಜ್ಞವಾದ ರೀತಿಯಲ್ಲಿ ಕಾರ್ಯವೆಸಗಿದ್ದಾರೆ.

ಒಬ್ಬ ಸದ್ಗೃಹಸ್ಥನಾಗಿ, ಲೌಕಿಕ ಜೀವನದಲ್ಲಿ ಉನ್ನತ ಹುದ್ದೆಯಲ್ಲಿದ್ದು, ಇಂತಹ ಕೃತಿಗೆ ಕೈಹಾಕಿ ಮನವೊಪ್ಪುವ ರೀತಿಯಲ್ಲಿ ಕಾರ್ಯನಿರ್ವಹಿಸಿರುವುದು ಶ್ರೀ ಲಕ್ಷ್ಮೀ ನರಸಿಂಹನ ಪೂರ್ಣ ಕೃಪೆ ಅವರ ಮೇಲಿರುವುದರ ದ್ರಷ್ಟ ಸಂಕೇತ. ಇವರಿಂದ ಇನ್ನೂ ಹತ್ತು ಹಲವು ಇಂತಹ ಕೃತಿಗಳು ಹೊರಬರಲಿ ಎಂದು ಆಶಿಸುವೆ. ಭಗವಾನ್ ಶ್ರೀರಾಮಕೃಷ್ಣರ, ಶ್ರೀಮಾತೆ ಶಾರದೆಯ, ಸ್ವಾಮಿ ವಿವೇಕಾನಂದರ ಆಶೀರ್ವಾದ ಇವರ ಮೇಲೆ ವರ್ಷಿಸಲ್ಪಡಲಿ ಎನ್ನುವುದೇ ನನ್ನ ಪ್ರಾರ್ಥನೆ.

ಇತಿ ಶ್ರೀರಾಮಕೃಷ್ಣ ಸ್ಮರಣಂ,

**ಸ್ವಾಮಿ ನಿರ್ಭಯಾನಂದ**



# ಶ್ರೀಶ್ರೀ ಯೋಗೀಶ್ವರ ಜ್ಞಾನಪೀಠ

ಭಾಸ್ಕರ ಕ್ಷೇತ್ರ, ಸುಬ್ಬರಾಯನ ಪೇಟೆ
ಚಿಕ್ಕಬಳ್ಳಾಪುರ - 562 101

ಶ್ರೀ ಶ್ರೀ ಶ್ರೀ ನಿತ್ಯಾನಂದತೀರ್ಥ ಸ್ವಾಮಿಜಿ, 27-01-1995

ಶ್ರೀ ಲಕ್ಷ್ಮೀನೃಸಿಂಹಾಯ ನಮಃ

ಜಗತ್ ಸೃಷ್ಟಿಯ ನೈಸರ್ಗಿಕ ಶಕ್ತಿಗಳ ಸಮುದಾಯದಲ್ಲಿ ಅದೆಷ್ಟೋ ಶಕ್ತಿಗಳ ಪ್ರಾದುರ್ಭಾವವಾದರೂ ಒಂದೊಂದು ಶಕ್ತಿಯ ದಿವ್ಯ ಚೈತನ್ಯವು ಅಷ್ಟೇ ವಿಧವಿಧವಾಗಿ ಮಾನವ ಕಲ್ಯಾಣಕ್ಕಾಗಿ ಅನುಗ್ರಹಿಸುತ್ತಿರುವುದು ಸರ್ವವೇದ್ಯ.

ಬ್ರಹ್ಮವಾ ಇದಮಗ್ರ ಆಸೀತ್। ಏಕಮೇವ ತದೇಕಗಂ ಸನವ್ಯಭವತ್॥

ಎಂಬ ಉಪನಿಷದ್ವಾಕ್ಯಪ್ರಮಾಣದಂತೆ ಮೊದಲು ಇದ್ದುದು ಬ್ರಹ್ಮ ಒಂದೇ. ಆ ಬ್ರಹ್ಮವು ಹಿರಣ್ಯಕಶಿಪುವಿನ ಸಂಹಾರದಿಂದ ಉಗ್ರನಾಗಿದ್ದ ವಿಷ್ಣುಸ್ವರೂಪೀ ಶ್ರೀ ನರಸಿಂಹಸ್ವಾಮಿಯನ್ನು ಶಾಂತ ಚಿತ್ತನನ್ನಾಗಿಸಲು ದೇವತೆಗಳಿಂದ ಕೂಡಿದ ಬ್ರಹ್ಮನು ಪ್ರಾರ್ಥಿಸಿದ ಶ್ಲೋಕಾನುಕ್ರಮವೇ ಈ ನಾಮಾವಳಿಯ ಮೂಲವಾಗಿದೆ. ಈ ಒಂದು ನಾಮಾವಳಿಯನ್ನು ವಿಷ್ಣುಪಂಥದವರಾಗಿಲೀ, ಶಿವಪಂಥದವರಾಗಲೀ ಯಾವ ಭೇದವೂ ಇಲ್ಲದೆ ಪ್ರತಿಯೊಬ್ಬರೂ ಪಠಿಸಲೇಬೇಕಾದ ಗ್ರಂಥವಾಗಿದೆ.

ಕಗ್ಗತ್ತಲೆಯ ಅಜ್ಞಾನದ ಪ್ರಕೃತಿ ತತ್ವದ ತಮಸ್ಸಿನಲ್ಲಿ ಮುಳುಗಿ ಹಂಬಲಿಸುವ ಜೀವಕೋಟಿಯ ಉದ್ಧಾರಕ್ಕಾಗಿಯೇ ಅಭಯ ಹಸ್ತವನ್ನು ಧರಿಸಿರುವ ದೇವತೆಗಳ ಕರುಣಾಮಯ ಕೃಪಾಕಟಾಕ್ಷ ಪರಿಪೂರ್ಣತೆ ಕಾಣಬಹುದು.

ಜೀವಕೋಟಿಯ ಉದ್ಧಾರಕ್ಕಾಗಿಯೇ ಭಗವಂತನು ಹತ್ತು ಅವತಾರಗಳನ್ನು ಎತ್ತಬೇಕಾಯಿತು. ಈ ಅವತಾರಕ್ರಮದಲ್ಲಿ ವೈಶಿಷ್ಟ್ಯಪೂರ್ಣವೆಂದರೆ ನರಸಿಂಹಾವತಾರ. ಅದು ಹೇಗೆ ಎಂದು ವಿಚಾರ ಮಾಡುವಾಗ ಯಾವ ಸೈನ್ಯವಾಗಲೀ, ಆಯುಧವನ್ನಾಗಲೀ ಉಪಯೋಗಿಸದೇ ತನ್ನ ಪೂರ್ಣಕ್ರೂರತ್ವದಿಂದಲೇ ಸಂಹಾರ ಮಾಡಬೇಕಾಯಿತು.

. ನೀರು ಜಡವಸ್ತು, ಸ್ವತಃ ಚೈತನ್ಯ ಪಡೆಯಲಾದ್ದರಿಂದ ಪರಾವಲಂಬಿಯಾಗಿಯೇ ಉಳಿಯಬೇಕು. ನೀರು ಹರಿಯಲು ಕಾಲುವೆ ಮಾಡಿಕೊಟ್ಟಾಗ ಅದು ಹರಿಯಲು ಸಾಧ್ಯ. ಹರಿಯುವಾಗ ಒಳ್ಳೆಯ ಭೂಮಿಯಲ್ಲೆ ಹರಿದಾಗ ಅದಕ್ಕೆ ಶ್ರೇಷ್ಠತೆ ಹಾಗೂ ಪಾವಿತ್ರ್ಯತೆಯುಂಟು. ಅದೇ ನೀರು ಮಲಿನ ಪ್ರದೇಶಗಳಲ್ಲಿ ಹರಿದಾಗ ದೋಷಯುಕ್ತವಾಗಿ ಪ್ರಯೋಜಕತೆಯನ್ನು ಕಳೆದುಕೊಳ್ಳುತ್ತದೆ. ಯಾವ ಭೂಮಿ ಯಾವ ಬಣ್ಣದಾಗಿ

ವಾಸನೆಯಿಂದ ಕೂಡಿರುತ್ತದೆಯೋ ಅದೇ ವಾಸನೆ ಅದೇ ಬಣ್ಣ ಹರಿಯುವ ಆ ನೀರಿಗೂ ಬರುತ್ತದೆ.

ಅದಕ್ಕಾಗಿಯೇ ಜ್ಞಾನವೇತ್ತರು ಪುಣ್ಯಭೂಮಿಯನ್ನು ಆಶ್ರಯಿಸು, ಪುಣ್ಯ ಸಂಪಾದನೆಯ ಕರ್ತವ್ಯ ನಿರ್ವಹಿಸು, ಪುಣ್ಯವೇತ್ತರ ಉಪದೇಶ ಪಾಲಿಸು - ಹೀಗೆ ನಾನಾ ರೀತಿಯಲ್ಲಿ ಧರ್ಮದ ಅಡೆತಡೆಗಳನೊಡ್ಡಿ ಉಪದೇಶಿಸಿ ಅನುಗ್ರಹಿಸುತ್ತಾರೆ. ಮತ್ತು ಪೂಜಾಕೋಟಿ ಸಮಂ ಸ್ತೋತ್ರಂ ಎಂದು ಎಚ್ಚರಿಸಿದ್ದಾರೆ. ಸ್ತೋತ್ರವೆಂದರೆ ಪ್ರಕೃತ ''ನರಸಿಂಹ ಸಹಸ್ರನಾಮ'' ಸ್ತೋತ್ರ ಎಂಬ ಭಾವನೆ ಇರಲಿ.

ನರ ಎಂದರೆ ಮನುಷ್ಯ ಅಥವಾ ಮಾನವ, ಇವನ ಮಾನವತೆ ಎಂದರೆ ಶ್ರದ್ಧೆ - ಭಕ್ತಿ - ವಿಧೇಯತೆ - ಸ್ವಾಮಿಯ ಸ್ಮರಣೆ - ಇವುಗಳನ್ನು ಕಳೆದುಕೊಂಡಾಗ ಸ್ವಾಮಿಯು ಸಿಂಹನಾಗಿ ಎಚ್ಚರಿಸಿ ಅವನನ್ನು ಮಾನವನನ್ನಾಗಿ ಮಾಡುವ ಕರುಣಾಮೂರ್ತಿ ಸ್ವಾಮಿಯೇ ನರಸಿಂಹ.

ಮಾನವನ ವಿಶಯಾಸಕ್ತಿ ಹಾಗೂ ರಾಗದ್ವೇಷಾದಿಗಳು ಮಿತಿ ಮೀರಿ ಹೆಚ್ಚಾದಾಗ ಅವೆಲ್ಲವನ್ನು ನಾಶಪಡಿಸುವುದರಲ್ಲಿ ಸಿಂಹನಾಗಿ (ಪ್ರಕಟವಾಗಿ) ಉದ್ಧರಿಸುತ್ತಿರುವ ಸ್ವಾಮಿಯೇ ನಾ-ರ-ಸಿಂಹ- ನಾರ ಎಂದರೆ ದೋಷದೂರ ಎಂದರ್ಥ. ಸಿಂಹವು ಸಿಂಹಿಣಿಯೊಂದಿರುವಾಗ ಎಲ್ಲಾ ಉಗ್ರತರವಾದ ಭಾವವನ್ನು ತೊರೆದು ಶಾಂತಮೂರ್ತಿಯಾಗಿರುತ್ತಾನೋ ಹಾಗೆ ಅನನ್ಯ ಭಕ್ತಿಯಿಂದ ಪೂಜಿಸಿ ಸ್ಮರಿಸುವ ಮಾನವನ ಎಲ್ಲಾ ಕ್ರೂರತೆಗಳನ್ನು ಹೋಗಲಾಡಿಸಿ ತನ್ನ ಪ್ರಸನ್ನತೆಯಿಂದ ಕಾಪಾಡುವ ಸ್ವಾಮಿಯೇ ಲಕ್ಷ್ಮಿನರಸಿಂಹ.

ಈ ರೀತಿಯಲ್ಲಿ ಪ್ರಕಟನಾದ ಸ್ವಾಮಿಯು ಯಾವ ದೇವತೆಗಳನ್ನೂ ಸಹಾ ಬಿಟ್ಟಿಲ್ಲ. ಅದು ಹೇಗೆಂದರೆ ಯಾವುದೇ ದೇವಾಲಯಗಳ ದೇವರಾಗಲೀ ಅಥವಾ ದೇವತೆಗಳಾಗಲೀ ಅವರ ತಲೆಯಮೇಲಿರುವ ಪ್ರಭಾವಳಿಗಳಲ್ಲಿ ಆವಿರ್ಭವಿಸಿ ಭಕ್ತರ ರಕ್ಷಣೆಗೆ ಕಾದಿರುತ್ತಾನೆ. ಅವನಿಲ್ಲದ ಜಾಗವೇ ಇಲ್ಲ ಎನ್ನುವಂತೆ ಭಕ್ತರ ಭಕ್ತನಾಗಿ ಮಾನವಕೋಟಿಯ ಉದ್ಧಾರಕ್ಕಾಗಿ ಎಲ್ಲೆಲ್ಲೂ ನೆಲೆಸಿರುತ್ತಾನೆ. ಇಂಥಾ ಮಹಾಮಹಿಮನಾದ ಈ ಸ್ವಾಮಿಯ ಸೇವೆ ಸಲ್ಲಿಸಲು ಪ್ರಕೃತ ಮುಂದಾಗಿರುವ ಮಹನೀಯರು ಎಂದರೆ

ತುಮಕೂರು ಜಿಲ್ಲಾ ಗುಬ್ಬಿ ತಾಲ್ಲೂಕು ಹೊಸಕೆರೆ ಗ್ರಾಮದಲ್ಲಿ ನಿವಾಸಿಗಳಾಗಿದ್ದು ಅನಂತರ ಅವರ ಆದರ್ಶ ಜೀವನಕ್ಕಾಗಿ ಬೇರೆ ಪಟ್ಟಣಗಳಲ್ಲಿ ಉದ್ಯೋಗವನ್ನು ಪಡೆದು ಆಧ್ಯಾತ್ಮಿಕ ಚಿಂತನ ಮಾಡುತ್ತಾ ಆಧ್ಯಾತ್ಮ ಜೀವನದಲ್ಲಿ ಆಸಕ್ತಿಯನ್ನು ಹೊಂದಿ ತಮ್ಮ ಜೀವನಕ್ರಮವನ್ನು ಉದಾತ್ತಭಾವನೆಯಿಂದ ನಡೆಸಿದ ಶ್ರೀ ಹೆಚ್. ಆರ್. ನರಸಿಂಹಯ್ಯನವರ ಜ್ಯೇಷ್ಠ ಪುತ್ರರಾಗಿ ಜನಿಸಿದ ಪ್ರಕಟವಾಗಲಿರುವ ಈ ಕಿರುಹೊತ್ತಿಗೆ ಕರ್ತೃವಾದ ಶ್ರೀ ಹೆಚ್. ಎನ್. ನರಸಿಂಹಮೂರ್ತಿ ಇವರು ಸದ್ವಂಶದಲ್ಲಿ ಜನಿಸಿದವರಾಗಿಯೂ ಬಾಲ್ಯದಿಂದಲೂ ಪಾರಮಾರ್ಥಿಕ ಜೀವನದಲ್ಲಿ ಆಸಕ್ತರಾಗಿದ್ದಾಗ್ಯೂ ಸಮಾಜದ ಹಾಗೂ

ಹಿರಿಯರ ಕಟ್ಟುಪಾಡುಗಳಿಗೆ ಬದ್ಧರಾಗಿ ಲೌಕಿಕ ವಿದ್ಯೆಯ ಅತ್ಯುನ್ನತ ಶಿಖರದ ವ್ಯಾಸಂಗದಿಂದ ಅಷ್ಟೇ ಉನ್ನತ ಪದವಿಯನ್ನಲಂಕರಿಸಿ ಆದರ್ಶ ದಾಂಪತ್ಯ ಜೀವನವನ್ನು ಸಾಗಿಸುತ್ತಾ, ಎಲ್ಲ ಸಮಾಜ ಬಾಂಧವರಲ್ಲೂ ಪ್ರೀತಿ ವಿಶ್ವಾಸಗಳಿಸಿ ದೇಶಸೇವೆಯ ನಂತರ ಪದವಿಯಿಂದ ನಿವೃತ್ತರಾಗಿ ಇದ್ದಾಗ್ಯೂ, ವಂಶಾನುಗುಣ್ಯಕ್ರಮದಂತೆ ಮನೆತನದ ನೂರು ವರ್ಷಗಳಿಂದಲೂ ನಡೆದು ಬಂದ ಶೀಬೀ ಕ್ಷೇತ್ರದ ಶ್ರೀ ಲಕ್ಷ್ಮೀನರಸಿಂಹಸ್ವಾಮಿಯವರ ಸೇವೆಯನ್ನು ಸ್ಮರಿಸಿ ಆ ಸ್ವಾಮಿಯ ಅನನ್ಯ ಭಕ್ತರಾಗಿ ಸೇವೆ ಸಲ್ಲಿಸಲು ಸಂಕಲ್ಪಿಸಿ ನರಸಿಂಹಸ್ವಾಮಿಯವರ ಸಹಸ್ರನಾಮಾವಳಿಯನ್ನು ನಾಮಕ್ರಮದಂತೆ ಪ್ರತಿನಾಮಗಳಿಗೂ ಅರ್ಥಪೂರ್ಣ ವ್ಯಾಖ್ಯಾನ ಸಹಿತ ತಾತ್ಪರ್ಯವನ್ನು ಸರಳವಾದ ಶೈಲಿಯಲ್ಲಿ ಕನ್ನಡದಲ್ಲಿ ಎಲ್ಲರಿಗೂ ತಿಳಿಯುವಂತೆ ಬಹಳ ವಿದ್ವತ್ಪೂರ್ಣವಾಗಿ ಕೈ ಬರಹದ ೮೫೦ ಪುಟಗಳ ಒಂದು ಕಿರುಹೊತ್ತಿಗೆಯನ್ನು ಅಲ್ಪಾವಧಿ ಎಂದರೆ ಎಂಟು ತಿಂಗಳ ಕಾಲದಲ್ಲಿ ಪೂರ್ಣಗೊಳಿಸಿ ವಿದ್ವಾಂಸರ ಮೆಚ್ಚುಗೆಗೆ ಪಾತ್ರರಾಗಿ ಪಂಡಿತ ಪಾಮರಾದಿ ಸರ್ವರಿಗೂ ತಿಳಿಯಲೋಸುಗ ಕಿರುಗ್ರಂಥವನ್ನು ಅಚ್ಚುಹಾಕಿಸಿ ''ಜನಸೇವೆಯೇ ಜನಾರ್ಧನಸೇವೆ'' ಎಂಬ ದೃಷ್ಟಿಯಿಂದ ಮಹಾಜನತೆಗೆ ಅರ್ಪಿಸಲು ಕಾತುರರಾಗಿ ಸಂಕಲ್ಪಿಸಿರುತ್ತಾರೆ. ಪ್ರಾಪಂಚಿಕ ಹಾಗೂ ಪಾರಮಾರ್ಥಿಕ - ಎರಡರಲ್ಲೂ ಸಾಧಿಸಿರುವ ಖ್ಯಾತ ನಾಮಾರಾದ ಇವರು ಭಗವಂತ ಶ್ರೀ ಲಕ್ಷ್ಮೀನರಸಿಂಹಸ್ವಾಮಿಯವರ ಅನುಗ್ರಹಕ್ಕೆ ಪಾತ್ರರಾಗಿರುವುದಲ್ಲದೆ ಎಲ್ಲರ ಹೃದಯದಲ್ಲೂ ಪ್ರತಿಬಿಂಬಿತರಾಗಿ ತಮ್ಮ ದುಡಿಮೆಗೆ ಸಾರ್ಥಕ್ಯಪಡುವಂತಾಗಲೀ ಎಂಬುದಾಗಿ ಆಶಿಸುತ್ತಾ ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

ಈ ಕಿರುಹೊತ್ತಿಗೆಯ ಪ್ರತಿ ಹಂತದಲ್ಲೂ ನಮ್ಮ ಗಮನಕ್ಕೆ ತಂದು ಆಶೀರ್ವಾದ ಪಡೆದು ಪೂರ್ಣಗೊಳಿಸಿರುವುದು ಇವರ ವಿಧೇಯತೆಗೆ ಸಂಕೇತವಾಗಿದೆ.

ಇವರ ಬಾಳಿನ ಮೂಲ ತಾರಕ ಮಂತ್ರ ಇದಾಗಲೀ

''ಅನೃತಾತ್ ಸತ್ಯಮುಪೈಮಿ - ಮಾನುಷಾದ್ದೈವಮುಪೈಮಿ''

ಓಂ ಶಾಂತಿಃ ಶಾಂತಿಃ ಶಾಂತಿಃ

ನಾರಾಯಣ ಸ್ಮರಣಃ

ಶ್ರೀ ಶ್ರೀ ಶ್ರೀ ನಿತ್ಯಾನಂದತೀರ್ಥ ಸ್ವಾಮೀಜಿ
ಶ್ರೀ ಯೋಗೀಶ್ವರ ಜ್ಞಾನಪೀಠ
ಮಧುರೆ ಸಂಸ್ಥಾನ, ಸುಬ್ಬರಾಯನಪೇಟೆ
ಚಿಕ್ಕಬಳ್ಳಾಪುರ.

*Adhyaatma Vidyaa Praveena, Veda Vidyaa Bhushana*
*Advita Jnaana Sindhu, Vidyaa Vidhi Nidhi, Vedaanta Vaaridhi*

**Ve|| Bra ||Sri K. G. Subraya Sharma,** M. A.,

Pandit & Secretary, Adhyatma Prakasha Karyalaya
Editor & Publisher: SHANKARA BHAASKARA

11-08-1996
Bangalore

# ಮುನ್ನುಡಿ

ನರಸಿಂಹ ಎಂದಕೂಡಲೇ ಭಗವದ್ಭಕ್ತರ, ಭಗವದುಪಾಸಕರ ಹೃದಯದಲ್ಲಿ ಏಳುವ ಎರಡು ಭಾವನೆಗಳೆಂದರೆ ಕ್ರೌರ್ಯ ಮತ್ತು ವಾತ್ಸಲ್ಯ. ಭಗವಂತನ ದ್ವೇಷಿಯಾದ, ಪರಮಸ್ವಾರ್ಥಿಯಾದ, ದುರಹಂಕಾರದ ಸಾಕಾರಮೂರ್ತಿಯಾಗಿದ್ದ ಹಿರಣ್ಯಕಶಿಪುವನ್ನು ದಮನಮಾಡಲು ಶೌರ್ಯ ಕ್ರೌರ್ಯ ವೀರ್ಯ ಬಲ ಪರಾಕ್ರಮಗಳೂ ಮತ್ತು ಭಗವದ್ಭಕ್ತನೂ ಪರಮಶಾಂತಮೂರ್ತಿಯೂ ಅತ್ಯಂತ ಮೃದು ಹೃದಯನೂ ಆಗಿದ್ದ ಪ್ರಹ್ಲಾದನನ್ನು ಅನುಗ್ರಹಿಸಲು ಆ ಪರಮಾತ್ಮನಿಗೆ ನಿರತಿಶಯವಾದ ವಾತ್ಸಲ್ಯವೂ ಬೇಕಾಗಿದ್ದವು. ಆದ್ದರಿಂದಲೇ ಸ್ವಾಮಿಯು ಉಗ್ರ ಶಾಂತಸ್ವಭಾವಗಳಿಗೆ ತಕ್ಕಂತೆ ನಿಗ್ರಹಾನುಗ್ರಹಗಳನ್ನು ದುಷ್ಟ ಶಿಷ್ಟರಿಗೆ ಮಾಡುವದಕ್ಕಾಗಿ ನರಸಿಂಹರೂಪದಿಂದ ಅವತರಿಸಿರುತ್ತಾನೆ.

ಭಗವಂತನ ಅವತಾರಗಳೆಲ್ಲವೂ ಲೋಕಕಲ್ಯಾಣಕ್ಕಾಗಿಯೇ ಹೊರತು ಲೋಕನಾಶಕ್ಕಾಗಿ ಅಲ್ಲ. ಉಪಾಸಕರಿಗೆ ಅನುಗ್ರಹ ಮಾಡುವದರಾಗಿಯೇ ಪರಮಾತ್ಮನ ಅವತಾರಗಳು. ಉಪಾಸಕಾನಾಂ ಕಾರ್ಯಾರ್ಥಂ ಬ್ರಹ್ಮಣೋ ರೂಪಕಲ್ಪನಾ. ನಾಮರೂಪಕ್ರಿಯಾಗುಣಧರ್ಮಗಳಿಲ್ಲದ ದೇಶಕಾಲಾತೀತವಾದ ಪರಿಪೂರ್ಣವಾದ ಅದ್ವಿತಿಯವಾದ ಪರಬ್ರಹ್ಮಕ್ಕೇ ಪುರಾಣ ಇತಿಹಾಸಗಳಲ್ಲಿ ಸಾಧಕರ ಅನುಗ್ರಹಕ್ಕಾಗಿ ನಾನಾ ನಾಮರೂಪಗಳನ್ನು ಕಲ್ಪಿಸಿ ಉಪದೇಶಿಸಿರುತ್ತಾರೆ. ಸ್ಯಾತ್ ಪರಮೇಶ್ವರಸ್ಯಾಪಿ. ಇಚ್ಛಾವಶಾತ್ ಮಾಯಾಮಯಂ ರೂಪಂ ಸಾಧಕಾನುಗ್ರಹಾರ್ಥಮ್ ಬ್ರಹ್ಮಸೂತ್ರಶಾಂಕರ ಭಾಷ್ಯ-1-1.20. ಸಾಕಾರ ಸಗುಣ ಪರಮಾತ್ಮನ ಆರಾಧನೆಯ ಮೂಲಕವಾಗಿ ಮುಂದೆ ಮುಂದೆ ನಿರಾಕಾರ ನಿರ್ಗುಣ ಬ್ರಹ್ಮತತ್ತ್ವವನ್ನು ಅರ್ಥಮಾಡಿಸುವುದಕ್ಕಾಗಿ ಶಾಸ್ತ್ರದಲ್ಲಿ ಸಾಕಾರ ದೇವತಾರಾಧನೆಯನ್ನು ತಿಳಿಸಿರುತ್ತಾರೆ.

ಶ್ರೀಮನ್ನಾರಾಯಣ ಮಹಾವಿಷ್ಣುವಿಗೆ ಪುರಾಣಗಳಲ್ಲಿ ಪ್ರಧಾನವಾಗಿ ಹತ್ತು ಅವತಾರಗಳನ್ನು ತಿಳಿಸಿರುತ್ತಾರೆ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ಶ್ರೀರಾಮ, ಕೃಷ್ಣ, ಬೌದ್ಧ, ಕಲ್ಕಿ - ಎಂಬವು ದಶಾವತಾರಗಳು. ಇವುಗಳಲ್ಲಿ ನರಸಿಂಹ, ವಾಮನ, ಪರಶುರಾಮ, ಶ್ರೀರಾಮ ಮತ್ತು ಶ್ರೀಕೃಷ್ಣಾವತಾರಗಳ ವಿಷಯದಲ್ಲಿ ನಮ್ಮೆಲ್ಲರಿಗೂ ಸಾಕಷ್ಟು ವಿವರವಾಗಿಯೇ ಕಥೆಗಳು ಗೊತ್ತಿರುತ್ತವೆ. ಈ ಅವತಾರಗಳ

ಉದ್ದೇಶವೆಲ್ಲ ಎರಡೇ ಎಂದು ಧಾರಾಳವಾಗಿ ಹೇಳಿಬಿಡಬಹುದು. ಅದಾವುದೆಂದರೆ ದುಷ್ಟನಿಗ್ರಹ ಮತ್ತು ಶಿಷ್ಟಾನುಗ್ರಹ; ಅಧರ್ಮವಿನಾಶ ಮತ್ತು ಧರ್ಮಪಾಲನೆ.

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥

ಎಂದು ಶ್ರೀಕೃಷ್ಣಭಗವಂತನು ಭಗವದ್ಗೀತೆಯಲ್ಲಿ ಸ್ಪಷ್ಟವಾಗಿ ತಿಳಿಸಿರುತ್ತಾನೆ.

ಭಗವಂತನು ಮಾಡುವ ದುಷ್ಟನಿಗ್ರಹವೂ ಒಂದರ್ಥದಲ್ಲಿ ಲೋಕಾನುಗ್ರಹವೆ. ನರಸಿಂಹಾವತಾರದಲ್ಲಿ ಹಿರಣ್ಯಕಶಿಪು ಸಂಹಾರ, ವಾಮನಾವತಾರದಲ್ಲಿ ಬಲಿಚಕ್ರವರ್ತಿ ನಿಗ್ರಹ, ಪರಶುರಾಮಾವತಾರದಲ್ಲಿ ಕ್ಷತ್ರಿಯ ದರ್ಪದಮನ, ಶ್ರೀರಾಮವತಾರದಲ್ಲಿ ರಾವಣ ಕುಂಭಕರ್ಣ ವಧ, ಶ್ರೀಕೃಷ್ಣಾವತಾರದಲ್ಲಿ ಕೌರವಸಂಹಾರ - ಇವೆಲ್ಲವೂ ನಿಜವಾಗಿ ನೋಡಿದರೆ ಲೋಕಕಲ್ಯಾಣವೇ. ಭಗವಂತನ ಶಾಪ, ಪರಮಾತ್ಮನ ಕೋಪ, ಸಾಧುಸಂತರು ಮಾಡುವ ನಿಗ್ರಹಾದಿಗಳು - ಇವೆಲ್ಲವೂ ಲೋಕಾನುಗ್ರಹಕ್ಕಾಗಿಯೇ.

ಶ್ರೀ ಮಹಾವಿಷ್ಣುವಿನ ನಾಲ್ಕನೆಯ ಅವತಾರವೇ ನರಸಿಂಹಾವತಾರ. ಈ ಅವತಾರದಲ್ಲಿ ವಿಶೇಷವೇನೆಂದರೆ ಸ್ವಾಮಿಗೆ ತಾಯಿ ತಂದೆಯರಿಲ್ಲ, ವರ್ಣಾಶ್ರಮಗಳಿಲ್ಲ. ಅತ್ಯಂತ ಅಸ್ವಾಭಿಕವಾದ ವಿಚಿತ್ರರೂಪ; ಮನುಷ್ಯ ಮತ್ತು ಪ್ರಾಣಿಯ ರೂಪ. ಸರ್ವಸಮರ್ಥನಾದ ಪರಮಾತ್ಮನು ಆಯಾ ಸಂದರ್ಭಕ್ಕೆ ತಕ್ಕಂತೆ ಎಂಥ ರೂಪವನ್ನು ಬೇಕಾದರೂ ಕ್ಷಣಾರ್ಧದಲ್ಲಿ ಸ್ವೀಕರಿಸಬಲ್ಲ. ನರಸಿಂಹನ ಭಕ್ತರು, ಉಪಾಸಕರು, ಆರಾಧಕರು ಅಸಂಖ್ಯಾತರಿದ್ದಾರೆ. ನರಸಿಂಹಸ್ವಾಮಿಯು ಶೀಘ್ರಾನುಗ್ರಾಹಕ ದೇವರು. ಆರಾಧನೆಯಿಂದ ಕ್ಷಿಪ್ರಫಲ ಹಾಗೂ ಧ್ರುವಫಲ.

ಈ ನರಸಿಂಹನಿಗೆ ಹತ್ತಾರು ಅವತಾರಗಳುಂಟು, ಯೋಗಾನರಸಿಂಹ ಭೋಗಾನರಸಿಂಹ, ಉಗ್ರನರಸಿಂಹ, ವರದ ನರಸಿಂಹ, ಶಾಂತನರಸಿಂಹ, ಅಭಯ ನರಸಿಂಹ ಶಕ್ತಿ ನರಸಿಂಹ, ಲಕ್ಷ್ಮೀನರಸಿಂಹ, ಭಕ್ತನರಸಿಂಹ, ಸಮರ್ಥನರಸಿಂಹ, ಇತ್ಯಾದಿ. ಆಯಾ ಭಕ್ತರು ತಮ ತಮಗೆ ಇಷ್ಟವಾದ ನರಸಿಂಹರೂಪವನ್ನು ಇಟ್ಟುಕೊಂಡು ಆರಾಧಿಸುತ್ತಾರೆ. ಲಕ್ಷ್ಮೀನರಸಿಂಹನ ಒಕ್ಕಲುಗಳೆಂದು ಅನೇಕರು ಸ್ವಾಮಿಯನ್ನು ಆರಾಧಿಸುತ್ತಾರೆ. ನರಸಿಂಹಸ್ವಾಮಿಯು ಕೆಲವರಿಗೆ ಇಷ್ಟದೇವತೆಯಾದರೆ ಮತ್ತೆ ಕೆಲವರಿಗೆ ಕುಲದೇವತೆ ಇನ್ನು ಇತರರಿಗೆ ಗ್ರಾಮದೇವತೆ. ವರ್ಣಾಶ್ರಮಕುಲಗೋತ್ರಾದಿ ಭೇದವಿಲ್ಲದೆ ನಮ್ಮ ಭಾರತ ದೇಶದಲ್ಲಿ ನರಸಿಂಹಸ್ವಾಮಿಯ ಆರಾಧಕರಾದ ಭಕ್ತರು ಲಕ್ಷಗಟ್ಟಲೆ ಇದ್ದಾರೆ ಭಗವಂತನ ಆರಾಧನೆಯಿಂದ ಭಕ್ತರುಗಳು ತಮ್ಮ ತಮ್ಮ ಇಷ್ಟಾರ್ಥಗಳನ್ನು ಹೊಂದುತ್ತಾರೆ.

ಭಗವಂತನ ಆರಾಧನೆಯನ್ನು ಕಾಯಿಕ, ವಾಚಿಕ ಮತ್ತು ಮಾನಸಿಕವೆಂದು ಮೂರು ಬಗೆಯಾಗಿ ಮಾಡಬಹುದು. ಪೂಜಾ, ಅಭಿಷೇಕ, ಅಲಂಕಾರಾದಿರೂಪವಾದ ಆರಾಧನೆಯು ಕಾಯಿಕ; ಜಪ, ಸ್ತೋತ್ರ, ಪಾರಾಯಣ, ಭಜನೆ, ಗಾಯನಾದಿಗಳು

ವಾಚಿಕಾರಾಧನೆ; ಧ್ಯಾನ, ಭಾವನೆ, ಚಿಂತನೆ, ಉಪಾಸನಾದಿಗಳು ಮಾನಸಿಕಾರಾಧನೆ. ಈ ಮೂರರಲ್ಲಿ ಕಾಯಿಕಾರಾಧನೆಗಳೂ ಮಾನಸಿಕಾರಾಧನೆಗಳೂ ಎಲ್ಲರಿಗೂ ಸುಲಭವಲ್ಲ ಏಕೆಂದರೆ ಕಾಯಿಕಾರಾಧನೆಗಳು ಬಾಹ್ಯವಸ್ತು ಪ್ರಧಾನವಾಗಿರುತ್ತವೆ. ಹಣ್ಣುಕಾಯಿ, ಹೂವು, ಹಾಲು, ಮೊಸರು, ದೇಶ, ಕಾಲ, ಮಡಿ ಇವು ಈಗಿನ ಕಾಲದಲ್ಲಿ ತುಂಬಾ ದುರ್ಬಾರಿಯಾಗಿರುತ್ತದೆ. ಇನ್ನು ಮಾನಸಿಕಾರಾಧನೆಗಳೂ ಸಾಮಾನ್ಯರಿಗೆ ಸುಲಭವೇನಲ್ಲ; ಏಕೆಂದರೆ ವಿಷಯವಾಸನಾಮಯರಾಗಿರುವ ಭೋಗಾಸಕ್ತರಾದ ಸಾಮಾನ್ಯ ಜನಗಳಿಗೆ ಈ ಚಂಚಲವಾದ ಮನಸ್ಸನ್ನು ಭಗವಂತನಲ್ಲಿ ನೆಲೆ ನಿಲ್ಲಿಸುವುದು ದುಸ್ಸಾಧ್ಯವೇ ಸರಿ. ಹಾಗಾದರೆ ಗತಿಯೇನು? ಎಂದರೆ ವಾಚಿಕಸಮಾರಾಧನೆ. ಸಕಲ ಮಾನವರಿಗೂ ಭಗವಂತನು ಅನುಗ್ರಹಿಸಿರುವ ಸಮಾನವಾದ ಯೋಗ್ಯತೆಯೆಂದರೆ ವಾಕ್ಸಾಮರ್ಥ್ಯ, ಅಂದರೆ ಮಾತನಾಡುವ ಯೋಗ್ಯತೆ. ಈ ವಾಗಿಂದ್ರಿಯವನ್ನು ಬಳಸಿಕೊಂಡು ಮಾಡುವ ಭಗವಂತನ ಆರಾಧನೆ ಹೆಸರು ವಾಚಿಕಾರಾಧನೆ.

ಈ ವಾಚಿಕಾರಾಧನೆಯೂ ನಾನಾ ಮುಖವಾಗಿರುತ್ತದೆ. ಪುರಾಣೇತಿಹಾಸಗಳಲ್ಲಿ ಭಗವಂತನ ಗುಣಲೀಲೆ ಧರ್ಮಗಳನ್ನು ನಾನಾ ರೀತಿಯಲ್ಲಿ ವರ್ಣಿಸಿರುತ್ತಾರೆ. ಅಷ್ಟೋತ್ತರ ಶತನಾಮ, ಸಹಸ್ರನಾಮಸ್ತೋತ್ರಗಳಲ್ಲಿ ಇವುಗಳನ್ನು ಅಡಕ ಮಾಡಿರುತ್ತಾರೆ. ಈ ಸ್ತೋತ್ರಗಳನ್ನು ಹಾಗೆಯೇ ಶ್ಲೋಕರೂಪದಿಂದ ಪಾರಾಯಣ ಮಾಡಲೂಬಹುದು, ಬಿಡಿ ಬಿಡಿಯಾಗಿ ಒಂದೊಂದೇ ನಾಮ ಹೇಳಿಕೊಂಡು ನಮಃ ಎಂತ ಸೇರಿಸಿಕೊಂಡು ಪೂಜೆಯೂ ಮಾಡಬಹುದು. ಪೂಜೆಗೆ ಅನುಕೂಲವಿಲ್ಲದವರು ಕೇವಲ ಪಾರಾಯಣವನ್ನು ಮಾಡಿದರೂ ಸಾಕು. ಪಾರಾಯಣಮಾತ್ರದಿಂದಲೇ ಫಲಪ್ರಾಪ್ತಿಯಾಗುತ್ತದೆ.

ಪ್ರಕೃತ, ಈ ಲಕ್ಷ್ಮೀನರಸಿಂಹ ಸಹಸ್ರನಾಮದಲ್ಲಿ ನರಸಿಂಹಾವತಾರದ ಪೂರ್ಣಕಥೆಯನ್ನೂ, ನರಸಿಂಹನು ಅವತರಿಸಿ ಮಾಡಿದ ಲೋಕ ಕಲ್ಯಾಣವನ್ನೂ ಮತ್ತು ಸ್ವಾಮಿಯ ಅಸಾಧಾರಣ ಮಹಿಮೆಗಳನ್ನು ವರ್ಣಿಸಲಾಗಿದೆ. ಲೋಕಕಂಟಕನಾದ ಹಿರಣ್ಯಕಶಿಪುವನ್ನು ಸಂಹಾರಮಾಡಿದ ಮೇಲೆ ಇದರಿಂದ ಸಂತುಷ್ಟನಾದ ಬ್ರಹ್ಮದೇವನು ಈ ಸಹಸ್ರನಾಮಗಳಿಂದ ಲಕ್ಷ್ಮೀನರಸಿಂಹಸ್ವಾಮಿಯನ್ನು ಭಕ್ತಿಯಿಂದ ಸ್ತುತಿಸಿದನು. ಬ್ರಹ್ಮದೇವನ ವರಪ್ರಸಾದರೂಪದಿಂದ ಸಕಲಮಾನವರಿಗೂ ದೊರಕಿರುವ ಈ ನರಸಿಂಹಸಹಸ್ರನಾಮವು ಭಕ್ತರಾದ ಆಸ್ತಿಕ ಸಾಧಕರಿಗೆ ಕಾಮಧೇನುವೆಂಬುದರಲ್ಲಿ ಸಂಶಯವಿಲ್ಲ. ಇದರ ಪಾರಾಯಣದಿಂದ ಭಕ್ತರು ತಮ್ಮ ಇಷ್ಟಾರ್ಥವನ್ನು ಹೊಂದುತ್ತಾರೆ.

ನರಸಿಂಹನ ಭಕ್ತರೂ, ಸಾತ್ವಿಕರೂ ಆಗಿರುವ ಶ್ರೀ ಹೆಚ್. ಎಸ್. ನರಸಿಂಹಮೂರ್ತಿಗಳು ಈ ಸಾವಿರನಾಮಗಳಿಗೂ ಸುಲಭವಾಗಿ ಅರ್ಥವಾಗುವಂತೆ ಅರ್ಥವನ್ನು ಬರೆದು ವಿವರಿಸಿರುತ್ತಾರೆ. ಇವರ ವ್ಯಾಖ್ಯಾನವು ಪಾಂಡಿತ್ಯಪೂರ್ಣವೂ ಭಾವಾರ್ಥಪೂರ್ಣವೂ ಆಗಿರುತ್ತದೆ. ಈ ವ್ಯಾಖ್ಯಾನದಿಂದ ಭಾವುಕರ ಅಂತಃಕರಣದಲ್ಲಿ ಭಗವದ್ಭಕ್ತಿಯ ಹೆದ್ದಲೆಗಳು ಉಕ್ಕುವದರಲ್ಲಿ ಯಾವ ಸಂಶಯವೂ ಇಲ್ಲ. ಯಾಂತ್ರಿಕವಾಗಿ

ಪಾರಾಯಣ ಮಾಡುವುದಕ್ಕಿಂತಲೂ ಒಂದೊಂದು ನಾಮದ ರಹಸ್ಯಾರ್ಥವನ್ನು, ಅಂತರಾರ್ಥವನ್ನು ಅನುಸಂಧಾನ ಮಾಡುತ್ತಾ ಪಾರಾಯಣಮಾಡಿದರೆ ಅದರ ಫಲವು ಹೆಚ್ಚಾಗಿ ಮನಸ್ಸಿಗೆ ತುಂಬಾ ಆನಂದವಾಗುತ್ತದೆ. ಈ ಗ್ರಂಥದಿಂದ ಆಸ್ತಿಕಜನರ ಸಮುದಾಯಕ್ಕೆ ತುಂಬಾ ಪ್ರಯೋಜನವುಂಟೆಂಬುದನ್ನು ಬೇರೆಯಾಗಿ ಹೇಳಬೇಕಾಗಿಲ್ಲ. ಉದಾಹರಣೆಗಾಗಿ ಕೆಲವು ನಾಮಗಳ ವ್ಯಾಖ್ಯಾನವನ್ನು ಇಲ್ಲಿ ಉಲ್ಲೇಖಿಸಲಾಗಿದೆ.

18. ಪ್ರತ್ಯಕ್ಷವರದಾಯ ನಮಃ - 1. ವರವನ್ನು ಕೊಡಲು ಶ್ರೀಹರಿಯು ತಾನೇ ನರಸಿಂಹನಾಗಿ ಬಂದವನು. 2. ಎದುರಿಗೆ ಕಾಣುವಂತಹ ವರಗಳನ್ನು ಕೊಡುವವನು. 3. ಅವರಿಗೆ ತಿಳಿಯುವ ಹಾಗೆ ಎದುರಿಗೇನೇ ವರಗಳನ್ನು ಕೊಡುವವನು, ಸಾಕ್ಷಾತ್ ಪದಕ್ಕೆ ಹೀಗೆ ಮೂರು ಅರ್ಥಗಳನ್ನು ತಿಳಿಸಿದ್ದಾರೆ.

45. ಭೂತಾವಾಸಾಯ ನಮಃ - 1. ಭೂತಗಳಿಗೆ ಆವಾಸನಾದವನು 2. ಪೃಥಿವ್ಯಾದಿಪಂಚಭೂತಗಳಿಗೆ ಮೂಲಸ್ಥಾನನು. 3. ಸಮಸ್ತ ಜೀವರಾಣಿಗಳಿಗೆ ವಾಸಸ್ಥಾನವಾಗಿರುವವನು. 4. ಲಯವಾದಾಗ ಸಮಸ್ತ ಜೀವರಾಶಿಗಳೂ ಪರಮಾತ್ಮನಲ್ಲಿ ಲೀನವಾಗುತ್ತವೆ. 5. ವಿಷ್ಣುವಿನ ಸಮಸ್ತ ಅವತಾರಗಳೂ ಕಾರ್ಯವಾದ ನಂತರ ವಿಷ್ಣುವೇ ಆಗುತ್ತವೆ. 6. ನರಸಿಂಹ ಸ್ವಾಮಿಯ ಮೂಲರೂಪವೇ ಅವನು.

49. ಖಡ್ಗಜಿಹ್ವಾಯ ನಮಃ - ವಿಸ್ತಾರವಾದ ವ್ಯಾಖ್ಯಾನವಿದೆ

201. ವಿಶ್ವಯೋನಯೇ ನಮಃ - ಹೆಚ್ಚಿನವಿವರವಿದೆ. ಕಾಲದೇವನಿಗೆ ನಮಸ್ಕಾರಗಳು - ಎಂದು ಶರಣಾಗತಿಯಾಗುವುದು ಮೇಲು - ಇದು ಬಹುಮುಖ್ಯ - ಎಂದು ರಹಸ್ಯಾರ್ಥ.

232. ತಾಪತ್ರಯಹರಾಯ ನಮಃ - ಐದು ಅರ್ಥಗಳನ್ನು ಮಾಡಲಾಗಿದೆ.

327. ಮಾಲಿನೇ ನಮಃ - ಇಲ್ಲಿ ಪ್ರಕೃತಿಯೆಂಬ ಮಾಲೆಯನ್ನು ತಾನೇ ಹಾಕಿಕೊಂಡಿದ್ದಾನೆಂದು ವ್ಯಾಖ್ಯಾನಮಾಡಿರುವುದು ವೇದಾಂತಕ್ಕೆ ತುಂಬಾ ಹೊಂದಿಕೆಯಾಗಿದೆ.

351. ಮಹಾದಂಷ್ಟ್ರಾಯ ನಮಃ - ವ್ಯಾಖ್ಯಾನವು ತುಂಬಾ ರಮಣೀಯವಾಗಿದೆ.

358. ಪಟಿಷ್ಠಾಯ ನಮಃ - ಎರಡೂ ಅರ್ಥಗಳು ಸುಂದರವಾಗಿವೆ.

411. ಅದ್ಭುತಕರ್ಮಿಣೇ ನಮಃ - ವಿಸ್ತಾರ ವಾಖ್ಯಾವಿದೆ.

433. ಸದಾತುಷ್ಟಾಯ ನಮಃ - ಅರ್ಥ ರಮಣೀಯವಾಗಿದೆ.

619. ಪಂಚರೂಪಧರಾಯ ನಮಃ - ಪಂಚಕೋಶಗಳು, ಪಂಚಭೂತಗಳು, ಪಂಚಪ್ರಾಣಗಳು, ಪಂಚಕರ್ಮೇಂದ್ರಿಯಗಳು, ಪಂಚಜ್ಞಾನೇಂದ್ರಿಯಗಳು, ಪಂಚಸಂಸ್ಕಾರಗಳು - ಮುಂತಾದ ಅರ್ಥಗಳು ಮನೋಹರವಾಗಿವೆ.

777. ಮತ್ಸ್ಯಸ್ವರೂಪಾಯ ನಮಃ - ವಿವರಣೆ ಚೆನ್ನಾಗಿದೆ

806. ಶಾಲಗ್ರಾಮನಿವಾಸಾಯ ನಮಃ - ಶಾಲಗ್ರಾಮಶಿಲೆಯ ವಿಶೇಷಗಳನ್ನು ವ್ಯಾಖ್ಯಾನದಲ್ಲಿ ತಿಳಿಸಿದೆ, ಸ್ವಾರಸ್ಯವಾಗಿದೆ.

960. ಸುತೀರ್ಥಾಯ ನಮಃ - ತೀರ್ಥಶಬ್ದಕ್ಕೆ ನಾಲ್ಕಾರು ಅರ್ಥಗಳನ್ನು ಕೊಟ್ಟಿರುತ್ತದೆ.

999. ರಣಸಿಂಹಾಯ ನಮಃ - ಮನಸ್ಸು ಬುದ್ಧಿಗಳಲ್ಲಿ ದ್ವಂದ್ವಯುದ್ಧವು ನಡೆಯುತ್ತದೆ. ಇದೇ ರಣವೆಂದು ವರ್ಣಿಸಿರುವರು. ತುಂಬಾ ಚೆನ್ನಾಗಿದೆ.

ಒಟ್ಟಿನಲ್ಲಿ ಈ ಕೃತಿರತ್ನವು ವಿದ್ವಾಂಸರಿಗೂ ಪ್ರವಚನಪಟುಗಳಿಗೂ ವಿಮರ್ಶಕರಿಗೂ ಭಕ್ತರಿಗೂ ಸಾಮಾನ್ಯ ಗೃಹಸ್ಥರಿಗೂ ತುಂಬಾ ಪ್ರಯೋಜನಕಾರಿಯಾಗಿದೆ. ಇದರ ಪ್ರಯೋಜವನ್ನು ಎಲ್ಲರೂ ಹೊಂದುವಂತಾಗಲಿ. ಗ್ರಂಥ ಲೇಖಕರ ಶ್ರಮವು ಸಾರ್ಥಕವಾಗಲಿ. ಲೇಖಕರಿಗೆ ಶ್ರೀ ಲಕ್ಷ್ಮೀನರಸಿಂಹಸ್ವಾಮಿಯ ಸಂಪೂರ್ಣ ಅನುಗ್ರಹವು ಉಂಟಾಗಲಿ. ಇದೇ ಲೇಖಕರಿಂದ ಲಕ್ಷ್ಮೀಸಹಸ್ರನಾಮ, ಶಿವಸಹಸ್ರನಾಮ, ಲಲಿತಾಸಹಸ್ರನಾಮ ಮುಂತಾದ ಸ್ತೋತ್ರಗಳಿಗೂ ಹೀಗೆಯೇ ವ್ಯಾಖ್ಯಾನವು ರಚಿತವಾಗಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತಾ ಈ ಮುನ್ನುಡಿಯನ್ನು ಮುಕ್ತಾಯಗೊಳಿಸುತ್ತಿದ್ದೇನೆ.

ಆಧ್ಯಾತ್ಮ ಪ್ರಕಾಶ ಕಾರ್ಯಾಲಯ, ಕೆ. ಜಿ. ಸುಬ್ರಾಯಶರ್ಮ
ತ್ಯಾಗರಾಜನಗರ, ಬೆಂಗಳೂರು - 560 028. ಸದ್ಗುರುಪಾದರೇಣುಃ
ದಿನಾಂಕ: 11.8.1996

## ಗ್ರಂಥಕರ್ತರ ಕಿರುಪರಿಚಯ



1930 ರಲ್ಲಿ ಜನಸಿದ ಹಚ್. ಎನ್. ನರಸಿಂಹಮೂರ್ತಿಯವರು ಬಾಲ್ಯದಲ್ಲಿ ಗ್ರಾಮಾಂತರ ಪರಿಸರದಲ್ಲಿ ವಿದ್ಯಾಭ್ಯಾಸ ಪಡೆದರು. 1947ರಲ್ಲಿ S.S.L.C. ಪರೀಕ್ಷೆಯಲ್ಲಿ ಮೈಸೂರು ರಾಜ್ಯಕ್ಕೆ ಪ್ರಥಮ ರ್‍ಯಾಂಕ್ ಪಡೆದ ಗೌರವ ಇವರದ್ದಾಗಿದೆ. ತದನಂತರ ಇಂಜನೀಯರಿಂಗ್ ಪದವೀಧರರಾಗಿ 33 ವರ್ಷಗಳ ಕಾಲ ಕೇಂದ್ರ ಸರ್ಕಾರದ ದಕ್ಷಿಣ ಪೂರ್ವ ರೈಲ್ವೆ ವಿಭಾಗದಲ್ಲಿ ಸಮರ್ಥವಾಗಿ ಕಾರ್ಯನಿರ್ವಹಿಸಿ 1988ರಲ್ಲಿ ಡೆಪ್ಯೂಟಿ ಛೀಫ್ ಇಂಜನೀಯರ್ ಆಗಿ ನಿವೃತ್ತರಾದರು.

ನಿವೃತ್ತ ಜೀವನದಲ್ಲಿ ವಿಶೇಷವಾಗಿ ಆಧ್ಯಾತ್ಮಿಕ ಜೀವನವನ್ನು ತಮ್ಮದಾಗಿಸಿಕೊಂಡ ಶ್ರೀಯುತರು ತುಮಕೂರು ಮತ್ತು ಧಾರವಾಡ ರಾಮಕೃಷ್ಣ ವಿವೇಕಾನಂದ ಆಶ್ರಮಗಳ ಆಧ್ಯಾತ್ಮಿಕ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಚಿಕ್ಕಬಳ್ಳಾಪುರದ ಶ್ರೀಶ್ರೀ ಯೋಗೀಶ್ವರ ಜ್ಞಾನಪೀಠದ ಪೂಜ್ಯ ಶ್ರೀಶ್ರೀಶ್ರೀ ನಿತ್ಯಾನಂದತೀರ್ಥ ಸ್ವಾಮಿಜಿಯವರ ಮಾರ್ಗದರ್ಶನವೂ ಇವರ ಜೀವನಕ್ಕೆ ಪುಷ್ಟಿ ನೀಡಿದೆ.

ಇತ್ತೀಚಿನ ವರ್ಷಗಳಲ್ಲಿ ಶ್ರೀಯುತರು ತಮ್ಮ ಮನೆ ದೇವರಾದ ಶ್ರೀ ನರಸಿಂಹಸ್ವಾಮಿಯ (ಬ್ರಹ್ಮದೇವ ವಿರಚಿತ) ಸಹಸ್ರನಾಮಾವಳಿಯನ್ನು ಅಧ್ಯಯನ ಮಾಡಿ ಪರಮಾತ್ಮನ ದಿವ್ಯ ಪ್ರೇರಣೆಯಿಂದ ಸಹಸ್ರನಾಮಾವಳಿಯ ಅರ್ಥ, ತಾತ್ಪರ್ಯ ಮತ್ತು ವ್ಯಾಖ್ಯಾನಗಳನ್ನು ಬರೆದು ಮಹತ್ತರವಾದ ಆಧ್ಯಾತ್ಮಿಕ ಕೃಷಿಯನ್ನು ಮಾಡಿ ತಮ್ಮ ಜೀವನಕ್ಕೆ ಒಂದು ಸಾರ್ಥಕತೆಯನ್ನು ಗಳಿಸಿಕೊಂಡಿದ್ದಾರೆ. ಅತ್ಯಂತ ಸರಳ, ಶುದ್ಧ ಕನ್ನಡ ಭಾಷೆಯಲ್ಲಿ ಮೂಡಿಬಂದ ಈ ಗ್ರಂಥದ ಅಧ್ಯಯನದಿಂದ ಸಕಲರ ಶ್ರೇಯೋಭಿವೃದ್ಧಿ ಆಗಲೆಂಬುದೇ ಲೇಖಕರ ಸತ್ಸಂಕಲ್ಪವಾಗಿದೆ.

# ಗ್ರಂಥಕರ್ತರ ಮೊದಲ ಮಾತು

ಈ ''ಶ್ರೀ ನರಸಿಂಹ ಸಹಸ್ರನಾಮಾವಳೀ - ನಾಮಾನುಕ್ರಮದಲ್ಲಿ - ಅರ್ಥ, ತಾತ್ಪರ್ಯ ಮತ್ತು ವ್ಯಾಖ್ಯಾನಗಳು'' ಎಂಬ ಬೃಹದ್ಗ್ರಂಥವು ಪರಮಪಾವನನಾದ ಶ್ರೀ ನರಸಿಂಹ ಸ್ವಾಮಿಯ ವ್ಯಕ್ತಾವ್ಯಕ್ತ ಪ್ರೇರಣೆಯಿಂದ ನವಂಬರ್ 1993 ರಲ್ಲಿ ಪ್ರಾರಂಭವಾಗಿ ಜುಲೈ .1994 ರಲ್ಲಿ ಒಂದು ಹಂತವನ್ನು ಮುಟ್ಟಿತು.

ಇದಕ್ಕೆ ಪರಮ ಪೂಜ್ಯರಾದ ಶ್ರೀ ಶ್ರೀ ಶ್ರೀ ನಿತ್ಯಾನಂದ ತೀರ್ಥ ಸ್ವಾಮೀಜಿ, ಯೋಗೀಶ್ವರ ಜ್ಞಾನಪೀಠ, ಚಿಕ್ಕಬಳ್ಳಾಪುರ ಮತ್ತು ಶ್ರೀ ಶ್ರೀ ಶ್ರೀ ವೀರೇಶಾನಂದ ಸರಸ್ವತಿ ಸ್ವಾಮೀಜಿ, ರಾಮಕೃಷ್ಣ - ವಿವೇಕಾನಂದ ಆಶ್ರಮ, ತುಮಕೂರು - ಇವರಿಂದ ಹಂತ ಹಂತದಲ್ಲಿಯೂ ಪರಾಂಬರಿಸಲ್ಪಟ್ಟು ಪ್ರೋತ್ಸಾಹ ಮತ್ತು ಆ ಪರಮ ಕರುಣಾನಿಧಿಯಾದ ಶ್ರೀ ಲಕ್ಷ್ಮೀನರಸಿಂಹಸ್ವಾಮಿಯ ಅಪಾರ ಕರುಣೆಯಿಂದ ಧಾರಾಕಾರವಾಗಿ ನಿರಂತರ ಹರಿದು ಲಿಖಿತವಾಯಿತು.

ನಂತರ ಇದನ್ನು ನನ್ನಲ್ಲಿಯೇ ಇಟ್ಟುಕೊಂಡರೆ ಪರಮ ಭಕ್ತರಿಗೆ ಈ ಧಾರೆಯು ಸಿಗದಿರುವುದಕ್ಕೆ ನಾನೇ ಕಾರಣವಾಗುತ್ತೇನೆಂದು ಭಾವಿಸಿ, ಇದನ್ನು ಮುದ್ರಿಸಿ ಭಕ್ತರಿಗೆ ತಲಪಿಸುವ ಕಾರ್ಯವೂ ಅಗತ್ಯವೆಂದು ತಿಳಿದು ನಾನಾ ದಾರಿಗಳನ್ನು ಹುಡುಕುತ್ತಿದ್ದಾಗ ವ್ಯಕ್ತಾವ್ಯಕ್ತ ಪ್ರೇರಣೆಯಿಂದ ತಿರುಪತಿಯ ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಮತ್ತು ತಿರುಮಲ ತಿರುಪತಿ ದೇವಸ್ಥಾನಗಳು, ತಿರುಪತಿ ಯವರನ್ನು ಪ್ರಾರ್ಥಿಸಿ ನಿವೇದಿಸಿದೆನು.

ಅಲ್ಲಿಂದ ಈ ಮೊದಲ ಸಂಪುಟದ ಮುದ್ರಣಕಾರ್ಯಕ್ಕೆ ಬಹುವಾದ ಹದಿನೈದು ಸಾವಿರ ರೂಪಾಯಿಗಳ ಧನವು ಇದೇ ಏಪ್ರಿಲ್ 1996 ರಲ್ಲಿ ಮಂಜೂರಾಯಿತು. ಇದರಿಂದ ಪುಲಕಿತನಾದ ನಾನು ಅನೇಕ ಭಗವದ್ಭಕ್ತರನ್ನು ವ್ಯಕ್ತಿಗತವಾಗಿ ಸಂಧಿಸಿ ಈ ಬೃಹತ್ಕಾರ್ಯವನ್ನು ಅವರವರ ಪರಿಶೀಲನೆಗೆ ಒಪ್ಪಿಸಿದಾಗ ಅಪಾರ ಧನಸಹಾಯವು ದೊರಕಿತು, ದೊರಕುತ್ತಿದೆ ಮತ್ತು ಮುಂದೆಯೂ ದೊರಕುತ್ತದೆ. ಈ ಸದ್ಭಕ್ತರ ಪ್ರೋತ್ಸಾಹ ಧನರೂಪದಲ್ಲಿ ಮಾತ್ರವಲ್ಲದೆ ಗ್ರಂಥವು ಇನ್ನೂ ಉನ್ನತ ಮಟ್ಟಕ್ಕೇರುವ ವಿಚಾರ ವಿಮರ್ಶೆಗಳು ಬಂದುದರಿಂದ -

ಬ್ರಹ್ಮಾಂಡ ಪುರಾಣದ ನೃಸಿಂಹ ಪ್ರಾದುರ್ಭಾವದಲ್ಲಿ ಬ್ರಹ್ಮಗೀತವಾದ ಶ್ರೀ ನೃಸಿಂಹ ಸಹಸ್ರನಾಮ ಸ್ತೋತ್ರವನ್ನೂ ಪಾರಾಯಣಕ್ಕಾಗಿಯೂ,

ಸಹಸ್ರನಾಮಾವಳಿಯ ರೂಪವನ್ನು ಪೂಜೆಗೈಯುವುದಕ್ಕೂ, ಮತ್ತು

ವಿಶಾಲವಾಗಿ ಭಗವಚ್ಚಿಂತನೆಗಾಗಿ ಅರ್ಥ, ತಾತ್ಪರ್ಯ ಮತ್ತು ವ್ಯಾಖ್ಯಾನಗಳನ್ನೂ ಪ್ರತಿನಾಮಕ್ಕೂ ಅಳವಡಿಸಿ ಕೊಡಲಾಗಿದೆ.

ಗ್ರಂಥವು ಬೃಹತ್ತಾದರಿಂದ ಇದನ್ನು ಎರಡು ಸಂಪುಟಗಳಲ್ಲಿ ಹೊರತರಲು ಉದ್ದೇಶಿಸಿ, ಈಗ ಮೊದಲ ಸಂಪುಟದಲ್ಲಿ ಒಂದನೇ ನಾಮದಿಂದ ಐದುನೂರನೇ ನಾಮದವರೆಗೆ (ಎರಡೂ ಸೇರಿ) ಅಳವಡಿಸಲಾಗಿದೆ.

ಮುಂದಿನ ಅಂದರೆ ಐದುನೂರ ಒಂದನೇ ನಾಮದಿಂದ ಒಂದು ಸಾವಿದರ ನಾಮ ಮತ್ತು ತದನಂತರ ಬ್ರಹ್ಮದೇವರ ಪ್ರಾರ್ಥನೆ, ಶ್ರೀ ಲಕ್ಷ್ಮೀನರಸಿಂಹಸ್ವಾಮಿಯವರ ವಾಣಿಗಳು, ಈ ಸಹಸ್ರನಾಮದ ರೂಪದಲ್ಲಿ ನಮಗೆ ಲಭ್ಯವಾದ ದಾರಿ, ಇತರ ಸ್ತೋತ್ರಗಳನ್ನು ಸೇರಿಸಿ ಎರಡನೆಯ ಸಂಪುಟವನ್ನು ಅತಿ ಶೀಘ್ರದಲ್ಲಿಯೇ ಹೊರತಂದು ಭಗವದ್ಭಕ್ತರಿಗೆ ಅರ್ಪಿಸುತ್ತೇನೆ.

ಈ ಗ್ರಂಥವು ಮುದ್ರಣವಾಗುವುದಕ್ಕೆ ಮೊಟ್ಟ ಮೊದಲನೇ ಪ್ರೋತ್ಸಾಹ ಮಾಡಿರುವ ತಿರುಪತಿಯ ಶ್ರೀ ವೆಂಕಟೇಶ್ವರ ಸ್ವಾಮಿಯವರನ್ನು ಎಷ್ಟು ಕೊಂಡಾಡಿದರೂ ಅದು ಅಲ್ಪವೇ ಅಲ್ಲವೇ. ಇದು ಗ್ರಂಥದಾರೆಯು ನಿರಂತರ ಹರಿಯಲು ಕಾರಣನಾದ ಪರಮಾತ್ಮನೇ ಈ ರೂಪದಲ್ಲಿ ಭಕ್ತರ ಕೈ ಸೇರಲು ಕೈ ಹಿಡಿದು ನಡೆಸುತ್ತಿದ್ದಾನೆಂದು ನನ್ನ ಬಲವಾದ ಆತ್ಮವಿಶ್ವಾಸ.

ಈ ಗ್ರಂಥವನ್ನು ಗಮನಿಸಿ ಇದಕ್ಕೆ ಅನುಗ್ರಹವಚನವನ್ನು ದಯಪಾಲಿಸಿರುವ ಶ್ರೀ ಶ್ರೀ ಶ್ರೀ ನಿತ್ಯಾನಂದ ತೀರ್ಥ ಸ್ವಾಮಿಜಿಯವರಿಗೂ ಮತ್ತು ಶ್ರೀ ಶ್ರೀ ಶ್ರೀ ನಿರ್ಭಯಾನಂದ ಸರಸ್ವತಿ ಸ್ವಾಮಿಜಿಯವರಿಗೂ ನನ್ನ ಹೃದಯಾಂತರಾಳದಿಂದ ನಮಿಸುತ್ತೇನೆ. ತಿರುಪತಿ ವೆಂಕಟೇಶ್ವರ ಸ್ವಾಮಿಯವರ ಕೃಪೆಯನ್ನು ಹರಿಸಿದ ಶ್ರೀ ತಿರುಮಲ ತಿರುಪತಿ ದೇವಸ್ಥಾನಗಳು, ತಿರುಪತಿ ಅಧಿಕಾರಿವರ್ಗಕ್ಕೆ ನನ್ನ ಸವಿನಯ ಕೃತಜ್ಞತೆಯನ್ನು ಈ ಮೂಲಕ ಅರ್ಪಿಸುತ್ತಿದ್ದೇನೆ.

ಪ್ರತ್ಯಕ್ಷ, ಪರೋಕ್ಷವಾಗಿ ಸಹಾಯ ಮಾಡಿದ ಸಕಲ ಭಕ್ತವೃಂದಕ್ಕ ನನ್ನ ಆತ್ಮೀಯ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇನೆ.

ಈ ಗ್ರಂಥವನ್ನು ಪರಿಶೀಲಿಸಿ ವಿಶಾಲವಾದ ಮುನ್ನುಡಿಯನ್ನು ಅನುಗ್ರಹಿಸಿರುವ ವೇ||ಬ್ರ||ಶ್ರೀ ಕೆ. ಜಿ. ಸುಬ್ರಾಯ ಶರ್ಮರಿಗೂ ನನ್ನ ಗೌರವಯುಕ್ತ ನಮಸ್ಕಾರಗಳನ್ನು ಈ ಮೂಲಕ ತಿಳಿಸುತ್ತೇನ.

ಈ ಗ್ರಂಥವನ್ನು ಅತ್ಯಂತ ಸುಂದರವಾಗಿ ಅತ್ಯಲ್ಪಕಾಲದಲ್ಲಿ ಮುದ್ರಣಮಾಡಿ ಹೊರತಂದಿರುವ ಶ್ರೀ ಕೆ. ಎನ್. ನರಸಿಂಗರಾಯರು ಮತ್ತು ಅವರ ಮಕ್ಕಳು ಶ್ರೀ ಕೆ. ಎನ್. ನಾಗರಾಜರು, ಸಾಯಿನಾಥ ಗ್ರಾಫಿಕ್ಸ್, ಬೆಂಗಳೂರು ರವರಿಗೆ ನನ್ನ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಈ ಮೂಲಕ ಅರ್ಪಿಸುತ್ತೇನೆ.

ಸುಂದರವಾಗಿಯೂ, ಆಕರ್ಷಕವಾಗಿಯೂ ವಿನ್ಯಾಸ (ಡಿ.ಟಿ.ಪಿ.) ಮಾಡಿಕೊ
ಶ್ರೀ ಅಶೋಕ್ ಕಾರ್ಣಿಕ್ ಮತ್ತು ಶ್ರೀ ಆರ್. ಶ್ರೀನಿವಾಸ್, ಶ್ರೀಶಾ ಗ್ರಾಫಿಕ್ಸ್, ಬೆಂಗ
ರವರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಈಗ ಗ್ರಂಥದ ಪ್ರವೇಶವಾಗಲಿ.

ಇತಿ ಪರಮಾತ್ಮನ ಪಾದ ಪದ್ಮಗಳಲ್ಲಿ ನಮಸ್ಕರಿಸುತ್ತಾ, ಭಕ್ತವೃ
ಅರ್ಪಿಸುತ್ತಿರುವ,

30.09.96

ತುಮಕೂರು ಹೆಚ್. ಎನ್. ನರಸಿಂಹಮೂರ್ತಿ

# ಪೀಠಿಕೆ

ಈ ನರಸಿಂಹ ಸಹಸ್ರನಾಮಗಳ ಅರ್ಥ, ತಾತ್ಪರ್ಯ, ವ್ಯಾಖ್ಯಾನಗಳನ್ನು ಪ್ರತಿ ನಾಮಕ್ಕೂ ಬರೆದಿಡಬೇಕೆಂದು ಅನೇಕ ಕಾಲದಿಂದ ಒಂದು ಹಂಬಲ ಮನಸ್ಸಿನಲ್ಲಿ ಮೂಡಿತು. ಇದು ಆಶಾಕಿರಣದ ರೂಪದಲ್ಲಿ ಮಿಂಚಿನ ಬಳ್ಳಿಯ ಹೊಳಪಿನಂತೆ ಕಗ್ಗತ್ತಲೆಯ ಅಜ್ಞಾನದ ಮನಸ್ಸಿನ ಆಕಾಶದಲ್ಲಿ ಝಳಪಿಸಿತು. ಅಂದಿನಿಂದ, ಮಿಂಚು ಬೇರೂರಿ, ಗುಡುಗು, ತುಂತುರು, ಬಿರುಗಾಳಿ, ಹನಿಗಳು, ಮಳೆ, ಸೋನೆಮಳೆ, ಜೋರುಮಳೆ, ಜಡಿಮಳೆಗಳ ರೂಪದಿಂದ ಮನಸ್ಸಿನಲ್ಲಿ ಮೂಡಿ ಬಂತು. ಕ್ರಮಕ್ರಮವಾಗಿ ಪ್ರವಾಹರೂಪದಲ್ಲಿ ಹೇಗೆ ನದಿಯು ಸಣ್ಣ ಕಾಲುವೆಯ ರೂಪದಿಂದ ಸಮುದ್ರ ಸೇರುವ ವೇಳೆಗೆ ದೊಡ್ಡ ಪ್ರವಾಹವಾಗಿ ನಡೆಯುವುದೋ, ಅದೇ ರೀತಿ ಈ ಸಹಸ್ರನಾಮಗಳು, ಅವುಗಳ ಭಾವಾವೇಶಗಳು, ಮೂಡಿವೆ. ಕೆಲವು ತುಂತುರುಗಳಾದರೆ, ಕೆಲವು ಮಿಂಚಿನಂತೆ ಹೊಳೆಯುತ್ತವೆ, ಮತ್ತೆ ಕೆಲವು ಶಾಂತವಾದ ನದಿಯಂತೆ ಭಾವನೆಗಳನ್ನು ಅಡಗಿಸಿಕೊಳ್ಳುತ್ತವೆ. ಇನ್ನು ಕೆಲವುಗಳಲ್ಲಿ ಭಾವಾವೇಶಗಳು ಧುಮುಕುತ್ತವೆ. ಜಲಪಾತಗಳಂತೆ ಭಾವಗಳು ಕ್ಷಣಮಾತ್ರದಲ್ಲಿ ಕಡಿದಾಗಿಯೋ ಅಥವಾ ವಿಶಾಲವಾಗಿಯೋ, ಪ್ರಶಾಂತವಾಗಿಯಾಗಲಿ, ಪ್ರಪಾತವಾಗಿಯಾಗಲಿ ಹೊಳೆಯುತ್ತವೆ. ಕೆಲವು ನಾಮಗಳಲ್ಲಿ ಭಾವಾವೇಶಗಳು ನಮ್ಮ ಮನಸ್ಸನ್ನು ಬೇರೆ ಯಾವುದೋ ಮನೋ ಪ್ರಪಂಚಕ್ಕೆ ನಮಗೆ ತಿಳಿಯದೆಯೇ / ಅರಿವಿಲ್ಲದೆ ಮನೋಬುದ್ಧಿಗಳನ್ನು ಎಳೆದುಕೊಂಡು ಹೋಗಿ ನಿಲ್ಲಿಸಿದರೆ, ಆ ನಾಮದ ಭಾವಾವೇಶದ ನಂತರ ಮುಂದಿನ ನಾಮಕ್ಕೆ ಪ್ರವೇಶ ಮಾಡುವಾಗ ಇದು ಆ ನಾಮದ ಕೊನೆಯೇ ಅಥವಾ ಮುಂದಿನ ನಾಮಕ್ಕೆ ನಾಂದಿಯೇ ಎಂಬ ವಿಸ್ಮಯ ಹುಟ್ಟುತ್ತದೆ.

ಮತ್ತೆ ಕೆಲವುಗಳಲ್ಲಿ ನದಿಯು ಸಮುದ್ರವನ್ನು ಸೇರುವಾಗ ಹೇಗೆ ತನ್ನತನವನ್ನು ಸಾಗರದಲ್ಲಿ ಲೀನಮಾಡುವುದೋ, ಹಾಗೆ ನಾಮಗಳು ತಮ್ಮ ಎಲ್ಲ ಭಿನ್ನತೆ ತನ್ನತನಗಳನ್ನು ಜೀವನ (ಆತ್ಮದ) ಏಕೈಕ ಗುರಿಯಾದ ಪುನರಾವೃತಿರಹಿತಲೋಕ, ಸಾರೂಪ್ಯ, ಸಾಲೋಕ್ಯ, ಸಾಮಿಪ್ಯ, ಸಾಯುಜ್ಯವನ್ನೇ ಪ್ರತಿಪಾದಿಸುತ್ತವೆ. ಮತ್ತೆ ಕೆಲವು ಪರಮಾತ್ಮನ ನಾಮ, ರೂಪಗಳನ್ನು ವಿವರಿಸಿ, ಊಹಿಸಿ ಊಹಿಸಿ ಊಹಿಸಿ ಬೇಸತ್ತೋ ಎಂಬಂತೆ, ಓಂಕಾರರೂಪದಲ್ಲಿ ಮಿಲನ / ಲೀನವಾಗಿ ಹೋಗುತ್ತವೆ.

ಮತ್ತೆ ಕೆಲವು ಪುರುಷ, ಪ್ರಕೃತಿ, ಮಾಯೆಗಳನ್ನು ಸಂಸಾರ ಸಾಗರದೊಡನೆ ಸಂಯೋಗ, ವಿಯೋಗಗಳನ್ನು ಪ್ರತಿಪಾದಿಸಿ ಕೊನೆಗೆ ''ಏಕೈಕಶಕ್ತಿ'' - ಓಂ - ಎನ್ನುವುದರಲ್ಲಿ ನಿಲ್ಲುತ್ತದೆ.

ಈ ಭಾವಾರ್ಥ, ಭಾವಾವೇಶ, ವ್ಯಾಖ್ಯಾನ, ತಾತ್ಪರ್ಯ ಎಂದು ಏನೇ ನಾಮದಿಂದ ಭಾವಿಸಿ ಈ ಸಾವಿರ ನಾಮದ ಮಾಲೆಯನ್ನು ಕರೆದರೂ, ಅದು ಎಲ್ಲ ಭಾವಗಳನ್ನು

ಮೀರಿ ಮೇಲೆ ನಿಲ್ಲುತ್ತದೆ. ಯಾವ ನಾಮವೂ ಇದಕ್ಕೆ ಸಲ್ಲಲು ಸಾಲದು ಎಂದು ನನ್ನ ಭಾವನೆ. ಏಕೆಂದರೆ ಮೂಲತಃ ಇದರ ಗುಹ್ಯವಾದ ಗುಟ್ಟು ಎಂದರೆ ಇದನ್ನು ನಾನು ರಚಿಸಿದವನಲ್ಲ, ಭಾವಿಸಿ ಬರೆದವನಲ್ಲ, ಯೋಚಿಸಿ, ಕೂಲಂಕುಶವಾಗಿ ಪರಾಂಬರಿಸಿ (ಮನಸ್ಸಿನಲ್ಲಿಯಾಗಲಿ) ಬರೆದದ್ದಲ್ಲ! ಈ ವಿಚಾರ ಸರಣಿಯನ್ನು ಮಾಡಿ ಹೊಳೆ ಹೊಳೆಯಾಗಿ ಹರಿಸಿದವನು ಆ ಪರಮಾತ್ಮ - ಆ ಪರಬ್ರಹ್ಮ, ಬ್ರಹ್ಮ, ವಿಷ್ಣು, ಮಹೇಶ್ವರಾದಿಗಳಿಗೂ ಶಕ್ತಿಗೂ ಶಕ್ತನಾದ ಪರಬ್ರಹ್ಮ - ಇನ್ನೂ ಒಂದು ಹೆಜ್ಜೆ ಹೋಗಿ ತಿಳಿಸಬೇಕೆಂದರೆ - ಆ ಸದ್ಗುರು ಪರಬ್ರಹ್ಮನೇ ತನ್ನ ಆಶಯದಿಂದ ವಿವಿಧ ಪರಮಾತ್ಮನ ನಾಮಗಳಿಂದ ಮನಸ್ಸಿನಲ್ಲಿ ಕುಳಿತು ಅಡೆ ತಡೆಯಿಲ್ಲದೆ ಬರೆಸಿದ ಗ್ರಂಥ - ಅವನ ಲೀಲೆಗಳನ್ನು ಅವನೇ ಬರೆಸಿ ಪ್ರಕಾಶಮಾಡಲು ಹುಲುಮಾತ್ರನಾದ ಈ ಜೀವಾತ್ಮವನ್ನು ಆರಿಸಿದುದಕ್ಕೆ ಪರಮಕೃತಜ್ಞತೆಯನ್ನು ಅರ್ಪಿಸುತ್ತೇನೆ. ಆ ಕರುಣಾಮಯ ನರಸಿಂಹಸ್ವಾಮಿಯು ತನ್ನ ಚಿತ್ತದಂತೆ ಈ ಅಮೂಲ್ಯ ವಿಚಾರಧಾರೆಯನ್ನು ತನಗಿಷ್ಟವಾದ ತನ್ನ ಭಕ್ತ ಸಮೂಹಕ್ಕೆ ತನ್ನ ಕೃಪಾಸಿಂಧುವನ್ನು ಹನಿಹನಿಯಾಗಿಯಲ್ಲದೆ ಶಾಂತ ಪ್ರವಾಹ ರೂಪದಲ್ಲಿ ಧಾವಿಸಿ, ಕರ್ಮಬಂಧನದಿಂದ ಬಿಡುಗಡೆ ಮಾಡಿ ಸಕಲ ಜೀವಿಗಳ ಪರಮಗುರಿಯನ್ನು ಸೇರಿಸಲಿ. ಈ ಭಾವನಾ ನದಿಯಲ್ಲಿ ಪಾದಸ್ಪರ್ಶ ಮಾಡಿದವರು ನದಿಯು ಸಮುದ್ರದಲ್ಲಿ ಸೇರುವವರೆಗೂ; ನಂತರವೂ ಮಿಂದು, ಮಿಂದು ಸಾಗರದಲ್ಲಿ ಲೀನವಾಗುವ ನದಿಯಂತೆ ಸಾಯುಜ್ಯವನ್ನು ಸೇರಿ ಸಚ್ಚಿದಾನಂದವನ್ನು ಅನುಭವಿಸಲಿ ಎಂದು ಈ ಚಿಕ್ಕಹೊತ್ತಿಗೆಯನ್ನು ಪರಮಪೂಜ್ಯ ಭಕ್ತವೃಂದಕ್ಕೆ ಅರ್ಪಿಸುತ್ತಿದ್ದೇನಿ. (ಈ ಪೀಠಿಕೆಯೇ ಭಗವತ್ಪ್ರೇರಣಾಲಹರಿ!!)

ಇದಕ್ಕೆ ಕಾರಣರೂಪವಾದ ಭಗವಂತನನ್ನು ಗುರುವರ್ಯರಾದ ಶ್ರೀ ಶ್ರೀ ಶ್ರೀ ವೀರೇಶಾನಂದ ಸರಸ್ವತಿ ಸ್ವಾಮೀಜಿ, ರಾಮಕೃಷ್ಣ ವಿವೇಕಾನಂದ ಆಶ್ರಮ, ತುಮಕೂರು ಮತ್ತು ಶ್ರೀ ಶ್ರೀ ಶ್ರೀ ನಿತ್ಯಾನಂದ ತೀರ್ಥ ಸ್ವಾಮೀಜಿ, ಚಿಕ್ಕಬಳ್ಳಾಪುರ ರನ್ನು ಅಪಾರವಾಗಿ ವಂದಿಸಿ ನನ್ನ ಅಪರಿಮಿತ ಸಂತೋಷವನ್ನು ಅರ್ಪಿಸುತ್ತೇನೆ. ಇದು ಅಳೆಯಲು ಅಸಾಧ್ಯ. ಇದನ್ನು ಮನದಿಂದ ಎಷ್ಟು ಹೊರಗೆಳೆದರೂ ಅದು ಕಡಿಮೆಯೇ! ಎಳೆಯಲು ಇನ್ನು ಮನದ ಅಂತರಾಳದಲ್ಲಿ ಇದ್ದೇ ಇರುತ್ತದೆ. ಉಳಿದೇ ಇರುತ್ತದೆ!

ಭಗವಂತನ ಕರುಣೆ ಅಪಾರವಾದರೆ, ಗುರುಕರುಣೆಯೂ ಇನ್ನೂ ಪರಮವಾದುದು. ಗುರುಕರುಣೆಯಿಂದ ಏನನ್ನೂ ಬೇಕಾದರೂ ನಮ್ಮ ಶ್ರದ್ಧೆಯಿಂದ ಪಡೆಯಬಹುದು, ಸಾಧಿಸಬಹುದು ಎಂಬುದೇ ಈ ಕೃತಿಯಿಂದ ಬಂದಿರುವ ಪಾಠ ಎಂದು ಹೇಳಿ ಈ ಪೀಠಿಕೆಯನ್ನು ನಿಮಗೆ ಬಿಡುತ್ತೇನೆ - ಮುಂದುವರಿಸಿ, ನರಸಿಂಹನ ನದಿಯಲ್ಲಿ ಮುನ್ನಡೆಯಿರಿ ಎಂದು ನನ್ನ ಪ್ರಾರ್ಥನೆ!!

18.08.94 ಇತಿ ಭವದೀಯ

ತುಮಕೂರು **ಹೆಚ್. ಎನ್. ನರಸಿಂಹಮೂರ್ತಿ**

|| ಶ್ರೀ ಲಕ್ಷ್ಮೀನೃಸಿಂಹಾಯ ನಮಃ ||

# ಶ್ರೀನೃಸಿಂಹಸಹಸ್ರನಾಮಸ್ತೋತ್ರಮ್

ರಿಃ ಓಮ್ ||
ವಂ ಯುದ್ಧಮಭೂದ್ಘೋರಂ ರೌದ್ರಂ ದೈತ್ಯಬಲೈಃ ಸಹ |
ಸಿಂಹಸ್ಯಾಂಗಸಂಭೂತೈರ್ನಾರಸಿಂಹೈರನೇಕಶಃ || ೧ ||
ತ್ಯಕೋಟ್ಯೋ ಹತಾಸ್ತತ್ರ ಕೇಚಿದ್ಭೀತಾಃ ಪಲಾಯಿತಾಃ |
ಂ ದೃಷ್ಟ್ವಾಽತೀವ ಸಂಕ್ರುದ್ಧೋ ಹಿರಣ್ಯಕಶಿಪುಸ್ಸ್ವಯಮ್ || ೨ ||
ೂತಪೂರ್ವೈರಮೃತ್ಯುರ್ಮೇ ಇತಿ ಬ್ರಹ್ಮವರೋದ್ಧತಃ |
ವರ್ಷ ಶರವರ್ಷೇಣ ನಾರಸಿಂಹಂ ಭೃಶಂ ಬಲೀ || ೩ ||
ಂದ್ವಯುದ್ಧಮಭೂದ್ಘೋರಂ ದಿವ್ಯವರ್ಷಸಹಸ್ರಕಮ್ |
ತ್ಯೇಂದ್ರಸಾಹಸಂ ದೃಷ್ಟ್ವಾ ದೇವಾಶ್ಚೇಂದ್ರಪುರೋಗಮಾಃ || ೪ ||
ೕಯಃ ಕಸ್ಯ ಭವೇದತ್ರ ಇತಿ ಚಿಂತಾಪರಾಭವನ್ |
ಷ್ಣುಚಕ್ರಂ ಮಹಾಚಕ್ರಂ ಕಾಲಚಕ್ರಂ ಚ ವೈಷ್ಣವಮ್ || ೫ ||
ದ್ರಂ ಪಾಶುಪತಂ ಬ್ರಾಹ್ಮಂ ಕೌಬೇರಂ ಕುಲಿಶಾಯುಧಮ್ |
ಗ್ನೇಯಂ ವಾರುಣಂ ಸೌಮ್ಯಂ ಮೋಹನಂ ಸೌರಮಾಚಲಮ್ || ೬ ||
ರ್ಗವಾದಿ- ಬಹೂನ್ಯಸ್ತ್ರಾಣ್ಯಭಕ್ಷಯತ ಕೋಪನಃ |
ತಃ ಖಡ್ಗಧರಂ ದೈತ್ಯಂ ಜಗ್ರಾಹ ನರಕೇಸರೀ || ೭ ||
ಂಧ್ಯಾಕಾಲೇ ಸಭಾದ್ವಾರೇ ಸ್ವಾಂಕೇ ನಿಕ್ಷಿಪ್ಯ ಭೈರವಃ |
ರಣ್ಯಕಶಿಪೋರ್ವಕ್ಷೋ ವಿದಾರ್ಯಾತಿವರೋಷತಃ || ೮ ||
ದ್ಧೃತ್ಯ ಚಾಂತ್ರಮಾಲ್ಯಾನಿ ನಖೈರ್ವಜ್ರಸಮಪ್ರಭೈಃ |
ೕನೇ ಕೃತಾರ್ಥಮಾತ್ಮಾನಂ ಸರ್ವತಃ ಪರ್ಯವೈಕ್ಷತ || ೯ ||
ರ್ಷಿತಾ ದೇವತಾಃ ಸರ್ವಾಃ ಪುಷ್ಪವೃಷ್ಟಿಮವರ್ಷಯನ್ |
ೕವದುಂದುಭಯೋ ನೇದುರ್ದಿಶಶ್ಚ ವಿಮಲಾಭವನ್ || ೧೦ ||
ಸಿಂಹಂ ತ್ವತಿತೇಜೋಭಿರ್ವಿಕೀರ್ಣವದನಂ ಭೃಶಮ್|
ೕಲಿಹಾನಂ ಚ ಗರ್ಜಂತಂ ಕಾಲಾನಲಸಮಪ್ರಭಮ್ || ೧೧ ||
ತಿ ರೌದ್ರಂ ಮಹಾಕಾಯಂ ಮಹಾದಂಷ್ಟ್ರಂ ಮಹಾರುಶಂ |
ಹಾಜಿಹ್ವಂ ಮಹಾರೂಪಂ ದೃಷ್ಟ್ವಾ ಸಂಕ್ಷುಭಿತಂ ಜಗತ್ || ೧೨ ||
ರ್ವದೇವಗಣೈಸ್ಸಾರ್ಧಂ ತತ್ರಾಗತ್ಯ ಪಿತಾಮಹಃ |
ಗಂತುಕೈರ್ಭೂತಪೂರ್ವೈಃ ವರ್ತಮಾನೈರನುತ್ತಮೈಃ |
ಪ್ಯೈರ್ನಾಮ ಸಹಸ್ರೇಣ ತುಷ್ಟಾವ ಶ್ರುತಿ ಸಮ್ಮತೈಃ ||

ಅಸ್ಯ ಶ್ರೀನೃಸಿಂಹಸಹಸ್ರನಾಮಸ್ತೋತ್ರ ಮಹಾಮಂತ್ರಸ್ಯ ಬ್ರಹ್ಮಾ ಋಷಿಃ। ಅನುಷ್ಟುಪ್ ಛಂದಃ। ಲಕ್ಷ್ಮೀನೃಸಿಂಹೋ ದೇವತಾ। ಶ್ರೀ ಲಕ್ಷ್ಮೀನೃಸಿಂಹಃ ಪರಮಾತ್ಮೇತಿ ಬೀಜಮ್ ಲಕ್ಷ್ಮೀರ್ಮಾಯೇತಿ ಶಕ್ತಿಃ ॥

ಅಥ ಚ ॥

ಜೀವೋ ಬೀಜಮ್ । ಬುದ್ಧಿಃ ಶಕ್ತಿಃ ॥ ಉದಾನವಾಯುರ್ಬೀಜಮ್ । ಸರಸ್ವತೀ ಶಕ್ತಿಃ ॥ ವ್ಯಂಜನಾನಿ ಬೀಜಾನಿ । ಸ್ವರಾಃ ಶಕ್ತಯಃ ॥ ಓಂ ಕ್ಷಾಂ ಐಂ ಹ್ರೀಂ ಇತಿ ಬೀಜಾನಿ । ಕ್ಲೀಂ ಶ್ರೀಂ ಅಂ ಆಂ ಇತಿ ಶಕ್ತಯಃ । ವಿಕೀರ್ಣನಖದಂಷ್ಟ್ರಾಯುಧೇತಿ ಕೀಲಕಮ್ । ಆಕಾರಾ ಇತಿ ವೇದಕಮ್ । ಓಂ ಶ್ರೀಂ ಹಂ ಕ್ಷಂ ಸ ಇತಿ ಲಕ್ಷ್ಯಮ್ । ವರಾಭಯೇ ಮುದೇ ॥

ಉಗ್ರಂ ವೀರಮಿತ್ಯಾದಿ ಮೂಲಮಂತ್ರಃ । ಶ್ರೀಲಕ್ಷ್ಮೀನೃಸಿಂಹಪ್ರಸಾದಸಿದ್ಧಿದ್ವಾರಾ ಸರ್ವಾಭೀಷ್ಟಪ್ರಾಪ್ತ್ಯರ್ಥೇ ಜಪೇ ವಿನಿಯೋಗಃ ॥

**ಕರನ್ಯಾಸಃ ॥**

ಓಂ ಅಂ ಶ್ರೀಲಕ್ಷ್ಮೀನೃಸಿಂಹಾಯ ಅಂಗುಷ್ಠಾಭ್ಯಾಂ ನಮಃ । ಓಂ ಅಂ ವಜ್ರಧರಾಯ ತರ್ಜನೀಭ್ಯಾಂ ಸ್ವಾಹಾ । ಓಂ ಅಂ ಮಹಾರೌದ್ರಾಯ ಮಧ್ಯಮಾಭ್ಯಾಂ ವಷಟ್ । ಓಂ ಆಂ ಸರ್ವತೋಮುಖಾಯ ಅನಾಮಿಕಾಭ್ಯಾಂ । ಓಂ ಆಂ ಕಟಾಯ ಕನಿಷ್ಠಿಕಾಭ್ಯಾಂ ವೌಷಟ್ । ಓಂ ಆಂ ವೀರಾಯ ಅಸ್ತ್ರಾಯ ಫಟ್ ॥

ಏವಂ ಹೃದಯ ನ್ಯಾಸಃ ॥

ಓಂ ಆಂ ಶ್ರೀಲಕ್ಷ್ಮೀನೃಸಿಂಹಾಯ ಹೃದಯಾಯ ನಮಃ । ಓಂ ಆಂ ವಜ್ರಧರಾಯ ಶಿರಸೇ ಸ್ವಾಹಾ । ಓಂ ಆಂ ಮಹಾರೌದ್ರಾಯ ಶಿಖಾಯೈ ವಷಟ್ । ಓಂ ಆಂ ಸರ್ವತೋಮುಖಾಯ ಕವಚಾಯ ಹುಮ್ । ಓಂ ಆಂ ಕಟಾಯ ನೇತ್ರತ್ರಯಾಯೈ ವಷಟ್ । ಓಂ ಆಂ ವೀರಾಯ ಅಸ್ತ್ರಾಯ ಫಟ್ । ಓಂ ಭೂರ್ಭುವ ಸ್ಸುರೋಮಿತಿ ದಿಗ್ಬಂಧಃ ॥

ಓಂ ಯಂ ನಮಶ್ಚಕ್ರಾಯ ಸ್ವಾಹಾ । ಐಂದ್ರೀಂ ದಿಶಂ ಸುದರ್ಶನೇನ ಬಧ್ನಾಮಿ ॥
ಓಂ ರಂ ನಮಶ್ಚಕ್ರಾಯ ಸ್ವಾಹಾ । ಅಗ್ನೇಯೀಂ ದಿಶಂ ಸುದರ್ಶನೇನ ಬಧ್ನಾಮಿ ॥
ಓಂ ಕ್ಷಂ ನಮಶ್ಚಕ್ರಾಯ ಸ್ವಾಹಾ । ಯಾಮ್ಯಾಂ ದಿಶಂ ಸುದುರ್ಶನೇನ ಬಧ್ನಾಮಿ ॥
ಓಂ ಖಂ ನಮಶ್ಚಕ್ರಾಯ ಸ್ವಾಹಾ । ನೈರ್ಋತೀಂ ದಿಶಂ ಸುದರ್ಶನೇನ ಬಧ್ನಾಮಿ ॥
ಓಂ ವಂ ನಮಶ್ಚಕ್ರಾಯ ಸ್ವಾಹಾ । ವಾರುಣೀಂ ದಿಶಂ ಸುದರ್ಶನೇನ ಬಧ್ನಾಮಿ ॥
ಓಂ ಯಂ ನಮಶ್ಚಕ್ರಾಯ ಸ್ವಾಹಾ । ವಾಯುವೀಂ ದಿಶಂ ಸುದರ್ಶನೇನ ಬಧ್ನಾಮಿ ॥
ಓಂ ಸೌಂ ನಮಶ್ಚಕ್ರಾಯ ಸ್ವಾಹಾ । ಕೌಬೇರೀಂ ದಿಶಂ ಸುದರ್ಶನೇನ ಬಧ್ನಾಮಿ ॥
ಓಂ ಬಂ ನಮಶ್ಚಕ್ರಾಯ ಸ್ವಾಹಾ । ಐಶಾನೀಂ ದಿಶಂ ಸುದರ್ಶನೇನ ಬಧ್ನಾಮಿ ॥
ಓಂ ಹಂ ನಮಶ್ಚಕ್ರಾಯ ಸ್ವಾಹಾ । ಊರ್ಧ್ವಾಂ ದಿಶಂ ಸುದರ್ಶನೇನ ಬಧ್ನಾಮಿ ॥
ಓಂ ಲಂ ನಮಶ್ಚಕ್ರಾಯ ಸ್ವಾಹಾ । ಅಧಸ್ತಾದ್ದಿಶಂ ಸುದರ್ಶನೇನ ಬಧ್ನಾಮಿ ॥

ಓಂ ಸಂ ನಮಶ್ಚಕ್ರಾಯ ಸ್ವಾಹಾ । ಸರ್ವತಃ ಸುದರ್ಶನೇನ ಬಧ್ನಾಮಿ ॥

ಹೃದಯೇ ನೃಸಿಂಹಃ ಪಾತು । ವಕ್ಷಸಿ ವಿಷ್ಣುಃ ಪಾತು । ಶಿರಸಿ ನಾರಾಯಣಃ ಪಾತು ಬಾಹ್ವೋಸ್ತ್ರಿವಿಕ್ರಮಃ ಪಾತು । ವಕ್ತ್ರೇ ಹಯಗ್ರೀವಃ ಪಾತು । ಚಕ್ಷುಷೋರಧೋಕ್ಷಜಃ ಪಾತು । ಮಧ್ಯೇ ಮಧುಸೂದನಃ ಪಾತು । ಊರ್ವೋರ್ಹೃಷೀಕೇಶಃ ಪಾತು ಜಾನ್ವೋರ್ಜನಾರ್ದನಃ ಪಾತು । ಪಾದಯೋಸ್ತ್ರಿವಿಕ್ರಮಃ ಪಾತು । ಸರ್ವತ್ರ ಸ್ವಭೂಃ ಪಾತು ।

ಸರ್ವಾಂಗ ಸರ್ವಾತೀರ್ಥ ಸರ್ವೇಶ್ವರ ಶ್ರೀಲಕ್ಷ್ಮೀನೃಸಿಂಹ ರಕ್ಷಸ್ವ ಮಾಮಹಮಸ್ಮಿ ದಾಸಸ್ತಮಹಂ ಪ್ರಪದ್ಯೇ ಶರಣಮ್ ।

ಇತ್ಯನುಸಂಧ್ಯಾಯ ।

**ಧ್ಯಾನಮ್ ॥**

ಸತ್ಯಜ್ಞಾನಸುಖಸ್ವರೂಪಮಮಲಂ ಕ್ಷೀರಾಬ್ಧಿಮಧ್ಯಸ್ಥಿತಂ
ಯೋಗಾರೂಢಮತಿಪ್ರಸನ್ನವದನಂ ಭೂಷಾಸಹಸ್ರೋಜ್ಜ್ವಲಮ್ ।
ತ್ರ್ಯಕ್ಷಂ ಚಕ್ರಪಿನಾಕಸಾಭಯವರಾನ್ ಬಿಭ್ರಾಣಮರ್ಕಚ್ಛವಿಂ
ಛತ್ರೀಭೂತಫಣೀಂದ್ರಮಿಂದುಧವಲಂ ಲಕ್ಷ್ಮೀನೃಸಿಂಹಂ ಭಜೇ ॥
ಉಪಾಸ್ಮಹೇ ನೃಸಿಂಹಾಖ್ಯಂ ಬ್ರಹ್ಮವೇದಾಂತ ಗೋಚರಮ್ ।
ಭೂಯೋ ಲಾಲಿತಸಂಸಾರಚ್ಛೇದಹೇತುಂ ಜಗದ್ಗುರುಮ್ ॥

(ಅಥ ಯಥೋಪದೇಶಂ ಜಪಿತ್ವಾ ಶ್ರೀಲಕ್ಷ್ಮೀನೃಸಿಂಹಾಯ ಸಮರ್ಪ್ಯ ತತಃ ಸಮಕಾಯಶಿರೋಗ್ರೀವಃ ಸ್ಪಷ್ಟಾಕ್ಷರಸ್ವರವರ್ಣವೃತ್ತಂ ನಾಮಪಾರಾಯಣಂ ಕುರ್ಯಾತ್॥

ಪರಾಶರ ಉವಾಚ ॥

ಮಂತ್ರಜ್ಞಾನಕ್ರಿಯಾಯೋಗಸಾರಭೂತೈಶ್ಚ ನಾಮಭಿಃ ।
ಬ್ರಹ್ಮಣಾ ಸಂಸ್ತುತೋ ವಿಷ್ಣುಃ ಸಹಸ್ರಂ ತದ್ಬ್ರವಿಮ್ಯಹಮ್ ॥ ೧ ॥

ಬ್ರಹ್ಮೋವಾಚ ॥ ಓಮ್ ॥

ಓಂ ನಮೋ ನರಸಿಂಹಾಯ ವಜ್ರದಂಷ್ಟ್ರಾಯ ವಜ್ರಿಣೇ ।
ವಜ್ರದೇಹಾಯ ವಜ್ರಾಯ ನಮೋ ವಜ್ರನಖಾಯ ಚ ॥ ೨ ॥
ವಾಸುದೇವಾಯ ವಂದ್ಯಾಯ ವರದಾಯ ಮಹಾತ್ಮನೇ।
ವರಾಭಯದಹಸ್ತಾಯ ವರಾಯ ವರರೂಪಿಣೇ ॥ ೩ ॥
ವರೇಣ್ಯಾಯ ವರಿಷ್ಠಾಯ ಶ್ರೀವರಾಹಾಯ ತೇ ನಮಃ ।
ಪ್ರಹ್ಲಾದವರದಾಯಾಥ ಪ್ರತ್ಯಕ್ಷ ವರದಾಯ ಚ ॥ ೪ ॥
ಪರಾತ್ಪರ ಪರೇಶಾಯ ಪವಿತ್ರಾಯ ಪಿನಾಕಿನೇ ।
ಪಾವನಾಯ ಪ್ರಸನ್ನಾಯ ಪಾಶಿನೇ ಪಾಪಹಾರಿಣೇ ॥ ೫ ॥
ಪುರುಸ್ತುತಾಯ ಪುಣ್ಯಾಯ ಪುರುಹೂತಾಯ ತೇ ನಮಃ ।
ತತ್ಪೂರುಷಾಯ ತಥ್ಯಾಯ ಪುರಾಣಪುರುಷಾಯ ಚ ॥ ೬ ॥

ಪುರೋಧಸೇ ಪೂರ್ವಜಾಯ ಪುಷ್ಕರಾಕ್ಷಾಯ ತೇ ನಮಃ ।
ಪುಷ್ಪಹಾಸಾಯ ಹಾಸಾಯ ಮಹಾಹಾಸಾಯ ಶಾರ್ಙ್ಗಿಣೇ ॥ ೭ ॥
ಸಿಂಹಾಯ ಸಿಂಹರಾಜಾಯ ಜಗದ್ವಂದ್ಯಾಯ ತೇ ನಮಃ ।
ಅಟ್ಟಹಾಸಾಯ ರುಷ್ಟಾಯ ಬಲಾವಾಸಾಯ ತೇ ನಮಃ ॥ ೮ ॥
ಭೂತಾವಾಸಾಯ ಭಾಸಾಯ ಶ್ರೀನಿವಾಸಾಯ ಖಡ್ಗಿನೇ ।
ಖಡ್ಗಜಿಹ್ವಾಯ ಖಡ್ಗಾಯ ಖಡ್ಗಾವಾಸಾಯ ವೈ ನಮಃ ॥ ೯ ॥
ನಮೋ ಮೂಲಾಧಿವಾಸಾಯ ಧರ್ಮಾವಾಸಾಯ ಧನ್ವಿನೇ ।
ಧನಂಜಯಾಯ ಧನ್ಯಾಯ ನಮೋ ಮೃತ್ಯುಂಜಯಾಯ ಚ ॥ ೧೦ ॥
ಸುಭಂಜನಾಯ ಸೂತ್ರಾಯ ನಮಃ ಶತ್ರುಂಜಯಾಯ ಚ ।
ನಿರಂಜನಾಯ ನೀಲಾಯ ನಿರ್ಗುಣಾಯ ಗುಣಾಯ ಚ ॥೧೧॥
ನಿಷ್ಪ್ರಪಂಚಾಯ ನಿರ್ವಾಣಪ್ರದಾಯ ನಿಬಿಡಾಯ ಚ ।
ನಿರಾಲಂಬಾಯ ನಿತ್ಯಾಯ ನಿಷ್ಕಲಾಯ ಕಲಾವತೇ ॥ ೧೨ ॥
ನಿರ್ದ್ವಂದ್ವಾಯ ನಿರಾಶಾಯ ನಿಶ್ಚಲಾಯ ನಿಜಾಯ ಚ ।
ನಿರ್ಮಲಾಯ ನಿದಾನಾಯ ನಿರ್ಮೋಹಾಯ ನಿರಾಧಯೇ ॥ ೧೩ ॥
ನಮೋ ನಿತ್ಯಾಯ ಸತ್ಯಾಯ ಸತ್ಕರ್ಮನಿರತಾಯ ಚ ।
ಸತ್ಯಧ್ವಜಾಯ ಮುಂಜಾಯ ಮುಂಜಕೇಶಾಯ ಕೇಶಿನೇ ॥ ೧೪ ॥
ಹರಿಕೇಶಾಯ ಕೇಶಾಯ ಸುಧಾಕೇಶಾಯ ವೈ ನಮಃ ।
ಸುಕೇಶಾಯೋರ್ಧ್ವಕೇಶಾಯ ಕೇಶಿ ಸಂಹಾರಕಾಯ ಚ ॥ ೧೫ ॥
ಜಲೇಶಾಯ ಸ್ಥಲೇಶಾಯ ಪದ್ಮೇಶಾಯೋಗ್ರರೂಪಿಣೇ ।
ಕುಶೇಶಯಾನುಕೂಲಾಯ ಕೇಶವಾಯ ನಮೋ ನಮಃ ॥ ೧೬ ॥
ಶ್ರುತಿಕಂಠಾಯ ಶುಷ್ಕಾಯ ರಕ್ತಸಿಂಹಾಯ ಶಂಕಿನೇ ।
ದೀಪ್ತರೂಪಾಯ ದೀಪ್ತಾಯ ಪ್ರದೀಪ್ತಾಯ ಪ್ರಬೋಧಿನೇ ॥ ೧೭ ॥
ಪ್ರಚ್ಛನ್ನಾಯ ಪ್ರಬುದ್ಧಾಯ ಪ್ರಭವೇ ವಿಭವೇ ನಮಃ ।
ಪ್ರಭಂಜನಾಯ ಪಾರ್ಥಾಯ ಪ್ರಮಾಯಾಪ್ರತಿಮಾಯ ಚ ॥ ೧೮ ॥
ಪ್ರಕಾಶಾಯ ಪ್ರತಾಪಾಯ ಪ್ರಜ್ವಲಾಯೋಜ್ಜ್ವಲಾಯ ಚ ।
ಜ್ವಾಲಾಮಾಲಾಸ್ವರೂಪಾಯ ಜ್ವಾಲಸಿಂಹಾಯ ಜ್ವಾಲಿನೇ ॥ ೧೯ ॥
ನಮೋ ಜ್ವಾಲಾಯ ಕಾಲಾಯ ಕಾಲಮೂರ್ತಿಧರಾಯ ಚ ।
ಕಾಲಾಂತಕಾಯ ಕಲ್ಪಾಯ ಕಾಲಾತ್ಮಕಲನಾಯ ಚ ॥೨೦॥
ಕಾಲಚಕ್ರಾಯ ಚಕ್ರಾಯ ಸಟಾಚಕ್ರಾಯ ಚಕ್ರಿಣೇ ।
ಅಕ್ರೂರಾಯ ಕೃತಾಂತಾಯ ವಿಕ್ರಮಾಯ ಕ್ರಮಾಯ ಚ ॥ ೨೧ ॥
ಕೃತಿನೇ ಕೃತ್ತಿವಾಸಾಯ ಕೃತಜ್ಞಾಯ ಕೃತಾತ್ಮನೇ ।
ಸಂಕ್ರಮಾಯ ಚ ಕ್ರುದ್ಧಾಯ ಕ್ರಾಂತಲೋಕತ್ರಯಾಯ ಚ ॥ ೨೨ ॥

ಿರೂಪಾಯ ಸ್ವರೂಪಾಯ ಹರಯೇ ಪರಮಾತ್ಮನೇ।
ಜೇಶಾಯಾದಿದೇವಾಯ ಅಕ್ಷಯಾಯ ಕ್ಷಯಾಯ ಚ ॥೨೩॥
ಘೋರಾಯ ಸುಘೋರಾಯ ಘೋರಘೋರತರಾಯ ಚ ।
ಮೋಽಸ್ತು ಘೋರವೀರ್ಯಾಯ ಲಸದ್ಘೋರಾಯ ತೇ ನಮಃ ॥ ೨೪ ॥
ೋರಾಧ್ಯಕ್ಷಾಯ ಘೋರಾಯ ದಕ್ಷಿಣಾರ್ಯಾಯ ಶಂಭವೇ ।
ವ್ಯಾಯ ಮೇಘನಾಥಾಯ ನಮೋ ಮಾಯಾಂಧ್ಯಹಾರಿಣೇ ॥ ೨೫ ॥
ೇಘನಾಥಾಯ ನಾಥಾಯ ತುಭ್ಯಂ ಮೇಘಾತ್ಮನೇ ನಮಃ ।
ೇಘವಾಹನರೂಪಾಯ ಮೇಘಶ್ಯಾಮಾಯ ಮಾಲಿನೇ ॥ ೨೬ ॥
್ಯಾಲಯಜ್ಞೋಪವೀತಾಯ ವ್ಯಾಘ್ರದೇಹಾಯ ವೈ ನಮಃ ।
್ಯಾಘ್ರಪಾದಾಯ ಚ ವ್ಯಾಘ್ರಕರ್ಮಣೇ ವ್ಯಾಪಕಾಯ ಚ ॥ ೨೭ ॥
ಕಟಾಸ್ಯಾಯ ವೀರ್ಯಾಯ ವಿಷ್ಟರಶ್ರವಸೇ ನಮಃ ।
ಕೀರ್ಣನಖದಂಷ್ಟ್ರಾಯ ನಖದಂಷ್ಟ್ರಾಯುಧಾಯ ಚ ॥ ೨೮ ॥
ಶ್ವಕ್ಸೇನಾಯ ಸೇನಾನ್ಯೈ ವಿಹ್ವಲಾಯ ಬಲಾಯ ಚ ।
ರೂಪಾಕ್ಷಾಯ ವೀರಾಯ ವಿಶೇಷಜ್ಞಾಯ ಸಾಕ್ಷಿಣೇ ॥ ೨೯ ॥
ೀತಶೋಕಾಯ ವಿಸ್ತೀರ್ಣವದನಾಯ ನಮೋ ನಮಃ ।
ಧಾನಾಯ ವಿಧೇಯಾಯ ವಿಜಯಾಯ ಜಯಾಯ ಚ ॥ ೩೦ ॥
ಬುಧಾಯ ವಿಭಾವಾಯ ನಮೋ ವಿಶ್ವಂಭರಾಯ ಚ।
ೀತರೋಗಾಯ ವಿಪ್ರಾಯ ವಿಕಟಾಂಗಧರಾಯ ಚ ॥ ೩೧ ॥
ಪುಲಾಂಗವಿನೀತಾಯ ನಮಸ್ತೇ ವಿಶ್ವಯೋನಯೇ ।
ಗಂಬರಾಯ ದೀಪ್ತಾಯ ವಿಶ್ರುತಾಯ ವಿಯೋನಯೇ ॥ ೩೨ ॥
ಹ್ವಲಾಯ ವಿವಾಹಾಯ ನಮೋ ವ್ಯಾಹೃತಯೇ ನಮಃ ।
ಲಾಸಾಯ ವಿಕಲ್ಪಾಯ ಮಹಾಕಲ್ಪಾಯ ತೇ ನಮಃ ॥ ೩೩ ॥
ಹುಕಲ್ಪಾಯ ಕಲ್ಪಾಯ ಕಲ್ಪಾತೀತಾಯ ಕಲ್ಪಿನೇ ।
ಲ್ಪಾನಾಂ ಮುಖರೂಪಾಯ ಹ್ಯನುಕಲ್ಪಾದಯೇ ನಮಃ ॥ ೩೪ ॥
ಟತ್ಪ್ರಭಾಯ ತಾರ್ಕ್ಷ್ಯಾಯ ತರುಣಾಯ ತಪಸ್ವಿನೇ ।
ಾರಕಾಯ ತಮೋಘ್ನಾಯ ತತ್ವಜ್ಞಾಯ ತರಸ್ವಿನೇ ॥ ೩೫ ॥
ಕ್ಷಕಾಯ ತನುತ್ರಾಯ ವಟವೇ ತರಲಾಯ ಚ ।
ರಕ್ಷವೇ ತಾಪನಾಯ ತಾಪತ್ರಯಹರಾಯ ಚ ॥ ೩೬ ॥
ತುರೋಪಾಯ ಶಾಂತಾಯ ಶಾಂತ್ಯಾಧಾರಾಯ ತೇ ನಮಃ ।
ತಪತ್ರಾಯ ತಾರ್ಕ್ಷ್ಯಾಂಸಸ್ಥಿತಯೇ ಶತಮೂರ್ತಯೇ ॥ ೩೭ ॥
ತಕ್ರತುಸ್ವರೂಪಾಯ ಶಾಶ್ವತಾಯ ಶತಾತ್ಮನೇ ।
ಮಃ ಸಹಸ್ರಶಿರಸೇ ಸಹಸ್ರವದನಾಯ ಚ ॥ ೩೮ ॥

ಸಹಸ್ರಾರ್ಕಪ್ರಕಾಶಾಯ ಸಹಸ್ರಾಯುಧಧಾರಿಣೇ ।
ನಮಃ ಸ್ಥೂಲಾಯ ಸೂಕ್ಷ್ಮಾಯ ಸುಸೂಕ್ಷ್ಮಾಯ ನಮೋ ನಮಃ ।। ೩೯ ।।
ಸಹಸ್ರಕ್ಷಾಯ ದೇವಾಯ ದಿಕ್ಶ್ರೋತ್ರಾಯ ನಮೋ ನಮಃ ।
ಸಹಸ್ರನಾಮಧೇಯಾಯ ಸಹಸ್ರಾಕ್ಷಧರಾಯ ಚ ।। ೪೦ ।।
ಸಹಸ್ರಬಾಹವೇ ತಸ್ಮೈ ಸಹಸ್ರಚರಣಾಯ ಚ ।
ಸುಕ್ಷೀಣಾಯ ಸುಭಿಕ್ಷಾಯ ಸೂರ್ಯಾಧ್ಯಕ್ಷಾಯ ಶಾಲಿನೇ ।। ೪೧ ।।
ಧರ್ಮಾಧ್ಯಕ್ಷಾಯ ಧರ್ಮಾಯ ರೋಗಾಧ್ಯಕ್ಷಾಯ ವೈ ನಮಃ ।
ಪ್ರಜಾಧ್ಯಕ್ಷಾಯ ಸ್ವಕ್ಷಾಯಾವಿಪಕ್ಷಾಯ ಸುಮೂರ್ತಯೇ ।। ೪೨ ।।
ಕಾಲಾಧ್ಯಕ್ಷಾಯ ತೀಕ್ಷ್ಣಾಯ ಮೂಲಾಧ್ಯಕ್ಷಾಯ ತೇ ನಮಃ ।
ಅಧೋಕ್ಷಜಾಯ ಮಿತ್ರಾಯ ಸುಮಿತ್ರಾಯಾರುಣಾಯ ಚ ।। ೪೩ ।।
ಶತ್ರುಘ್ನಾಯ ಸುಮಿತ್ರಾಯ ವಿಘ್ನಕೋಟಿಹರಾಯ ಚ ।
ರಕ್ಷೋಘ್ನಾಯಾಕೃತಘ್ನಾಯ ಭೂತಜ್ಞಾಯ ನಮೋ ನಮಃ ।। ೪೪ ।।
ನಮೋ ಜ್ಯೇಷ್ಠಾಯ ಶುಕ್ಲಾಯ ನೀಲವಸ್ತ್ರಧರಾಯ ಚ ।
ರಕ್ತಮಾಲ್ಯವಿಭೂಷಾಯ ರಕ್ತಗಂಧಾನುಲೇಪಿನೇ ।। ೪೫ ।।
ಧುರಂಧರಾಯ ಧೂರ್ತಾಯ ದುರ್ಧರ್ಷಾಯ ನಮೋ ನಮಃ ।
ಭೂತಪಾಲಾಧಿವಾಸಾಯ ಭೂತಾವಾಸಾಯ ತೆ ನಮಃ ।। ೪೬ ।।
ಭೂತಭೇತಾಲಘಾತಾಯ ಭೂತಾಧಿಪತಯೇ ನಮಃ ।
ಭೂತಗ್ರಹವಿನಾಶಾಯ ಭೂತಿಸಂಯಮಿನೇ ನಮಃ ।। ೪೭ ।।
ಮಹಾಭೂತಾಯ ಭೃಗವೇ ಸರ್ವಭೂತಾತ್ಮನೇ ನಮಃ ।
ಸರ್ವಾರಿಷ್ಟವಿನಾಶಾಯ ಸರ್ವಸಂಪತ್ಕರಾಯ ಚ ।। ೪೮ ।।
ಸರ್ವಾಧಾರಾಯ ಸರ್ವಾಯ ಸರ್ವಾದಿಹರಯೇ ನಮಃ ।
ಸರ್ವದುಃಖಪ್ರಶಾಂತಾಯ ಸರ್ವಸೌಭಾಗ್ಯದಾಯಿನೇ ।। ೪೯ ।।
ಸರ್ವಜ್ಞಾಯಾಪ್ಯನಂತಾಯ ಸರ್ವಶಕ್ತಿಧರಾಯ ಚ ।
ಸರ್ವೈಶ್ವರ್ಯಪ್ರದಾತ್ರೇ ಚ ಸರ್ವಕಾರ್ಯವಿಧಾಯಿನೇ ।। ೫೦ ।।
ಸರ್ವಜ್ವರವಿನಾಶಾಯ ಸರ್ವರೋಗಾಪಹಾರಿಣೇ।
ಸರ್ವಖೇಚರಹಂತ್ರೇ ಚ ಸರ್ವೋತ್ಪಾತನಿಘಾತಿನೇ ।। ೫೧ ।।
ಪಿಂಗಾಕ್ಷಾಯೈಕಶೃಂಗಾಯ ದ್ವಿಶೃಂಗಾಯ ಮರೀಚಯೇ ।
ಬಹುಶೃಂಗಾಯ ಶೃಂಗಾಯ ಮಹಾಶೃಂಗಾಯ ತೇ ನಮಃ ।। ೫೨ ।।
ಮಾಂಗಲ್ಯಾಯ ಮನೋಜ್ಞಾಯ ಮಂತವ್ಯಾಯ ಮಹಾತ್ಮನೇ ।
ಮಹಾದೇವಾಯ ದೇವಾಯ ಮಾತುಲುಂಗಧರಾಯ ಚ ।। ೫೩ ।।
ಮಹಾಮಾಯಾಪ್ರಸೂತಾಯ ಮಾಲಿನೇ ಜಲಶಾಯಿನೇ ।
ಮಹೋದರಾಯ ಮಂದಾಯ ಮದಾಯ ಮದನಾಯ ಚ ।। ೫೪ ।।

ಧುಕೈಟಭಹಂತ್ರೇ ಚ ಮಾಧವಾಯ ಮುರಾರಯೇ ।
ಹಾವೀರ್ಯಾಯ ಧೀರಾಯ ಚಿತ್ರವೀರ್ಯಾಯ ತೇ ನಮಃ ॥ ೫೫ ॥
ತ್ರಕೃತ್ಯಾಯ ಚಿತ್ರಾಯ ನಮಸ್ತೇ ಚಿತ್ರಭಾನವೇ।
ಾಯಾತೀತಾಯ ಮೇಶಾಯ ಮಹಾವೀರ್ಯಾಯ ತೇ ನಮಃ ॥ ೫೬ ॥
ಹಾಬೀಜಾಯ ಬೀಜಾಯ ತೇಜೋಧಾಮ್ನೇ ವಿಭೂತಯೇ ।
ೇಜೋಮಯನೃಸಿಂಹಾಯ ನಮಸ್ತೇ ತೇಜಸಾಂ ನಿಧೇ ॥ ೫೭ ॥
ಹಾದಂಷ್ಟ್ರಾಯ ತುಷ್ಟಾಯ ನಮಃ ಪುಷ್ಟಿಕರಾಯ ಚ ।
ಶಿಪಿವಿಷ್ಟಾಯ ಹೃಷ್ಟಾಯ ಪುಷ್ಟಾಯ ಪರಮೇಷ್ಠಿನೇ ॥ ೫೮ ॥
ಟಿಷ್ಠಾಯ ವಸಿಷ್ಠಾಯ ಗರಿಷ್ಠಾಯೇಷ್ಟದಾಯಿನೇ ।
ಮೋ ಜ್ಯೇಷ್ಠಾಯ ತುಷ್ಟಾಯ ಶ್ರೇಷ್ಠಾಯಾಮಿತತೇಜಸೇ ॥ ೫೯ ॥
ಷ್ಟಾಂಗನ್ಯಸ್ತರೂಪಾಯ ಸರ್ವದುಷ್ಟಾಂತಕಾಯ ಚ ।
ಕುಂಠಾಯ ವಿಕುಂಠಾಯ ಶಿತಿಕಂಠಾಯ ತೇ ನಮಃ ॥ ೬೦ ॥
ರೀರವಾಯ ಲುಂಠಾಯ ಶನಿರಾಹುಹರಾಯ ಚ ।
ತ್ತ್ವೋದ್ರಿಕ್ತಾಯ ಕೃಷ್ಣಾಯ ರಜೋದ್ರಿಕ್ತಾಯ ವೇಧಸೇ ॥ ೬೧ ॥
ಮೋದ್ರಿಕ್ತಾಯ ರುದ್ರಾಯ ಋಗ್ಯಜುಃಸಾಮಗಾಯ ಚ ।
ರ್ಕ್ಷ್ಯಧ್ವಜಾಯ ಭದ್ರಾಯ ಮಂತ್ರರಾಜಾಯ ಮಂತ್ರಿಣೇ ॥ ೬೨ ॥
ನೇತ್ರಾಯ ತ್ರಿವರ್ಗಾಯ ತ್ರಿಧಾಮ್ನೇ ಚ ತ್ರಿಶೂಲಿನೇ ।
ಕಾಲಜ್ಞಾನರೂಪಾಯ ತ್ರಿದೇಹಾಯ ತ್ರಿರಾತ್ಮನೇ ॥ ೬೩ ॥
ಮಃ ತ್ರಿಮೂರ್ತಿವಂದ್ಯಾಯ ತ್ರಿತತ್ತ್ವಜ್ಞಾನಿನೇ ನಮಃ ।
ಕ್ಷೋಭ್ಯಾಯಾನಿರುದ್ಧಾಯ ಅಪ್ರಮೇಯಾತ್ಮಭಾನವೇ ॥ ೬೪ ॥
ಮೃತಾಯಾಪ್ಯನಂತಾಯ ಅಮಿತಾಯಾಮರಾಯ ಚ ।
ಪಮೃತ್ಯುವಿನಾಶಾಯ ಅಪಸ್ಮಾರವಿಘಾತಿನೇ ॥ ೬೫ ॥
ನ್ನದಾಯಾನ್ನರೂಪಾಯ ಅನ್ನಾಯಾನ್ನಭುಜೇ ನಮಃ ।
ದ್ಯಾಯ ನಿರವದ್ಯಾಯ ವೇದ್ಯಾಯಾದ್ಭುತ ಕರ್ಮಣೇ ॥ ೬೬ ॥
ದ್ಯೋಜಾತಾಯ ಸಾದ್ಯಾಯ ವೈದ್ಯುತಾಯ ನಮೋ ನಮಃ ।
ಧ್ವಾತೀತಾಯ ಸತ್ತ್ವಾಯ ವಾಗತೀತಾಯ ವಾಗ್ಮಿನೇ ॥ ೬೭ ॥
ಗೀಶ್ವರಾಯ ಗೋಪಾಯ ಗೋಪ್ತ್ರೇ ಗೋಹಿತಕಾರಿಣೇ ।
ರ್ಜನ್ಯಾಯ ಪ್ರಬುದ್ಧಾಯ ಪ್ರಧಾನಪುರುಷಾಯ ಚ ॥ ೬೮ ॥
ದ್ಮಗರ್ಭಾಯ ಪದ್ಮಾಯ ಪದ್ಮನಾಭಾಯ ಭಾಸಿನೇ।
ದ್ಮನೇತ್ರಾಯ ಪದ್ಮಾಯ ಪದ್ಮಾಯಾಃ ಪತಯೇ ನಮಃ ॥ ೬೯ ॥
ದ್ಮೋದ್ಭವಾಯ ಪೂತಾಯ ಪದ್ಮಕಲ್ಪೋದ್ಭವಾಯ ಚ ।
ಮೋ ಹೃತ್ಪದ್ಮವಾಸಾಯ ಭೂಪದ್ಮೋದ್ಧರಣಾಯ ಚ ॥ ೭೦ ॥

ಶಬ್ದಬ್ರಹ್ಮಸ್ವರೂಪಾಯ ಬ್ರಹ್ಮರೂಪಧರಾಯ ಚ ।
ಬ್ರಹ್ಮಣೇ ಬ್ರಹ್ಮರೂಪಾಯ ಬ್ರಹ್ಮನೇತ್ರೇ ನಮಃ ನಮಃ ॥ ೭೧ ॥
ಬ್ರಹ್ಮಾದಯೇ ಬ್ರಾಹ್ಮಣಾಯ ಬ್ರಹ್ಮ ಬ್ರಹ್ಮಾತ್ಮನೇ ನಮಃ ।
ಸುಬ್ರಹ್ಮಣ್ಯಾಯ ದೇವಾಯ ಬ್ರಹ್ಮಣ್ಯಾಯ ತ್ರಿವೇದಿನೇ ॥ ೭೨ ॥
ಪರಬ್ರಹ್ಮಸ್ವರೂಪಾಯ ಪಂಚಬ್ರಹಾತ್ಮನೇ ನಮಃ ।
ನಮಸ್ತೇ ಬ್ರಹ್ಮಶಿರಸೇ ನಮಃ ಖಶಿರಸೇ ನಮಃ ॥ ೭೩ ॥
ಅಥರ್ವಶಿರಸೇ ನಿತ್ಯಮಶನಿಪ್ರಮಿತಾಯ ಚ ।
ನಮಸ್ತೇ ತೀಕ್ಷ್ಣದಂಷ್ಟ್ರಾಯ ಲೋಲಾಯ ಲಲಿತಾಯ ಚ ॥ ೭೪ ॥
ಲಾವಣ್ಯಾಯ ಲವಿತ್ರಾಯ ನಮಸ್ತೇ ಭಾಸ್ಕರಾಯ ಚ ।
ಲಕ್ಷಣಜ್ಞಾಯ ಲಕ್ಷ್ಯಾಯ ಲಕ್ಷಣಾಯ ನಮೋ ನಮಃ ॥ ೭೫ ॥
ಅವಲಿಪ್ತಾಯ ಲಿಪ್ತಾಯ ವಿಷ್ಣವೇ ಪ್ರಭವಿಷ್ಣವೇ ।
ವೃಷ್ಣಿಮೂಲಾಯ ಕೃಷ್ಣಾಯ ಶ್ರೀಮಹಾವಿಷ್ಣವೇ ನಮಃ ॥ ೭೬ ॥

ಪಶ್ಯಾಮಿ ತ್ವಾಂ ಮಹಾಸಿಂಹಂ ಹಾರಿಣಂ ವನಮಾಲಿನಮಃ ।
ಕಿರೀಟಿನಂ ಕುಂಡಲಿನಂ ಸರ್ವಾಂಗಂ ಸರ್ವತೋಮುಖಮ್ ॥೭೭॥
ಸರ್ವತಃ ಪಾಣಿಪಾದೋರುಂ ಸರ್ವತೋಕ್ಷಿಶಿರೋಮುಖಮ್ ।
ಸರ್ವೇಶ್ವರಂ ಸದಾ ತುಷ್ಟಂ ಸತ್ವಸ್ಥಂ ಸಮರಪ್ರಿಯಮ್ ॥ ೭೮ ॥
ಬಹುಯೋಜನವಿಸ್ತೀರ್ಣಂ ಬಹುಯೋಜನನಾಸಿಕಮ್ ।
ಮಹಾರೂಪಂ ಮಹಾವಕ್ತ್ರಂ ಮಹಾದಂಷ್ಟ್ರಂ ಮಹಾಭುಜಮ್ ॥ ೭೯ ॥
ಮಹಾರೌದ್ರಂ ಮಹಾನಂದಂ ಮಹಾಕಾಯಮಹಾಬಲಮ್ ।
ಅನಾಭೇರ್ಬ್ರಹ್ಮಣೋ ರೂಪಮಾಗಲಾದ್ವೈಷ್ಣವಂ ತಥಾ ॥ ೮೦ ॥
ಆಶೀರ್ಷಾದ್ರೌದ್ರಮೀಶಾನಂ ತದಗ್ರೇ ಸರ್ವತಃ ಶಿವಮ್ ।
ನಮೋಽಸ್ತು ನಾರಾಯಣ ನಾರಸಿಂಹ ನಮೋಽಸ್ತು ನಾರಾಯಣ ವೀರಸಿಂಹ॥ ೮೧॥
ನಮೋಽಸ್ತು ನಾರಾಯಣ ದಿವ್ಯಸಿಂಹ ನಮೋಽಸ್ತು ನಾರಾಯಣ ವ್ಯಾಘ್ರಸಿಂಹ।
ನಮೋಽಸ್ತು ನಾರಾಯಣ ಪುಚ್ಛಸಿಂಹ ನಮೋಽಸ್ತು ನಾರಾಯಣ ಪೂರ್ಣಸಿಂಹ॥೮೨॥
ನಮೋಽಸ್ತು ನಾರಾಯಣ ರೌದ್ರಸಿಂಹ ನಮೋಽಸ್ತು ನಾರಾಯಣ ದೈತ್ಯಸಿಂಹ ।
ನಮೋ ನಮೋ ಭೀಷಣಭದ್ರಸಿಂಹ ನಮೋ ನಮೋ ವಿಹ್ವಲನೇತ್ರಸಿಂಹ ॥ ೮೩ ॥
ನಮೋ ನಮೋ ಭೂಹಿತಭೂತಸಿಂಹ ನಮೋ ನಮೋ ನಿರ್ಮಲಚಿತ್ತಸಿಂಹ ।
ನಮೋ ನಮೋ ನಿರ್ಜಿತಕಾಲಸಿಂಹ ನಮೋ ನಮಃ ಕಲ್ಪಿತಕಲ್ಪಸಿಂಹ ॥ ೮೪ ॥
ನಮೋ ನಮಃ ಕಾಮದ ಕಾಮಸಿಂಹ ನಮೋ ನಮಸ್ತೇ ಭುವನೈಕಸಿಂಹ ।
ದ್ಯಾವಾಪೃಥಿವ್ಯೋರಿದಮಂತರಂ ಹಿ ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ॥ ೮೫ ॥

ದೃಷ್ಟ್ವಾಽದ್ಭುತಂ ರೂಪಮುದ್ರವೇಗಂ ಲೋಕತ್ರಯಂ ಪ್ರವ್ಯತಿಥಂ ಮಹಾತ್ಮನ್ ।
ಅಮೀ ಹಿ ತ್ವಾಂ ಸುರಸಂಘಾ ವಿಶಂತಿ ಕೇಚಿದ್ಭೀತಾಃ ಪ್ರಾಂಜಲಿಯೋ ಗೃಣಂತಿ॥೮೬॥
ಸ್ವಸ್ತೀತ್ಯುಕ್ತ್ವಾ ಮುನಯಃ ಸಿದ್ಧಸಂಘಾಃ ಸ್ತುವಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ।
ರುದ್ರಾದಿವಸವೋ ಯೇ ಚ ಸಾಧ್ಯಾಃ ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ॥೮೭॥
ಗಂಧರ್ವಯಕ್ಷಾ ಸುರಸಿದ್ಧಸಂಘಾಃ ವೀಕ್ಷಂತಿ ತ್ವಾಂ ವಿಸ್ಮಿತಾಶ್ಚೈವ ಸರ್ವೇ ।
ಲೇಲಿಹ್ಯಸೇ ಗ್ರಸಮಾನಃ ಸಮಂತಾಲ್ಲೋಕಾನ್ ಸಮಗ್ರಾನ್ವದನೈರ್ಜ್ವಲದ್ಭಿಃ ॥೮೮॥
ತೇಜೋಭಿರಾಪೂರ್ಯ ಜಗತ್ ಸಮಗ್ರಂ ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ ।
ತ್ವಮಿಂದ್ರಜಾಲಪ್ರತಿಮಪ್ರಪಂಚಕ್ರೀಡಾಪರೋಽಪಿ ಸ್ವಯಮಪ್ರಪಂಚಃ ॥ ೮೯ ॥

ಭವಿಷ್ಣುಸ್ತ್ವಂ ಸಹಿಷ್ಣುಸ್ತ್ವಂ ಭ್ರಾಜಿಷ್ಣುರ್ಜಿಷ್ಣುರೇವ ಚ ।
ಪೃಥ್ವೀ ತ್ವಮಂತರಿಕ್ಷಂ ಚ ಪರ್ವತಾರಣ್ಯಭೂಮಯಃ ॥ ೯೦ ॥
ಕಲಾಕಾಷ್ಠಾವಿಲಿಪ್ತಸ್ತ್ವಂ ಮುಹೂರ್ತಪ್ರಹರಾದಿಕಮ್ ।
ಅಹೋರಾತ್ರಂ ತ್ರಿಸಂಧ್ಯಾ ಚ ಪಕ್ಷಮಾಸಾಸ್ತು ವತ್ಸರಃ ॥೯೧॥
ಯುಗಾದಿರ್ಯುಗಭೇದಶ್ಚ ಸಂಧಿಶ್ಚ ಯುಗಸಂಧಯಃ ।
ನಿತ್ಯಂ ನೈಮಿತ್ತಿಕಂ ಚೈವ ಮಹಾಪ್ರಳಯ ಏವ ಚ ॥ ೯೨ ॥
ಕರಣಂ ಕಾರಣಂ ಕರ್ತಾ ಭರ್ತಾ ಹರ್ತಾ ತ್ವಮೀಶ್ವರಃ ।
ಸತ್ಕರ್ತಾ ಸತ್ಕೃತೇರ್ಗೋಪ್ತಾ ಸಚ್ಚಿದಾನಂದವಿಗ್ರಹಃ ॥ ೯೩ ॥
ಪ್ರಾಣಸ್ತ್ವಂ ಪ್ರಾಣಿನಾಂ ಪ್ರತ್ಯಗಾತ್ಮಾ ತ್ವಂ ಸರ್ವದೇಹಿನಾಮ್ ।
ಸುಜ್ಯೋತಿಸ್ತ್ವಂ ಪರಂಜ್ಯೋತಿರಾತ್ಮಜ್ಯೋತಿಃ ಸನಾತನಃ ॥ ೯೪ ॥
ಜ್ಯೋತಿರ್ಲೋಕಸ್ವರೂಪಸ್ತ್ವಂ ಜ್ಯೋತಿರ್ಜ್ಞೋ ಜ್ಯೋತಿಷಾಂ ಪತಿಃ ।
ಸ್ವಾಹಾಕಾರಃ ಸ್ವಧಾಕಾರೋ ವಷಟ್ಕಾರಃ ಕೃಪಾನಿಧಿಃ ॥ ೯೫ ॥
ಅಹಂಕಾರೋ ನಿರಾಕಾರೋ ವೇಗಾಕಾರಶ್ಚ ಶಂಕರಃ ।
ಅಕಾರಾದಿ ಹಕಾರಾಂತ ಓಂಕಾರೋ ಲೋಕಕಾರಕಃ ॥ ೯೬ ॥
ಏಕಾತ್ಮಾ ತ್ವಮನೇಕಾತ್ಮಾ ಚತುರಾತ್ಮಾ ಚತುರ್ಭುಜಃ ।
ಚತುರ್ಮೂರ್ತಿಶ್ಚತುರ್ದಂಷ್ಟ್ರಶ್ಚತುರ್ವೇಗಮಯೋತ್ತಮಃ ॥ ೯೭ ॥
ಲೋಕಪ್ರಿಯೋ ಲೋಕಗುರುರ್ಲೋಕೇಶೋ ಲೋಕನಾಯಕಃ ।
ಲೋಕಸಾಕ್ಷೀ ಮಹಾಲೋಕೋ ಲೋಕೈಕೋ ಲೋಕಲೋಚನಃ ॥ ೯೮ ॥
ಲೋಕಾಧಾರೋ ಬೃಹಲ್ಲೋಕಃ ಸರ್ವಲೋಕಮಯೋ ವಿಭುಃ ।
ಲೋಕಕರ್ತಾ ವಿಶ್ವಕರ್ತಾ ಕೃತಕರ್ತಾ ಕೃತಾಗಮಃ ॥ ೯೯ ॥
ಅನಾದಿಸ್ತ್ವಮನಂತಸ್ತ್ವಮಭೂತೋ ಭೂತವಿಗ್ರಹಃ ।
ಸ್ತುತಃ ಸ್ತವಃ ಸ್ತವಪ್ರೀತಃ ಸ್ತೋತಾ ನೇತಾ ನಿಯಾಮಕಃ ॥ ೧೦೦ ॥

ತ್ವಂ ಗತಿಸ್ತ್ವಂ ಮತಿಸ್ತ್ವಂ ಧೀಃ ಪಿತಾ ಮಾತಾ ಗುರುಃ ಸಖಾ ।
ಸುಹೃದಶ್ಚಾತ್ಮರೂಪಸ್ತ್ವಂ ತ್ವಾಂ ವಿನಾ ನಾಸ್ತಿ ಮೇ ಗತಿಃ ॥ ೧೦೧ ॥
ನಮೋ ಮಂತ್ರಾಸ್ತ್ರರೂಪಾಯ ತಂತ್ರಾರಾಧ್ಯಾಯ ತೇ ನಮಃ ।
ಬಹುರೂಪಾಯ ರೂಪ್ಯಾಯ ಪಂಚರೂಪಧರಾಯ ಚ ॥ ೧೦೨ ॥
ಭದ್ರರೂಪಾಯ ರೂಪಾಯ ಯೋಗರೂಪಾಯ ಯೋಗಿನೇ ।
ಸಮರೂಪಾಯ ಯೋಗಾಯ ಯೋಗಪೀಠಸ್ಥಿತಾಯ ಚ ॥ ೧೦೩ ॥
ಯೋಗರಾಜಾಯ ಸೌಮ್ಯಾಯ ಧ್ಯಾನಗಮ್ಯಾಯ ಧ್ಯಾಯಿನೇ ।
ಧ್ಯೇಯಗಮ್ಯಾಯ ಧಾಮ್ನೇ ಚ ಧಾಮಾಧಿಪತಯೇ ನಮಃ ॥ ೧೦೪ ॥
ಧರಾಧರಾಯ ಧರ್ಮಾಯ ಧಾರಣಾಭಿರತಾಯ ಚ ।
ನಮೋ ಧಾತ್ರೇ ವಿಧಾತ್ರೇ ಚ ಸಂಧಾತ್ರೇ ಚ ಧರಾಯ ಚ ॥ ೧೦೫ ॥
ದಾಮೋದರಾಯ ದಂತಾಯ ದಾನವಾಂತಕರಾಯ ಚ ।
ನಮಃ ಸಂಸಾರವೈದ್ಯಾಯ ಭೇಷಜಾಯ ನಮೋ ನಮಃ ॥ ೧೦೬ ॥
ಸೀರಧ್ವಜಾಯ ಶಾಂತಾಯ ವಾತಾಯಾ ಪ್ರಮಿತಾಯ ಚ ।
ಸಾರಸ್ವತಾಯ ಸಂಸಾರನಾಶನಾಯಾಕ್ಷಮಾಲಿನೇ ॥ ೧೦೭ ॥
ಅಸಿಚರ್ಮಧರಾಯೈವ ಷಟ್ಕರ್ಮನಿರತಾಯ ಚ ।
ತ್ರಿಕಾರ್ಯಾಯ ಸುಕಾರ್ಯಾಯ ಪರಕಾರ್ಯವಿಘಾತಿನೇ ॥ ೧೦೮ ॥
ಸುಶರ್ಮಣೇ ಮನ್ಮಥಾಯ ನಮೋ ಧರ್ಮಾಯ ವರ್ಮಿಣೇ ।
ಕರಿಚರ್ಮವಸಾನಾಯ ಕರಾಲವದನಾಯ ಚ ॥ ೧೦೯ ॥
ಕವಯೇ ಪದ್ಮಗರ್ಭಾಯ ಭೂಗರ್ಭಾಯ ಘೃಣಾಬ್ಧಯೇ ।
ಬ್ರಹ್ಮಗರ್ಭಾಯ ಗರ್ಭಾಯ ಬೃಹದ್ಗರ್ಭಾಯ ಧೂರ್ಜಟೇ ॥ ೧೧೦ ॥
ನಮಸ್ತೇ ವಿಶ್ವಗರ್ಭಾಯ ಶ್ರೀಗರ್ಭಾಯ ಜಿತಾರಯೇ ।
ನಮೋ ಹಿರಣ್ಯಗರ್ಭಾಯ ಹಿರಣ್ಯಕವಚಾಯ ಚ ॥ ೧೧೧ ॥
ಹಿರಣ್ಯಕನಿಹಂತ್ರೇ ಚ ಹಿರಣ್ಯನಯನಾಯ ಚ ।
ಹಿರಣ್ಯವರ್ಣದೇಹಾಯ ಹಿರಣ್ಯಾಕ್ಷವಿನಾಶಿನೇ ॥ ೧೧೨ ॥
ಹಿರಣ್ಯರೇತಸೇ ತುಭ್ಯಂ ಹಿರಣ್ಯವದನಾಯ ಚ ।
ನಮೋ ಹಿರಣ್ಯಶೃಂಗಾಯ ನಿಃಸಂಗಾಯ ಚ ಶೃಂಗಿಣೇ ॥ ೧೧೩ ॥
ಭೈರವಾಯ ಸುಕೇಶಾಯ ಭೀಷಣಾ- ಯಾಂತ್ರಮಾಲಿನೇ ।
ಚಂಡಾಯ ರುಂಡಮಾಲಾಯ ನಮೋ ದಂಡಧರಾಯ ಚ॥೧೧೪॥
ಅಖಂಡತತ್ತ್ವರೂಪಾಯ ಕಮಂಡಲುಧರಾಯ ಚ ।
ನಮಸ್ತೇ ಚಂಡಸಿಂಹಾಯ ಸತ್ಯಸಿಂಹಾಯ ತೇ ನಮಃ ॥ ೧೧೫ ॥
ನಮಸ್ತೇ ಶ್ವೇತಸಿಂಹಾಯ ಪೀತಸಿಂಹಾಯ ತೇ ನಮಃ ।
ನೀಲಸಿಂಹಾಯ ನೀಲಾಯ ರಕ್ತಸಿಂಹಾಯ ತೇ ನಮಃ ॥ ೧೧೬ ॥

ನಮೋ ದಾರಿದ್ರ್ಯಸಿಂಹಾಯ ಧೂಮ್ರಸಿಂಹಾಯ ತೇ ನಮಃ ।
ಮೂಲಸಿಂಹಾಯ ಮೂಲಾಯ ಬೃಹತ್ಸಿಂಹಾಯ ತೇ ನಮಃ ॥ ೧೧೭ ॥
ಪಾತಾಳ ಸ್ಥಿತಸಿಂಹಾಯ ನಮಃ ಪರ್ವತವಾಸಿನೇ ।
ನಮೋ ಜಲಸ್ಥಸಿಂಹಾಯ ಅಂತರಿಕ್ಷಸ್ಥಿತಾಯ ಚ ॥ ೧೧೮ ॥
ಕಾಲಾಗ್ನಿರುದ್ರಸಿಂಹಾಯ ಚಂಡಸಿಂಹಾಯ ತೇ ನಮಃ ।
ಅನಂತಜಿತಸಿಂಹಾಯ ಅನಂತಗತಯೇ ನಮಃ ॥ ೧೧೯ ॥
ನಮೋ ವಿಚಿತ್ರಸಿಂಹಾಯ ಬಹುಸಿಂಹಸ್ವರೂಪಿಣೇ ।
ಅಭಯಂಕರಸಿಂಹಾಯ ನಾರಸಿಂಹಾಯ ತೇ ನಮಃ ॥ ೧೨೦ ॥
ಸಪ್ತಾಬ್ಧಿಮೇಖಲಾಯೈವ ಸಪ್ತಸಾಮಸ್ವರೂಪಿಣೇ ।
ಸಪ್ತವಾಯುಸ್ವರೂಪಾಯ ಸಪ್ತಚ್ಛಂದೋಮಯಾಯ ಚ ॥ ೧೨೧ ॥
ಸಪ್ತಾರ್ಚಿರುದ್ಯದ್ದಂಷ್ಟ್ರಾಯ ಸಪ್ತಾಶ್ವರಥರೂಪಿಣೇ ।
ಸ್ವಚ್ಛಾಯ ಸ್ವಚ್ಛರೂಪಾಯ ಸ್ವಚ್ಛಂದಾಯ ನಮೋ ನಮಃ ॥ ೧೨೨ ॥
ಶ್ರೀವತ್ಸಾಯ ಸುರೇಶಾಯ ಶ್ರುತಯೇ ಶ್ರುತಿಮೌಲಯೇ ।
ಶುಚಿಶ್ರೋತ್ರಾಯ ಶೂರಾಯ ಸುಭಗಾಯ ಸುಧನ್ವನೇ ॥ ೧೨೩ ॥
ಶುಭ್ರಾಯ ಸುರನಾಥಾಯ ಸುಪ್ರಭಾಯ ಶುಭಾಯ ಚ ।
ಸುದರ್ಶನಾಯ ಸೂಕ್ಷ್ಮಾಯ ನಿರುಕ್ತಾಯ ನಮೋ ನಮಃ ॥ ೧೨೪ ॥
ಸುಪ್ರಭಾಯ ಚ ಭಾವಾಯ ಭವಾಯ ವಿಭವಾಯ ಚ ।
ಸುಶಾಖಾಯ ವಿಶಾಖಾಯ ಸುಮುಖಾಯ ಸುಖಾಯ ಚ ॥ ೧೨೫ ॥
ಸುನಖಾಯ ಸುದಂಷ್ಟ್ರಾಯ ಸುರಥಾಯ ರಥಾಯ ಚ ।
ಸಾಂಖ್ಯಾಯ ಸುರಮುಖ್ಯಾಯ ಪ್ರಖ್ಯಾತಾಯ ಪ್ರಭಾಯ ಚ ॥ ೧೨೬ ॥
ನಮಃ ಖಟ್ವಾಂಗಹಸ್ತಾಯ ಖೇಟಮುದ್ಗರಪಾಣಯೇ ।
ಗಜೇಂದ್ರಾಯ ಮೃಗೇಂದ್ರಾಯ ನಾಗೇಂದ್ರಾಯ ದೃಢಾಯ ಚ ॥ ೧೨೭ ॥
ನಾಗಕೇಯೂರಹಾರಾಯ ನಾಗೇಂದ್ರಯಾಗಹಾರಿಣೇ ।
ದೀರೂಪಾಯ ನಗ್ನಾಯ ನಾನಾರೂಪಧರಾಯ ಚ ॥ ೧೨೮ ॥
ನಾಗೇಶ್ವರಾಯ ನಾಗಾಯ ನಮಿತಾಯ ನರಾಯ ಚ ।
ನಾಗಾಂತಕರಥಾಯೈವ ನರನಾರಾಯಣಾಯ ಚ ॥ ೧೨೯ ॥

ನಮೋ ಮತ್ಸ್ಯಸ್ವರೂಪಾಯ ಕಚ್ಛಪಾಯ ನಮೋ ನಮಃ ।
ನಮೋ ಯಜ್ಞವರಾಹಾಯ ನೃಸಿಂಹಾಯ ನಮೋ ನಮಃ ॥ ೧೩೦ ॥
ವಿಕ್ರಮಾಕ್ರಾಂತಲೋಕಾಯ ವಾಮನಾಯ ಮಹೌಜಸೇ ।
ನಮೋ ಭಾರ್ಗವರಾಮಾಯ ರಾವಣಾಂತಕರಾಯ ಚ ॥ ೧೩೧ ॥

ನಮಸ್ತೇ ಬಲರಾಮಾಯ ಕಂಸಪ್ರಧ್ವಂಸಕಾರಿಣೇ ।
ಬುದ್ಧಾಯ ಬುದ್ಧರೂಪಾಯ ತೀಕ್ಷ್ಣರೂಪಾಯ ಕಲ್ಕಿನೇ ॥೧೩೨॥

ಆತ್ರೇಯಾಯಾಗ್ನಿನೇತ್ರಾಯ ಕಪಿಲಾಯ ದ್ವಿಜಾಯ ಚ ।
ಕ್ಷೇತ್ರಾಯ ಪಶುಪಾಲಾಯ ಪಶುವಕ್ತ್ರಾಯ ತೇ ನಮಃ ॥ ೧೩೩ ॥
ಗೃಹಸ್ಥಾಯ ವನಸ್ಥಾಯ ಯತಯೇ ಬ್ರಹ್ಮಚಾರಿಣೇ ।
ಸ್ವರ್ಗಾಪವರ್ಗದಾತ್ರೇ ಚ ತದ್ಭೋಕ್ತ್ರೇ ಚ ಮುಮುಕ್ಷವೇ ॥ ೧೩೪ ॥
ಶಾಲಗ್ರಾಮನಿವಾಸಾಯ ಕ್ಷೀರಾಬ್ಧಿಶಯನಾಯ ಚ ।
ಶ್ರೀಶೈಲಾದ್ರಿನಿವಾಸಾಯ ಶಿಲಾವಾಸಾಯ ತೇ ನಮಃ ॥ ೧೩೫ ॥
ಯೋಗಿಹೃತ್ಪದ್ಮವಾಸಾಯ ಮಹಾಹಂಸಾಯ ತೇ ನಮಃ ।
ಗ್ರಹಮಾಲಾಯ ಗುಹ್ಯಾಯ ಗುಪ್ತಾಯ ಗುರವೇ ನಮಃ ॥ ೧೩೬ ॥
ನಮೋ ಮೂಲಾಧಿವಾಸಾಯ ನೀಲವಸ್ತ್ರಧರಾಯ ಚ ।
ಪೀತವಸ್ತ್ರಾಯ ವಸ್ತ್ರಾಯ ರಕ್ತವಸ್ತ್ರಧರಾಯ ಚ ॥ ೧೩೭ ॥
ರಕ್ತಮಾಲ್ಯವಿಭೂಷಾಯ ರಕ್ತಗಂಧಾನುಲೇಪಿನೇ ।
ಧುರಂಧರಾಯ ಧೂರ್ತಾಯ ಸುಧರ್ಮಾಯ ಧನಾಯ ಚ ॥ ೧೩೮ ॥
ದುರ್ಮದಾಯ ದುರಂತಾಯ ದುರ್ಧರಾಯ ನಮೋ ನಮಃ ।
ದುರ್ನಿರೀಕ್ಷಾಯ ಪುಷ್ಟಾಯ ದುರ್ದರ್ಶಾಯ ದ್ರುಮಾಯ ಚ ॥ ೧೩೯ ॥
ದುರ್ಭೇದ್ಯಾಯ ದುರೂಪಾಯ ದುರ್ಲಭಾಯ ನಮೋ ನಮಃ ।
ದೃಪ್ತಾಯ ದೀಪ್ತವಕ್ತ್ರಾಯ ದುರ್ದಪ್ತನಯನಾಯ ಚ ॥ ೧೪೦ ॥
ಉನ್ಮತ್ತಾಯ ಪ್ರಮತ್ತಾಯ ನಮೋ ದೈತ್ಯಾರಯೇಽ ನಿಶಮ್ ।
ರಸಜ್ಞಾಯ ರಸೇಶಾಯ ಆರಕ್ತವಸನಾಯ ಚ ॥ ೧೪೧ ॥
ಪಥ್ಯಾಯ ಪರಿತೋಷಾಯ ರಥ್ಯಾಯ ರಸಿತಾಯ ಚ ।
ಊರ್ಧ್ವಕೇಶೋರ್ಧ್ವರೂಪಾಯ ನಮಸ್ತೇ ಚೋರ್ಧ್ವರೇತಸೇ ॥ ೧೪೨ ॥
ಊರ್ಧ್ವಜಿಹ್ವಾಯ ಸಿಂಹಾಯ ನಮಸ್ತೇ ಚೋರ್ಧ್ವಬಾಹವೇ ।
ಪರಪ್ರಧ್ವಂಸಕಾಯೈವ ಶಂಖಚಕ್ರಧರಾಯ ಚ ॥ ೧೪೩ ॥
ಗದಾಪದ್ಮಧರಾಯೈವ ಪಂಚಬಾಣಧರಾಯ ಚ ।
ಕಾಮೇಶ್ವರಾಯ ಕಾಮಾಯ ಕಾಮಪಾಲಯ ಕಾಮಿನೇ ॥ ೧೪೪ ॥
ನಮಃ ಕಾಮವಿಹಾರಾಯ ಕಾಮರೂಪಧರಾಯ ಚ ।
ಸೋಮಸೂರ್ಯಾಗ್ನಿನೇತ್ರಾಯ ಸೋಮಪಾಯ ನಮೋ ನಮಃ ॥ ೧೪೫ ॥
ನಮಃ ಸೋಮಾಯ ವಾಮಾಯ ವಾಸುದೇವಾಯ ತೇ ನಮಃ ।
ಸೋಮೇಶ್ವರಾಯ ಸೌಮ್ಯಾಯ ಭಕ್ತಿಗಮ್ಯಾಯ ತೇ ನಮಃ ॥ ೧೪೬ ॥

ಕೂಷ್ಮಾಂಡಗಣನಾಥಾಯ ಸರ್ವಶ್ರೇಯಸ್ಕರಾಯ ಚ ।
ಭೀಷ್ಮಾಯ ಭೀಕರಾಯೈವ ಭೀಮವಿಕ್ರಮಣಾಯ ಚ ॥ ೧೪೭ ॥
ಮೃಗಗ್ರೀವಾಯ ಜೀವಾಯ ಜಿತಾಯ ಜಿತಕಾಶಿನೇ ।
ಜಟಿನೇ ಜಾಮದಗ್ನ್ಯಾಯ ನಮಸ್ತೇ ಜಾತವೇದಸೇ ॥ ೧೪೮ ॥
ಜಪಾಕುಸುಮವರ್ಣಾಯ ಜಪ್ಯಾಯಾಪಿ ಚ ಜಾಪಿನೇ ।
ಜರಾಯುಜಾಯಾಂಡಜಾಯ ಸ್ವೇದಜಾಯೋದ್ಭಿದೇ ನಮಃ ॥ ೧೪೯ ॥
ಜನನಾಥಾಯ ರಾಮಾಯ ಜಾಹ್ನವೀಜನಕಾಯ ಚ ।
ಜರಾಜನ್ಮವಿದೂರಾಯ ಪ್ರದ್ಯುಮ್ನಾಯ ಪ್ರಬೋಧಿನೇ ॥ ೧೫೦ ॥
ಜಿಹ್ವಾರೌದ್ರಾಯ ರುದ್ರಾಯ ವೀರಭದ್ರಾಯ ತೇ ನಮಃ ।
ಚಿದ್ರೂಪಾಯ ಸಮುದ್ರಾಯ ಕದ್ರುದ್ರಾಯ ಪ್ರಚೇತಸೇ ॥ ೧೫೧ ॥
ಇಂದ್ರಿಯಾಯೇಂದ್ರಿಯಜ್ಞಾಯ ನಮೋಽಸ್ತ್ವಿಂದ್ರಾನುಜಾಯ ಚ ।
ಅತೀಂದ್ರಿಯಾಯ ಸಾಂದ್ರಾಯ ಇಂದಿರಾಪತಯೇ ನಮಃ ॥ ೧೫೨ ॥
ಈಶಾನಾಯ ಚ ಈಡ್ಯಾಯ ಈಪ್ಸಿತಾಯ ಇನಾಯ ಚ ।
ವ್ಯೋಮಾತ್ಮಕಾಯ ವ್ಯೋಮ್ನೇ ಚ ವ್ಯೋಮಕೇಶಾಯ ವೈ ನಮಃ ॥ ೧೫೩ ॥
ವ್ಯೋಮಾಧಾರಾಯ ಚ ವ್ಯೋಮವಕ್ತ್ರಾಯಾಸುರಘಾತಿನೇ ।
ನಮಸ್ತೇ ವ್ಯೋಮದಂಷ್ಟ್ರಾಯ ವ್ಯೋಮಾವಾಸಾಯ ತೇ ನಮಃ ॥ ೧೫೪ ॥
ಸುಕುಮಾರಾಯ ರಾಮಾಯ ಶಿಂಶುಮಾರಾಯ ತೇ ನಮಃ ।
ವಿಶ್ವಾಯ ವಿಶ್ವರೂಪಾಯ ನಮೋ ವಿಶ್ವಾತ್ಮಕಾಯ ಚ ॥ ೧೫೫ ॥
ಜ್ಞಾನಾತ್ಮಕಾಯ ಜ್ಞಾನಾಯ ವಿಶ್ವೇಶಾಯ ಪರಾತ್ಮನೇ ।
ಏಕಾತ್ಮನೇ ನಮಸ್ತುಭ್ಯಂ ನಮಸ್ತೇ ದ್ವಾದಶಾತ್ಮನೇ ॥ ೧೫೬ ॥
ಚತುರ್ವಿಂಶತಿರೂಪಾಯ ಪಂಚವಿಂಶತಿಮೂರ್ತಯೇ ।
ಷಡ್ವಿಂಶಕಾತ್ಮನೇ ನಿತ್ಯಂ ಸಪ್ತವಿಂಶತಿಕಾತ್ಮನೇ ॥ ೧೫೭ ॥
ಧರ್ಮಾರ್ಥಕಾಮಮೋಕ್ಷಾಯ ವಿಮುಕ್ತಾಯ ನಮೋ ನಮಃ ।
ಭಾವಶುದ್ಧಾಯ ಸಿದ್ಧಾಯ ಸಾಧ್ಯಾಯ ಶರಭಾಯ ಚ ॥ ೧೫೮ ॥
ಪ್ರಬೋಧಾಯ ಸುಬೋಧಾಯ ನಮೋ ಬುದ್ಧಿಪ್ರಿಯಾಯ ಚ ।
ಸ್ನಿಗ್ಧಾಯ ಚ ವಿದಗ್ಧಾಯ ಮುಗ್ಧಾಯ ಮುನಯೇ ನಮಃ ॥೧೫೯॥
ಪ್ರಿಯಶ್ರವಾಯ ಶ್ರಾವ್ಯಾಯ ಸುಶ್ರುತಾಯ ಶ್ರುತಾಯ ಚ ।
ಗ್ರಹೇಶಾಯ ಮಹೇಶಾಯ ಬ್ರಹ್ಮೇಶಾಯ ನಮೋ ನಮಃ ॥ ೧೬೦ ॥
ಶ್ರೀಧರಾಯ ಸುತೀರ್ಥಾಯ ಹಯಗ್ರೀವಾಯ ನಮೋ ನಮಃ ।
ಉಗ್ರಾಯ ಚೋಗ್ರವೇಗಾಯ ಉಗ್ರಕರ್ಮರತಾಯ ಚ ॥ ೧೬೧ ॥
ಉಗ್ರೇಕ್ಷಣಾಯ ವ್ಯಗ್ರಾಯ ಸಮಗ್ರಗುಣಶಾಲಿನೇ ।
ಬಾಲಗ್ರಹವಿನಾಶಾಯ ಪಿಶಾಚಗ್ರಹಘಾತಿನೇ ॥ ೧೬೨ ॥

ದುಷ್ಟಗ್ರಹನಿಹಂತ್ರೇ ಚ ನಿಗ್ರಹಾನುಗ್ರಹಾಯ ಚ ।
ವೃಷಧ್ವಜಾಯ ವೃಷ್ಯಾಯ ವೃಷಭಾಯ ವೃಷಾಯ ಚ ॥ ೧೬೩ ॥
ಉಗ್ರವೀರಾಯ ಶಾಂತಾಯ ನಮಃ ಶ್ರುತಿಧರಾಯ ಚ ।

ನಮಸ್ತೇ ದೇವದೇವೇಶ ನಮಸ್ತೇ ಮಧುಸೂದನ ॥ ೧೬೪ ॥
ನಮಸ್ತೇ ಪುಂಡರೀಕಾಕ್ಷ ನಮಸ್ತೇ ದುರಿತಕ್ಷಯ ।
ನಮಸ್ತೇ ಕರುಣಾಸಿಂಧೋ ನಮಸ್ತೇ ಸಮಿತಿಂಜಯ ॥ ೧೬೫ ॥
ನಾರಸಿಂಹ ನಮಸ್ತೇಽಸ್ತು ನಮಸ್ತೇ ಗರುಡಧ್ವಜ ।
ಯಜ್ಞಧ್ವಜ ನಮಸ್ತೇಽಸ್ತು ಕಾಲಧ್ವಜ ಜಯಧ್ವಜ ॥ ೧೬೬ ॥
ಅಗ್ನಿನೇತ್ರ ನಮಸ್ತೇಽಸ್ತು ನಮಸ್ತೆ ಹ್ಯಮರಪ್ರಿಯಾ।
ಮಹಾನೇತ್ರ ನಮಸ್ತೇಽಸ್ತು ನಮಸ್ತೇ ಭಕ್ತವತ್ಸಲ ॥ ೧೬೭ ॥
ಧರ್ಮನೇತ್ರ ನಮಸ್ತೇಽಸ್ತು ನಮಸ್ತೇ ಕರುಣಾನಿಧೇ
ಪುಣ್ಯನೇತ್ರ ನಮಸ್ತೇಽಸ್ತು ನಮಸ್ತೇಽಭೀಷ್ಟಧಾಯಕ ॥ ೧೬೮ ॥
ನಮೋ ನಮಸ್ತೇ ಜಯಸಿಂಹರೂಪ ನಮೋ ನಮಸ್ತೇ ವನಸಿಂಹರೂಪ ।
ನಮೋ ನಮಸ್ತೇ ರಣಸಿಂಹರೂಪ ನಮೋ ನಮಸ್ತೇ ನರಸಿಂಹರೂಪ ॥ ೧೬೯

ದುರ್ವೃತ್ತಂ ಗರ್ವಿತಂ ದೈತ್ಯಂ ನಿಹತ್ಯಾಜೌ ಸುರದ್ವಿಷಮ್ ।
ದೇವಕಾರ್ಯಂ ಮಹತ್ಕೃತ್ವಾ ಗರ್ಜಸೇ ಸ್ವಾತ್ಮತೇಜಸಾ ॥ ೧೭೦ ॥
ಅತಿರೌದ್ರಮಿದಂ ರೂಪಂ ದುಸ್ಸಹಂ ದುರತಿಕ್ರಮಮ್ ।
ದೃಷ್ಟ್ವಾ ತು ಶಂಕಿತಾಃ ಸರ್ವೇ ದೇವತಾಸ್ತ್ವಾಮುಪಾಗತಾಃ ॥ ೧೭೧ ॥
ಏತಂ ಪಶ್ಯ ಮಹೇಶಾನಂ ಬ್ರಹ್ಮಾಣಂ ಮಾಂ ಶಚೀಪತಿಮ್।
ದಿಕ್ಪಾಲಾನ್ ದ್ವಾದಶಾದಿತ್ಯಾನ್ ರುದ್ರಾನುರಗರಾಕ್ಷಸಾನ್ ॥ ೧೭೨ ॥
ಸರ್ವಾನೃಷಿಗಣಾನ್ ಸಪ್ತಮಾತೃಗೌರೀಸರಸ್ವತೀಃ ।
ಲಕ್ಷ್ಮೀಂ ನದೀಶ್ಚ ತೀರ್ಥಾನಿ ಸರ್ವಾನ್ ಭೂತಗಣಾನಪಿ॥ ॥ ೧೭೩ ॥

ಪ್ರಸೀದ ತ್ವಂ ಮಹಾಸಿಂಹ ಉಗ್ರಭಾವಮಿಮಂ ತ್ಯಜ ।
ಪ್ರಕೃತಿಸ್ಥೋ ಭವ ತ್ವಂ ಹಿ ಶಾಂತಭಾವಂ ಹಿ ಧಾರಯ ॥ ೧೭೪ ॥

ಇತ್ಯುಕ್ತ್ವಾ ದಂಡವದ್ಭೂಮೌ ಪಪಾತ ಸ ಪಿತಾಮಹಃ ।
ಪ್ರಸೀದ ತ್ವಂ ಪ್ರಸೀದ ತ್ವಂ ಪ್ರಸೀದೇತಿ ಪುನಃ ಪುನಃ ॥ ೧೭೫ ॥

**ರ್ಮಾರ್ಕಂಡೇಯ ಉವಾಚ ||**

ಕ್ವಾ ತು ದೇವತಾಃ ಸರ್ವಾಃ ಶ್ರುತ್ವಾ ತು ಬ್ರಹ್ಮಣಾಮುಖ್ಯೈಃ।
ೕತ್ರೇಣಾಪಿ ಚ ಸಂತುಷ್ಟಃ ಶಾಂತಭಾವಂ ಚ ಧಾರಯನ್ ||೧೭೬||
ರ್ವೀನ್ನಾರಸಿಂಹಸ್ತು ಘನಗಂಬೀರನಿಸ್ವನಃ ।
ರ್ಚೈತನ್ಯಸರ್ವಸ್ವಸಾರಸತ್ತಾಮಯೋ ಹರಿಃ || ೧೭೭ ||

**ರೃಸಿಂಹ ಉವಾಚ ||**

ೕ ಭೋ ದೇವವರಾಃ ಸರ್ವೇ ಪಿತಾಮಹಪುರೋಗಮಾಃ ।
ಂಧ್ವಂ ಮಮ ವಾಕ್ಯಾನಿ ಭವಂತು ವಿಗತಜ್ವರಾಃ ||೧೭೮||
ದ್ಧಿತಂ ಭವತಾಂ ನ್ಯೂನಂ ತತ್ ಕರಿಷ್ಯಾಮಿ ಸಾಂಪ್ರತಮ್ ।
ನ್ನಾಮ ಸಹಸ್ರಂ ಮೇ ತ್ರಿಸಂಧ್ಯಂ ಯಃ ಪಠೇತ್ ಸುಧೀಃ || ೧೭೯ ||
ೂೕತಿ ವಾ ಶ್ರಾವಯೇದ್ವಾ ಪೂಜಾಂತೇ ಭಕ್ತಿ ಸಂಯುತಃ ।
ರ್ವಾನ್ ಕಾಮಾನವಾಪ್ನೋತಿ ಜೀವೇಚ್ಚ ಶರದಃ ಶತಮ್ || ೧೮೦ ||
ುಭಿಶ್ಚ ನೃಸಿಂಹಾದ್ಯೈರರ್ಚಯನ್ ಕ್ರಮಶೋ ಮಮ ।
ರ್ವತೀಥೇಷು ಯತ್ಪುಣ್ಯಂ ಸರ್ವತೀರ್ಥೇಷು ಯತ್ಫಲಮ್ || ೧೮೧ ||
ರ್ವಪೂಜಾಸು ಯತ್ಪ್ರೋಕ್ತಂ ತತ್ಸರ್ವಂ ಲಭತೇ ಭೃಶಮ್ ।
ತಿಸ್ಮರತ್ವಂ ಲಭತೇ ಬ್ರಹ್ಮಜ್ಞಾನಂ ಸನಾತಮ್ || ೧೮೨ ||
ರ್ವಪಾಪೈರ್ವಿನಿರ್ಮುಕ್ತಸ್ತದ್ವಿಷ್ಣೋಃ ಪರಮಂ ಪದಮ್ ।
ನ್ನಾಮಕವಚಂ ಬಧ್ವಾ ವಿಚರೇದ್ವಿಗತಜ್ವರಃ || ೧೮೩ ||
ತಭೇತಾಲಕೂಷ್ಮಾಂಡಪಿಶಾಚಬ್ರಹ್ಮರಾಕ್ಷಸಾಃ ।
ನೀಡಾಕಿನೀಮುಖ್ಯಾಃ ನೀಲೀಬಾಲಗ್ರಹಾದಯಃ || ೧೮೪ ||
ಷ್ಟಗ್ರಹಾಶ್ಚ ನಶ್ಯಂತಿ ಯಕ್ಷರಾಕ್ಷಸಪನ್ನಗಾಃ ।
ಚ ಸಂಧ್ಯಾಗ್ರಹಾಃ ಸರ್ವೇ ಚಂಡಾಲಗ್ರಹಸಂಜ್ಞಿತಾಃ || ೧೮೫ ||
ಚರಗ್ರಹಾಶ್ಚೈವ ರೋಗಾಣಾಮಧಿದೇವತಾಃ ।
ಶ್ರಂ ನಶ್ಯಂತಿ ತೇ ಸರ್ವೇ ನೃಸಿಂಹಸ್ಮರಣಾತ್ ಸದಾ ||೧೮೬||
ಜ್ಯಕಾಮೋ ಲಭೇದ್ರಾಜ್ಯಂ ಧನಕಾಮೋ ಲಭೇದ್ಧನಮ್ ।
ದ್ಯಾಕಾಮೋ ಲಭೇದ್ವಿದ್ಯಾಂ ಬದ್ಧೋ ಮುಚ್ಯೇತ ಬಂಧನಾತ್ || ೧೮೭ ||
ಲವ್ಯಾಘ್ರಭಯಂ ನಾಸ್ತಿ ಚೋರವೃಶ್ಚಿಕಜಂ ಭಯಮ್ ।
ುಕೂಲಾ ಭವೇದ್ಭಾರ್ಯಾ ಲೋಕೈಶ್ಚ ಪರಿಪೂಜ್ಯತೇ || ೧೮೮ ||
ಪುತ್ರಧನಧಾನ್ಯಾದೀನ್ ಪಶೂಂಶ್ಚ ವಿವಿಧಾನಪಿ ।
ತ್ಸರ್ವಮವಾಪ್ನೋತಿ ಮತ್ಪ್ರಾಸಾದೇನ ನಿಶ್ಚಿತಮ್ || ೧೮೯ ||

ಜಲಸಂತರಣೇ ವಾऽಪಿ ಪರ್ವತಾರೋಹಣೇ ತಥಾ ।
ವನೇऽಪಿ ವಿಚರನ್ಮರ್ತ್ಯೋ ದುರ್ಗಮೇ ವಿಷಮೇ ಸ್ಥಿತಃ ॥ ೧೯೦ ॥
ಬಿಲಪ್ರವೇಶನೇ ವಾऽಪಿ ನಾರಸಿಂಹಮನುಸ್ಮರನ್ ।
ಬ್ರಹ್ಮಘ್ನಶ್ಚ ಕೃತಘ್ನಶ್ಚ ಭ್ರೂಣಹಾ ಗುರುತಲ್ಪಗಃ ॥೧೯೧॥
ಮುಚ್ಯತೇ ಸರ್ವಪಾಪೇಭ್ಯಃ ಕೃತಘ್ನಃ ಸ್ತ್ರೀವಿಘಾತಕಃ ।
ವೇದಾನಾಂ ದೂಷಕಶ್ಚಾಪಿ ಮಾತಪಿತ್ರೋರ್ವಿನಿಂದಕಃ ॥ ೧೯೨ ॥
ಅಸದ್ವಾದೀ ತಥಾ ಯಜ್ಞನಿಂದಕೋ ಲೋಕನಿಂದಕಃ ।
ಸ್ಮೃತ್ವಾ ವಕ್ತ್ರಂ ನೃಸಿಂಹಸ್ಯ ಮುಚ್ಯತೇ ಸರ್ವಕಿಲ್ಬಿಷೈಃ ॥ ೧೯೩ ॥
ಕಿಮತ್ರ ಬಹುನೋಕ್ತೇನ ಸ್ಮೃತ್ವಾ ಮಾಂ ಶುದ್ಧಮಾನಸಃ ।
ಯತ್ರ ಯತ್ರ ಚರೇನ್ಮರ್ತ್ಯೋ ನೃಸಿಂಹಸ್ತತ್ರ ರಕ್ಷತಿ ॥ ೧೯೪ ॥
ಗಚ್ಛನ್ ತಿಷ್ಠನ್ ಸ್ವಪನ್ ಭುಂಜಮ್ ಜಾಗ್ರನ್ನಪಿ ಹಸನ್ನಪಿ ।
ನೃಸಿಂಹೇತಿ ನೃಸಿಂಹೇತಿ ಸದಾ ಸಂಸ್ಮರತೇ ಚ ಯಃ ॥ ೧೯೫ ॥
ಪುಮಾನ್ನ ಲಿಪ್ಯತೇ ಪಾಪೈರ್ಭುಕ್ತಿಂ ಮುಕ್ತಿಂ ಚ ವಿಂದತಿ ।
ನಾರೀ ಶುಭಮವಾಪ್ನೋತಿ ಸೌಭಾಗ್ಯಂ ಚ ಸುರೂಪತಾಮ್ ॥ ॥೧೯೬॥
ಭರ್ತೃಪ್ರಿಯತ್ವಂ ಲಭತೇ ನ ವೈಧವ್ಯಮವಾಪ್ನುಯಾತ್ ।
ನ ಸಪತ್ನೀ ಚ ಜನ್ಮಾಂತೇ ಸಮ್ಯಗ್ ಜ್ಞಾನನ್ವಿತಾ ಭವೇತ್ ॥ ೧೯೭ ॥
ಭೂಮಿ ಪ್ರದಕ್ಷಿಣಾನ್ಮರ್ತ್ಯೋ ಯತ್ಫಲಂ ಲಭತೇ ಚಿರಾತ್ ।
ತತ್ಫಲಂ ಸಮವಾಪ್ನೋತಿ ನಾರಸಿಂಹಪ್ರದಕ್ಷಿಣಾತ್ ॥ ೧೯೮ ॥

**ಶ್ರೀಮಾರ್ಕಂಡೇಯ ಉವಾಚ ॥**

ಇತ್ಯುಕ್ತ್ವಾ ದೇವದೇವೇಶೋ ಲಕ್ಷ್ಮೀಮಾಲಿಂಗ್ಯ ಲೀಲಯಾ ।
ಪ್ರಹ್ಲಾದಸ್ಯಾಭಿಷೇಕಂ ತು ಬ್ರಹ್ಮಣೇ ಚೋಪದಿಷ್ಟವಾನ್ ॥ ೧೯೯ ॥
ಶ್ರೀನೃಸಿಂಹಪ್ರಸಾದೇನ ಲೋಕಾನಾಂ ಚ ಹಿತಾಯ ವೈ ।
ಸ್ವರೂಪಂ ದರ್ಶಯಾಮಾಸ ಪ್ರಕೃತಿಸೋऽಭವತ್ತದಾ ॥ ೨೦೦ ॥
ಬ್ರಹ್ಮಾऽಪಿ ದೃತ್ಯರಾಜ್ಯೇ ತು ಪ್ರಹ್ಲಾದಮಭಿಷೇಚಯನ್।
ದೇವತಾಭಿಶ್ಚ ಸರ್ವಾಭಿಃ ಸತ್ಯಲೋಕಂ ಯಯೌ ಸ್ವಯಂಮ್ ॥ ೨೦೧ ॥
ಹಿರಣ್ಯಕಶಿಪೋರ್ಭೀತಃ ಪ್ರಾಬಲ್ಯಾಚ್ಚ ಶಚೀಪತಿಃ ।
ಸ್ವರ್ಗರಾಜ್ಯಾತ್ಪರಿಭ್ರಷ್ಟೋ ಯುಗಾನಾಮೇಕವಿಂಶತಿಃ ॥ ೨೦೨ ॥
ನೃಸಿಂಹೇನ ಹತೇ ದೈತ್ಯೇ ತದಾ ಸ್ವರ್ಗಮವಾಪ ಸಃ ।
ದಿಕ್ಪಾಲಾಶ್ಚ ಸುಸಂಪ್ರಾಪ್ತಾಃ ಸ್ವಂ ಸ್ವಂ ಸ್ಥಾನಮನುತ್ತಮಮ್ ॥ ೨೦೩ ॥
ಧರ್ಮೇ ಮತಿಃ ಸಮಸ್ತಾನಾಂ ಜನಾನಾಮಭವತ್ತದಾ ।
ಏತನ್ನಾಮಸಹಸ್ರಂ ತು ಬ್ರಹ್ಮಣಾ ನಿರ್ಮಿತಂ ಪುರಾ ॥ ೨೦೪ ॥

ಾನಧ್ಯಾಪಯಾಮಾಸ ಸನಕಾದೀನ್ ಮಹಾಮತೀನ್ ।
ಚುಸ್ತೇ ತು ತತಃ ಸರ್ವೇ ಲೋಕಾನಾಂ ಹಿತಕಾಮ್ಯಯಾ ॥ ೨೦೫ ॥
ವತಾ ಋಷಯಃ ಸಿದ್ಧಾ ಯಕ್ಷ ಧರೋರಗಾಃ ।
ರ್ವಾಶ್ಚ ಮನುಷ್ಯಾಶ್ಚ ಇಹಾಮುತ್ರ ಫಲೈಷಿಣಃ ॥ ೨೦೬ ॥
ಸ್ತೋತ್ರಸ್ಯ ಪಠನಾದ್ವಿಶುದ್ಧಮನಸೋಽಭವನ್ ।
ತ್ಕುಮಾರಾತ್ಸಂಪ್ರಾಪ ಭರದ್ವಾಜೋ ಮಹಾಮುನಿಃ ॥ ೨೦೭ ॥
ದ್ವಾದಾಂಗಿರಸಃ ಪ್ರಾಪ ತಸ್ಮಾತ್ ಪ್ರಾಪ ಮಹಾಕ್ರತುಃ ।
ಾಪ ಭಾರ್ಗವಸ್ತಸ್ಮಾದಗ್ನಿಪುತ್ರಾಯ ಸೋಽಬ್ರವೀತ್ ॥ ೨೦೮ ॥
ುನೀಯಾಯ ಸ ಪ್ರಾಹ ಸೋಬ್ರವೀಚ್ಚ್ಯವನಾಯ ಚ ।
ಾದವಾಪ ಶಾಂಡಿಲ್ಯೋ ಗರ್ಗಾಯ ಪ್ರಾಹ ವೈ ಮುನಿಃ ॥ ೨೦೯ ॥
ತ್ಯುಂಜಯಾಯ ಸ ಪ್ರಾಹ ಜಾತೂಕರ್ಣ್ಯಾಯ ಸಂಯಮೀ ।
ಷ್ಣುವೃದ್ಧಾಯ ಸ ಪ್ರಾಹ ಸೋಽಪಿ ಬೋಧಾಯನಾಯ ಚ ॥ ೨೧೦ ॥
ಾತ್ಸ ವಿಷ್ಣವೇ ಪ್ರಾಹ ಸ ಪ್ರಾಹೋದ್ಧಾಮಕುಕ್ಷಯೇ ।
ಂಹ ತೇಜಸ್ತತ್ಮಾತ್ತು ಪ್ರಾಪ ಸಿದ್ಧಿಮವಾಪ ಚ ॥ ೨೧೧ ॥
ರದಿಷ್ಟೋಽಸ್ಮಿ ತೇನಾಹಮಿದಂ ನಾಮಸಾಹಸ್ರಕಮ್ ।
ಸಾದಾದಮೃತ್ಯುರ್ಮೇ ಯಸ್ಮಾತ್ತಸ್ಮಾದ್ಭಯಂ ನಹಿ ॥ ೨೧೨ ॥
ಯಾ ಚ ಕಥಿತಂ ಸ್ತೋತ್ರಂ ನಾರಸಿಂಹಮಿದಂ ತವ ।
ರತ್ವಂ ಹಿ ಶುಚಿರ್ಭೂತ್ವಾ ತಮಾರಾಧಯ ಶಾಶ್ವತಮ್ ॥ ೨೧೩ ॥

ಪರಾಶರ ಉವಾಚ ॥

ರ್ಭೂತಾಶ್ರಯಂ ದೇವಂ ನೃಸಿಂಹಂ ಪರಮೇಶ್ವರಮ್ ।
ಕ್ಯಂ ಸಂದರ್ಶಯಾಮಾಸ ಮಾರ್ಕಂಡೆಯೋ ಮಹಾಮುನಿಃ ॥ ೨೧೪ ॥
ಾತುಲ್ಯಮಿದಂ ಸ್ತೋತ್ರಂ ಗೋಪ್ಯಂ ಜಾಪ್ಯಂ ಶುಚವ್ರತೈಃ ।
ಸಿದ್ಧಿಪ್ರದಂ ನೃಣಾಂ ದುರ್ಲಭಂ ಕಲಿತಾರಕಮ್ ॥ ೨೧೫ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ನೃಸಿಂಹಪ್ರಾದುರ್ಭಾವೇ ಬ್ರಹ್ಮಗೀತಂ

ಶ್ರೀ ನೃಸಿಂಹಸಹಸ್ರನಾಮಸ್ತೋತ್ರಂ ಸಂಪೂರ್ಣಮ್

ತುಂಬಿ ವಿಶೇಷ ತೇಜಸ್ಸನ್ನು (ಬೆಳಕನ್ನು, ತರಹ ತರಹ ಪ್ರಭೆಯನ್ನು) ಕೊಡುವ ಕೂದಲುಗಳು. ಇಂತಹ ಕೇಶಗಳಿಂದ ಕೂಡಿರುವ ಸಿಂಹದ ಮುಖ. ಮುಂಜಿಕೇಶಾಯ ನಮಃ.

ಕೇಶಿ ಎಂಬ ರಾಕ್ಷಸನನ್ನು ಸಂಹರಿಸಿದವನು - ಮುಂಜಿಕೇಶ.

**86. ಕೇಶಿನೇ ನಮಃ**

ಕೇಶಿ ಎಂಬ ರಾಕ್ಷಸನನ್ನು ಕೊಂದವನು - ಕೇಶಿ.

ಉದ್ದವಾದ ದಟ್ಟವಾದ ಕೇಶವುಳ್ಳವನು - ಕೂದಲುಗಳುಳ್ಳವನು. ಪ್ರಾಣಿಗಳಲ್ಲೆಲ್ಲ ಸಿಂಹದ ಮುಖವೇ ಅತಿಯಾಗಿ ಕೂದಲುಳ್ಳದ್ದು - ತೇಜಸ್ಸುಳ್ಳ ಮುಖ. ಅತಿಯಾದ ಕೂದಲುಗಳಿಂದ ಶೋಭಿಸಲ್ಪಡುತ್ತದೆ. ಅದರಿಂದ ಕೇಶವನ್ನೇ ಆಧರಿಸಿ ಕೇಶಿ ಎಂದು ಕರೆಯಲ್ಪಡುತ್ತಾನೆ ಈ ನರಸಿಂಹ ಕೇಶಿಗೆ ನಮಸ್ಕಾರ.

*ಹರಿಕೇಶಾಯ ಕೇಶಾಯ ಸುಧಾಕೇಶಾಯ ವೈ ನಮಃ।*
*ಸುಕೇಶಾಯೋರ್ಧ್ವಕೇಶಾಯ ಕೇಶಿಸಂಹಾರಕಾಯ ಚ ।।15।। (87-92)*

**87. ಹರಿಕೇಶಾಯ ನಮಃ**

ಹರಿ - ವಿಷ್ಣು. ಕೇಶ - ಕೂದಲು.

ವಿಷ್ಣುವು ನೀಲವರ್ಣನು, ನೀಲವರ್ಣದ ಕೇಶವುಳ್ಳವನು, ನೀಲವರ್ಣದ ಸಿಂಹದ ಮುಖದಲ್ಲಿ ಕೇಶವುಳ್ಳವನಾದ್ದರಿಂದ ಹರಿಕೇಶ, ಅವನಿಗೆ ನಮಸ್ಕಾರ.

ಹರಿಯು ದೇವತೆಗಳಲ್ಲಿ ಮೊದಲಿಗನು, ಸಿಂಹವು ಪ್ರಾಣಿಗಳಿಗೆ ಎತ್ತರದ ಸ್ಥಾನದಲ್ಲಿರುವುದು. ಇದರಿಂದ ಹರಿಕೇಶ, ಹರಿಕೇಶನಿಗೆ ನಮಸ್ಕಾರಗಳು.

**88. ಕೇಶಾಯ ನಮಃ**

ಕಃ ಈಶಃ ಕೇಶಃ ದೇವತೆಗಳಿಗೆಲ್ಲ ಒಡೆಯ, ಮಹಾವಿಷ್ಣು, ದಟ್ಟವಾದ ಕೇಶವುಳ್ಳವನು - ಕೇಶ.

ನರಸಿಂಹನ ಕೇಶಗಳು ಪ್ರಖ್ಯಾತವಾದವುಗಳು.

**89. ಸುಧಾಕೇಶಾಯ ನಮಃ**

ಸುಧಾ - ಮಧುರವಾದ್ದು, ಸಿಹಿಯಾದ್ದು, ಸಂಪರ್ಕ ಹೊಂದಿದರೆ ಇಷ್ಟವಾದುದ್ದು.

ನರಸಿಂಹನ ಮುಖದ ಕೇಶಗಳು ಆಕರ್ಷಕವಾದುವುಗಳು.

ಬಣ್ಣದಲ್ಲಿ, ತೇಜಸ್ಸಿನಲ್ಲಿ, ಹೊಳಪಿನಲ್ಲಿ ಅಥವಾ ಪ್ರಭೆಯಲ್ಲಿ ಸೃಷ್ಟಿಯ ಎಲ್ಲ ಸುಂದರ ವಸ್ತುಗಳನ್ನು ಮೀರಿಸಿರುವವು, ಅದರಿಂದ ಸುಧಾಕೇಶನಿಗೆ ನಮಸ್ಕಾರಗಳು.

**90. ಸುಕೇಶಾಯ ನಮಃ**

ಉತ್ತಮವಾದ ಕೇಶಗಳುಳ್ಳವನು, ಅವತಾರಗಳಲ್ಲೆಲ್ಲ ನರಸಿಂಹಾವತಾರದಲ್ಲಿ ಸಿಂಹದ ಮುಖ ಹೊಂದಿರುವುದರಿಂದ ಆ ಮುಖದಲ್ಲಿ ಉತ್ತಮವಾದ (ಇದಕ್ಕಿಂತ ಉತ್ತಮವಾದುದು ಬೇರೊಂದಿಲ್ಲ) ಕೇಶಗಳನ್ನು ಹೊಂದಿರುವುದರಿಂದ *ಸುಕೇಶ. ಅವನಿಗೆ ನಮಸ್ಕಾರಗಳು.*

**91. ಊರ್ಧ್ವಕೇಶಾಯ ನಮಃ**

ಊರ್ಧ್ವ - ಮೇಲಕ್ಕೆ ನಿರ್ದೇಶಿಸುವ, ಕೇಶ - ಎಳೆ ಎಳೆಯ ತೇಜಸ್ಸಿನ ಕೇಶಗಳು.

ಅದರಿಂದ ಊರ್ಧ್ವಕೇಶನು.

ಯಾವಾಗಲೂ ಪರಮ ಪದವನ್ನೇ ತೋರಿಸುತ್ತಿರುವವನು.

ಕೇಶಗಳು ಊರ್ಧ್ವಕ್ಕೆ ತಿರುಗಿರುವುದರಿಂದ ಭಕ್ತರಿಗೆ ತಾನೇ ಪರಮಪದ ದಾರಿಯನ್ನು ಸದಾ ತೋರಿಸುತ್ತಿರುತ್ತಾನೆ. ಭಕ್ತರ ಸೇವಕನು ಇವನು. ಆದರೆ ಜೀವಿಗಳು ತಮ್ಮ ನಿಜ ಸ್ಥಿತಿಯನ್ನು ತಿಳಿದು ಊರ್ಧ್ವಮುಖವಾಗಬೇಕು. ಊರ್ಧ್ವಕೇಶನಿಗೆ ನಮಸ್ಕಾರಗಳು.

**92. ಕೇಶಿಸಂಹಾರಕಾಯ ನಮಃ**

ಕೇಶಿಯನ್ನು ಸಂಹರಿಸಿದವನು. ಕೇಶಿಯು ರಾಕ್ಷಸಿ, ನಮ್ಮಲ್ಲಿರುವ ರೋಮ ರೋಮಗಳಲ್ಲಿ ಕೇಶದಲ್ಲಿ ಕೇಶಿಯಂತೆ ಹರಡಿರುವ ರಾಕ್ಷಸ ಗುಣಗಳನ್ನು ನಾಶಮಾಡುವವನು, *ಕೇಶಿಸಂಹಾರಕನಿಗೆ ನಮಸ್ಕಾರಗಳು.*

*ಜಲೇಶಾಯ ಸ್ಥಲೇಶಾಯ ಪದ್ಮೇಶಾಯೋಗ್ರರೂಪಿಣೇ ।*
*ಕುಶೇಶಾಯಾನುಕುಲಾಯ ಕೇಶವಾಯ ನಮೋ ನಮಃ ॥16॥*
*(93-99)*

**93. ಜಲೇಶಾಯ ನಮಃ**

ಜಲ - ನೀರಿಗೆ, ಈಶ - ಒಡೆಯ, ಪಂಚಭೂತಗಳಲ್ಲಿ ಒಂದು.

ಜಲೇಶ ಎಂದರೆ ನೀರಿಗೆ ರಾಜ, ಸಮುದ್ರರಾಜ

ಪ್ರಳಯ ಕಾಲದಲ್ಲಿ ಎಲ್ಲವೂ ನಾಶವಾಗಿ ಕೊನೆಯಲ್ಲಿ ಅಂಧಕಾರದಲ್ಲಿ ನೀರಿನಲ್ಲಿ ಆಲದ ಎಲೆಯ ಮೇಲೆ ತಾನೇ ತಾನಾಗಿ ಮಲಗಿದ *ವಟಪತ್ರಶಾಯಿಗೆ ನಮಸ್ಕಾರಗಳು.*

ಬ್ರಹ್ಮದೇವರು ನಾಭೀಕಮಲದಲ್ಲಿ ಪ್ರಕಟವಾಗಿ ತಪಸ್ಸು ಮಾಡಿದಾಗ ದರ್ಶನ ತೋರಿದ ವಟಪತ್ರಶಾಯಿಗೆ ನಮಸ್ಕಾರಗಳು.

ಸಮುದ್ರಗಳಿಗೆಲ್ಲ ರಾಜನಾದವನು ಇವನೇ - ಸರಸಾಮಸ್ಮಿ ಸಾಗರಃ.

ಸಮುದ್ರ ರಾಜನಾಗಿ ತನ್ನ ತನಯಳಾದ ಮಹಾಲಕ್ಷ್ಮಿಯನ್ನು ವಿಷ್ಣುವಿಗೆ ಕೊಟ್ಟವನು. (ತನಗೆ ತಾನೇ ತಾನಾಗಿ) ಬೇರೆ ಬೇರೆ ರೂಪದಲ್ಲಿ ಪ್ರಕಟವಾಗುವ ವಿಶೇಷ ಮಾಯಾವಿ *ಮಹಾವಿಷ್ಣುವಿಗೆ ನಮಸ್ಕಾರ.*

94. ಸ್ಥಲೇಶಾಯ ನಮಃ

ಸ್ಥಲ ಎಂದರೆ ವಾಸಸ್ಥಾನ, ಪಂಚಮಹಾ ಭೂತಗಳಲ್ಲಿ ಪ್ರತಿಯೊಂದೂ ಸಹ ಜೀವಿಗಳ, ಸಚರಾಚರ ವಸ್ತುಗಳಿಗೆ ಆಧಾರವಾಗಿದೆ. ಅದರಿಂದ ಪ್ರತಿಯೊಂದಕ್ಕೂ ವಾಸಸ್ಥಾನ ಸ್ಥಳ. ಎಲ್ಲ ಸ್ಥಳಗಳಿಗೂ ಈಶನು - ಪರಮೇಶ್ವರ - *ಮಹಾವಿಷ್ಣು. ಅಂತಹ ಸ್ಥಲೇಶನಿಗೆ ನಮಸ್ಕಾರಗಳು.* ಅಥವಾ ಜೀವಿಗಳನ್ನು ಸಕಲ ಸೃಷ್ಟಿಯನ್ನು ತನ್ನ ಉದರದಲ್ಲಿ ಪ್ರಳಯ ಕಾಲದಲ್ಲಿ ಹಾಕಿಕೊಳ್ಳುವುದರಿಂದ ಸಕಲ ಸ್ಥಳಗಳಲ್ಲಿಯೇ ಈತನ ಉದರವು ಅತಿ ಉನ್ನತವಾದ್ದು. ಕೊನೆಯ ಗಮ್ಯಸ್ಥಾನ. ಇದನ್ನು ಸೇರದೆ ವಿಧಿಯಿಲ್ಲ. ಅದರಿಂದ ಆ ಉದರಕ್ಕೆ ಈಶನಾದ್ದರಿಂದ ಸ್ಥಲೇಶನಿಗೆ ನಮಸ್ಕಾರಗಳು.

95. ಪದ್ಮೇಶಾಯ ನಮಃ

ಪದ್ಮ ಎಂದರೆ ಲಕ್ಷ್ಮಿ, ಮಹಾವಿಷ್ಣುವಿನ ಭಾರ್ಯೆ,

ಲಕ್ಷ್ಮಿಯ ಒಂದು ಹೆಸರು ಪದ್ಮ. "ಲಕ್ಷ್ಮೀ ಪದ್ಮಾಲಯಾ ಪದ್ಮಾ ಕಮಲಾ ಶ್ರೀರ್ಹರಿ ಪ್ರಿಯಾ||"

ಪದ್ಮ ಎಂದರೆ ಕಮಲ ಎಂದರೆ ತಾವರೆ ಹೂವು.

ಪದ್ಮದಲ್ಲಿ ಹುಟ್ಟಿದವನು - ಬ್ರಹ್ಮ. ಬ್ರಹ್ಮನಿಗೆ ತಂದೆ ಶ್ರೀ ಹರಿ.

ಪದ್ಮದಲ್ಲಿ ನಿಂತಿರುವಳು - ಮಹಾಲಕ್ಷ್ಮಿ, ಅವಳಿಗೆ ಈಶನು ವಿಷ್ಣು.

ಪದ್ಮ - ಮಹಾವಿಷ್ಣುವಿನ, ಲಕ್ಷ್ಮಿಯ ಮತ್ತು ಇಷ್ಟದೈವಗಳ ಅವಯವಗಳನ್ನು ಪದ್ಮಕ್ಕೆ ಕವಿಗಳು ಹೋಲಿಸುತ್ತಾರೆ.

96. ಉಗ್ರರೂಪಿಣೇ ನಮಃ

ಭಯಂಕರವಾದ ರೂಪವುಳ್ಳವನು - ಹಿರಣ್ಯಕಶಿಪುವನ್ನು ಸಂಹಾರ ಮಾಡಿದ ಮೇಲೆ ನರಸಿಂಹನ ರೂಪವು ಅತಿ ಭಯಂಕರವಾಗಿತ್ತು. ನರಸಿಂಹ ರೂಪಕ್ಕೆ *ಉಗ್ರನರಸಿಂಹ, ಎಂದು ಹೆಸರು.* ಈ ಉಗ್ರರೂಪವನ್ನು ಶಾಂತ ಮಾಡಬೇಕಾದರೆ ಬ್ರಹ್ಮನು ಸಕಲ ದೇವತೆಗಳೊಡನೆ ಬಂದು ಸಹಸ್ರನಾಮಗಳಿಂದ ಸ್ತೋತ್ರಮಾಡಿದನು. ಅಂತಹ *ಉಗ್ರನರಸಿಂಹನಿಗೆ ನಮಸ್ಕಾರಗಳು.*

97. ಕುಶೇಶಾಯ ನಮಃ

ಕುಶ ಎಂದರೆ ಕುಶ ದರ್ಭೆ, ಇದನ್ನು ಯಜ್ಞ ಯಾಗಾದಿಗಳಲ್ಲಿ ಶ್ರೇಷ್ಠವಾದ ವಸ್ತುವೆಂದು ಉಪಯೋಗಿಸುತ್ತಾರೆ.

ವಾಲ್ಮೀಕಿಗಳು ಶ್ರೀರಾಮ ಸೀತೆಯರ ಪುತ್ರನಿಗೆ ಕುಶ ದರ್ಭೆಯನ್ನು ನಿರ್ದೇಶಿಸಿ *ಕುಶ ಎಂದು ಹೆಸರಿಟ್ಟರು.* ಅಂತಹ ಕುಶನ ತಂದೆಗೆ ಶ್ರೀರಾಮನಿಗೆ ನಮಸ್ಕಾರ.

98. **ಅನುಕೂಲಾಯ ನಮಃ**

ಏನೇ ಮಾಡುವುದಕ್ಕೂ ಸಹಾಯಕವಾಗಿರುವವನು ಅನುಕೂಲನು, ಅವನಿಗೆ ನಮಸ್ಕಾರ.

ಭಕ್ತರಿಗೆ ಅನುಕೂಲವಾಗಿರುವವನು.

99. **ಕೇಶವಾಯ ನಮಃ**

ಕೇಶವನಿಗೆ ನಮಸ್ಕಾರ.

ಕೇಶವ - ಮಹಾವಿಷ್ಣುವಿನ ಒಂದು ನಾಮ.

*ಶ್ರುತಿಕಂಠಾಯ ಶುಷ್ಕಾಯ ರಕ್ತಸಿಂಹಾಯ ಶಂಕಿನೇ।*
*ದೀಪ್ತರೂಪಾಯ ದೀಪ್ತಾಯ ಪ್ರದೀಪ್ತಾಯ ಪ್ರಬೋಧಿನೇ ॥17॥*
*(100-107)*

100. **ಶ್ರುತಿಕಂಠಾಯ ನಮಃ**

ಶ್ರುತಿ - ವೇದ, ಶಾಸ್ತ್ರ, ಪುರಾಣೇತಿಹಾಸಗಳು.

ಅಥವಾ ವೇದಗಳು.

ಕಂಠ ಎಂದರೆ ಕತ್ತು ಅಥವಾ ಗಂಟಲು, ಶಬ್ದ ಹೊರಡುವ ಸ್ಥಳ.

ಶ್ರುತಿಕಂಠ - ಶ್ರುತಿಯನ್ನು ಕಂಠದಲ್ಲಿರಿಸಿಕೊಂಡಿರುವವನು.

ಶ್ರುತಿಗಳನ್ನು ಮಾಲೆಯ ರೂಪದಲ್ಲಿ ಕಂಠಕ್ಕೆ ಹಾಕಿಕೊಂಡಿರುವವನು.

ಶ್ರುತಿಗಳು ಬ್ರಹ್ಮನಿಂದ ಹೊರಟವುಗಳು, ಸರಸ್ವತಿಯೇ ವಾಣಿದೇವಿಯೇ ಇದಕ್ಕೆ ಅಧಿದೇವತೆ. ಬ್ರಹ್ಮ ಸರಸ್ವತಿಯರನ್ನು ಇದು ನಿರ್ದೇಶಿಸುತ್ತದೆ, ಆದರಿಂದ *ಶ್ರುತಿ ಕಂಠನಿಗೆ ನಮಸ್ಕಾರಗಳು.*

101. **ಶುಷ್ಕಾಯ ನಮಃ**

ಶುಷ್ಕ ಎಂದರೆ ಒಣಗಿದ ವಸ್ತು, ಒಣಗಿರುವ ಸ್ಥಿತಿ.

ಯಾವುದಾದರೂ ವಸ್ತುವನ್ನು ಒಣಗಿಸಬೇಕಾದರೆ ಅದರಲ್ಲಿರುವ ನೀರಿನ ಅಂಶವನ್ನು ಹೊರತೆಗೆಯಬೇಕು, ಅದಕ್ಕೆ ತೇಜಸ್ಸು ಶಾಖವಾದ ಅಗ್ನಿ ಬೇಕು. ಆದರಿಂದ ಇದು ಅಗ್ನಿಯನ್ನು ನಿರ್ದೇಶಿಸುತ್ತದೆ. ಭಗವಂತನು ಅಗ್ನಿಯ ರೂಪನಾದರಿಂದ ಅಗ್ನಿಗೆ ನಮಸ್ಕಾರಗಳು.

ಅಗ್ನಿಯು ಪಂಚ ಮಹಾಭೂತಗಳಲ್ಲಿ ಒಂದು. ಪಂಚಭೂತಗಳು ಎಲ್ಲವೂ ಸೇರಿದ್ದರೇನೆಯೇ ಜೀವಿಗೆ ವಾಸಸ್ಥಾನವಾದ ದೇಹವು ಆಗುತ್ತದೆ ಮತ್ತು ಜೀವಿಗೆ ಇರಲು ಯೋಗ್ಯಸ್ಥಾನವಾಗುತ್ತದೆ.

**102. ರಕ್ತಸಿಂಹಾಯ ನಮಃ**

ರಕ್ತ - ಎಂದರೆ ರಕ್ತ ಅಥವಾ ಕೆಂಪು ವರ್ಣ, ಕ್ರೌರ್ಯತೆಯನ್ನು "ರಕ್ತ"ವು ನಿರ್ದೇಶಿಸುತ್ತದೆ.

ರಕ್ತ ಸಿಂಹ - ಕೋಪಗೊಂಡ ಸಿಂಹ ಅಥವಾ ಕೆಂಪು ಬಣ್ಣದ ಸಿಂಹ. ನರಸಿಂಹನ ಮುಖದ ಬಣ್ಣಗಳು ಹಲವು. ಅದರಲ್ಲಿ ಕೆಂಪೂ ಒಂದು.

ಹಿರಣ್ಯ ಕಶಿಪುವನ್ನು ಸಂಹಾರ ಮಾಡಿದಾಗ ನರಸಿಂಹನು ಕೋಪದಿಂದ ಉಗ್ರವಾಗಿದ್ದನು, ಅದರಿಂದ *ರಕ್ತ ಸಿಂಹನಿಗೆ ನಮಸ್ಕಾರಗಳು.*

**103. ಶಂಕಿನೇ ನಮಃ**

ಶಂಕೆ - ಅನುಮಾನ, ಶಂಕೆಯೂ ಒಂದು ಸಹಜ ಗುಣ. ಎಲ್ಲ ಗುಣಗಳೂ ಸತ್ವರಜಸ್ತಮೋ ಗುಣದಲ್ಲಿ ಸೇರಿರುತ್ತವೆ. ಈ ಗುಣಗಳನ್ನು ಪರಮಾತ್ಮನು ಮಾಯಾ ಪ್ರಪಂಚ ನಡೆಸುವುದಕ್ಕಾಗಿ ಸೃಷ್ಟಿಸಿದನು. ಅದರಿಂದ ಶಂಕೆಯೂ ಒಂದು ಮಾಯೆಯ ಪ್ರತೀಕ. ಮಾಯೆ, ಪ್ರಕೃತಿ, ಪುರುಷ ಎಲ್ಲ ಪರಮಾತ್ಮನ ರೂಪಗಳು. ಅದರಿಂದ *ಶಂಕಿನೇ ನಮಃ*

*ಶಂಖಿನೇ ನಮಃ ಎಂದು* ಆದರೆ ಶಂಖವನ್ನು ಆಯುಧವಾಗಿ ಇರುವವನು ಮಹಾವಿಷ್ಣು, ಅವನಿಗೆ ನಮಸ್ಕಾರಗಳು.

**104. ದೀಪ್ತರೂಪಾಯ ನಮಃ**

ದೀಪ - ಎಂದರೆ ಬೆಳಕು, ಪ್ರತಿಭೆ, ತೇಜಸ್ಸು.

ದೀಪ್ತ - ತೇಜಸ್ಸಿನಿಂದ ಕೂಡಿರುವ, ರೂಪ - ರೂಪ, ತೇಜಸ್ಸಿನಿಂದ ಕೂಡಿರುವ (ರೂಪ) ಆಕಾರ ಉಳ್ಳವನು, ಇವನಿಗಿಂತ ಉತ್ತಮರಿಲ್ಲ - *ದೀಪ್ತರೂಪನಿಗೆ ನಮಸ್ಕಾರಗಳು.*

**105. ದೀಪ್ತಾಯ ನಮಃ**

ಮೇಲಿನಂತೆ ತೇಜಸ್ಸಿನಿಂದ ಕೂಡಿದವನಿಗೆ ನಮಸ್ಕಾರಗಳು.

**106. ಪ್ರದೀಪ್ತಾಯ ನಮಃ**

ಉತ್ತಮವಾದ ತೇಜಸ್ಸಿನಿಂದ ಕೂಡಿದವನಿಗೆ ನಮಸ್ಕಾರಗಳು.

**107. ಪ್ರಬೋಧಿನೇ ನಮಃ**

ಒಳ್ಳೆಯದನ್ನು ಬೋಧಿಸುವವನು.

ಶ್ರೇಷ್ಠವಾದ ಜ್ಞಾನವನ್ನು ಬೋಧಿಸುವವನು - ಗುರು. ಅಂದರೆ ಗುರು, ಬೃಹಸ್ಪತಿ - ಗುರುವಿಗಿಂತ ಬೇರೆಯವರು ಈ ರೀತಿ ಜ್ಞಾನವನ್ನು ಒಬ್ಬರಿಂದ ಒಬ್ಬರಿಗೆ ಹೇಳಿ ಕೊಡಲಾರರು. (ನಿರ್ವಂಚನೆಯಿಂದ ಹೇಳಿ ಕೊಡುವುದು).

ಗುರು - ಶಿಷ್ಯ ಪರಂಪರೆ ಬ್ರಹ್ಮನಿಂದ ಪ್ರಾರಂಭವಾಗಿ ಬರುತ್ತಿದೆ.

ಶಿಷ್ಯನು ತನ್ನ ಶಿಷ್ಯನಿಗೆ ಹೇಳಿ ಕೊಡುವುದರಿಂದ ಈ ಶಿಷ್ಯನು ಗುರುವಿನ ರೂಪವನ್ನು ತಾಳುತ್ತಾನೆ. ಅಂದರೆ ಗುರು - ಶಿಷ್ಯ - ಪರಮಾತ್ಮ ಎಲ್ಲವೂ ಪರಸ್ಪರ ಸಂಕಲ್ಪದಿಂದ ಸಂಬಂಧ ಹೊಂದುತ್ತದೆ. ಆದರೆ ಗುರುವೇ ಶ್ರೇಷ್ಠ - ಪರಮಾತ್ಮನಿಗಿಂತಲೂ ಶ್ರೇಷ್ಠ. ಅದರಿಂದ ಗುರುವನ್ನು ಯಾವ ಕಾರಣಕ್ಕೂ ಮನಸ್ಸಿನಿಂದಲೂ ಸಹಾ ಅಗೌರವದಿಂದ ನೋಡಬಾರದು. ಪ್ರಬೋಧನಿಗೆ ನಮಸ್ಕಾರಗಳು.

*ಪ್ರಚ್ಛನ್ನಾಯ ಪ್ರಬುದ್ಧಾಯ ಪ್ರಭವೇ ವಿಭವೇ ನಮಃ*
*ಪ್ರಭಂಜನಾಯ ಪಾರ್ಥಾಯ ಪ್ರಮಾಯಾಪ್ರತಿಮಾಯ ಚ ॥18॥*
*(108-115)*

08. ಪ್ರಚ್ಛನ್ನಾಯ ನಮಃ

ಪ್ರಚ್ಛನ್ನನಾದ ನರಸಿಂಹನಿಗೆ ನಮಸ್ಕಾರಗಳು.

ಶ್ರೇಷ್ಠನಾದ ಛನ್ನನಾದ ನರಸಿಂಹನಿಗೆ ನಮಸ್ಕಾರಗಳು.

09. ಪ್ರಬುದ್ಧಾಯ ನಮಃ

ಬುದ್ಧಿಯನ್ನು ಉಳ್ಳವನು ಬುದ್ಧ

ಗೌತಮ ಬುದ್ಧನು ಬೋಧಿ ವೃಕ್ಷದ ಕೆಳಗೆ ಪರಮಾತ್ಮ ಜ್ಞಾನವನ್ನು ಪಡೆದದ್ದರಿಂದ ಬುದ್ಧನಾದನು.

ಬುದ್ಧನು ಶ್ರೀ ಹರಿಯ ಅವತಾರಗಳಲ್ಲಿ 9ನೆಯದು.

ಪ್ರಬುದ್ಧ - ಎಂದರೆ ಉತ್ತಮವಾದ ಸ್ಥಿತಿಯನ್ನು ಪಡೆದಿರುವುದು.

ಜ್ಞಾನದಲ್ಲಿ ಅತ್ಯುನ್ನತ ಮೇಲ್ಮೆಯನ್ನು ಪಡೆದಿರುವುದು ಪ್ರಬುದ್ಧ ಸ್ಥಿತಿ. ಅಂತಹ ಲೋಕಗಳ ಗುರುವು ಪರಮಪುರುಷ, ಅವನೇ ಪ್ರಬುದ್ಧನು. ಪ್ರಬುದ್ಧವಾದ ಪರಮೇಶ್ವರನಿಗೆ ನಮಸ್ಕಾರಗಳು.

10. ಪ್ರಭವೇ ನಮಃ

ಭವ ಎಂದರೆ ಹುಟ್ಟುವುದು, ಪ್ರ = ಶ್ರೇಷ್ಠ.

ಪ್ರಭವ - ಶ್ರೇಷ್ಠವಾದ ಜನ್ಮಉಳ್ಳವನು - ಬ್ರಹ್ಮ

60 ಸಂವತ್ಸರಗಳಲ್ಲಿ ಮೊದಲನೆಯದು, ಪ್ರಭವ, ಆ ಸಂವತ್ಸರವೇ ಮಹಾ ವಿಷ್ಣು. ಅದರಿಂದ ಪ್ರಭುವಿಗೆ ನಮಸ್ಕಾರಗಳು. ಕಾಲಗಣನೆಯಲ್ಲಿ ಸಂವತ್ಸರವೇ ಅವನು.

ಪರಮಾತ್ಮನಿಗೆ ಜನ್ಮವಿಲ್ಲವೆಂದಾದರೆ ಭವಸಾಗರವನ್ನು ಸೃಷ್ಟಿಸಿ ವಿಶೇಷಗೊಳಿಸಿದವನು ಭಗವಂತ, ಅದರಿಂದ ಪ್ರಭವ.

ಜೀವ ಕೋಟಿಯನ್ನು ಭವ ಸಾಗರದಲ್ಲಿ ಮುಳುಗಿಸಿ ಅದರಿಂದ ಬಿಡಿಸುವ ಶ್ರೇಷ್ಠ (ಪ್ರ)ವಾದ ಸಾಮರ್ಥ್ಯವಿರುವುದರಿಂದ ಅವನನ್ನು *ಪ್ರಭವ* ಎಂದು *ಕರೆಯುತ್ತಾರೆ. ಪ್ರಭವನಿಗೆ ನಮಸ್ಕಾರಗಳು.*

1. ವಿಭವೇ ನಮಃ

ವಿಭವನಿಗೆ ನಮಸ್ಕಾರಗಳು.

ವಿಭವ ಸಂವತ್ಸರಕ್ಕೆ ನಮಸ್ಕಾರಗಳು.

ಭವ ಎಂದರೆ ಈಶ್ವರ, ಶಿವ, ವಿಶಿಷ್ಠ ಗುಣಗಳುಳ್ಳ ಪರಮಾತ್ಮ. ಅದರಿಂದ *ವಿಭವನಿಗೆ ನಮಸ್ಕಾರಗಳು.*

ಪರಮಾತ್ಮನೇ ವಿಶೇಷ ಗುಣಗಳಿಂದ ಕೂಡಿರುವುದರಿಂದ ಭಗವಂತ - ಭಗವಾನ್, ವಿಭವ ಎಂದು ಭಕ್ತರಿಂದ ಕರೆಯಲ್ಪಡುತ್ತಾನೆ. ಒಂದು ನಾಮದಿಂದ ಕರೆದಾಗ ಒಂದು ಒಂದು ರೀತಿಯ ಭಾವನೆಗಳನ್ನು ಭಕ್ತರ ಮನದಲ್ಲಿ ಮೂಡಿಸುವ ಸಾಮರ್ಥ್ಯವಿರುವುದರಿಂದ *ವಿಭವ ಎಂದು ಹೆಸರು, ವಿಭವನಿಗೆ ನಮಸ್ಕಾರಗಳು.*

2. ಪ್ರಭಂಜನಾಯ ನಮಃ

ಭಂಜನ - ಅರಗಿಸುವುದು, ಭಕ್ತರ ಕರ್ಮಗಳನ್ನು ನಿಶ್ಶೇಷವಾಗಿ ಅರಗಿಸುವ, ಭಸ್ಮ ಮಾಡುವ ವಿಚಿತ್ರ ಮತ್ತು ವಿಶೇಷ ಶಕ್ತಿಯುಳ್ಳವನಾದ್ದರಿಂದ *ಪ್ರಭಂಜನ.*

ಅವತಾರಗಳಲ್ಲಿ ಭಕ್ತರ ಕರೆಗೆ ತಕ್ಕಂತೆ ಬರುವವನು, ವಿಶೇಷ ರೀತಿಯಲ್ಲಿ ಪ್ರಹ್ಲಾದನ ಕರೆಗೆ ಬಂದವನು *ನರಸಿಂಹ. ಆದಕ್ಕೆ ಪ್ರಭಂಜನಾಯ ನಮಃ.*

3. ಪಾರ್ಥಾಯ ನಮಃ

ಪೃಥಿವಿಗೆ ಸಂಬಂಧ ಪಟ್ಟವನು ಪಾರ್ಥ. ಸರ್ವರಾಜರೂ ಆಳುವುದರಿಂದ ಸರ್ವರೂ ಭೂಮಿಯನ್ನು ತಮ್ಮದೆಂದು ಮಾಡಿಕೊಳ್ಳುವುದರಿಂದ ಒಂದು ರೀತಿಯಲ್ಲಿ ಪಾರ್ಥರೇ.

ಪಾಂಡವರಲ್ಲಿ ಪಾರ್ಥನು ಅಂದರೆ ಅರ್ಜುನನೇ, ಎಂದು ಶ್ರೀಕೃಷ್ಣ ಗೀತೆಯಲ್ಲಿ ಹೇಳಿದ್ದಾನೆ.

ಆದರೆ ಭೂಮಿಯನ್ನು ಸೃಷ್ಟಿಯಲ್ಲಿ ಹೊಂದಿರುವವರಲ್ಲೆಲ್ಲಾ ಶ್ರೇಷ್ಠನು - *ಭೂದೇವಿಯನ್ನೇ ಪ್ರಿಯೆಯಾಗಿರುವವನು ಮಹಾವಿಷ್ಣು. ಭೂದೇವಿಯನ್ನು ಪಾತಾಳದಿಂದ ರಕ್ಷಿಸಿದವನು ವಿಷ್ಣು.*

*ಅಂತಹ ಪೃಥಿವಿಗೆ ಸಂಬಂಧಿಸಿದ ಪಾರ್ಥ ಶ್ರೀಮನ್ನಾರಾಯಣನಿಗೆ ನಮಸ್ಕಾರಗಳು.*

**114. ಪ್ರಮಾಯ ನಮಃ**

ಪ್ರಮಾಯ ನಮಃ ಪ್ರಮನಿಗೆ ನಮಸ್ಕಾರಗಳು,

ಪ್ರ - ಶ್ರೇಷ್ಠ, ಮಾ - ದೇವಿ.

ಶ್ರೇಷ್ಠವಾದ ದೇವಿ ಸ್ವರೂಪನಿಗೆ ನಮಸ್ಕಾರಗಳು.

**115. ಅಪ್ರತಿಮಾಯ ನಮಃ**

ಸರಿ ಸಮಾನರಿಲ್ಲದವನು.

ಪ್ರತಿಮೆ - ಆಕಾರ, ರೂಪ, ಶರೀರ ಮುಂತಾದವುಗಳಿಂದ ನಿರ್ದೇಶಿಸಿ ಭಜಿಸುತ್ತೇವೆ.

ಆದರೆ ಪ್ರತಿಮೆಯೇ ಇಲ್ಲದವನು. ನಿರಾಕಾರ ಪರ ಬ್ರಹ್ಮನು, ಅವನಿಗೆ ನಮಸ್ಕಾರಗಳು.

ಅಥವಾ ಸಮಾನವಾದ ಪ್ರತಿಮೆಯಿಲ್ಲದವನು, ಏಕೈಕ ರೂಪದವನು.

*ಪ್ರಕಾಶಾಯ ಪ್ರತಾಪಾಯ ಪ್ರಜ್ವಲಾಯೋಜ್ಜ್ವಲಾಯ ಚ।*
*ಜ್ವಾಲಾಮಾಲಾಸ್ವರೂಪಾಯ ಜ್ವಾಲಸಿಂಹಾಯ ಜ್ವಾಲಿನೇ ॥19॥*
*(116-122)*

**116. ಪ್ರಕಾಶಾಯ ನಮಃ**

ಪ್ರಕಾಶ - ಬೆಳಕು, ತೇಜಸ್ಸು, ಪ್ರಭೆ, ಇದು ಪಂಚ ಮಹಾಭೂತಗಳಲ್ಲಿ ಒಂದು (ಪೃಥಿವ್ಯಾಪಸ್ತೇಜೋವಾಯುರಾಕಾಶಾತ್), ಪಂಚ ಭೂತಗಳು ಭಗವಂತನ ರೂಪಗಳು. ಮೂಲ ಪದಾರ್ಥಗಳು ಇವುಗಳಿಲ್ಲದೆ ದೇಹ ಸೃಷ್ಟಿ ಸಾಧ್ಯವಿಲ್ಲ. ಜೀವಿಗೆ ವಾಸಸ್ಥಾನಕ್ಕೆ ದೇಹ ಬೇಕು, ಅದರಿಂದ ಪ್ರಕಾಶಾಯ ನಮಃ

ಪ್ರಪಂಚಕ್ಕೆ ಬೆಳಕನ್ನು ಕೊಡುವವನು ಸೂರ್ಯ, ಚಂದ್ರ, ನಕ್ಷತ್ರಗಳು. ಸೂರ್ಯ ಚಂದ್ರರು ಪರಮಾತ್ಮನ ಕಣ್ಣು ಮತ್ತು ಮನಸ್ಸು (ಚಕ್ಷೋ ಸ್ಸೂರ್ಯೋಅಜಾಯತ, ಚಂದ್ರಮಾ ಮನಸೋಜಾತಃ - ಪು. ಸೂ.)

ಇಂದ್ರಿಯಗಳಲ್ಲಿ ತೇಜಸ್ಸನ್ನು ಕೊಡುವುದು ಕಣ್ಣುಗಳು, ಅದರಿಂದ ಕಣ್ಣುಗಳ ಅಧಿ ದೇವತೆಗಳಿಗೆ ನಮಸ್ಕಾರ.

ದೇಹಗಳಲ್ಲಿ ಬೆಳಕನ್ನು ಕೊಡುವುದು ಜೀವಾತ್ಮ, ಜೀವಾತ್ಮನು ಪರಮಾತ್ಮನ ಅಂಶ, ಅದರಿಂದ ಜೀವಾತ್ಮನಿಗೆ ನಮಸ್ಕಾರ.

ಜ್ಞಾನವೇ ಬೆಳಕು, ವಿಜ್ಞಾನವೇ ಬೆಳಕು.

ಜ್ಞಾನ, ವಿಜ್ಞಾನಗಳು ದೇಹಿಯನ್ನು ಉದ್ಧಾರ ಮಾಡುತ್ತವೆ, ಅದರಿಂದ ಜ್ಞಾನ ದೇವತೆಗೆ ನಮಸ್ಕಾರಗಳು.

7. ಪ್ರತಾಪಾಯ ನಮಃ

ತಾಪ - ಎಂದರೆ ಶಾಖ, ಬಿಸಿ, ತಾಪವನ್ನುಂಟುಮಾಡುವವನು ಅಗ್ನಿ. ಪಂಚಭೂತಗಳಲ್ಲಿ ಒಂದು ಅಗ್ನಿ.

ಪ್ರ - ಶ್ರೇಷ್ಠ, ತಾಪ - ಅಗ್ನಿ, ಅಗ್ನಿಯು ಅನೇಕ ವಿಧಗಳಲ್ಲಿ ಶ್ರೇಷ್ಠವಾದುದ್ದು. ಯಜ್ಞಯಾಗಾದಿಗಳಲ್ಲಿ ಬರುವ ಅಗ್ನಿ, ಅಗ್ನಿಯು ಹವಿಸ್ಸಿನಿಂದ ತೃಪ್ತನಾದರೆ ಚೆನ್ನಾಗಿ ಪ್ರಜ್ವಲಿಸುತ್ತಾನೆ.

ಅಗ್ನಿಯು ಹವ್ಯವನ್ನು ಆಯಾ ದೇವತೆಗಳಿಗೆ ವಾಹನ ರೂಪದಲ್ಲಿ ತೆಗೆದುಕೊಂಡು ಹೋಗುವುದರಿಂದ *ಹವ್ಯವಾಹಕ ಎಂದು ಕರೆಯುತ್ತೇವೆ, ಎಲ್ಲ ತರಹದ ಅಗ್ನಿಯಲ್ಲಿ ಈ ಅಗ್ನಿಯೇ ಶ್ರೇಷ್ಠವಾದ ಕಾರ್ಯ ಮಾಡುವುದರಿಂದ ಪ್ರತಾಪ ಎಂದು ಹೆಸರು, ಅವನಿಗೆ ನಮಸ್ಕಾರಗಳು.*

*ಜೀವಿಗಳಲ್ಲಿ ಜಠರಾಗ್ನಿಯು ಆಹಾರವನ್ನು ಪಚನ ಮಾಡುತ್ತದೆ. ಚತುರ್ವಿಧವಾದ (ಭಕ್ಷ್ಯ, ಭೋಜ್ಯ, ಚೋಷ್ಯ, ಲೇಹ್ಯ) ಅನ್ನವನ್ನು ಭಗವಂತನು ಜಠರಾಗ್ನಿಯ ರೂಪದಲ್ಲಿ ಬಂದು ಪಚನ ಮಾಡುತ್ತಾನೆ.*

ಪ್ರತಾಪ - ಎಂದರೆ ವೀರತ್ವ, ಶೌರ್ಯ, ಧೀರತ್ವ, ತನ್ನ ಪ್ರತಾಪದಿಂದ ಎಂತಹ ಶಕ್ತಿಶಾಲಿಯೇ ಆಗಲಿ, ಅವನನ್ನು ಜಯಿಸುತ್ತಾನೆ. ಅದರಿಂದ ಪ್ರತಾಪನಿಗೆ ನಮಸ್ಕಾರ.

ಭಗವಂತನು ತನ್ನ ಎಲ್ಲ ಅವತಾರಗಳಲ್ಲಿಯೂ ತನ್ನ ಪ್ರತಾಪದಿಂದ ದುಷ್ಟರನ್ನು ಶಿಕ್ಷಿಸಿ, ತನ್ನ ಭಕ್ತರನ್ನು ಕಾಪಾಡುತ್ತಾನೆ. ಅದರಿಂದ ಪ್ರತಾಪನಿಗೆ ನಮಸ್ಕಾರಗಳು.

8. ಪ್ರಜ್ವಲಾಯ ನಮಃ

ಜ್ವಲ - ಉರಿಯುವಿಕೆ, ಅಗ್ನಿಯ ಸಹಜ ಗುಣ

ಜ್ವಲನ - ಅಂದರೆ ಉರಿಯುವುದು, ಶಾಖವನ್ನು ಉತ್ತಮವಾಗಿ ಉತ್ಪನ್ನ ಮಾಡುವುದು ಅಥವಾ ಪ್ರಕಟಪಡಿಸುವುದು.

ಜ್ವಲನ ಶಕ್ತಿಯಿರುವವನು ಅಗ್ನಿ ಅವನಿಗೆ ನಮಸ್ಕಾರಗಳು.

ಪ್ರ - ವಿಶೇಷ, ಜ್ವಲನ - ತಾಪ ಮಾಡುವವನು.

ಪ್ರಜ್ವಲನ ಶಕ್ತಿಯಿರುವವನು - ಪ್ರಜ್ವಲ. ಅದರಿಂದ ಇದೂ ಸಹ ಮಹಾವಿಷ್ಣುವಿನ ಒಂದು ರೂಪ, ಅದರಿಂದ ಪ್ರಜ್ವಲಾಯ ನಮಃ.

9. ಉಜ್ಜ್ವಲಾಯ ನಮಃ

ವಿಶೇಷವಾದ ಭವಿಷ್ಯಕ್ಕೆ ಉಜ್ಜ್ವಲ ಭವಿಷ್ಯ ಎನ್ನುತ್ತೇವೆ.

ಉತ್ತಮವಾದ ಪ್ರಕಾಶಕ್ಕೆ ಉಜ್ಜ್ವಲ ಎನ್ನುತ್ತೇವೆ.

ಪರಮಾತ್ಮ ಎಲ್ಲ ಸೃಷ್ಟಿಯಲ್ಲಿಯೂ ಪ್ರತಿಯೊಂದು ಜೀವಿಯಲ್ಲಿಯೂ ಆಯಾ ದೇಹದಲ್ಲಿರುವಾಗ ಏನಾದರೂ ಒಂದು ರೀತಿಯ ವಿಶೇಷ ಗುಣವು ತಾನಾಗಿಯೇ ಕೆಲವು ಸಲ ಸುಪ್ತವಾಗಿಯೂ, ಕೆಲವು ಸಲ ಪ್ರಕಾಶವಾಗಿಯೂ ಕಾಣುತ್ತದೆ. ಈ ಎರಡು ಸಂದರ್ಭದಲ್ಲಿಯೂ ಏನೋ ಒಂದು ಭಗವಂತನ ಸಂಕಲ್ಪಕ್ಕಾಗಿಯೇ ನಡೆಯುತ್ತದೆ. ಅದೂ ಸಹ ಉಜ್ಜ್ವಲ ಗುಣವನ್ನು ತೋರಿಸುವುದಕ್ಕಾಗಿಯೇ, ಅದರಿಂದ ಉಜ್ಜ್ವಲಾಯ ನಮಃ

20. ಜ್ವಾಲಾಮಾಲಾಸ್ವರೂಪಾಯ ನಮಃ

ರೂಪ - ಎಂದರೆ ಕಣ್ಣಿಗೆ ಕಾಣಿಸುವುದು, ರೂಪವು ಪಂಚ ಮಹಾಭೂತಗಳಾದ ಪೃಥಿವಿ, ಆಪಃ, ತೇಜ, ವಾಯು, ಆಕಾಶಗಳಲ್ಲೊಂದಾದ ತೇಜಸ್ಸಿನ ತನ್ಮಾತ್ರೆ, ಈ ಗುಣವನ್ನು ಪಂಚೇಂದ್ರಿಯಗಳಲ್ಲಿ ಒಂದಾದ ಕಣ್ಣು ಮನಸ್ಸಿಗೆ ಮತ್ತು ಬುದ್ಧಿಗೆ ಪ್ರಕಟಮಾಡುತ್ತದೆ.

ಸ್ವ ಎಂದರೆ ತನ್ನದು, ರೂಪ ಎಂದರೆ ಕಾಣುವ ಆಕಾರ, ಸ್ವರೂಪ ಎಂದರೆ ತನ್ನದೇ ಆದ ರೂಪ (ಆಕಾರ).

ಜ್ವಾಲಾ ಎಂದರೆ ಅಗ್ನಿಯ ಉರಿಯುವಿಕೆ. ಮಾಲಾ ಎಂದರೆ ಹಾರ.

*ಅಂದರೆ ಹಾರದ ರೀತಿ ಉರಿಯುವ ಅಗ್ನಿಯ ಜ್ವಾಲೆ, ಈ ತನ್ನದೇ ಆದ ವಿಶೇಷ ರೂಪ ಹೊಂದಿರುವ ಅಗ್ನಿ. ಅಂತಹ ರೀತಿ ಪ್ರಕಟವಾದ ಅಗ್ನಿದೇವನು ಸಾಕ್ಷಾತ್ ಪರಮಾತ್ಮನೇ. ಇವನಿಗೆ ನಮಸ್ಕಾರಗಳು.*

ಅಗ್ನಿಯಲ್ಲಿ ಅನೇಕ ವಿಧ, ಬಡಬಾಗ್ನಿ, ದಾವಾಗ್ನಿ, ಕಾಡು ಕಿಚ್ಚು (ಕ್ರೂರವಾದದು), ಸೌಮ್ಯ ಕಾರ್ಯವನ್ನು ಮಾಡುವ ಹವ್ಯವಾಹನ, ಜಠರಾಗ್ನಿ, ಮುಂತಾದವುಗಳು. ಒಂದೊಂದೂ ಒಂದೊಂದು ರೀತಿಯಲ್ಲಿ ವಿಶೇಷ ಗುಣಗಳನ್ನು ಹೊಂದಿರುತ್ತದೆ. ಅದರಲ್ಲಿ ಜ್ವಾಲಾಮಾಲಾ ಸ್ವರೂಪದ ಅಗ್ನಿಯೂ ಒಂದು.

ಅಥವಾ ಪರಮಾತ್ಮನ ಯಾವ ರೂಪ ನೋಡಿದರೂ ಯಾವ ಅವಯವ ನೋಡಿದರೂ ಅದರಲ್ಲಿ ಕಂಡು ಬರುವ ಪ್ರಕಾಶ ಅಥವಾ ಸ್ವಯಂಪ್ರಭೆ, ಬೆಳಕೂ, ಹೊಳಪೂ ವಿಶೇಷವಾಗಿರುತ್ತದೆ. ಇವು ದೇಹದ ಎಲ್ಲ ಭಾಗಗಳದ್ದನ್ನು ಏಕಕಾಲದಲ್ಲಿ ಊಹಿಸಿಕೊಂಡರೆ ಅಥವಾ ನೋಡಿದರೆ ಎಲ್ಲವೂ ಮಾಲೆಯು ರೂಪದಲ್ಲಿ ವಿಶೇಷವಾಗಿ ಹಾರ ಮಾಡಿದಂತೆ ತೋರುತ್ತದೆ. ಇದೂ ಒಂದು ವಿಶೇಷವಾದ ಭಗವಂತನ ಗುಣ. ಅದರಿಂದ ಜ್ವಾಲಾಮಾಲಾ ಸ್ವರೂಪನಿಗ ನಮಸ್ಕಾರ.

ಅಥವಾ ಇದೇ ರೀತಿ ಜೀವಾತ್ಮವು ದೇಹದಲ್ಲಿರುವಾಗ ತನ್ನ ಸೂಕ್ಷ್ಮ ದೇಹದಲ್ಲಿರುವ ಮನೋ ಬುದ್ಧಿ, ಅಹಂಕಾರ, ಚಿತ್ತ, ಹತ್ತು ಇಂದ್ರಿಯಗಳು,

ಸತ್ವರಜಸ್ತಮೋ ಗುಣಗಳು, ದೇಹ ಎಲ್ಲವೂ ಸೇರಿದರೆ ಕೋಲಾಹಲ ರೀತಿಯಲ್ಲಿ ಒಂದಕ್ಕೊಂದು ಪ್ರಕಟವಾಗಿರುತ್ತದೆ. ಏನೋ ಒಂದು ತರಹ ಸಮರದೋಪಾದಿಯಲ್ಲಿ ನಡೆಯುತ್ತವೆ. ಅದು ಜ್ವಾಲಾಮಾಲಾ ಸ್ವರೂಪ. (ಅಗ್ನಿ) ಅಥವಾ ಪರಸ್ಪರ ಹೊಂದಿಕೊಂಡಿರುವಾಗ ಇನ್ನೊಂದು ತರಹ ಶಾಂತಿಯಿಂದ ವರ್ತಿಸುತ್ತದೆ. ಇದು ಬೇರೆ ತರಹದ ಮಾಲಾ ಸ್ವರೂಪ (ಜ್ವಾಲಾಮಾಲಾ ಸ್ವರೂಪ) (ಸೌಮ್ಯ ಮತ್ತು ಶಾಂತ ಮತ್ತು ಸಮರಸಭಾವ). ಸದ್ಯಕ್ಕೆ. ನರಸಿಂಹನ ಸಿಂಹದ ಮುಖ, ನರ ಶರೀರ, ಹಿರಣ್ಯಕಶಿಪುವಿನ ಕರುಳಿನ ಮಾಲೆ ಹಾಕಿಕೊಂಡಿರುವ ದೃಷ್ಯವೇ ಜ್ವಾಲಾಮಾಲಾಸ್ವರೂಪ. ಅವನಿಗೆ ನಮಸ್ಕಾರಗಳು.

ಅದೇ ನರಸಿಂಹನು ಶಾಂತ ಭಾವದಿಂದ ಲಕ್ಷ್ಮಿಯನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಒಂದು ಕೈಯಿಂದ ಚಕ್ರ, ಇನ್ನೊಂದರಲ್ಲಿ ಶಂಖ, ಮತ್ತೊಂದರಲ್ಲಿ ಲಕ್ಷ್ಮಿಯನ್ನು ಹಿಡಿದುಕೊಂಡು ಅಭಯ ಮತ್ತು ನಾಲ್ಕನೆಯದರಲ್ಲಿ ವರದ ಹಸ್ತವನ್ನು ಕಿರೀಟ ಹಾರ ಕೇಯೂರ ಕುಂಡಲಾಲಂಕೃತನಾಗಿ ಸೌಮ್ಯ ಸ್ವರೂಪವೂ ಪ್ರಕಾಶ ತೇಜಸ್ಸಿನಿಂದ ಹೊಳೆಯುವುದರಿಂದ ಅದೂ ಜ್ವಾಲಾಮಾಲಾ ಸ್ವರೂಪವೇ. ಅದಕ್ಕೆ ಅವನಿಗೆ ನಮಸ್ಕಾರಗಳು.

1. ಜ್ವಾಲಸಿಂಹಾಯ ನಮಃ

ಜ್ವಾಲ - ಹೊಳೆಯುವ, ತೇಜಸ್ಸಿನಿಂದ ಪ್ರಕಾಶಮಾನವಾದ ಸಿಂಹ - ನರಸಿಂಹನಿಗೆ ನಮಸ್ಕಾರಗಳು.

ಆತ್ಮನ ಪ್ರಕಾಶವು ಅಂಧಕಾರಮಯವಾದ ರಜಸ್ತಮೋ ಗುಣಗಳಿಂದ, ಅಜ್ಞಾನದಿಂದ ಬಿಡಲ್ಪಟ್ಟಾಗ, ದೇಹವು ಪ್ರಕಾಶದಿಂದ ಹೊಳೆಯುತ್ತದೆ. ಅಂತಹವನು ಸತ್ಪುರುಷ, ಸಾಧು, ಸಂತ, ಸಿದ್ಧನಾಗಿ ಪ್ರಪಂಚಕ್ಕೆ ಸಾತ್ವಿಕರಿಗೆ ಬೇಕಾದವನಾಗುತ್ತಾನೆ. ಇಂತಹವನು ಮಹಾತ್ಮ, ಸತ್ಪುರುಷನೆಂದು ಕರೆಯಲ್ಪಡುತ್ತಾನೆ. ತಾನು ಮುಟ್ಟುವ ಸ್ಥಳವೆಲ್ಲ ಪವಿತ್ರವಾಗುತ್ತದೆ. ಇವನ ಸಂಪರ್ಕದಲ್ಲಿರುವವನು ಪಾವನನಾಗುತ್ತಾನೆ. ಅನೇಕ ಜೀವಿಗಳ ಉದ್ಧಾರಕ್ಕೆ ಕಾರಣನಾಗಿ ಭಗವಂತನ ರೂಪ, ಅವತಾರದಂತೆ ತಿಳಿಯಲ್ಪಡುತ್ತಾನೆ.

ಅಂತಹ ಆತ್ಮವು ಮುಕ್ತವಾಗಿ ಸಂಸಾರದಿಂದ ಮುಕ್ತವಾಗಿರುತ್ತದೆ. ತಾನು ಮುಕ್ತನಾಗಿ ಇತರರನ್ನು ಮುಕ್ತಿಪಡುವಂತೆ ಮಾಡುವ ಈ ಆತ್ಮವು ಬಹಳ ಅಪರೂಪ. ಲಕ್ಷ, ಕೋಟಿಗಳಿಗೊಂದು ಜೀವಿ ಇದ್ದರೂ ಇರಬಹುದು. ಆದರೆ ಅಷ್ಟೇ ಸಂಖ್ಯೆಯ ಜೀವಿಗಳ ಉದ್ಧಾರಕ್ಕೆ ಕಾರಣರಾಗುತ್ತಾರೆ.

ಇಂತಹ ಜೀವಿ, ಆತ್ಮಕ್ಕೆ ಕೋಟಿ ಕೋಟಿ ನಮಸ್ಕಾರಗಳು.

**22. ಜ್ವಾಲಿನೇ ನಮಃ**

ತೇಜಸ್ಸುಳ್ಳವನಿಗೆ ನಮಸ್ಕಾರಗಳು.

ಪರಮಾತ್ಮನು ಯಾವ ರೂಪ ತಾಳಿದರೂ ತನ್ನ ತೇಜಸ್ಸಿನಿಂದ ಭಕ್ತರನ್ನು ಎಳೆಯುತ್ತಾನೆ. ಭಕ್ತರ ಹೃದಯವನ್ನು ಅತಿ ಶೀಘ್ರವಾಗಿ ತನ್ನ ಕಡೆಗೆ ಆಕರ್ಷಿಸುತ್ತಾನೆ. ಇಂತಹ ತೇಜಸ್ವಿಯಾದವನಿಗೆ ನಮಸ್ಕಾರಗಳು.

ಸತ್ಪುರುಷರು, ಸಾಧು, ಸಂತರು ತಮ್ಮ ಪ್ರತಿಭೆಯಿಂದ ಯಾರನ್ನು ಬೇಕಾದರೂ ತಮ್ಮೆಡೆಗೆ ಎಳೆಯುತ್ತಾರೆ ಮತ್ತು ಎಲ್ಲರನ್ನು ಭಗವಂತನೆಡೆಗೆ ಎಳೆಯುತ್ತಾರೆ.

*ನಮೋ ಜ್ವಾಲಾಯ ಕಾಲಾಯ ಕಾಲಮೂರ್ತಿಧರಾಯ ಚ।*
*ಕಾಲಾಂತಕಾಯ ಕಲ್ಪಾಯ ಕಾಲಾತ್ಮಕಲನಾಯ ಚ ॥20॥*
*(123 - 128)*

**23. ಜ್ವಾಲಾಯ ನಮಃ**

ಜ್ವಾಲಾಯ ನಮಃ - ತೇಜಸ್ಸೇ ಇವನು, ಅಗ್ನಿಯೇ ಇವನು. ಅಗ್ನಿಯು ಪರಮಾತ್ಮನರೂಪ, ಪರಮಾತ್ಮನುಅಗ್ನಿಯರೂಪ, ಆದರಿಂದ ಜ್ವಾಲಾಯನಮಃ

ಅಗ್ನಿಯು ತನ್ನನ್ನೇ ಕೋಪದ ರೂಪದಲ್ಲಿ ಬದಲಿಸಿಕೊಳ್ಳುತ್ತಾನೆ ಕೋಪದ ಉಗ್ರತ್ವ ಕ್ರೋಧ. ಅರಿಷಡ್ವರ್ಗ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳಲ್ಲಿ ಒಂದು. ಇವನ್ನು ಪರಮಾತ್ಮನನ್ನು ಹೊಂದುವ ಪರಮ ಏಕೈಕ ಭಕ್ತನಾಗುವ, ಸಂತನಾಗುವ, ಸಿದ್ಧನಾಗುವ ಭಾವನೆಯಲ್ಲಿ ಈ ಗುಣಗಳನ್ನು ಅಳವಡಿಸಿಕೊಂಡರೆ ಸಾರ್ಥಕವಾಗಿ ಮುಕ್ತಿ, ಶಾಂತಿಯನ್ನು ಪಡೆಯಬಹುದು. ಅದೇ ಪ್ರಾಪಂಚಿಕ ವಸ್ತುಗಳಲ್ಲಿ ಇವನ್ನು ಬಳಸಿಕೊಂಡರೆ ನಾಶವಾಗುತ್ತೇವೆ. ಆದರಿಂದ ಇಲ್ಲಿ ಅವುಗಳನ್ನು ತ್ಯಜಿಸಬೇಕು, ಮಿತಿಯಲ್ಲಿ ಇದ್ದಷ್ಟು ಜೀವಿ - ದೇಹಿಗೆ ಕ್ಷೇಮ. ದೇವರ ವಿಚಾರವಾದಾಗ ಆತ್ಮೀಯವಾಗಿ ನಮಸ್ಕರಿಸುತ್ತೇವೆ, ಪ್ರಾಪಂಚಿಕವಾದಾಗ ದೂರವಿಡಲು ನಮಸ್ಕರಿಸುತ್ತೇವೆ. ಅಷ್ಟೆ. ಮನೋಭಾವನೆ ಬುದ್ಧಿಯ ವಿವೇಚನೆಯೇ ಸ್ಥಿತಿಯನ್ನು ನಿರ್ಧರಿಸುತ್ತದೆ.

**24. ಕಾಲಾಯ ನಮಃ**

ಕಾಲಾಯ - ಕಾಲದೇವನಿಗೆ ನಮಸ್ಕಾರಗಳು.

ಪ್ರಪಂಚವನ್ನು ಸೃಷ್ಟಿಯಿಂದ ಹಿಡಿದು ಲಯವಾಗುವವರೆಗೂ, ನಂತರ ಒಂದು ಲಯದ ಕ್ಷಣದಿಂದ ಹಿಡಿದು ಮುಂದಿನ ಸೃಷ್ಟಿಯವರೆಗೂ ಹೀಗೆ ಭಗವಂತನ ಸ್ವೇಚ್ಛೆಯಿಂದ ಈ ಕಾರ್ಯವು ತಾನಾಗಿಯೇ ಪ್ರಾರಂಭವಾಗಿ ತಾನಾಗಿಯೇ ಶ್ರೀಮನ್ಮಹಾವಿಷ್ಣುವಿನ ಆಜ್ಞೆಯಿಂದ ಪ್ರವರ್ತಮಾನವಾಗಿ

ಸಮಯವು ಗಣಿಸಲ್ಪಡುತ್ತದೆ. ಅಂದರೆ ಕಾಲವು ಅನಾದಿ - ಪ್ರಾರಂಭವಿಲ್ಲದ್ದು. ಅನಂತ - ಕೊನೆಯಿಲ್ಲದ್ದು.

ಕಾಲ - ಸಮಯವು ಭಗವಂತನ ಒಂದು ಮಹದ್ರೂಪ. ಇಂತಹ ಕಾಲದೇವನಿಗೆ ನಮಸ್ಕಾರಗಳು.

ಕಾಲವಾಗುವುದು - ಅಂದರೆ ಜೀವವು ದೇಹವನ್ನು ತ್ಯಜಿಸುವುದು, ದೇಹವನ್ನು ಪಂಚಭೂತಗಳಲ್ಲಿ ಲೀನ ಮಾಡುವುದು, ಜೀವವು ತನ್ನ ಕರ್ಮದಂತೆ ಮುಂದಿನ ದೇಹವನ್ನು ಸೇರುವುದು, ಎಲ್ಲ ಕರ್ಮಗಳೂ ಶೂನ್ಯವಾದಾಗ ಪರಮಾತ್ಮನಲ್ಲಿ ಲೀನವಾಗುವುದು. ಇದೇ ಪರಮ ಗುರಿ. ಒಂದು ರೀತಿಯಲ್ಲಿ ಜೀವಿಯು ಕಾಲದೇವನನ್ನು ಬಿಟ್ಟು ಪರಮಾತ್ಮನನ್ನು ಸೇರುವುದು, ಅಲ್ಲಿಗೆ ಐಕ್ಯವಾಗುತ್ತದೆ.

ಕಾಲದೇವನ ಪ್ರತ್ಯಕ್ಷ ಉದಾಹರಣೆ ಎಂದರೆ, ಶ್ರೀರಾಮಚಂದ್ರನಿಗೆ ಬ್ರಹ್ಮದೇವನ ಆಜ್ಞೆಯ ಪ್ರಕಾರ ಋಷಿಯ ರೂಪದಲ್ಲಿ ಬಂದು ಅವತಾರ ಸಮಾಪ್ತಿಮಾಡುವ ಕಾಲಬಂದಿದೆ ಎಂದು ಎಚ್ಚರಿಸುತ್ತಾನೆ ಕಾಲದೇವ.

ಕಾಲದೇವ - ಎಂದರೆ ಯಮಧರ್ಮರಾಯ.

ತನ್ನ ಯಮಪಾಶದಿಂದ ಸಕಲ ಜೀವಿಗಳನ್ನು ದೇಹದಿಂದ ಬೇರ್ಪಡಿಸಿ ಅವರವರ ಕರ್ಮಕ್ಕೆ ತಕ್ಕಂತೆ ಶಿಕ್ಷೆಯನ್ನು ವಿಧಿಸುವವನು ಯಮಧರ್ಮರಾಯ.

ವಿಚಿತ್ರವೆಂದರೆ ಈ ಕಾಲಮಾನದ ಅನಾದಿಯಿಂದ ಅನಂತದವರೆಗೆ ಎಲ್ಲ ಜೀವಿಗಳು ತಮ್ಮ ತಮ್ಮ ಕರ್ಮಾನುಸಾರ ಅನೇಕ ಫಲಗಳನ್ನು ಅನುಭವಿಸಿ ಮತ್ತೆ ಮತ್ತೆ ದೇಹಗಳನ್ನು ಪಡೆಯುತ್ತಲೇ ಇರುತ್ತವೆ. ಇದರಿಂದ ಆದಿಯಾಗಲೀ ಅಂತವಾಗಲೀ ಇಲ್ಲ. ಇಂತಹ ವಿಚಿತ್ರ ಸೃಷ್ಟಿಯು ಕಾಲದಗಣನೆಯೆಂಬ ಒಂದು ಸೂತ್ರದ ಆಧಾರದ ಮೇಲೆ ನಡೆಯುತ್ತಿದೆ. ಇಂತಹ ಕಾಲ ದೇವನಿಗೆ ನಮಸ್ಕಾರಗಳು.

## 25. ಕಾಲಮೂರ್ತಿಧರಾಯ ನಮಃ

ಕಾಲ - ಸಮಯ, ಸಮಯದ ಮೂರ್ತಿ ಅಂದರೆ ರೂಪ. ಅದನ್ನು ಧರಿಸಿರುವವನು ಮಹಾವಿಷ್ಣು. ಅಂತಹ ಕಾಲಮೂರ್ತಿಧರನಿಗೆ ನಮಸ್ಕಾರಗಳು.

ಇವನೇ ಸೃಷ್ಟಿಗೆ ಪ್ರಪಂಚದ ಆಗುಹೋಗುಗಳಿಗೆ ಅವುಗಳ ಎಣಿಕೆಗೆ ಸಮಯ ಪ್ರಜ್ಞೆಗೆ ಕಾರಣಕರ್ತ ಆಧಾರ.

ಇವನನ್ನು ಅತಿ ಸೂಕ್ಷ್ಮವಾದ ಅಣುವಿನಿಂದ ಎಣಿಸುವುದನ್ನು ಪ್ರಾರಂಭಿಸಿ ಮಾನುಷ ಸೌರಮಾನ ಚಂದ್ರಮಾನ ಸಂವತ್ಸರಗಳು, ಯುಗಗಳು, ಬ್ರಹ್ಮನ ಅಹೋರಾತ್ರಿಗಳು, ಆಯುಸ್ಸು, ಕಲ್ಪಗಳು, ಮುಂತಾಗಿ ಗಣನಾ ಲೋಕದಲ್ಲಿ ನಮ್ಮನ್ನೆಳೆದು ಎಣಿಕೆಯಲ್ಲಿ ವ್ಯೈ ಮರೆಯುವಂತೆ ಮಾಡಿ ಮಹಾವಿಷ್ಣುವಿನ ಕಣ್ಣುಮುಚ್ಚಿ ಕಣ್ಣು ತೆಗೆಯುವ ಸಮಯಕ್ಕೆ ಹೋಲಿಸಿ ನಮ್ಮನ್ನು ಭೂಲೋಕದ

ಮಾನವ ಗಣನೆಯಲ್ಲಿ ಬೀಳಿಸಿದರೆ ಏನಾಗುತ್ತದೆ. ಪ್ರಜ್ಞೆ ತಿರುಗಿ ಬೀಳುತ್ತದೆ. ಇಂತಹ ವಿಚಿತ್ರ ಗುಣವುಳ್ಳ ಆ ''ಮಹಾ ಕಾಲಮೂರ್ತಿಧರನಾದ ಶ್ರೀಮನ್ಮಹಾವಿಷ್ಣುವಿಗೆ'' ಕೋಟಿ ಕೋಟಿ ನಮಸ್ಕಾರಗಳು.

ಅಂದರೆ ನಮ್ಮ ಮನಸ್ಸಿನಲ್ಲಿರುವ ಈ ಮಹಾಸ್ಥಿತಿಯನ್ನು ಕ್ಷಣಮಾತ್ರದಲ್ಲಿ ಶೂನ್ಯ ಮಾಡುತ್ತದೆ, ಈ ಮಹಾಕಾಲನ ಗಣನೆ.

126. ಕಾಲಾಂತಕಾಯ ನಮಃ

ಜೀವಿಗಳ ಜೀವನದ ಆಯುಸ್ಸನ್ನು ಅಂದರೆ ತತ್ಕಾಲಿಕ ದೇಹ ಧಾರಣೆಯ ಸಮಯದಿಂದ ದೇಹ ವಿಸರ್ಜನೆಯ ಸಮಯ ಅಂತರದ ಸಮಯವನ್ನು ನಿರ್ಧರಿಸುವ ಕಾಲ - ಅಂತಕವನಿಗೆ ನಮಸ್ಕಾರಗಳು.

ಯಮಧರ್ಮರಾಯನನ್ನು ಅಂತಕನು ಎನ್ನುತ್ತೇವೆ, ಇವನು ಮಹಾವಿಷ್ಣುವಿನ ಒಂದು ರೂಪ, ಧರ್ಮದೇವತೆಯ ಪರಿಪಾಲಕ.

ಈ ಅಂತವನ್ನು ಸಾವು ಅನ್ನುತ್ತೇವೆ.

ಯಮನನ್ನು ಮೃತ್ಯುದೇವತೆ, ಕಾಲದೇವ ಎಂದು ಹೇಳುತ್ತೇವೆ.

127. ಕಲ್ಪಾಯ ನಮಃ

ಕಲ್ಪ - ಸೃಷ್ಟಿಯಲ್ಲಿ ಬೇರೆ ಬೇರೆ ಭಾಗಗಳನ್ನು ಕಲ್ಪಗಳೆಂದು ಹೇಳುತ್ತೇವೆ.

ಬ್ರಹ್ಮನಿತ್ಯದ ''ಹಗಲು ರಾತ್ರಿ''ಯು ಒಂದು ದಿನಕ್ಕೆ ಹಗಲಿನಲ್ಲಿ ಸೃಷ್ಟಿ, ರಾತಿಯಲ್ಲಿ ಪ್ರಳಯ. ಈ ಪ್ರಳಯಕ್ಕೆ ನಿತ್ಯ, ನೈಮಿತ್ತಿಕ ಪ್ರಳಯ ಎಂದು ಕರೆಯುತ್ತಾರೆ.

ಇದರಲ್ಲಿ ಜೀವಿಗಳು ನಾಶ ಹೊಂದುವುದಿಲ್ಲ ಸುಪ್ತವಾಗುತ್ತವೆ.

ಆದರೆ ಬ್ರಹ್ಮನ ಆಯುಸ್ಸು ಪೂರ್ಣವಾದರೆ ಒಂದು ಮಹಾಪ್ರಳಯ ಎಂದಾಗುತ್ತದೆ. ಆಗ ಜೀವಿಗಳು ಪರಮಾತ್ಮನಲ್ಲಿ ಲೀನವಾಗಿ ಪುನಃ ಹೊರಬರುತ್ತವೆ.

ಒಂದು ಬ್ರಹ್ಮನ ಮೊದಲಿನಿಂದ ಕೊನೆಯವರೆಗೆ ಇರುವ ಸಮಯಕ್ಕೆ ಕಲ್ಪವೆಂದು ಹೆಸರು.

ಇಂತಹ ಕಲ್ಪವನ್ನು ಸೃಷ್ಟಿಸುವ ದೇವರಾದ ಮಹಾವಿಷ್ಣುವಿಗೆ ಕಲ್ಪನೆಂದೂ ಸಹ ಹೆಸರು. ಅಂತಹ ಕಲ್ಪನಿಗೆ ನಮಸ್ಕಾರಗಳು.

128. ಕಾಲಾತ್ಮಕಲನಾಯ ನಮಃ

ಕಾಲ - ಕಾಲ, ಆತ್ಮ - ಜೀವಿ, ಕಲನ - ಸೇರುವಿಕೆ, ಸಂಬಂಧ ಕಲ್ಪಿಸುವಿಕೆ. ಅಂತಹವನು ಈ ಕಾರ್ಯಮಾಡುವವನು ಶ್ರೀಮನ್ಮಹಾವಿಷ್ಣು. ಈ ಕಾಲಮಾನ, ಜೀವಿಗಳ ಮುಕ್ತಿಯವರೆಗೆ ಅಂದರೆ ಪರಮ ಪದವನ್ನು ಸೇರುವವರೆಗಿನ ಸಮಯ

- ಕಾಲ ಮತ್ತು ಆತ್ಮನ ಸಂಬಂಧದ ವಿಚಾರವಾಗಿ ತರ್ಕವು ನಮ್ಮ ಸಾಮಾನ್ಯ ಮನ ಬುದ್ಧಿಗಳ ಊಹೆಗೆ ಮಿತಿಮೀರಿದ್ದು. ಅದರಿಂದ ಈ ವಿಚಾರದಲ್ಲಿ ಆಳವಾಗಿ ಹೋಗಲು ಅಸಾಧ್ಯ. ಇದೇ ಸೃಷ್ಟಿಯ ವಿಚಿತ್ರ - ಪರಮಾತ್ಮನ ವಿಚಿತ್ರವಾದ ಇಚ್ಛೆ, ತನ್ನ ಇಚ್ಛಾ ಮಾತ್ರದಿಂದ ತನ್ನ ಲೀಲೆಗಾಗಿ ಈ ಪ್ರಪಂಚವನ್ನು ಸೃಷ್ಟಿಸಿ ಅದರ ಹೊರಗೂ ಒಳಗೂ ಇದ್ದರೂ ಇಲ್ಲದವನಂತೆ ಆಟಮಾಡಿ ತನ್ನಷ್ಟಕ್ಕೆ ತಾನೇ ಆನಂದ ಪಡುತ್ತಾನೆ. ಈ ಕಲ್ಪನೆ ನಮ್ಮ ಮನಸ್ಸಿಗೆ ಬಂದಾಗ ಅದರ ಸವಿಯನ್ನುಂಡಾಗ ''ಈ ಸಂಸಾರ ಬಂಧನದ ತಾಪತ್ರಯಗಳ ಯೋಚನೆಯೇ ಸೊನ್ನೆಯಾಗಿ ಬಿಡುತ್ತದೆ'' ಇದೇ ಆನಂದ, ಚಿತ್ತಕ್ಕೆ ಆನಂದ, ಸತ್ ಚಿತ್ತಕ್ಕೆ ಆನಂದ ''ಸಚ್ಚಿದಾನಂದ''. ಈ ಯೋಚನೆಯಲ್ಲಿ ಈ ನಮ್ಮ ಮನ ಇದ್ದಷ್ಟೂ ಕಾಲವೂ ಸಂಸಾರ ಬಂಧನದಲ್ಲಿ ಮುಕ್ತಿಯನ್ನನ್ನುಭವಿಸುತ್ತೇವೆ. ಈ ಸಮಯಗಳು ಪದೇ ಪದೇ ಬರಲಿ ಅಥವಾ ಬೇಗ ಬೇಗ ಬರಲೀ. ಬೇಗ ಬೇಗ ಉದ್ದುದ್ದವಾಗಿ ಬರಲಿ ಎಂದು ಆಶಿಸುವುದೇ ಪರಮಗುರಿ. ಈ ವಿವೇಕವೂ ಪರಮಾತ್ಮನ ಕೃಪೆಯಿಂದ ಸಂಸ್ಕಾರದಿಂದ ಬರಬೇಕೇ ಹೊರತು ಸುಮ್ಮನೆ ಆಶಿಸಿದರೆ ಬರಲ್ಲ.

ಅಂತಹ ಕಾಲಾತ್ಮಕಲನನಾದವನಿಗೆ ನಮಸ್ಕಾರಗಳು.

*ಕಾಲಚಕ್ರಾಯ ಚಕ್ರಾಯ ಸಟಾಚಕ್ರಾಯ ಚಕ್ರಿಣೇ ।*
*ಅಕ್ರೂರಾಯ ಕೃತಾಂತಾಯ ವಿಕ್ರಮಾಯ ಕ್ರಮಾಯ ಚ ।।21।।*
*(129-136)*

9. **ಕಾಲಚಕ್ರಾಯ ನಮಃ**

ಕಾಲ - ಸಮಯ, ಚಕ್ರ - ಚಕ್ರ.

ಸೃಷ್ಟಿಯಿಂದ ಪ್ರಳಯ, ಮತ್ತೆ ಸೃಷ್ಟಿಯಿಂದ ಪ್ರಳಯ ಅಥವಾ ಸೃಷ್ಟಿಯಿಂದ ಪ್ರಳಯ, ಪ್ರಳಯದ ನಂತರ ಸೃಷ್ಟಿ, ಇದರ ನಂತರ ಪ್ರಳಯ, ಹೀಗೆ ಜಗತ್ತು ನಡೆಯುತ್ತಿದೆ. ಬ್ರಹ್ಮನ ಪ್ರತಿಯೊಂದು ದಿವಸವೂ (ಅಂದರೆ ಒಂದು ಹಗಲು ಒಂದು ರಾತ್ರಿ) ಸೃಷ್ಟಿ, ಪ್ರಳಯದಿಂದ ಕೂಡಿರುತ್ತದೆ. ಇದು ಒಂದು ಚಕ್ರ. ಮತ್ತೆ ಮತ್ತೆ ನಡೆಯುತ್ತದೆ. ಇದು ಬ್ರಹ್ಮಮಾನದ ಕಾಲಚಕ್ರ.

ಇದೇ ಬ್ರಹ್ಮನ ದಿನವನ್ನು ಮನುಷ್ಯರ ದಿನಕ್ಕೆ ಹೋಲಿಸಿದರೆ ಒಂದು ದಿನ (ಹಗಲು ಮತ್ತು ರಾತ್ರಿಯೂ) ಸಹ ಮತ್ತೆ ಮತ್ತೆ ಪುನರಾವರ್ತಿಯಾಗುತ್ತಿದೆ. ಅಂದರೆ ಇದೂ ಒಂದು ಮನುಷ್ಯಮಾನದ ಕಾಲಚಕ್ರ.

ಹಾಗೇಯೆ ಪಿತೃ ದೇವತೆಗಳ ಒಂದು ದಿನಕ್ಕೆ ಮನುಷ್ಯರ ಒಂದು ವರ್ಷ. ಇದು ಪಿತೃಮಾನದ ಕಾಲಚಕ್ರ.

ಇವೆಲ್ಲ ಒಂದರೊಳಗೊಂದು ಸೇರಿ ವಿಚಿತ್ರವಾಗಿ ನಡೆಯುತ್ತೆ. ಎಲ್ಲವೂ ಆ ಪರಮಾತ್ಮನ ಇಚ್ಛೆಯಂತೆ ನಡೆಯುತ್ತದೆ.

ಜೀವಿಯ ನಡೆಯ ಪ್ರಕಾರ ಕಲ್ಪಾದಿಯಲ್ಲಿ ಪರಮಾತ್ಮನಿಂದ ಹೊರಬಂದ ಜೀವಿಯು ಮತ್ತೆ ಅವನನ್ನು ಕಲ್ಪಾಂತದಲ್ಲಿ ಸೇರುವವರೆಗೆ ಜೀವ ಕೋಟಿಯು ಆಯುಃ ಪ್ರಮಾಣದಂತೆ ಅನೇಕ ದೇಹಗಳನ್ನು ಸ್ವೀಕರಿಸಿ ಕರ್ಮದ ಪ್ರಕಾರ ಮತ್ತೆ ಬಿಟ್ಟು ಹೊಸ ಹೊಸ ಯೋನಿಗಳಲ್ಲಿ ಹುಟ್ಟಿ, ಹುಟ್ಟು ಸಾವುಗಳ ಚಕ್ರದಲ್ಲಿ ನಡೆಯುತ್ತದೆ. ಇದು ಜೀವಮಾನದ ಕಾಲಚಕ್ರ.

ಒಂದು ದೇಹದಲ್ಲಿರುವಾಗ ಜೀವಿಯು ಸಂಸಾರ ಸಾಗರದ ದ್ವಂದ್ವಗಳಲ್ಲಿ ಅಂದರೆ ಸುಖ ದುಃಖ, ಲಾಭ ನಷ್ಟ, ಜಯ ಅಪಜಯ, ಅವುಗಳ ಚಕ್ರದಲ್ಲಿ ತೇಲಿ ಮುಳುಗಿ ತನ್ನ ಕರ್ಮ ಫಲದಂತೆ ದೇಹಗಳನ್ನು ಪಡೆದು, ವರ್ಜಿಸಿ, ಮತ್ತೆ ಪಡೆದು ವರ್ಜಿಸುತ್ತ ನಡೆದು ಹೋಗುತ್ತದೆ. ಇದು ದ್ವಂದ್ವ ಮಾನದ ಚಕ್ರ.

ಇಂತಹ ವಿಚಿತ್ರ ರೀತಿಯ ಎಲ್ಲ ಚಕ್ರಗಳು ಸಮಯದ ಗಣನೆಯಲ್ಲಿಯೇ ಇರುವುದರಿಂದ ಕಾಲಚಕ್ರ ಎಂದೇ ಕರೆಯಲ್ಪಟ್ಟಿದೆ. ಈ ಕಾಲಚಕ್ರವೇ ಆ ವಿಶೇಷ ಪರಮಾತ್ಮ, ಅವನಿಗೆ ಕೋಟಿ ಕೋಟಿ ನಮಸ್ಕಾರಗಳು.

ಅವನ ಸಂತೋಷಕ್ಕಾಗಿ ಈ ರೀತಿಯ ಅನೇಕ ಚಕ್ರಗಳನ್ನು ಕಾಲಚಕ್ರದಲ್ಲಿ ಸಿಕ್ಕಿಸಿ ನಡೆಸುತ್ತಿರುವ ಪರಮಾತ್ಮನ ಶಕ್ತಿ, ಯುಕ್ತಿ, ಬಹಳ ವಿಸ್ಮಯಕಾರಿ, ಮಹತ್ತಾದ್ದು.

ಈ ವಿಚಿತ್ರ ಚಕ್ರದಲ್ಲಿ ಸಿಲುಕಿಕೊಂಡಿರುವ ನಾವು ಈ ತಾತ್ಕಾಲಿಕವಾಗಿ ಅರಿವಿರುವ, ತಾತ್ಕಾಲಿಕ ಜನ್ಮದ ಅರಿವಿರುವ ದೇಹ - ದೇಹಿ - ಸಂಬಂಧದಲ್ಲಿ ಇತರ ಜೀವಿಗಳ ಜೊತೆ ಸಂಪರ್ಕಕ್ಕೆ ಬಂದು ಈ ಚಕ್ರ - ಸಂಸಾರ ಸಾಗರದಲ್ಲಿ ಮುಳುಗಿ ನಮ್ಮ ನಮ್ಮ ಸ್ವಾರ್ಥಕ್ಕಾಗಿ ಹೊಡೆದಾಡುತ್ತ, ಪರಮಾತ್ಮನೆಡೆಗೆ ಬುದ್ಧಿ ಮನಸ್ಸನ್ನು ತಿರುಗಿಸಲು ಮರೆತಿರುತ್ತೇವೆ. ಈ ವಿಚಾರವನ್ನು ಯೋಚಿಸಿದರೂ ಅದೇ ಜ್ಞಾನ, ಕಾಲಜ್ಞಾನವಾಗಿ ಪರಿಣಮಿಸುತ್ತದೆ ಮತ್ತು ಮುಕ್ತಿ ಮಾರ್ಗಕ್ಕೆ ತಿರುಗುತ್ತದೆ. ಇದೂ ಸಹ ಸಂಸ್ಕಾರಬಲದಿಂದ, ದೈವ ಕೃಪೆಯಿಂದಲೇ ಹೊರತು ಸುಮ್ಮನೆ ಚಡಪಡಿಸುವುದರಿಂದ ಸಾಧ್ಯವಿಲ್ಲ. ಇದಕ್ಕೆಲ್ಲ ಮೊದಲು ಗುರು ಕೃಪೆಯೇ ಅವಶ್ಯ. ಎಂತಹ ವಿಚಿತ್ರ ವಿಚಾರ ಸರಣಿ ಅಲ್ಲವೇ?

ಇಂತಹ ಕಾಲಚಕ್ರ ಮಹಾತ್ಮನಾದ ಪರಮಾತ್ಮನಿಗೆ ಕೋಟಿ ಕೋಟಿ ನಮಸ್ಕಾರಗಳು.

30. ಚಕ್ರಾಯ ನಮಃ

ಚಕ್ರವನ್ನೇ ಆಯುಧವಾಗಿ ಹೊಂದಿರುವವನಿಗೆ ನಮಸ್ಕಾರಗಳು.

ಚಕ್ರದಲ್ಲಿಯೇ ನೆಲಸಿರುವವನು.

ಶಕ್ತಿರೂಪದಲ್ಲಿ ಚಕ್ರದಲ್ಲಿ ಅಡಗಿರುವವನು.

ಸೃಷ್ಟಿಯನ್ನೇ ಚಕ್ರಾಕಾರವಾಗಿ ಮಾಡಿರುವವನು.

ಸಂಸಾರವನ್ನು ಚಕ್ರರೂಪದಲ್ಲಿ ಮಾಡಿ ಅದರೊಳಗೆ ಜೀವಿಗಳನ್ನು ನೂಕಿ ಮಾಯೆಯಲ್ಲಿ ಸಿಲುಕಿಸಿರುವವನು.

**131. ಸಟಾಚಕ್ರಾಯ ನಮಃ**

ಅನೇಕ ಚಕ್ರಗಳನ್ನು ಹೊಂದಿರುವವನು.

ಆಗಾಗ್ಗೆ, ತನ್ನ ಚಕ್ರದ ದೃಷ್ಟಿಯಿಂದಲೇ ಶತ್ರುಗಳನ್ನು ಗೆಲ್ಲುವವನು, ಸಟಾಚಕ್ರನಿಗೆ ನಮಸ್ಕಾರಗಳು.

**132. ಚಕ್ರಿಣೇ ನಮಃ**

ಚಕ್ರವನ್ನೇ ಆಯುಧವನ್ನಾಗಿ ಹಿಡಿದಿರುವವನು.

ಸುದರ್ಶನ - ಒಳ್ಳೆಯ ದರ್ಶನವನ್ನು ಕೊಡುವಂಥ ಚಕ್ರವನ್ನು ಹಿಡಿದಿರುವವನು.

ಶತ್ರುಗಳು ಚಕ್ರಾಯುಧವನ್ನು ನೋಡಿದ ಕ್ಷಣದಿಂದಲೇ ಧೈರ್ಯವನ್ನು ಕಳೆದುಕೊಳ್ಳುವಂತೆ ಮಾಡುವ ಆಯುಧ. ಚಕ್ರಾಯುಧವನ್ನು ಹಿಡಿದಿರುವ ಚಕ್ರಿಗೆ ನಮಸ್ಕಾರಗಳು.

**133. ಅಕ್ರೂರಾಯ ನಮಃ**

ಕ್ರೂರ ಗುಣವಿಲ್ಲದವನು.

ಭಕ್ತರ ಕಡೆಗೆ ಕರುಣೆಯಿಂದ ನೋಡುವುದರಿಂದ ಮತ್ತು ಕ್ರೂರ ಗುಣವಿಲ್ಲದವನಾದ್ದರಿಂದ ಅಕ್ರೂರನೆಂದು ಹೆಸರು. ಅದರಿಂದ ಅಕ್ರೂರನಿಗೆ ನಮಸ್ಕಾರ.

ಶ್ರೀಕೃಷ್ಣನ ಪರಮ ಅಂತರಂಗ ಭಕ್ತನೊಬ್ಬನು ಅಕ್ರೂರ, ಅಕ್ರೂರನು ಶ್ರೀಕೃಷ್ಣನ ಭಕ್ತ. ಆದರೆ ಕಂಸನು ಕೃಷ್ಣ ಬಲರಾಮರನ್ನು ತನ್ನೊಡನೆ ಸೆಣಸಲು ಮತ್ತು ಹೇಗಾದರೂ ಕೃಷ್ಣನನ್ನು ಕೊಲ್ಲಲು ನಂದ ಗೋಪನ ಮನೆಯಿಂದ ಕರೆತರಲು ಕಳಿಸಿದ್ದನು. ಅಂತಹ ಪರಮ ಭಕ್ತನಾದ ಅಕ್ರೂರನಿಗೆ ನಮಸ್ಕಾರಗಳು.

**134. ಕೃತಾಂತಾಯ ನಮಃ**

ಕೃತ - ಮಾಡಲ್ಪಟ್ಟ ಕಾರ್ಯ, ಅಂತ - ಕೊನೆ.

ಯಾವ ಕಾರ್ಯವನ್ನು ಮಾಡಬೇಕೆಂದಿರುವನೋ ಅದನ್ನು ಕೊನೆಗೊಳಿಸುವವನು (ಪೂರ್ಣವಾಗಿ ಮಾಡುವವನು).

ಅಂದರೆ ಸಂಕಲ್ಪ ಮಾಡಿದ ಕಾರ್ಯವನ್ನು ನಡೆಸುವವನು.

ಸಾಮಾನ್ಯ ಜೀವಿಗಳ ಜೀವನದಲ್ಲಿ ಸಂಕಲ್ಪ ಮಾಡುತ್ತಿರುವುದೇ ಕೆಲಸ. ಒಂದರ ಮೇಲೊಂದು ಸಂಕಲ್ಪಗಳು ಬರುತ್ತವೆ, ಮಾಡಲ್ಪಡುತ್ತವೆ. ಆದರೆ ಆಶ್ಚರ್ಯವೆಂದರೆ ಒಂದು ಕಾರ್ಯಕ್ಕೆ ಸಂಕಲ್ಪ ಮಾಡಿದರೆ ಅದು ಮುಗಿಯುವುದರೊಳಗೆ ಅಥವಾ ಪ್ರಾರಂಭವಾಗುವುದರೊಳಗೆ ಅನೇಕ ಇತರ ಸಂಕಲ್ಪಗಳು ಬಂದು ಹಿಂದಿನದನ್ನು ನಾಶಮಾಡುತ್ತವೆ.

ಇದು ಪರಮಾತ್ಮನ ಸಂಕಲ್ಪವೇ ಮತ್ತು ಜೀವಿಗಳ ಮನಸ್ಸಿನಲ್ಲಿನ ಅಭಾವ ಶಕ್ತಿ, ಸ್ಥೈರ್ಯವಿಲ್ಲದಿರುವುದು.

ಪ್ರಪಂಚವನ್ನು ಸೃಷ್ಟಿಸಿ, ಲಯವನ್ನು ಮಾಡಿಯೇ ತೀರುವ ಸಂಕಲ್ಪವುಳ್ಳವನು. ಕಾಲಚಕ್ರದ ಅಧೀನದಲ್ಲಿ ಸೃಷ್ಟಿಯನ್ನು ಇರಿಸಿ, ತಾನು ನಿರ್ಲಿಪ್ತನಾಗಿರುವವನು.

**135.** ವಿಕ್ರಮಾಯ ನಮಃ

ಶಕ್ತಿವಂತನು.

ವಿ-ಕ್ರಮ - ವಿಶೇಷವಾಗಿ ಕ್ರಮಿಸವವನು,

ವಿಶೇಷವಾದ ರೀತಿಯಲ್ಲಿ ಕ್ರಮಿಸುವವನು.

**136.** ಕ್ರಮಾಯ ನಮಃ

ಕ್ರಮವಾಗಿ ಎಲ್ಲವನ್ನು ನಡೆಸುವವನು.

ಸದಾ ಕಾಲದಲ್ಲಿಯೂ ತನ್ನ ಸಂಕಲ್ಪದಂತೆ ಎಲ್ಲವನ್ನು ನಡೆಸುವವನು.

*ಕೃತಿನೇ ಕೃತ್ತಿವಾಸಾಯ ಕೃತಜ್ಞಾಯ ಕೃತಾತ್ಮನೇ ।*
*ಸಂಕ್ರಮಾಯ ಚ ಕೃದ್ಧಾಯ ಕ್ರಾಂತಲೋಕತ್ರಯಾಯ ಚ ॥22॥*

*(137-143)*

**137.** ಕೃತಿನೇ ನಮಃ

ಕಾರ್ಯಗಳನ್ನು ಮಾಡುವವನು ಕರ್ತೃ, ಮಾಡಿದ ಕಾರ್ಯ ಕೃತಿ, ಮಾಡಲ್ಪಟ್ಟ ಕಾರ್ಯವೂ ಕೃತಿಯೇ.

ಸತ್ಕಾರ್ಯಕ್ಕೆ ಸತ್ಕೃತಿ ಎಂದು ಹೆಸರು ದುಷ್ಕಾರ್ಯವು ದುಷ್ಕೃತಿ.

ಪ್ರಪಂಚವು ಪರಮಾತ್ಮನ ಸೃಷ್ಟಿ, ಇದಕ್ಕೆ ಕೃತಿ ಎನ್ನಬಹುದು.

ಸೃಷ್ಟಿಯು ಪರಮಾತ್ಮನ ರೂಪವೇ.

ಜಗತ್ತನ್ನು ಸೃಷ್ಟಿಸಿ ಅದರೊಳಗೆ ಅವನೇ ಪ್ರವೇಶಿಸಿದನು. ಅದರಿಂದ ಅದೂ ಅವನೆ - ಅದರಿಂದ ಅವನಿಗೆ ಕೃತಿ ಎಂದು ಹೆಸರು ಕೃತಿನೇ ನಮಃ

ಜೀವವು ದೇಹವನ್ನು ಸೇರಿ ಮನ ಬುದ್ಧಿಯ ಸಹಾಯದಿಂದ ಅನೇಕ

ಳನ್ನು ಮಾಡುತ್ತದೆ, ಅದರಿಂದ ಜೀವವು ತನ್ನ ಸಂಕಲ್ಪಕ್ಕನುಗುಣವಾಗಿ
ುತ್ತದೆ. ಇದೂ ಒಂದು ಪರಮಾತ್ಮನ ಅಂಶವಾದ್ದರಿಂದ ಕೃತಿನೇ ನಮಃ
ಾಹುದು.

ರಮಾತ್ಮನೂ ಜೀವಾತ್ಮನೂ ಸಮಾನವಾದ್ದರಿಂದ ಎರಡನ್ನೂ ''ಕೃತಿ''
ಾಹುದು.

ತ್ತಿವಾಸಾಯ ನಮಃ

ತಿಯಲ್ಲಿಯೇ ತಾನು ವಾಸಮಾಡುವುದರಿಂದ ಕೃತ್ತಿವಾಸನೆಂದು ಹೆಸರು.
ಥವಾ ಕೃತಿಯನ್ನೇ ತನ್ನ ವಾಸಸ್ಥಾನವಾಗಿ ಅಥವಾ ಅಂಬರ (ಬಟ್ಟೆ)ಯಾಗಿ
ಕೊಂಡಿರುವವನು.

ೇಕ ನಾಮಗಳಲ್ಲಿ ಪರಮಾತ್ಮನನ್ನೂ ಜೀವಾತ್ಮವನ್ನೂ ಏಕ / ಸಾಮ್ಯವಾಗಿ
ಲಿಸಬಹುದು.

ದರಿಂದ ಈ ನಾಮದಲ್ಲಿ ಕೃತ್ತಿವಾಸಾಯ ನಮಃ.

ತಜ್ಞಾಯ ನಮಃ

ತ - ಮಾಡಲ್ಪಟ್ಟಿದ್ದು, ಜ್ಞ - ತಿಳಿದಿರುವವನು.

ರ್ವಕಾರ್ಯಗಳನ್ನು ಪರಮಾತ್ಮನು ತಿಳಿದಿರುವವನಾದ್ದರಿಂದ ಕೃತಜ್ಞ, ಅದರಿಂದ
ಾಯ ನಮಃ

ಾರಾದರೂ ಉಪಕಾರ ಮಾಡಿದರೆ ಅದಕ್ಕೆ ತನ್ನ ಸದ್ಭಾವನೆ ಋಣತ್ವವನ್ನು
ಸುವುದಕ್ಕೆ ಕೃತಜ್ಞತೆ ಎಂದು ಹೆಸರು. ಅದರ ಕರ್ತೃ - ಕೃತಜ್ಞ.

ಮಾನ್ಯರು ಈ ಗುಣವನ್ನು ಕ್ಷಣ ಮಾತ್ರದಲ್ಲಿ ಮರೆಯುತ್ತಾರೆ.
ರಾಗಿರುವುದು ಒಳ್ಳೆಯ ಗುಣ. ಆದರೆ ಈ ರೀತಿ ಅಂತಸ್ಸಾಕ್ಷಿಯುಳ್ಳವರು
.

ರಮಾತ್ಮನು ಒಬ್ಬನೇ. ಆದರೆ ಈ ಗುಣದ ಅವಶ್ಯಕತೆ ಅವನಿಗಿಲ್ಲ.
ಅವನು ಬಹುವಾಗಿ ಕಾರಣ - ಕಾರ್ಯ - ಕರ್ತೃತ್ವವಿರುವವನಾದ್ದರಿಂದ
ಕದಲ್ಲಿ ಅವನ ಗುಣಗಳನ್ನೇ ಎಲ್ಲರೂ ಆಚರಿಸುವುದರಿಂದ ತಾನು
ರೂಪದಲ್ಲಿ ನಮಸ್ಕರಿಸಲ್ಪಡುತ್ತಾನೆ.

ರಮಾತ್ಮ - ಜೀವಾತ್ಮಗಳು ಅವನ ಅಂಶವಾದ್ದರಿಂದ ಎಲ್ಲ ಜೀವಿಗಳು
ೕ ರೀತಿಯವನಾದ್ದರಿಂದ ಇವುಗಳಿಗೂ ಪರಮಾತ್ಮನಿಗೂ ಕೃತಜ್ಞ ಭಾವವೇಕೆ
ೇಕೆಂದು ಪ್ರಶ್ನೆ ಬರುತ್ತದೆ. ಆದರೂ ಇದೂ ಸಹ ಲೋಕ ವ್ಯವಹಾರಕ್ಕಾಗಿ
ರಿಗೋಸ್ಕರ ಕೃತಜ್ಞತಾ ಭಾವ ಬೇಕೇ ಬೇಕು. ಅದರಿಂದಲೇ ಕೃತಜ್ಞನಿಗೆ
ಸ್ಕಾರಗಳು.

**40. ಕೃತಾತ್ಮನೇ ನಮಃ**

ಕೃತ - ಮಾಡಲ್ಪಟ್ಟದ್ದು, ಆತ್ಮ - ಆತ್ಮಭಾವನೆ. ಮಾಡಿದ ನಂತರ ಸಂತೋಷವಾಗಿರುವ ಆತ್ಮ ಯಾವುದೋ ಅದು ಕೃತಾತ್ಮ. ಅಂತಹ ಆತ್ಮಕ್ಕೆ ನಮಸ್ಕಾರಗಳು.

**41. ಸಂಕ್ರಮಾಯ ನಮಃ**

ಉತ್ತಮ ರೀತಿಯಲ್ಲಿ ಕ್ರಮಿಸಿದವನು (ತಿರುಗಿದವನು), ಎಲ್ಲವನ್ನು ತನ್ನ ಕ್ರಮಿಸಿದ ಪ್ರದೇಶದಲ್ಲಿ ಇಟ್ಟುಕೊಳ್ಳುವವನು. ಆದರಿಂದ ಸಂಕ್ರಮನು ಎಂದು ಹೆಸರು.

ಅಂದರೆ ಪ್ರಪಂಚವನ್ನು ಸೃಷ್ಟಿಸಿ ಎಲ್ಲವನ್ನು ತನ್ನೊಳಗೇ ಇಟ್ಟು ಕೊಳ್ಳುವವನು.

ಬ್ರಹ್ಮಾಂಡವನ್ನು ತನ್ನ ಉದರದೊಳಗೆ ಇಟ್ಟುಕೊಂಡವನು.

ಸಕಲ ಸೃಷ್ಟಿಯನ್ನು ತನ್ನೊಳಗೆ ಇಟ್ಟುಕೊಂಡು ಅರ್ಜುನನಿಗೆ ವಿಶ್ವರೂಪವನ್ನು ತೋರಿಸಿದವನು.

ಅನೇಕ ಭಕ್ತರಿಗೆ ತನ್ನ ನಿಜರೂಪವನ್ನು ತೋರಿಸಿದವನು.

ತನ್ನ ಸಂಕಲ್ಪದಂತೆಯೇ ಆಯಾ ಕಾರ್ಯಗಳನ್ನು ಆಯಾ ಸಮಯದಲ್ಲಿ ನಡೆಸುವವನು ಆದರಿಂದ ಸಂಕ್ರಮಾಯ ನಮಃ.

**42. ಕೃದ್ಧಾಯ ನಮಃ**

ಕೃದ್ಧ - ಅತಿಯಾದ ಕೋಪವುಳ್ಳವನು.

ಉಗ್ರನರಸಿಂಹನಿಗೆ ಕೃದ್ಧ ಎಂದು ಹೇಳಬಹುದು, ಕೃದ್ಧಾಯ ನಮಃ.

**43. ಕ್ರಾಂತಲೋಕತ್ರಯಾಯ ನಮಃ**

ಮೂರು ಲೋಕಗಳನ್ನು ಕ್ರಮಿಸಿದವನು, ಅಳೆದವನು. ತನ್ನ ಪರಿಧಿಯಲ್ಲಿ ಮೂರು ಲೋಕಗಳನ್ನು ಇಟ್ಟುಕೊಂಡವನು.

ತ್ರಿವಿಕ್ರಮಾವತಾರದಲ್ಲಿ ವಾಮನನು ಬಲಿಯನ್ನು ಮೂರು ಹೆಜ್ಜೆ ಭೂಮಿಯನ್ನು ಬೇಡಿ ಮೂರು ಲೊಕಗಳನ್ನು ತನ್ನ ಎರಡು ಪಾದಗಳಲ್ಲಿ ಅಳೆದು ಮೂರನೆಯ ಪಾದವನ್ನು ಬಲಿಯ ತಲೆಯ ಮೇಲೆ ಇಟ್ಟು ಅವನನ್ನು ರಸಾತಲಕ್ಕೆ ಕಳಿಸಿದನು. ಆದರೆ ಭಕ್ತನನ್ನು ಸಲಹಿ ಬಲಿಯನ್ನು ಕಾಪಾಡಿ ಇಂದ್ರ ಪದವಿಯನ್ನು ಅನುಗ್ರಹಿಸಿದನು.

ಕ್ರಾಂತಲೋಕತ್ರಯನಿಗೆ ನಮಸ್ಕಾರಗಳು.

*ಅರೂಪಾಯ ಸ್ವರೂಪಾಯ ಹರಯೇ ಪರಮಾತ್ಮನೇ ।*

*ಅಜೇಶಾಯಾದಿದೇವಾಯ ಅಕ್ಷಯಾಯ ಕ್ಷಯಾಯ ಚ ॥23॥*

*(144-151)*

**144.** ಅರೂಪಾಯ ನಮಃ

ಅ - ರೂಪ, ರೂಪವಿಲ್ಲದವನು, ನಿರಾಕಾರನು.

ಇಂತಹ ಆಕಾರವಿದ್ದರೆ ಮನುಷ್ಯ ಮಾತ್ರದವರು ಆರಾಧಿಸಬಹುದು. ಆಕಾರದ ಮೇಲೆಯೇ ದೃಷ್ಟಿ, ಮನಸ್ಸನ್ನು ಇಟ್ಟು ಆರಾಧನೆ, ಧ್ಯಾನ ಇತ್ಯಾದಿಗಳನ್ನು ಮಾಡಬಹುದು ಇದು ಮತ್ತೆ ಒಂದು ಪಂಥ. ರೂಪಾರಾಧನೆ.

ರೂಪವಿಲ್ಲದೆ ಶೂನ್ಯವನ್ನು ನಿರ್ದೇಶಿಸಿ ಆರಾಧಿಸುವುದು, ಧ್ಯಾನಿಸುವುದು ಅರೂಪಾರಾಧನೆ. ಇದು ಕಷ್ಟ ಸಾಧ್ಯ. ಆದರೂ ಇಂತಹ ಆರಾಧಕರು ಇರುತ್ತಾರೆ.

ಅದರಿಂದ ರೂಪವಿಲ್ಲದವನಿಗೆ ಅರೂಪನಿಗೆ - ನಮಸ್ಕಾರಗಳು.

**145.** ಸ್ವರೂಪಾಯ ನಮಃ

ಸ್ವ - ತನ್ನದೇ ಆದ, ರೂಪ - ರೂಪವುಳ್ಳವನು, ಆಕಾರವುಳ್ಳವನು.

ಇದು ಯಾರಿಗೆ ಗೊತ್ತು, ನಾವು ತಿಳಿದಿರುವ ಅಥವಾ ಪ್ರಚಾರದಲ್ಲಿರುವ ಯಾವ ರೂಪವನ್ನು ಆಶ್ರಯಿಸಿ ಆರಾಧಿಸಿದರೂ, ಧ್ಯಾನಿಸಿದರೂ, ನಂಬಿ ಮುಂದುವರೆದರೂ ಅನೇಕ ರೂಪಗಳು ಪ್ರಚಾರದಲ್ಲಿರುವುದರಿಂದ ಒಂದು ರೂಪದಲ್ಲಿ ಶೀಘ್ರ ಫಲ ದೊರೆಯದಿದ್ದರೆ ಇನ್ನೊಂದಕ್ಕೆ, ಅದರಿಂದಲೂ ಫಲ ದೊರೆಯದಿದ್ದರೆ ಮತ್ತೊಂದಕ್ಕೆ ಮನಸ್ಸನ್ನು ಹಾರಿಸುತ್ತೇವೆ. ಇದರಿಂದ ಪ್ರಯೋಜನವಿಲ್ಲ, ಜಿಜ್ಞಾಸೆಯುಂಟಾಗುತ್ತದೆ ಅಷ್ಟೆ. ಆದರೆ ವೇದಾಂತಿಗಳು ನೇತಿ ನೇತಿ ರೀತಿಯಲ್ಲಿ ಎಲ್ಲ ರೂಪಗಳನ್ನು ಇದು ಭಗವಂತನ ನಿಜವಾದ ರೂಪವಲ್ಲ ಎಂದು ಎಲ್ಲವನ್ನೂ ವರ್ಜಿಸಿ, ಶೂನ್ಯದಲ್ಲಿ ನಿಲ್ಲುತ್ತಾರೆ.

ಆದರೆ ಪರಮಾತ್ಮನ ನಿಜವಾದ ರೂಪವು ಯಾರಿಗೂ ತಿಳಿಯುವುದಿಲ್ಲ, ತಿಳಿದಿಲ್ಲ. ಆದರೂ ಅವನ ಸ್ವರೂಪವನ್ನು ತಿಳಿಯಲು ಯಾರಿಗೂ ಸಾಧ್ಯವಿಲ್ಲ. ಅಂತಹ ತನ್ನದೇ ಆದ ವಿಶೇಷ ಸ್ವರೂಪವುಳ್ಳ ಸ್ವರೂಪನಿಗೆ ನಮಸ್ಕಾರಗಳು.

**146.** ಹರಯೇ ನಮಃ

ಹರ - ಶಿವ, ಶಿವನಿಗೆ ನಮಸ್ಕಾರಗಳು.

ಹರ - ಎಂದರೆ ಬಿಡುಗಡೆ ಮಾಡುವುದು, ಕಳೆಯುವುದು, ನಮ್ಮ ಹತ್ತಿರ ಇದ್ದ ಕಷ್ಟ, ಸುಖಗಳನ್ನು ಎಳೆದುಕೊಂಡು ಹೋಗುವುದು.

ಹರನಿಗೆ ನಮಸ್ಕಾರಗಳು.

ನಮ್ಮ ಭವ ಸಾಗರ / ಸಂಸಾರ ಸಾಗರದ ಬಂಧನವನ್ನು ಕ್ಷಣಮಾತ್ರದಲ್ಲಿ ಬಿಡಿಸುವವನು, ಅದರಿಂದ ಹರನಿಗೆ ನಮಸ್ಕಾರಗಳು.

ಕಷ್ಟ, ಕರ್ಮಗಳನ್ನು ಮಾತ್ರವಲ್ಲ, ಸುಖದ ವಸ್ತುಗಳನ್ನು ಆತ್ಮೀಯ-

ವಾದುವುಗಳನ್ನು ಸಹ ಎಳೆದುಕೊಂಡು ಹೋಗುವವನು, ಅವನು ಏನು ಮಾಡಿದರೂ ಸರಿಯೇ, ನಮ್ಮ ಒಳ್ಳೆಯದಕ್ಕಾಗಿಯೇ ಮಾಡುತ್ತಾನೆ.

ದುಷ್ಟರ ಸಂಹಾರವೇ ಶಿಷ್ಟರ ರಕ್ಷಣೆಗಾಗಿ, ಆದರೆ ಅವನಿಂದ ಸಂಹರಿಸಲ್ಪಟ್ಟ ದುಷ್ಟರಿಗೆ ತತ್ಕಾಲದಲ್ಲಿಯೆ ಮುಕ್ತಿಯನ್ನು ಕೊಡುತ್ತಾನೆ. ಹರನ ಲೀಲೆ ವಿಚಿತ್ರ, ಅದಕ್ಕೆ ಅವನಿಗೆ ನಮಸ್ಕಾರಗಳು.

**47. ಪರಮಾತ್ಮನೇ ನಮಃ**

ಪರಮ - ಶ್ರೇಷ್ಠ, ಉತ್ತಮ, ಅಂತಹ ಆತ್ಮವುಳ್ಳವನು ಪರಮಾತ್ಮ.

ಸಾಮಾನ್ಯವಾದ ಅರ್ಥ - ಅವನೇ ಸೃಷ್ಟಿಸಿದ ಜೀವಿಗಳಿಗೆಲ್ಲ ಸೂತ್ರಧಾರಿಯಾದ್ದರಿಂದ ಅವನು ಅವುಗಳಿಗಿಂತ ಉತ್ತಮನು ಮತ್ತು ಶ್ರೇಷ್ಠಗುಣ ಉಳ್ಳವನು, ಶಕ್ತಿ ಯುಕ್ತಿಯುಳ್ಳವನು, ಈ ಜೀವಿಗಳಿಗಿಂತ ಉತ್ತಮನು, ಪರಮನು ಅದರಿಂದ ಪರಮಾತ್ಮ.

ಪರ - ಎಂದರೆ ಮೇಲಿನ ಲೋಕದಲ್ಲಿ ಪರಮಪದದಲ್ಲಿ, ವಾಸಮಾಡುವ ಆತ್ಮ, ಅಂದರೆ ಮಹಾವಿಷ್ಣು.

ಇದಕ್ಕಿಂತ ಉತ್ತಮ ಅಥವಾ ವಿಶೇಷವಾದ್ದು ಪ್ರಳಯಕಾಲದಲ್ಲಿ ಆಲದ ಎಲೆಯಮೇಲೆ ಮಲಗಿರುವ ಶಾಂತವಾದ ಬಾಲಮೂರ್ತಿ. ಅಂತಹ ಮಹಾವಿಷ್ಣುವಿಗೆ ನಮಸ್ಕಾರಗಳು.

ವಟಪತ್ರಶಾಯಿಯಾಗಿ ಕಾಲದೇವನಿಗೆ ಪ್ರಳಯದ ಸಮಯವು ಮುಗಿದು ಸೃಷ್ಟಿಸುವ ಕಾಲ ಬಂದಾಗ ಎಬ್ಬಿಸಲು ಹೇಳಿ ತಾನೇ ತಾನಾಗಿ ಯೋಗನಿದ್ರೆಯಲ್ಲಿ ಪರವಶನಾಗಿರುವ ವಟಪತ್ರಶಾಯಿಯೇ ಪರಮಾತ್ಮ, ಅಂತಹವನಿಗೆ ನಮಸ್ಕಾರಗಳು.

**48. ಅಜೇಶಾಯ ನಮಃ**

ಅಜ - ಜನ್ಮವಿಲ್ಲದವನು, ಬ್ರಹ್ಮದೇವ, ಅವನಿಗೆ ಈಶ - ದೇವರು, ಬ್ರಹ್ಮನು ನಾಭಿ ಕಮಲದಲ್ಲಿ ತಾನೇ ತಾನಾಗಿ ಬಂದವನು. ಅದರಿಂದ ಅವನು ಅಜ.

ಅಜನಿಗೆ ಒಡೆಯ - ಶ್ರೀಮನ್ನಾರಾಯಣ. ಅದರಿಂದ ನಾರಾಯಣನಿಗೆ / ಅಂದರೆ ಅಜೇಶನಿಗೆ ನಮಸ್ಕಾರಗಳು.

ಜೀವಿಗಳ ಆತ್ಮವೂ ಸಹ ಪರಮಾತ್ಮನ ದೇಹದಿಂದ ಬಂದವುಗಳು ನಾಶವಾಗುವುದಿಲ್ಲ. ಒಂದು ರೀತಿಯಲ್ಲಿ ಇವೂ ಸಹ ಅಜವೇ. ಇಂತಹ ಜೀವಿಗಳ ಒಡೆಯ - ಶ್ರೀಮನ್ನಾರಾಯಣ. ಅದರಿಂದ ಅಜೇಶನಿಗೆ ನಮಸ್ಕಾರಗಳು.

**149.** **ಆದಿದೇವಾಯ ನಮಃ**

ಆದಿ - ಮೊದಲು, ಮೊಟ್ಟ ಮೊದಲು ಯಾವ ದೇವನಿದ್ದನೋ ಅವನು. ಮೇಲೆ ಹೇಳಿದಂತೆ ಅವನೇ ಶ್ರೀಮನ್ನಾರಾಯಣ ಅಥವಾ ಮಹಾವಿಷ್ಣು. ಮಹಾವಿಷ್ಣುವಿಗೆ ನಮಸ್ಕಾರಗಳು.

**150.** **ಅಕ್ಷಯಾಯ ನಮಃ**

ಕ್ಷಯ ಅಂದರೆ ಕಡಿಮೆಯಾಗುವುದು ಅಥವಾ ನಾಶವಾಗುವುದು. ಅದು ಇಲ್ಲದವನು ಅಕ್ಷಯ - ಪರಮಾತ್ಮ. ಮಹಾವಿಷ್ಣು. ಮಹಾವಿಷ್ಣುವಿಗೆ ನಮಸ್ಕಾರಗಳು.

**151.** **ಕ್ಷಯಾಯ ನಮಃ**

ನಾಶ ಮಾಡುವವನು, ಸಂಪೂರ್ಣ ನಾಶ ಮಾಡುವವರಲ್ಲಿ ನಿಸ್ಸೀಮನು, ವಿಷ್ಣು.

ಜೀವಿಗಳ ಕರ್ಮಗಳನ್ನು ಸಂಪೂರ್ಣವಾಗಿ ನಾಶ ಮಾಡುವವನು,

ದುಷ್ಟರನ್ನು ನಾಶಮಾಡುವವನು,

ಭವ ಬಂಧನವನ್ನು ನಾಶಮಾಡುವವನು,

ಸಂಸಾರ ಸಾಗರದ ಮತ್ತು ನಶ್ವರ ಜಗತ್ತಿನ ವ್ಯಾಮೋಹವನ್ನು ನಿರ್ಮೂಲ ಮಾಡುವವನು,

ಜೀವಕ್ಕೆ ಅಂದರೆ ಜೀವಾತ್ಮಕ್ಕೆ ಅಂಟಿಕೊಂಡಿರುವ ಜಗತ್ತು ಎಂಬ ವ್ಯಾಮೋಹ - ಇಂದ್ರಿಯಗಳು, ಸ್ಥೂಲದೇಹ, ಪಂಚಪ್ರಾಣಗಳು, ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಮಹತ್ತತ್ವಗಳಿಂದ ಬಿಡಿಸಿ ಕೊನೆಗೆ ಜೀವಾತ್ಮವನ್ನು ಒಂಟಿಯಾಗಿ ಮಾಡಿ ತನ್ನಲ್ಲಿ ಅಡಗಿಸಿಕೊಳ್ಳುವವನು. ಅದರಿಂದ ಉತ್ತಮೋತ್ತಮನಾದ ಕ್ಷಯನಿಗೆ ನಮಸ್ಕಾರಗಳು.

*ಅಘೋರಾಯ ಸುಘೋರಾಯ ಘೋರಘೋರತರಾಯ ಚ ।*
*ನಮೋಽಸ್ತು ಘೋರವೀರ್ಯಾಯ ಲಸದ್ಘೋರಾಯ ತೇ ನಮಃ ॥24॥*
*(152 - 156)*

**152.** **ಅಘೋರಾಯ ನಮಃ**

ಅ - ಘೋರನಿಗೆ ನಮಸ್ಕಾರ.

ಘೋರ - ಉಗ್ರವಾದ್ದು, ಭಯಪಡಿಸುವಂತಹುದು, ಮನಸ್ಸಿಗೆ ತಳಮಳ ವುಂಟುಮಾಡುವಂತಹದು.

ಅ - ಇಂತಹದಲ್ಲದ್ದು, ಘೋರವಲ್ಲದವನಿಗೆ ನಮಸ್ಕಾರಗಳು.

ಸೌಮ್ಯವೂ ಅಲ್ಲದ್ದು, ಘೋರವೂ ಅಲ್ಲದ್ದು ಮಧ್ಯಮವಾದ್ದು ಇಂತಹ

ರೂಪದವನಿಗೆ ನಮಸ್ಕಾರಗಳು. ಸಿಂಹದ ತಲೆ, ನರನ ದೇಹವಾದರೂ ಘೋರವಲ್ಲದ ರೂಪಕ್ಕೆ ನಮಸ್ಕಾರಗಳು.

**153. ಸುಘೋರಾಯ ನಮಃ**

ಘೋರ ರೂಪವಾದರೂ ಸೌಮ್ಯವಾದುದ್ದು, ನೋಡಬೇಕೆನಿಸುವ ಘೋರರೂಪ. ಅಂದರೆ ಇದನ್ನು ಊಹಿಸುವುದು ಸ್ವಲ್ಪ ಕಷ್ಟವೇ, ಸಿಂಹದ ತಲೆ ಮಾನವ ದೇಹ ಇದು ಎಷ್ಟೇ ಸೌಮ್ಯವಾದರೂ ವಿಶೇಷ ದೇಹ. ಅದರಿಂದ ಘೋರತನವನ್ನೇ ಪ್ರತಿ ಪಾದಿಸುತ್ತದೆ ನರಸಿಂಹನ ಈ ರೂಪ.

ಅಂತಹ ಸೌಮ್ಯ ನರಸಿಂಹನಿಗೆ ನಮಸ್ಕಾರಗಳು.

**154. ಘೋರಘೋರತರಾಯ ನಮಃ**

ಘೋರ - ಹೆದರಿಸುವ ರೂಪ, ಘೋರತರ - ಅದರಲ್ಲಿ ನಾನಾ ವಿಧ.

ವಿಚಿತ್ರ ಸಿಂಹ-ನರನಾಗಿ ವಿಚಿತ್ರ ಸನ್ನಿವೇಶದಲ್ಲಿ ಅವತರಿಸಿದ ನರಸಿಂಹ ಸ್ವಾಮಿಯು ಆವಿರ್ಭವಿಸಿದ ಕ್ಷಣದಿಂದ ಹಿರಣ್ಯಕಶಿಪುವನ್ನು ವಿಚಿತ್ರ, ಕರಾಳ ರೀತಿಯಲ್ಲಿ ಸಂಹಾರ ಮಾಡಿ ಮುಗಿಸುವವರೆಗೆ ಯಾವ ದಿಕ್ಕಿನಿಂದ ನೋಡಿದರೂ ಮಹಾ ಉಗ್ರವಾಗಿ ಕೋಪದಿಂದ ಕೂಡಿದವನಾಗಿ ಕಾಣಿಸುತ್ತಿದ್ದನು. ದಶಾವತಾರಗಳಲ್ಲೆಲ್ಲ ಈ ನರಸಿಂಹನ ರೂಪದಷ್ಟು ಕ್ರೂರವಾದ ರೂಪವಿನ್ನೊಂದಿಲ್ಲ. ಅದರಿಂದ ಘೋರ ಘೋರ ತರವಾದ ರೂಪವುಳ್ಳವನಿಗೆ ನಮಸ್ಕಾರಗಳು.

**155. ಘೋರವೀರ್ಯಾಯ ನಮಃ**

ಕ್ರೂರವಾದ, ಅತಿ ಕೋಪವುಳ್ಳ, ಏನನ್ನೇ ಆದರೂ, ಸೃಷ್ಟಿಯಲ್ಲಿ ಏನನ್ನೇ ಆದರೂ ನಾಶಮಾಡುವ ವೀರ್ಯ ಅಂದರೆ ಶಕ್ತಿಯುಳ್ಳವನು. ಮೂರು ಲೋಕಗಳನ್ನೆ ನಡುಗಿಸಿದ ಹಿರಣ್ಯಕಶಿಪುವನ್ನು, ಬ್ರಹ್ಮನಿಂದ ವಿಚಿತ್ರ ರೂಪದ ವರವನ್ನು ಪಡೆದ ಹಿರಣ್ಯಕಶಿಪುವನ್ನು, ಮಹಾಲೋಕ ಕಂಟಕನನ್ನು ಸಂಹರಿಸಬೇಕಾದರೆ ಘೋರತನದಲ್ಲಿ ಅತಿ ವೀರ್ಯವುಳ್ಳ ಅವತಾರವನ್ನು ಶ್ರೀಹರಿಯು ಮಾಡಿದನು. ಆ ರೂಪದ ನರಸಿಂಹನಿಗೆ ನಮಸ್ಕಾರಗಳು.

**156. ಲಸದ್ಘೋರಾಯ ನಮಃ**

ಘೋರತನದಲ್ಲಿಯೂ ತನ್ನದೇ ಆದ ಘೋರತನಕ್ಕೆ ಸ್ವಭಾವ ಜನ್ಯವಾದ ಘೋರತನ. ಅದನ್ನು ಹೊಂದಿದವನಿಗೆ ನಮಸ್ಕಾರಗಳು.

ಲಸತ್ - ಘೋರಾಯ ನಮಃ

ಸತ್ ಕಾರ್ಯಕ್ಕಾಗಿ ಘೋರತನವನ್ನು ಉಪಯೋಗಿಸಿದ ಅವತಾರ, ನರಸಿಂಹನಿಗೆ ನಮಸ್ಕಾರಗಳು.

*ಘೋರಾಧ್ಯಕ್ಷಾಯ ಘೋರಾಯ ದಕ್ಷಿಣಾರ್ಣಾಯ ಶಂಭವೇ ।*
*ದಿವ್ಯಾಯ ಮೇಘನಾಥಾಯ ನಮೋ ಮಾಯಾಂಧ್ಯಹಾರಿಣೇ ।।25।।*
*(157-163)*

7. **ಘೋರಾಧ್ಯಕ್ಷಾಯ ನಮಃ**

ಅಧ್ಯಕ್ಷ ಎಂದರೆ ಯಾವ ಕಾರ್ಯಕ್ಕೂ ಮಾರ್ಗದರ್ಶಕನಾಗುವವನು ಅಥವಾ ನಿಯೋಜಿತ ರೀತಿಯಲ್ಲಿ ಸಭೆ ನಡೆಸುವವನು.

ಇವನ ಗುಣ ಘೋರ = ಕ್ರೂರ, ಭಯವನ್ನುಂಟುಮಾಡುವಂತಹದು. ಅದರಿಂದ ಘೋರ - ಅಧ್ಯಕ್ಷನಿಗೆ ನಮಸ್ಕಾರಗಳು.

ಅಥವಾ ಭಯವನ್ನುಂಟುಮಾಡುವ ಕಾರ್ಯಗಳಿಗೆ ಅಧ್ಯಕ್ಷನು.

ವಿಕಾರವಾದ ರೂಪದಿಂದ ಅಧ್ಯಕ್ಷ ಪೀಠವನ್ನು ಅಲಂಕರಿಸಿದವನು.

ಹಿರಣ್ಯಕಶಿಪುವಿನ ಸಂಹಾರ ಬ್ರಹ್ಮನ ವರಕ್ಕೆ ತಕ್ಕಂತೆ ಮಾಡಬೇಕಾದಾಗ ಅದು ಬಹಳ ಘೋರ ಸ್ವರೂಪವನ್ನು ತಳೆದಿತ್ತು. ಸಂಹಾರ, ಸಂಹರಿಸುವವನ ರೂಪ, ಸಂಹಾರ ಹೊಂದಿದವನ ಶೌರ್ಯ, ಕ್ರೌರ್ಯ, ರೂಪಗಳು ಬಹಳ ವಿಚಿತ್ರವಾಗಿದ್ದವು. ಅದರಿಂದ ಘೋರ ಕಾರ್ಯವು ಘೋರ ರೂಪಗಳಿಗೆಲ್ಲ ಘೋರವಾದ ರೀತಿಯದಾದ್ದರಿಂದ ಘೋರಾಧ್ಯಕ್ಷನಿಗೆ ನಮಸ್ಕಾರಗಳು.

8. **ಘೋರಾಯ ನಮಃ**

ನರಸಿಂಹ ಸ್ವಾಮಿಯ ಅವತಾರವೇ ಘೋರ ಕಾರ್ಯಕ್ಕಾಗಿ ತಳೆದದ್ದು. ಎಲ್ಲಕ್ಕೂ ಹೆದರಿಕೆಯನ್ನುಂಟುಮಾಡಿದ್ದರಿಂದ ಸ್ವತಃ ಘೋರವಾದ್ದರಿಂದ ಘೋರನಾದವನಿಗೆ ನಮಸ್ಕಾರಗಳು.

ಭಯ ಹುಟ್ಟಿಸುವ ರೂಪ, ಇದನ್ನು ನೋಡಲು ಅವನ ಕೃಪೆಯೇ ಬೇಕು ಅದರಿಂದ ನಮಸ್ಕಾರಗಳು.

9. **ದಕ್ಷಿಣಾರ್ಣಾಯ ನಮಃ**

ದಕ್ಷಿಣ ಎಂದರೆ ಬಲಭಾಗ, ಪೂರ್ವಕ್ಕೆ ಎದುರಾಗಿ ನಿಂತರೆ ಬಲದಲ್ಲಿ ದಕ್ಷಿಣ ದಿಕ್ಕು. ಇದರ ಅಧಿಪತಿ ಯಮ (ಸೂರ್ಯಪುತ್ರ). ಹುಟ್ಟಿದ ಎಲ್ಲ ಜೀವಿಗಳು ದೇಹ ತ್ಯಾಗ ಮಾಡಿದಾಗ, ಈ ದಿಕ್ಕಿನಲ್ಲಿ ಪ್ರಯಾಣ ಮಾಡಿ ಯಮಪುರಿಯನ್ನು ಸೇರುತ್ತವೆ. ಅಲ್ಲಿ ತಮ್ಮ ತಮ್ಮ ಕರ್ಮಾನುಸಾರ ನರಕಯಾತನೆ, ಸ್ವರ್ಗಸುಖವನ್ನು ಅನುಭವಿಸಿ ಮತ್ತೆ ಭವಸಾಗರಕ್ಕೆ ತಳ್ಳಲ್ಪಡುತ್ತವೆ.

ದಕ್ಷಿಣಾರ್ಣ - ಎಂದರೆ ದಕ್ಷಿಣ ಸಮುದ್ರ, ಭೂಮಿಯ ನಾಲ್ಕು ದಿಕ್ಕುಗಳಲ್ಲಿಯೂ ಸಮುದ್ರವಿರುವದರಿಂದ ಅಲ್ಲಿಯವರೆಗೆ (ಚತುಃಸಾಗರ ಪರ್ಯಂತಂ ಗೋಬ್ರಾಹ್ಮಣೇಭ್ಯಃ ಶುಭಂ ಭವತು) - ಎಂದು ಶಾಂತಿ ಮಂತ್ರ.

ಸ್ವರೂಪ. ಅವಿರತ ಸಾಗುತ್ತಲೇ ಇರುತ್ತದೆ. ಇದನ್ನು ಹೀಗೆಯೇ ನಡೆಸಬೇಕೆಂಬ ಸಂಕಲ್ಪ ಮಾಡಿರುವವನು ಭಗವಂತ - ಪರಮಾತ್ಮ.

ಈ ಸಂಸಾರ ಸಾಗರಕ್ಕೆ ಪರಮಾತ್ಮನೇ ನಾಥ.

ಸೃಷ್ಟಿ, ಸ್ಥಿತಿ, ಲಯಗಳಲ್ಲಿ ಅನೇಕ ಯೋನಿಗಳಲ್ಲಿ ಸಾಗುತ್ತಿರುವ ಜೀವ ಕೋಟಿಗೆ ಪರಮಾತ್ಮನೇ ನಾಥನು. ಸರ್ವಕ್ಕೂ ಏನೆಲ್ಲವೂ ಈ ಸೃಷ್ಟಿ ಬ್ರಹ್ಮಾಂಡದಲ್ಲಿರುವುದೋ ಅದೆಲ್ಲಕ್ಕೂ ಪರಮಾತ್ಮನೇ ನಾಥ. ನಾಥನಿಗೆ ನಮಸ್ಕಾರಗಳು.

ಪತಿ ಪತ್ನಿಯರಲ್ಲಿ ಪತಿಯೇ ನಾಥ.

ಯಾರ್ಯಾರಿಗೆ ಇನ್ನೊಬ್ಬರನ್ನು ಕಾಪಾಡುವ ಶಕ್ತಿಯುಂಟೋ ಅವರೆಲ್ಲರೂ ನಾಥರೇ. ನಾಥರಿಲ್ಲದವರು ಅನಾಥರು. ಅಂತಹ ಅನಾಥರನ್ನು ಕಾಪಾಡುವುದಕ್ಕೆ ಪರಮಾತ್ಮನು ಸಿದ್ಧವಾಗಿರುತ್ತಾನೆ. ಅದಕ್ಕೆ ಅವನನ್ನು ಸರ್ವ ಶ್ರೇಷ್ಠನಾಥ ಎನ್ನುವುದು.

ಇನ್ನೊಂದು - ಸಂಸಾರ ಸಾಗರದಲ್ಲಿ ಒಂದು ಕ್ಷಣದಲ್ಲಿ ನಾಥರಾದವರು ಇನ್ನೊಂದು ಕ್ಷಣದಲ್ಲಿ ನಾಥರಾಗಿರುವುದಿಲ್ಲ. ಆದರೆ ಪರಮಾತ್ಮನು ಸದಾ ಕಾಲಕ್ಕೂ ಹುಟ್ಟಿನಿಂದ ಸಾಯುವವರೆಗೆ ಮತ್ತು ಹಿಂದೆ ಮುಂದೆ ಜೀವಕ್ಕೆ ನಾಥನಾಗಿ ಕೆಲಸ ಮಾಡುವುದರಿಂದ ಅವನನ್ನು ಗತಿ, ನಾಥ ಮುಂತಾಗಿ ಕರೆಯುತ್ತಾರೆ. ಅಂತಹ ನಾಥನಿಗೆ ನಮಸ್ಕಾರಗಳು.

66. **ಮೇಘಾತ್ಮನೇ ನಮಃ**

ಮೇಘವೇ ಆತ್ಮನಾಗಿರುವವನು, ಮೇಘವನ್ನೇ ಆತ್ಮನನ್ನಾಗಿ ಮಾಡಿಕೊಂಡಿರುವವನು ಅಥವಾ ಮೇಘಕ್ಕೆ ಆತ್ಮ ಸ್ವರೂಪನಾಗಿರುವವನು.

ಮೇಘದ ಲಕ್ಷಣ ಹೊಂದಿ ತಾನೇ ಆತ್ಮನಾಗಿರುವವನು.

ಮೇಘವು ಮಳೆ ಸುರಿಸದಿದ್ದರೆ ಜೀವಿಗಳಗೆ ಆಹಾರವಿಲ್ಲ. ಅದರಿಂದ ಪ್ರಪಂಚಕ್ಕೆ ಮೇಘದ ಅವಶ್ಯಕತೆ ಬಹಳ. ಸಮುದ್ರದ ನೀರಿನ್ನು ಸೂರ್ಯನ ಕಿರಣಗಳ ಸಹಾಯದಿಂದ ಮೋಡವಾಗಿ ಪರಿವರ್ತಿಸುವ ಶಕ್ತಿಯೇ ಪರಮಾತ್ಮ. ತನ್ನನ್ನು ತಾನು ತೊಡಗಿಸಿಕೊಂಡು ಒಂದೇ ಸಮನೇ ಸೃಷ್ಟಿ, ಸ್ಥಿತಿ, ಪ್ರಳಯ ಮತ್ತೆ ಸೃಷ್ಟಿ ಈ ರೀತಿ ಚಕ್ರವನ್ನು ನಡೆಸಲು ಪರಮಾತ್ಮನಲ್ಲದೆ ಬೇರೆ ಯಾರಿಗೆ ಸಾಧ್ಯ. ಅದರಿಂದ ಮೇಘಾತ್ಮನಿಗೆ ನಮಸ್ಕಾರಗಳು.

67. **ಮೇಘವಾಹನರೂಪಾಯ ನಮಃ**

ಮೇಘಗಳನ್ನು ಒಂದು ಜಾಗದಿಂದ ಇನ್ನೊಂದು ಜಾಗಕ್ಕೆ ತೆಗೆದುಕೊಂಡು ಹೋಗುವ ವಾಯು ಆಕಾಶದ ರೂಪವಾದ ಪರಮಾತ್ಮನಿಗೆ ನಮಸ್ಕಾರಗಳು.

ಮೇಘವಾಹನ - ಮೇಘದಲ್ಲಿಯೇ ತನ್ನ ಆತ್ಮವನ್ನು ಅಂತಃ ಬಹಿಯಲ್ಲಿ ನಿಲ್ಲಿಸಿ ತನ್ನ ರೂಪವನ್ನು ಅವುಗಳಲ್ಲಿಯೆ ಐಕ್ಯಮಾಡುವ ಪರಮಾತ್ಮನಿಗೆ ನಮಸ್ಕಾರಗಳು.

ಮೇಘವನ್ನು ವಾಹನದ ರೂಪದಂತೆ ಮಾಡಿ ಒಂದೆಡೆಯಿಂದ ಮತ್ತೊಂದೆಡೆಗೆ ಹೋಗುವವನು.

ವಾಯು ಎಂದೂ ಅರ್ಥ ಮಾಡಬಹುದು.

ವಾಯು ಚಲಿಸಬೇಕಾದರೆ ಆಕಾಶವು ಬೇಕೇ ಬೇಕು ಅದರಿಂದ ಆಕಾಶ ಸ್ವರೂಪನು ಎಂದೂ ಅರ್ಥಮಾಡಬಹುದು.

ಇಂತಹ ರೀತಿಯ ಪರಮಾತ್ಮನಿಗೆ ನಮಸ್ಕಾರಗಳು.

8. ಮೇಘಶ್ಯಾಮಾಯ ನಮಃ

ಮೇಘದ ಬಣ್ಣ (ನೀಲಿಯ) ಬಣ್ಣದವನು.

ಶ್ರೀಕೃಷ್ಣ, ಶ್ರೀರಾಮ, ಮಹಾವಿಷ್ಣು, ಮಹಾವಿಷ್ಣುವಿನ ಅವತಾರಗಳೆಲ್ಲ ನೀಲಿಯ ವರ್ಣದವುಗಳೇ.

ಶ್ಯಾಮ ಎಂದರೆ ಕೃಷ್ಣ. ಮೇಘಶ್ಯಾಮ - ಎಂದರೆ ಶ್ರೀಕೃಷ್ಣ. ಆಕಾಶದ ಬಣ್ಣ ನೀಲಿ.

ನೀಲಿಯ ಹಿನ್ನೆಲೆಯಲ್ಲಿ ನಕ್ಷತ್ರಗಳು ಚೆನ್ನಾಗಿ ಹೊಳೆಯುತ್ತವೆ.

ಸಮುದ್ರದ ಬಣ್ಣ ನೀಲಿ. ಅದರಿಂದ ಸಮುದ್ರವು ಇವನೇ. 'ಸರಸಾಮಸ್ಮಿ ಸಾಗರಃ' ಎಂದಿದ್ದಾನೆ ಶ್ರೀಕೃಷ್ಣ ತನ್ನ ವಿಭೂತಿಗಳನ್ನು ಗೀತೆಯಲ್ಲಿ ಹೇಳುವಾಗ.

ಅಂತಹ ಮೇಘಶ್ಯಾಮನಿಗೆ ನಮಸ್ಕಾರಗಳು.

9. ಮಾಲಿನೇ ನಮಃ

ಮಾಲೆಯನ್ನು ಹಾಕಿಕೊಂಡಿರುವವನು "ವನಮಾಲೀ" ಯಾದವನು ಶ್ರೀಮನ್ಮಹಾವಿಷ್ಣು.

ರುಂಡಗಳ ಮಾಲೆಯನ್ನು ಕಾಳಿಕಾದೇವಿಯ ಸ್ವರೂಪದಲ್ಲಿ ಹಾಕಿಕೊಂಡಿರುವವಳು - ದೇವಿ ಜಗನ್ಮಾತೆ.

ಶ್ರೇಷ್ಠರಾದವರು ಮತ್ತು ಬಹು ಉತ್ತಮ ಸ್ಥಾನದಲ್ಲಿರುವವರು ಬಂದೊಡನೆ / ನೋಡಿದೊಡನೆ ಮಾಲೆಯನ್ನು ಹಾಕಿ ಆದರಿಸುವುದು ಸ್ವಾಭಾವಿಕ - ಮಾಲಿನೇ ನಮಃ.

ರುದ್ರಾಕ್ಷಿ, ಸಾಲಿಗ್ರಾಮದ ಮಾಲೆಯನ್ನು ದೇವರಿಗೆ ಹಾಕಿ ಗೌರವವನ್ನು ಮತ್ತು ನಮ್ಮ ಶ್ರದ್ಧೆಯನ್ನು ತೋರಿಸುತ್ತೇವೆ.

ಜಪಕ್ಕಾಗಿ ಉಪಯೋಗಿಸುವ ಮಾಲೆ - 108 ಮಣಿ / ರುದ್ರಾಕ್ಷಿಗಳದ್ದು

- ಜಪಮಾಲೆ. ಇದನ್ನು ಕತ್ತಿಗೆ ಹಾಕಿಕೊಂಡರೆ ದೇವತ್ವವು ಬರುತ್ತದೆ ಮತ್ತು ಶುಚಿತ್ವವು ಜೊತೆಗೊಡುತ್ತದೆ.

ಶ್ರೀವತ್ಸಕೌಸ್ತುಭ ಹಾರ - ಇದಕ್ಕೂ ಮಾಲೆಯೆಂದು ಹೇಳಬಹುದು.

ಆದರಿಂದ ಮಾಲೆ ಹಾಕಿಕೊಂಡಿರುವ ದೇವನಿಗೆ ನಮಸ್ಕಾರಗಳು. ಮಾಲಿನೇ ನಮಃ.

*ವ್ಯಾಲಯಜ್ಞೋಪವೀತಾಯ ವ್ಯಾಘ್ರದೇಹಾಯ ವೈ ನಮಃ /*
*ವಾಘ್ರಪಾದಾಯ ಚ ವ್ಯಾಘ್ರಕರ್ಮಣೇ ವ್ಯಾಪಕಾಯ ಚ //27//*
*(170-174)*

**70. ವ್ಯಾಲಯಜ್ಞೋಪವೀತಾಯ ನಮಃ**

ವ್ಯಾಲ - ಆಕಾಶ, ಇದರ ಎಲ್ಲೆಯನ್ನು ಹುಡುಕುವುದು, ಕೊನೆ, ಮೊದಲನ್ನು. ಹುಡುಕುವುದು, ನಿರ್ಧರಿಸುವುದು ಅಸಾಧ್ಯ. ಇವರಲ್ಲಿ ಪರಮಾತ್ಮನು ಅಡಗಿಕೊಂಡು ಆಕಾಶವನ್ನೇ ಯಜ್ಞೋಪವೀತವಾಗಿ ಹೊಂದಿದ್ದಾನೆ. ಆದರಿಂದ ವ್ಯಾಲಯಜ್ಞೋಪವಿತನಾದವನಿಗೆ ನಮಸ್ಕಾರಗಳು.

ಉಪವೀತ - ಜನಿವಾರ, ಯಜ್ಞ - ಯಜ್ಞ, ವ್ಯಾಲ - ಆಕಾಶ, -ವ್ಯಾಲ - ಸರ್ಪ, ಹುಲಿ, ಮದ್ದಾನೆ, ಶೇಷನಾಗ / ಕುಂಡಲಿನೀ ಸ್ವರೂಪನು, ಸರ್ಪವನ್ನೇ ಯಜ್ಞೋಪವೀತವಾಗಿ ಹೊಂದಿರುವವನು, ಪರಮಾತ್ಮನು ಏನನ್ನು ಅಲಂಕರಿಸಿದರೂ, ಧರಿಸಿದರೂ ಅದು ಸುಂದರವಾಗಿಯೇ ಇರುತ್ತದೆ. ಆದರಿಂದ ಅವನು ವ್ಯಾಲ ಯಜ್ಞೋಪವೀತನು.

**71. ವ್ಯಾಘ್ರದೇಹಾಯ ನಮಃ**

ವ್ಯಾಘ್ರ - ಹುಲಿ, ಹುಲಿಯಂತೆ ಕಾರ್ಯ ಮಾಡುವವನು ಅಂದರೆ ಕ್ರೂರ ಸ್ವಭಾವದವನು, ಹುಲಿಯ ದೇಹವುಳ್ಳವನು.

ಪರಮಾತ್ಮನು ಸತ್ವ, ರಜೋ, ತಮೋ ಗುಣಗಳುಳ್ಳ ಎಲ್ಲ ಪ್ರಾಣಿ, ಮನುಷ್ಯರ ದೇಹದಲ್ಲಿ ಅಂತರಾತ್ಮನಾಗಿ ಇರುವುದರಿಂದ ವ್ಯಾಘ್ರದ ದೇಹದಲ್ಲಿಯೂ ಇದ್ದಾನೆಂದು ಅರ್ಥ.

ವ್ಯಾಘ್ರ ದೇಹದವನಿಗೆ ನಮಸ್ಕಾರಗಳು.

**72. ವ್ಯಾಘ್ರಪಾದಾಯ ನಮಃ**

ಹುಲಿಯ ಪಾದವುಳ್ಳವನು, ತನ್ನ ದೇಹವನ್ನೇ ಸಹಸ್ರಪಾದವಾಗಿ ಮಾಡಿಕೊಂಡಿದ್ದಾನೆ.

ದೇಹದ ಎಲ್ಲ ಅವಯವಗಳಲ್ಲಿಯೂ ಚಲನ ಶಕ್ತಿಯಾಗಿ ವಾಯುವು ಸಂಚರಿಸುತ್ತದೆ. ಆದರಿಂದ ವಾಯು ಸ್ವರೂಪನಾದ ಪರಮಾತ್ಮನಿಗೆ ನಮಸ್ಕಾರಗಳು.

ವ್ಯಾಘ್ರದಲ್ಲಿ ತಮೋಗುಣವೇ ಹೆಚ್ಚು. ಗುಣಗಳು ಸಹ ಪರಮಾತ್ಮನ ಇಚ್ಛೆಯಿಂದ ಸೃಷ್ಟಿಸಲ್ಪಟ್ಟದ್ದು. ಅದರಿಂದ ಗುಣಗಳಲ್ಲಿ ಪರಮಾತ್ಮನೇ ಹರಡಿಕೊಂಡಿದ್ದಾನೆ, ಕ್ರೌರ್ಯವೂ ಅವನ ಗುಣದ ಒಂದು ಸ್ವರೂಪ, ಅದರಿಂದ ವ್ಯಾಘ್ರಪಾದಾಯ ನಮಃ.

173. **ವ್ಯಾಘ್ರಕರ್ಮಣೇ ನಮಃ**

ವ್ಯಾಘ್ರದ ರೂಪ, ಗುಣಗಳಿಗೆ ಅನುಗುಣವಾಗಿ ಕರ್ಮಗಳನ್ನು ಮಾಡುವವನು. ಕ್ರೌರ್ಯ, ಶೌರ್ಯ, ಗಾಂಭೀರ್ಯದ ಗುಣಗಳುಳ್ಳವನು. ಅದರಿಂದ ವ್ಯಾಘ್ರಕರ್ಮಣೇ ನಮಃ.

174. **ವ್ಯಾಪಕಾಯ ನಮಃ**

ಎಲ್ಲೆಲ್ಲೂ (ಇಂಥದೇ ಜಾಗವೆನ್ನದೆ) ಹರಡಿಕೊಂಡಿರುವವನು. ಪರಮಾತ್ಮನು ಎಲ್ಲೆಡೆಯೂ, ಎಲ್ಲ ಒಳಗೆ, ಹೊರಗೆ ಹರಡಿದ್ದಾನೆ. ಅವನು ಇರದೆ ಇರುವ ಜಾಗವು ಸೃಷ್ಟಿಯಲ್ಲಿ ಇಲ್ಲ. ಎಲ್ಲರಲ್ಲಿ ಒಳಗೂ, ಹೊರಗೂ ಹರಡುವ ಮತ್ತು ಅಡಗಿಕೊಳ್ಳುವ ಗುಣ ಪರಮಾತ್ಮನಿಗೆ ಇದೆ. ಅವನಿಗೆ ಇಲ್ಲದ ಗುಣವೇ ಇಲ್ಲ. ಪರಮಾತ್ಮನು ಸರ್ವಾಂತರ್ಯಾಮಿ, ಸರ್ವವ್ಯಾಪಿ. ಅಂತಹ ವ್ಯಾಪಕಾಯ ನಮಃ. ವ್ಯಾಪಕನಾದವನಿಗೆ ನಮಸ್ಕಾರಗಳು.

*ವಿಕಟಾಸ್ಯಾಯ ವೀರ್ಯಾಯ ವಿಷ್ಟರಶ್ರವಸೇ ನಮಃ ।*
*ವಿಕೀರ್ಣನಖದಂಷ್ಟ್ರಾಯ ನಖದಂಷ್ಟ್ರಾಯುಧಾಯ ಚ ॥28॥*
*(175-179)*

175. **ವಿಕಟಾಸ್ಯಾಯ ನಮಃ**

ವಿಕಟ - ಹಾಸ್ಯ, ಆಸ್ಯ - ಮುಖ.

ಹಾಸ್ಯ ರೀತಿಯ ಮುಖವುಳ್ಳವನು.

ಹಾಸ್ಯವನ್ನೇ ಯಾವಾಗಲೂ ಮುಖದಲ್ಲಿ ತೋರಿಸುತ್ತಿರುವವನು, ಹಸನ್ಮುಖನು.

ಪರಮಾತ್ಮನು ಸೃಷ್ಟಿ, ಸ್ಥಿತಿ, ಲಯದಲ್ಲಿ ಕರ್ತೃವಾಗಿದ್ದರೂ ಅದರಲ್ಲಿ ಲಿಪ್ತನಾಗದವನು. ಅಕರ್ತೃ. ಅದರಿಂದ ಅವುಗಳಿಂದ ಪರಿಣಾಮವಾಗದವನು. ಅದರಿಂದ ಹಸನ್ಮುಖಿ. ಎಲ್ಲವನ್ನು ತಾನು ಲೀಲಾಜಾಲವಾಗಿ ಲೀಲಾ ಮಾತ್ರಕ್ಕಾಗಿ ನಡೆಸಿ ತನಗೆ ತಾನೇ ಸಂತೋಷಪಡುವವನು, ವಿಕಟಾಸ್ಯನು. ಅದಕ್ಕಾಗಿ ವಿಕಟಾಸ್ಯನಿಗೆ ನಮಸ್ಕಾರಗಳು.

ವಿಕಟ - ಪ್ರಚಂಡ, ಪ್ರಚಂಡವಾದ ಸಿಂಹದ ಮುಖದವನು ಇವನಿಗೆ ನಮಸ್ಕಾರಗಳು.

**176. ವೀರ್ಯಾಯ ನಮಃ**

ವೀರ್ಯ - ಶಕ್ತಿ, ಸೃಷ್ಟಿಗೆ ಬೇಕಾದ ಪುರುಷತ್ವದ ಶಕ್ತಿ.

ಪರಮಾತ್ಮನು ಸೃಷ್ಟಿಗೋಸ್ಕರವಾಗಿ ಪುರುಷ, ಮಾಯೆ ರೂ ಆವಿರ್ಭವಿಸುತ್ತಾನೆ. ಪುರುಷನಾಗಿ ವೀರ್ಯವನ್ನು ಮಾಯಾ ಸ್ತ್ರೀ ಇಡುತ್ತಾನೆ. ಮತ್ತು ಸೃಷ್ಟಿಯನ್ನು ವೃದ್ಧಿ ಮಾಡುತ್ತಾನೆ.

ಇಂತಹ ವೀರ್ಯ ಪುರುಷನಿಗೆ ನಮಸ್ಕಾರಗಳು.

ಪುರುಷನಿಗೆ ಪುರುಷತ್ವವೇ ವೀರ್ಯ, ಅದನ್ನು ಹೊಂದಿದ ನಮಸ್ಕಾರಗಳು.

**177. ವಿಷ್ವಕ್ಶ್ರವಸೇ ನಮಃ**

ವಿಷ್ - ಒಳಗೆ ಪ್ರವೇಶಿಸುವುದು, ಶ್ರವ - ಕೇಳುವುದು.

ಪರಮಾತ್ಮನು ದೇಹದ ಒಳಗೆ ಪ್ರವೇಶಿಸಿ ಅಂತರ್ಯಾಮಿ ಅಂತಸ್ಸಾಕ್ಷಿಯಾಗಿ, ಆತ್ಮಸಾಕ್ಷಿಯಾಗಿ ಪಂಚೇಂದ್ರಿಯಗಳ ಕೆಲಸಕ್ಕೆಲ್ಲ ಸಾಕ್ಷಿ ಇರುತ್ತಾನೆ.

ಸಾಕ್ಷೀಗೋಪಾಲನಾಗಿ ನಮ್ಮ ಎಲ್ಲ ಪ್ರಪಂಚ, ಇಂದ್ರಿಯ, ಮ ಬುದ್ಧಿ, ಅಹಂಕಾರ, ಚಿತ್ತಗಳ ಪರಸ್ಪರ ಸಂಯೋಗ ವಿಯೋಗ ವ್ಯಾಪಾರವನ್ನು ನಿರಂತರ ನೋಡುತ್ತಿರುತ್ತಾನೆ. ಅದರಿಂದ ವಿಷ್ವರಶ್ರ ನಮಸ್ಕಾರಗಳು.

ಹೀಗೆ ಸಾಕ್ಷಿಭೂತವಾಗಿ ನೋಡುತ್ತಾನೆ ಎಂದು ತಿಳಿದಾಗ ಮ ಬುದ್ಧಿಗಳು ಸತ್ವಗುಣಗಳ ಕಡೆಗೆ ಪರಿವರ್ತನೆಯಾಗುವ ಸಂಭವಗಳು ಈ ಜ್ಞಾನದ ಪರಿಣಾಮ ವಿಚಿತ್ರವಾದ್ದು. ಎಂತಹ ಜ್ಞಾನದಿಂದ ತಿಳಿ ಮೋಸ ಹೋಗಿ ನಮ್ಮ ಇಹ ಪಹ ಜೀವನದ ಉದಾತ್ತ ಗುರಿ ವಿಚಲಿತರಾಗುತ್ತಿದ್ದೆವು ಎಂದು ಅನ್ನಿಸುತ್ತದೆ.

**178. ವಿಕೀರ್ಣನಖದಂಷ್ಟ್ರಾಯ ನಮಃ**

ವಿಚಿತ್ರವಾದ ಉಗುರು ಮತ್ತ ಕೋರೆದಾಡೆಗಳನ್ನು (ಆಯುಧ ಧರಿಸಿದವನು ಮತ್ತು ಉಪಯೋಗಿಸಿದವನು.

ಹಿರಣ್ಯಕಶಿಪುವಿನ ಸಂಹಾರ ಮಾಡುವಾಗ ಈ ಉಗುರು ಕೋರೆದಾಡೆಗಳನ್ನು ವಿಚಿತ್ರ ರೀತಿಯಲ್ಲಿ ಉಪಯೋಗಿಸಿದವನು ನರ ಸ್ವಾಮಿಯು. ನರಸಿಂಹ ಸ್ವಾಮಿಗೆ ನಮಸ್ಕಾರಗಳು.

**179. ನಖದಂಷ್ಟ್ರಾಯುಧಾಯ ನಮಃ**

ನಖ - ಉಗುರು, ದಂಷ್ಟ್ರ - ಕೋರೆದಾಡೆ.-

ಉಗುರುಗಳನ್ನು ಮತ್ತು ಕೋರೆದಾಡೆಗಳನ್ನು ಶತ್ರುವನ್ನು ಸಂಹಾರ ಮಾಡುವಾಗ ಯುದ್ಧದ ಆಯುಧಗಳಾಗಿ ನರಸಿಂಹ ಅವತಾರದಲ್ಲಿ ಉಪಯೋಗಿಸಿ ಹಿರಣ್ಯಕಶಿಪುವಿನ ಹೊಟ್ಟೆಯನ್ನು ಸೀಳಿ ಕರುಳಿನ ಮಾಲೆ ಹಾಕಿಕೊಂಡನು.

ಕಾರಣ - ಬ್ರಹ್ಮನು ಹಿರಣ್ಯಕಶಿಪುವಿಗೆ ಇತ್ತ ವರದಂತೆ ಯಾವ ಆಯುಧಗಳಿಂದಲೂ ಅವನನ್ನು ಕೊಲ್ಲುವ ಹಾಗಿರಲಿಲ್ಲ. ಉಗುರುಗಳು ದೇಹದ ಬೆರಳುಗಳಲ್ಲಿ ಬೆಳೆಯುವ ಸಾಮಾನ್ಯ ಭಾಗ. ಇವೇ ಹಿರಣ್ಯಕಶಿಪುವಿಗೆ ಮಾರಕವಾದವು. ಇಂತಹ ನಖ ದಂಷ್ಟ್ರಾಯುಧವಿರುವವನಿಗೆ ನಮಸ್ಕಾರಗಳು.

*ವಿಶ್ವಕ್ಸೇನಾಯ ಸೇನಾನ್ಯೆ ವಿಜ್ವಲಾಯ ಬಲಾಯ ಚ /*
*ವಿರೂಪಾಕ್ಷಾಯ ವೀರಾಯ ವಿಶೇಷಜ್ಞಾಯ ಸಾಕ್ಷಿಣೇ //29//*
*(180-187)*

**180. ವಿಶ್ವಕ್ಸೇನಾಯ ನಮಃ**

ಎಲ್ಲೆಲ್ಲಿಯೂ ವಿಘ್ನಗಳನ್ನು ಪರಿಹರಿಸುವವನು, ಮಹಾ ಗಣಪತಿ ಸ್ವರೂಪನು.

ವಿಶ್ವಕ್ - ಸರ್ವ ಎಂದರ್ಥ, ಸೇನ - ಸ್ವಾಮಿ / ಸ. ಇನ.

ಎಲ್ಲಕ್ಕೂ ಸ್ವಾಮಿಯು ಎಂದೂ ಅರ್ಥ, ಪರಬ್ರಹ್ಮ, ಶ್ರೀಮನ್ಮಹಾವಿಷ್ಣು.

ಗಣಪತಿಯ ರೂಪನಿಗೆ ನಮಸ್ಕಾರಗಳು.

ಶ್ರೀಮನ್ಮಾಹಾವಿಷ್ಣು ರೂಪನಿಗೆ ನಮಸ್ಕಾರಗಳು (ವಿ. ಸ. 125).

ರಣೋದ್ಯುಕ್ತನಾದಾಗ ದೈತ್ಯರ ಸೇನೆಯನ್ನು ಬಡಿದೋಡಿಸುವವನು ಶಿವ (ಶಿ.ಸ. 207).

**181. ಸೇನಾನ್ಯೆ ನಮಃ**

ಸೇನೆಗಳಿಗೆಲ್ಲ ಮೇಲ್ಪಟ್ಟವನು / ಸೇನೆಗಳನ್ನೆಲ್ಲ ತನ್ನ ಅಧೀನದಲ್ಲಿರಿಸಿಕೊಂಡಿರುವವನು.

ಜೀವ ಸಮೂಹಗಳೇ ಒಂದು ವಿಶಾಲವಾದ ಸೇನೆ, ಅದನ್ನು ನಡೆಸುವವನು.

ಸೃಷ್ಟಿ, ಸ್ಥಿತಿ, ಲಯ, ಪ್ರಪಂಚ, ಬ್ರಹ್ಮಾಂಡಗಳು ಎಲ್ಲವೂ ಒಂದು ಮಹಾ ಸೇನೆ. ಇದಕ್ಕೆ ಅಧಿಪತಿ, ಸೇನಾನಿ. ಇಂತಹವನಿಗೆ ನಮಸ್ಕಾರಗಳು.

ಇಂತಹ ವಿಚಿತ್ರ ಸೇನೆಯನ್ನು ವ್ಯಕ್ತಾವ್ಯಕ್ತ ಜೀವಕೋಟಿಯ ಸೇನೆಯನ್ನು ಊಹಿಸುವುದೂ ಸಹ ಮನುಷ್ಯನ ಕಲ್ಪನೆಗೆ ಮೀರಿದ್ದು. ಅದೇ ರೀತಿ ಜೀವಕೋಟಿಯ ಯಾವ ಜೀವಾತ್ಮನಿಗೂ ಸಹ ಕಲ್ಪಿಸಿಕೊಳ್ಳಲು ಅಸಾಧ್ಯ.

ಇದೇನೇ ಪರಮಾತ್ಮನ ವಿಚಿತ್ರ ಸೇನಾಧಿಪತ್ಯ. ಅಂತಹವನಿಗೆ ಕೋಟಿ ಕೋಟಿ ನಮಸ್ಕಾರಗಳು.

82. ವಿಜ್ವಲಾಯ ನಮಃ

ಜ್ವಲನ ಎಂದರೆ ಪ್ರಕಾಶಮಾನವಾಗಿರುವುದು.

ವಿಶೇಷವಾದ ಜ್ವಲನಕ್ಕೆ ವಿಜ್ವಲ ಎಂದು ಹೇಳುವುದು.

ಸೃಷ್ಟಿಯಲ್ಲಿ ಕಾಣುವ ಜ್ವಲಿಸುವ ವಸ್ತುಗಳಲ್ಲೆಲ್ಲ ಭಗವಾನ್ ಸೂರ್ಯನೇ ಉನ್ನತನು. ಇಂತಹವನು ಸರ್ವಶ್ರೇಷ್ಠ. ಇವನಿಗೆ ತೇಜಸ್ಸನ್ನು ಕೊಡುವ ಪರಮಾತ್ಮನ ತೇಜಸ್ಸು ಎಷ್ಟು ಪ್ರಮಾಣದ್ದಿರಬೇಕು ಹೇಳಲಾಗುವುದೇ.

ಕಾಯಾ, ವಾಚಾ, ಮನಸಾ, ಬುದ್ಧಿ ಮುಂತಾದುವುಗಳಲ್ಲಿ ಪ್ರಕಾಶಮಾನವಾಗುವ ತೇಜಸ್ಸುಗಳು ವಿಚಿತ್ರ. ಇವು ಹೊಳೆಯುವ ಕ್ಷಣಗಳು ಸಾತ್ವಿಕವಾದರೆ ಬಹಳ ಶ್ರೇಯಸ್ಸು ಬರುತ್ತದೆ. ಆದರೆ ತಾಮಸ, ರಾಜಸವಾದರೆ ಇಹಲೋಕದಲ್ಲಿ ಸಂಸಾರ ಸಾಗರದಲ್ಲಿಯೇ ಇರಬೇಕಾಗುತ್ತದೆ.

ಸಾತ್ವಿಕ ಕ್ಷಣಗಳು ಜಾಸ್ತಿಯಾಗಿರಬೇಕೆಂಬುದೇ ಎಲ್ಲರ ಆಸೆ. ಉದಾಹರಣೆ, ಧ್ಯಾನ, ಪೂಜೆ, ಜಪಗಳ ಅವಧಿ ಸಾತ್ವಿಕವಾಗಿ ಜಾಸ್ತಿಯಾದಷ್ಟು ಮನಸ್ಸಿಗೆ ಶಾಂತಿ ಹೆಚ್ಚು ಬರುತ್ತದೆ. ಮತ್ತು ಅಪೇಕ್ಷಣೀಯ.

ಆದರಿಂದ ಇದನ್ನು ಕೊಡುವ ಪರಮಾತ್ಮನೇ ಶರಣ್ಯ, ''ವಿಜ್ವಲಾಯ ನಮಃ'', ವಿಜ್ವಲನಿಗೆ ನಮಸ್ಕಾರಗಳು.

83. ಬಲಾಯ ನಮಃ

ಬಲ - ಶಕ್ತಿ, ಬುದ್ಧಿ ಬಲ, ಮನೋಬಲ, ದೇಹ ಬಲ, ಜ್ಞಾನ ಬಲ, ಧ್ಯಾನ ಬಲ, ದೈವ ಬಲ ಮುಂತಾದವುಗಳು ಬಲಗಳು. ನಮ್ಮ ದೇಹ, ಮನಸ್ಸು, ವಾಕ್‌ಗಳಲ್ಲಿರುವ ಎಲ್ಲ ರೀತಿಯ ಬಲಗಳಿಂದ ನಾವು ಅಹಂಕಾರ ಪಡುತ್ತೇವೆ. ಅಹಂಕಾರವನ್ನು ತ್ಯಜಿಸಿ ಪರಮಾತ್ಮನೇ ಈ ಬಲಗಳಿಗೆ ಕಾರಣ ಎಂದು ಯಾವಾಗ ನಮ್ಮಲ್ಲಿ ಮೂಡುವುದೋ, ಆಗ ಇರುವ ಬಲದೊಂದಿಗೆ ಶ್ರೇಯಸ್ಸನ್ನು ಭಗವಂತನು ತಾನೇ ಕರುಣಿಸುತ್ತಾನೆ. ಬಲಗಳನ್ನು ಕೊಡುವ ಬಲಶಾಲಿ ಪರಮಾತ್ಮ.

ಪರಮಾತ್ಮನಿಗಿಂತ ಬಲಶಾಲಿಯೇ ಇಲ್ಲ.

ಆದರಿಂದ ಬಲಾಯ ನಮಃ. ಬಲಶಾಲಿಯಾದ ಪರಮಾತ್ಮನಿಗೆ ನಮಸ್ಕಾರಗಳು.

ಭಕ್ತರಿಗೆ ಆಶ್ರಯ ಕೊಡುವುದರಿಂದ ಭಕ್ತರ ಬಲವು ವೃದ್ಧಿಸುತ್ತದೆ.

ಭಕ್ತರಿಗೆ ಪರಮಾತ್ಮನ ನಾಮಬಲವೇ ಬಲ, ಇದೊಂದಿದ್ದರೆ ಸಾಕು.

ಭಕ್ತರಿಗೆ ಪರಮಾತ್ಮನ ಅನುಗ್ರಹವಿದೆ, ಎಂಬುದೇ ಬಲ.

ಸಾತ್ವಿಕರಿಗೆ ಅವರ ದಿನಚರಿಯಲ್ಲಿ ಜಪ, ತಪ, ಪೂಜೆ, ಧ್ಯಾನಗಳು ಪರಮಾತ್ಮನನ್ನು ತಮ್ಮ ಅಂತರಂಗದಲ್ಲಿ ಕಟ್ಟಿ ಹಾಕುವುದಕ್ಕೆ ಬಲವನ್ನು ಕೊಡುತ್ತವೆ. ಇದರಿಂದಲೇ ಭಗವಂತನು ಭಕ್ತ ಪರಾಧೀನ ಎಂದು ಹೇಳುವುದು. ಭಕ್ತರಿಗಾಗಿ ತಾನ ಏನೂ ಮಾಡಲು ಸಿದ್ಧನಿರುತ್ತಾನೆ. ಕರೆದಾಗ ಬರುವುದು, ಎಲ್ಲಾ ದುರಿತಗಳಿಂದ ಕಾಪಾಡುವುದು, ಮುಕ್ತಿ ಕೊಡುವುದು, ಸಾಲೋಕ್ಯ, ಸಾಮಿಪ್ಯ, ಸಾಯುಜ್ಯ, ಸಾರೂಪ್ಯ - ಪದವಿಗಳನ್ನು ತನ್ನ ಪರಮ ಭಕ್ತರಿಗೆ ಕೊಡುವುದು - ಇದರಲ್ಲಿ ಭಗವಂತನು ಹೆಚ್ಚು ಬಲಶಾಲಿಯೋ, ಭಕ್ತರು ಬಲಶಾಲಿಗಳೋ ನಿರ್ಧರಿಸುವುದು ಕಷ್ಟ. ಇವನ ಬಲದಿಂದ ಭಕ್ತರು ಬಲಶಾಲಿಗಳಾಗುತ್ತಾರೆ. ಇಂತಹ ಬಲಶಾಲಿಗೆ ಅನಂತಾನಂತ ನಮಸ್ಕಾರಗಳು. ಇಬ್ಬರೂ ಪರಸ್ಪರ ಶರಣಾಗತರು. ಒಂದೇ ಎಂಬ ಭಾವನೆಯೂ ಮೂಡುತ್ತದೆ. ಅದ್ವೈತ ಭಾವ ಉದ್ಭವಿಸುತ್ತದೆ. ಭಕ್ತನು ಭಗವಂತನಲ್ಲಿ ಐಕ್ಯನಾಗುತ್ತಾನೆ. ಇದರಲ್ಲಿ ಭಗವಂತನ ಕರುಣೆಯೇ ಕಾರಣ.

34. ವಿರೂಪಾಕ್ಷಾಯ ನಮಃ

ವಿ. ವಿಶೇಷಣ ರೂಪಃ ಯಸ್ಯ ಸಃ ವಿರೂಪಃ ಅಕ್ಷಿಃ ಯಸ್ಯ ಸಃ.

ದೇವತೆಗಳಲ್ಲೆಲ್ಲ ಶಿವನಿಗೆ ಮೂರನೆಯ ಕಣ್ಣು ಹಣೆಯಲ್ಲಿದೆ. ಇದು ಮನ್ಮಥನು ಶಿವನ ತಪಸ್ಸು ಭಂಗ ಮಾಡಿದ ಕಾರಣ, ಶಿವನು ತನ್ನ ಮೂರನೆಯ ಕಣ್ಣಿನಿಂದ ಭಸ್ಮ ಮಾಡಿದನು.

ಅದರಿಂದ ವಿರೂಪವಾದ ಕಣ್ಣುಳ್ಳವನೆಂದು ಹೆಸರಾಯಿತು.

ಎಲ್ಲ ತಪಸ್ವಿಗಳಿಗೂ, ಸಕಲ ದೇವತೆಗಳಿಗೂ, ಸೃಷ್ಟಿಯ ಸಕರ ಚರಾಚರ ಪ್ರಾಣಿಗಳಿಗೂ ಶಿವನ ಮೂರನೆಯ ಕಣ್ಣಿನದೇ ಹೆದರಿಕೆ. ಆದರೆ ಮಹಾದೇವನು ಬಹಳ ಕರುಣಾಮಯಿ. ಭಕ್ತರ ಆಸೆಗಳನ್ನು ಕ್ಷಣ ಮಾತ್ರದಲ್ಲಿ ಹಿಂದು ಮುಂದು ನೋಡದೆ ಕೊಡುವವನು. ಮುಂದೆ ತನಗೆ ಕೇಡಾಗುವುದೆಂಬುದನ್ನೂ ಯೋಚಿಸದೆ ವರಗಳನ್ನು ಕೊಡುತ್ತಾನೆ. ಉದಾ. ಶಿವನು ಆತ್ಮಲಿಂಗವನ್ನು ರಾವಣನಿಗೆ ಕೊಟ್ಟಿದ್ದು, ಅನೇಕ ರಾಕ್ಷಸರಿಗೆ ಕೊಟ್ಟ ವರಗಳು. (ಭಸ್ಮಾಸುರನಿಗೆ ಇತ್ತವರ).

ವಿರೂಪಾಕ್ಷನಿಗೆ ನಮಸ್ಕಾರಗಳು.

35. ವೀರಾಯ ನಮಃ

ಎಂತಹ ಕಾರ್ಯವನ್ನಾದರೂ ಮಾಡತಕ್ಕಂತಹ ವೀರನು.

ಯಾರಿಗೆ ಯಾರೂ ಎದುರಿಲ್ಲವೋ ಅವನು ವೀರನು, ಶಕ್ತಿವಂತನು.

ಶತ್ರುಗಳೊಡನೆ ಹೋರಾಡಿ ಗೆಲ್ಲಲು ವೀರತನ, ಕೆಚ್ಚೆದೆ, ಧೈರ್ಯ, ಶಕ್ತಿ ಮುಂತಾದವು ಬೇಕು, ಇದು ಸಾಮಾನ್ಯ.

ಆದರೆ ಪ್ರಪಂಚವನ್ನೇ ನಡೆಸಿಕೊಂಡು ಪ್ರಳಯದಿಂದ ಸೃಷ್ಟಿಯ ಮೂಲಕ

ಪ್ರಳಯಗಳನ್ನು ಚಕ್ರರೂಪದಲ್ಲಿ ನಡೆಸುವ ಮಹಾವಿಷ್ಣುವಿಗೆ ಸಮಾನರಾದ ವೀರರು ಯಾರಾದರೂ ಇದ್ದಾರೆಯೆ? ಇಲ್ಲ. ಅಪ್ರತಿಮ ವೀರ ಮಹಾವಿಷ್ಣುವಿಗೆ ನಮಸ್ಕಾರಗಳು.

**186. ವಿಶೇಷಜ್ಞಾಯ ನಮಃ**

ವಿಶೇಷವಾದ ವಿಚಾರವನ್ನು, ಜ್ಞ - ತಿಳಿದವನು.

ಪ್ರಪಂಚದಲ್ಲಿ ಬಲು ಗೂಢವಾದ ಜ್ಞಾನವೇ ಸೃಷ್ಟಿ ಸ್ಥಿತಿ, ಲಯಗಳು ನಿರಂತರ ನಡೆಯುವ ರಹಸ್ಯ. ಈ ರಹಸ್ಯ ಜ್ಞಾನವನ್ನು ಭೇದಿಸುವವರು ಇದನ್ನೆಲ್ಲ ನಡೆಸುವ ಸೂತ್ರಧಾರಿಯಾದ ಮಹಾವಿಷ್ಣುವನ್ನು ಬಿಟ್ಟರೆ ಬೇರೆ ಯಾರೂ ಇಲ್ಲ. ಈ ಸೂತ್ರಧಾರಿಯ ಸ್ವರೂಪವನ್ನು ತಿಳಿಯುವುದೇ ಸಾಧ್ಯವಿಲ್ಲ. ಈ ಜ್ಞಾನವೇ ವಿಶೇಷವಾದ್ದು. ಅದರಿಂದ ಇವನು ವಿಶೇಷಜ್ಞನು. ಇವನಿಗೆ ನಮಸ್ಕಾರಗಳು.

**187. ಸಾಕ್ಷಿಣೇ ನಮಃ**

ಸಕಲ ಚರಾಚರಗಳಲ್ಲಿ ಪ್ರತಿಯೊಂದನ್ನು ಅದರ ಕೆಲಸ / ಇಹ ಪರ ವ್ಯಾಪಾರವನ್ನು ನಿರಂತರವಾಗಿ ಸಾಕ್ಷಿ ರೂಪದಲ್ಲಿ ನೋಡುತ್ತಿರುವವನು - ಪರಮಾತ್ಮನು. ಇವನು ದೇಹಿಗಳಲ್ಲಿ ಅಂತರಾತ್ಮ, ಅಂತಃಸಾಕ್ಷಿ, ಆತ್ಮಸಾಕ್ಷಿ ಮುಂತಾಗಿ ಕರೆಸಿಕೊಂಡು ಸದಾಕಾಲದಲ್ಲಿಯೂ ಇರುತ್ತಾನೆ.

ಅದರಿಂದ ಸಾಕ್ಷಿರೂಪನಾದವನಿಗೆ ನಮಸ್ಕಾರಗಳು.

*ವೀತಶೋಕಾಯ ವಿಸ್ತೀರ್ಣವದನಾಯ ನಮೋ ನಮಃ ।*
*ವಿಧಾನಾಯ ವಿಧೇಯಾಯ ವಿಜಯಾಯ ಜಯಾಯ ಚ ॥30॥*
*(188-193)*

**188. ವೀತಶೋಕಾಯ ನಮಃ**

ಶೋಕ - ದುಃಖ, ವೀತ - ಹೋಗಲಾಡಿಸಲ್ಪಟ್ಟದ್ದು.

ದುಃಖಗಳಿಂದ ಬಿಡಿಸಲ್ಪಟ್ಟವನಿಗೆ ನಮಸ್ಕಾರಗಳು.

ಪರಮಾತ್ಮನಿಗೆ ದುಃಖಗಳುಂಟೆ? ಇಲ್ಲ. ಅವನು ಪ್ರಪಂಚದಲ್ಲಿ, ಸಂಸಾರ ಸಾಗರದಲ್ಲಿ ಇದ್ದೂ ಇಲ್ಲದ ಹಾಗೆ ಇರುತ್ತಾನೆ. ಅಂಟಿಯೂ ಅಂಟದಂತೆ ಇರುತ್ತಾನೆ. ಒಂದು ರೀತಿಯಲ್ಲಿ ಭಕ್ತರ ದುಃಖಗಳನ್ನು ಹೋಗಲಾಡಿಸಲು ಅನೇಕ ಸಂಕಟವನ್ನುಂಟುಮಾಡುವ ಕಾರ್ಯಗಳನ್ನು ಮಾಡಬೇಕಾಗುತ್ತದೆ. ಜೀವಾತ್ಮನು ದೇಹದೊಂದಿಗೆ ಒಂದಾಗಿ ನಾನು ಬೇರೆ ದೇಹ ಬೇರೆ ಎಂಬ ಜ್ಞಾನವನ್ನು ತಿಳಿಯದೇ ದೇಹವೇ ನಾನೆಂದು ಎಲ್ಲ ಸುಖ, ದುಃಖ, ನೋವು

ಮುಂತಾದವುಗಳನ್ನು ಜೀವಾತ್ಮನು ಅನುಭವಿಸುತ್ತಾನೆ. ಆದರಿಂದ ಜೀವಾತ್ಮನು ವೀತಶೋಕನಾಗುತ್ತಾನೆ. ಇವನಿಗೆ ನಮಸ್ಕಾರಗಳು.

**189. ವಿಸ್ತೀರ್ಣವದನಾಯ ನಮಃ**

ವಿಶಾಲವಾದ ಮುಖವುಳ್ಳವನು, ದೇಹಕ್ಕೆ ಪ್ರಮಾಣವಾಗಿ ಮುಖವಿರುತ್ತದೆ. ಬಹಳ ದೊಡ್ಡ ಅಗಲವಾದ ಮುಖವೇ ಇರಬೇಕಾದರೆ ದೇಹ ಎಷ್ಟಿರಬೇಕು, ಊಹಿಸಲು ಅಸಾಧ್ಯ.

ಪುರುಷ ಸೂಕ್ತದಲ್ಲಿ ಪರಮಾತ್ಮನ ದೇಹದ ಸ್ವರೂಪಗಳು, ಅವಯವಗಳಿಂದ ಬಂದ ಸೃಷ್ಟಿಯನ್ನು ವಿವರಿಸಿದೆ. ವಿರಾಟ್ ದೇಹ, ಸೂಕ್ಷ್ಮದೇಹ, ಸಾಮಾನ್ಯ ದೇಹಗಳನ್ನು ಯೋಗಿಗಳು ತಮ್ಮ ಧ್ಯಾನಕ್ಕೆ ಅವರವರ ಮನೋಇಚ್ಛೆಯಂತೆ ಆರಿಸಿಕೊಳ್ಳುತ್ತಾರೆ. ಅದಕ್ಕೆ ಅವರ ಮನಸ್ಸಿನ ಪ್ರಮಾಣವೇ ಕಾರಣ. ''ಮನೋ ವೈ ಗಗನಾಕಾರೋ'' ಅನ್ನಿಸಿದಾಗ ಬೃಹತ್ ಪ್ರಮಾಣದ ದೇವನು ಧ್ಯಾನಕ್ಕೆ ಬರುತ್ತಾನೆ. ಹೀಗೆಯೇ. ಅದರಿಂದ ವಿಸ್ತೀರ್ಣವದನಾಯ ನಮಃ.

**190. ವಿಧಾನಾಯ ನಮಃ**

ಯಾವುದನ್ನಾದರೂ ಮಾಡುವ ರೀತಿ, ಯಾವುದಾದ ಮೇಲೆ ಯಾವುದು ಮಾಡಬೇಕು ಎನ್ನುವ ರೀತಿಗೆ ''ವಿಧಾನ''ವೆಂದು ಹೇಳುತ್ತೇವೆ.

ಮನುಷ್ಯರು ಅನುಸರಿಸುವ ವಿಧಾನವೇ ಬೇರೆ. ಆದರೆ ಪರಮಾತ್ಮನು ತನ್ನ ವಿಧಾನವನ್ನೇ ಅನುಸರಿಸಿ ನಡೆಸುತ್ತಾನೆ. ಅವನ ವಿಧಾನವನ್ನು ತಿಳಿಯಲು ಯಾರೂ ಶಕ್ಯರಲ್ಲ. ವಿಧಿಯ ವಿಧಾನವೇ ಬೇರೆ. ಅದನ್ನು ತಿಳಿಯಲು ಸಾಧ್ಯವಿಲ್ಲ. ''ಹಣೇ ಬರಹ'' ಎಂದು ಸಮಾಧಾನ ಪಟ್ಟುಕೊಳ್ಳುತ್ತೇವೆ. ಅಥವಾ ಒಳ್ಳೆದಾದರೆ ''ಅದೃಷ್ಟ'' ಎಂದು ಸಂತೋಷ ಪಡುತ್ತೇವೆ. ಒಟ್ಟಿನಲ್ಲಿ ಪರಮಾತ್ಮನ ''ಸಂಕಲ್ಪ''ವೇ ನಡೆಯುತ್ತದೆ. ಅದರಿಂದ ''ವಿಧಾನಾಯ ನಮಃ'' ಎನ್ನುತ್ತೇವೆ.

**191. ವಿಧೇಯಾಯ ನಮಃ**

ವಿಧೇಯ - ಎಂದರೆ ಯಾವುದಾದರೂ ಒಂದು ನಿಬಂಧನೆಗೆ ಬೆಲೆಕೊಟ್ಟು ಅದಕ್ಕೆ ತಕ್ಕಂತೆ ನಡೆಯುವುದು. ಇದರಿಂದ ಹಾಗೆ ಮಾಡುವವರಿಗೆ ಅನೇಕ ರೀತಿಯ ಗೌರವ ಸಲ್ಲುತ್ತದೆ. ಸಾತ್ವಿಕತೆ ಹೆಚ್ಚುತ್ತದೆ, ಮನುಷ್ಯ ವರ್ಗಕ್ಕೂ ಇದು ಅನ್ವಯಿಸಿದರೆ ಏನೂ ಆಶ್ಚರ್ಯವಿಲ್ಲ.

ಆದರೆ ಪರಮಾತ್ಮನು ''ವಿಧೇಯನು'' ಅಂದರೆ ಆಶ್ಚರ್ಯವಾಗುತ್ತದೆ. ಅವನು ವಿಧೇಯನಾಗಿರಬೇಕಾದರೆ ಅಥವಾ ಹಾಗೆ ನಡೆಯಬೇಕಾದರೆ ಆ ''ನಿಬಂಧನೆ'' ಯು ಯಾವುದು? ಉತ್ತರ - ದೇವರುಗಳ ವರಗಳು, ಅವನ ಸ್ವತಃ

ಸಂಕಲ್ಪಗಳು, ಭಕ್ತ ಪರಾಧೀನನಾಗಿರುವುದರಿಂದ ಭಕ್ತರು ಭಕ್ತಿಯಿಂದ ಕಟ್ಟಿದಾಗ. ಇವು ವಿಚಿತ್ರವಾದರೂ ಇದರಲ್ಲಿ ಅನೇಕ ಸಲ ಪರಮಾತ್ಮನ ಉದಾರ ಗುಣವನ್ನು ವ್ಯಕ್ತ ಪಡಿಸುತ್ತದೆ. ಅದರಿಂದ ''ವಿಧೇಯಾಯ ನಮಃ''

92. ವಿಜಯಾಯ ನಮಃ

ವಿಜಯ - ಗೆಲ್ಲುವುದು. ಸತ್ಯಮೇವ ಜಯತೇ. ಪರಮಾತ್ಮನು ಸದಾ ವಿಜಯವನ್ನೇ ಸಾಧಿಸುತ್ತಾನೆ. ಅವನಿಗೆ ಸೋಲೆಂಬುದೇ ಇಲ್ಲ, ಸದಾ ವಿಜಯಿ.

ಪರಮಾತ್ಮನ ದೈವೀ ಗುಣಗಳುಳ್ಳವರಿಗೆ ಸಹ ಸದಾ ವಿಜಯವೇ ಕಾದಿರುತ್ತದೆ. ಅವರವರ ಸ್ವಂತ ಶಕ್ತಿಯ ಜೊತೆಗೆ ದೈವ ಸಹಾಯವಿದ್ದರೆ ವಿಜಯ ನಿಶ್ಚಯ. ಯಾವಾಗ ಸ್ವಂತ ಶಕ್ತಿ ದೈವೀ ಗುಣಗಳಿವೆ ನನ್ನಲ್ಲಿ ಎಂಬ ಭಾವನೆ ಮೂಡುವುದೋ ಆಗ ದೈವ ಬಲ ಹೊರಟು ಹೋಗುತ್ತೆ ಮತ್ತು ಅಪಜಯ ಖಂಡಿತ. ಅಹಂಭಾವ ಬಂದಾಗ ಏನೇ ಇದ್ದರೂ ನಾಶವಾಗುತ್ತಾರೆ. ಇದು ನಿಶ್ಚಯ. ಅದರಿಂದ ವಿಜಯ ಹೊಂದುವುದಕ್ಕೆ ಪರಮಾತ್ಮನ ಸಹಾಯ, ಸಂಕಲ್ಪ ಇರಬೇಕು.

ವೈಕುಂಠದ ದ್ವಾರಪಾಲಕನಾಗಿ ತನ್ನ ಅಂಶದಿಂದ ''ವಿಜಯ''ನು ಇದ್ದನು.

93. ಜಯಾಯ ನಮಃ

ಸದಾ ಜಯವನ್ನು ಹೊಂದುವ ಪರಮಾತ್ಮನಿಗೆ ''ಜಯ'' ಎಂದು ಹೆಸರು.

ಜಯ - ವೈಕುಂಠದ ದ್ವಾರಪಾಲಕನು, ಇವನು ಸಹ ಮಹಾವಿಷ್ಣುವಿನ ಅಂಶ.

ಜಯ, ವಿಜಯರು ವೈಕುಂಠದ ದಕ್ಷಿಣ ದ್ವಾರಪಾಲಕರಾಗಿದ್ದಾಗ ಸನಕಾದಿ ಋಷಿಗಳಿಂದ ಶಾಪವನ್ನು ಪಡೆದು ಹಿರಣ್ಯಾಕ್ಷ ಹಿರಣ್ಯಕಶಿಪು, ರಾವಣ ಕುಂಭಕರ್ಣ, ಶಿಶುಪಾಲ ದಂತವಕ್ತ್ರರೆಂಬ ಜನ್ಮಗಳನ್ನು ಪಡೆದರು. ಹರಿಯ ದ್ವೇಷಿಗಳಾಗಿ ಹರಿಯಿಂದಲೇ ಸಂಹರಿಸಲ್ಪಟ್ಟು ಮೋಕ್ಷವನ್ನು ಪಡೆದರು.

ನರಸಿಂಹ ಅವತಾರದಲ್ಲಿ ಹಿರಣ್ಯಕಶಿಪುವಿನ ಸಂಹಾರ ವಿಚಿತ್ರ ಆಯುಧಗಳಿಂದ ಆಯಿತು.

ಹರಿಯಿಂದಲೇ ಮೋಕ್ಷ ಪಡೆದದ್ದರಿಂದ ಜಯ ವಿಜಯರು ಸ್ತುತ್ಯರೇ, ಪರಮಾತ್ಮನೆ ಈ ರೂಪಗಳಲ್ಲಿ ಇದ್ದದ್ದರಿಂದ ಜಯ, ವಿಜಯ ಎಂದು ಹೆಸರು ಬಂತು. ಅದಕ್ಕೆ ನಮಸ್ಕಾರಗಳು.

*ವಿಬುಧಾಯ ವಿಭಾವಾಯ ನಮೋ ವಿಶ್ವಂಭರಾಯ ಚ ।*
*ವೀತರೋಗಾಯ ವಿಪ್ರಾಯ ವಿಕಟಾಂಗಧರಾಯ ಚ ॥31॥*

*(194-199)*

**4. ವಿಬುಧಾಯ ನಮಃ**

ವಿಶೇಷತಃ ಬುದ್ಧಿಃ ಧೀಮಾನ್ ಸಃ ಅಸ್ತಿ ಚೇತ್ ಸಃ ವಿಬುಧಃ

ವಿಬುಧ - ದೇವರು, ವಿ - ಬುಧ - ವಿದ್ವಾಂಸ, ಬುದ್ಧಿವಂತ.

ಪರಮಾತ್ಮನು ಈ ಸಂಸಾರ ಸಾಗರವನ್ನು ನಿರ್ಮಿಸಿ ಅದರಲ್ಲಿ ಜೀವಿಗಳನ್ನು ಹಾಕಿ, ನಂತರ ಅವರವರ ಕರ್ಮಾನುಸಾರ ಭವ ಸಾಗರದಿಂದ ಬಿಡುಗಡೆ ಮಾಡುವವನು. ಇಂತಹವನು ಎಷ್ಟು ಬುದ್ಧಿವಂತನಿರಬೇಕು, ಸಾಮಾನ್ಯರಾದ ನಾವು ಊಹಿಸಲು ಸಾಧ್ಯವೇ ಇಲ್ಲ. ಆದರೆ ನಮ್ಮ ಜ್ಞಾನವು ಪಾರಮಾರ್ಥಿಕವಾದಾಗ ಎಲ್ಲಕ್ಕಿಂತಲೂ ಮಿಗಿಲಾದ ಒಂದು ಶಕ್ತಿ ಸೂತ್ರಧಾರಿಯಾಗಿ ನಡೆಸುತ್ತಿದೆ ಎನ್ನುವುದು ಅರಿವಿಗೆ ಬರುತ್ತದೆ. ಇಂತಹ ಅಪರಿಮಿತ ಶಕ್ತಿಯು ಪರಮಾತ್ಮನೇ, ಅಂತಹ ವಿಬುಧನಿಗೆ ನಮಸ್ಕಾರಗಳು.

ಲೌಕಿಕದಲ್ಲಿ ತೆಗೆದುಕೊಂಡರೆ, ಆರ್ಥಿಕ, ಸಾಮಾಜಿಕ, ವಿದ್ಯಾ ಕ್ಷೇತ್ರದಲ್ಲಿ ಬುದ್ಧಿವಂತರು ಇರುತ್ತಾರೆ. ಇಂತಹ ಮೇಧಾವಿಗಳನ್ನು ಗುರುತಿಸಿ ಆದರಿಸುವುದು ಲೌಕಿಕ ರೂಢಿಯಲ್ಲಿದೆ. ಇಂತಹವರಿಗೆ ನಮಸ್ಕಾರಗಳು.

ಆದರೆ ಪಾರಮಾರ್ಥಿಕ ಕ್ಷೇತ್ರದಲ್ಲಿ ಮುಂದುವರಿದು ಜೀವನ್ಮುಕ್ತರಾದವರು ಇತರರನ್ನು ಬಂಧನದಿಂದ ಬಿಡುಗಡೆ ಮಾಡಲು ದಾರಿ ದೀಪವಾಗಿರುತ್ತಾರೆ. ಉದಾಃ ಸನ್ಯಾಸಿಗಳು, ಮಠಾಧಿಪತಿಗಳು, ಸಾಧು ಸಂತರು, ಜೀವನ್ಮುಕ್ತರು ಇತ್ಯಾದಿ. ಪ್ರಪಂಚಕ್ಕೆ ಇಂತಹವರ ಅವಶ್ಯಕತೆ ಜಾಸ್ತಿ. ಸತ್ಪುರುಷರು ಅನೇಕ ವಿಧದಲ್ಲಿ ಇತರರನ್ನು ಆರ್ತರನ್ನು ಉದ್ಧರಿಸುತ್ತಾರೆ.

ಇಂತಹ ''ವಿಬುಧಾಯ ನಮಃ'', ವಿಬುಧರಿಗೆ ನಮಸ್ಕಾರಗಳು.

**5. ವಿಭಾವಾಯ ನಮಃ**

ಭಾವ ಎಂದರೆ ಮನಸ್ಸಿನ ಒಂದು ರೂಪ, ಯಾವುದಾದರೂ ಒಂದು ವಿಚಾರದಲ್ಲಿ ಪೂರ್ಣ ಮನಸ್ಸನ್ನು ಅದರಲ್ಲಿ ಇಟ್ಟು ತಲ್ಲೀನನಾಗುವುದು - ಭಾವ. ಇದು ಒಳ್ಳೆಯದಾದರೂ ಇರಬಹುದು, ಕೆಟ್ಟದಾದರೂ ಇರಬಹುದು. ಯಾವಾಗ ಮನಸ್ಸು ಬುದ್ಧಿಗೆ ಶರಣಾಗುತ್ತದೆಯೋ ಆಗ ಬುದ್ಧಿಯು ತನ್ನ ಸ್ವಭಾವಕ್ಕೆ ಮತ್ತು ವಿವೇಚನೆಗೆ ಅನುಗುಣವಾಗಿ ಸಾತ್ವಿಕ ಭಾವವನ್ನು ಹೊಂದುತ್ತದೆ. ಮತ್ತು ಪೂರ್ವ ನಿರ್ದೇಶಿತ ಗುರಿಯತ್ತ ಮನಸ್ಸನ್ನು ಎಳೆಯುತ್ತದೆ. ಈ ಭಾವನೆಯಲ್ಲಿ ಬೇರೆಲ್ಲ ವಿಶಯಗಳು ತತ್ಕಾಲಕ್ಕೆ ಸೊನ್ನೆಯಾಗುತ್ತದೆ. ಯಾವಾಗ ಈ ಭಾವವು ಸಾತ್ವಿಕವಾಗಿ ಪರಮ ಶ್ರೇಯಸ್ಸಿನ ಕಡೆಗೆ ಪರಮಾತ್ಮನನ್ನು ಸೇರುವ ಗುರಿಗೆ ಹೋಗುತ್ತದೆಯೋ, ಆಗ ಅದು ವಿಶಾಲವಾದ ಭಾವ. ಇದಕ್ಕೆ ''ವಿಭಾವ'' ಎಂದು ಹೇಳುವುದು.

ಅಂತಹ ವಿಭಾವ ಮನಸ್ಸಿಗೆ ಬುದ್ಧಿಗೆ ಮತ್ತು ಇದನ್ನು ನಡೆಸುತ್ತಿರುವ ವಿಭಾವನಿಗೆ ನಮಸ್ಕಾರಗಳು.

ಪ್ರಪಂಚಕ್ಕೆ ಇಂತಹ ಜೀವಿಗಳ ಉದ್ಧಾರಕ್ಕಾಗಿ ವಿಭಾವಗಳನ್ನು ಕೊಡುತ್ತಿರುವ ಪರಮಾತ್ಮನಿಗೆ, ವಿಭಾವನಿಗೆ ನಮಸ್ಕಾರಗಳು.

96. **ವಿಶ್ವಂಭರಾಯ ನಮಃ**

ವಿಶ್ವ - ಪ್ರಪಂಚ, ಅಂಭರ - ವಿಶ್ವಂಭರಾ - ಪೃಥ್ವೀ, ಭೂದೇವಿ.

ಪರಮಾತ್ಮನು ಭೂದೇವಿಯನ್ನು ಪಾತಾಳದಿಂದ ಬಿಡಿಸಿ ತಂದು ಅವಳ ಕಷ್ಟಗಳನ್ನು ಹೋಗಲಾಡಿಸಿದನು. ಯಾವಾಗ ಭೂಭಾರ ಹೆಚ್ಚಾಗಿ, ಅಧರ್ಮವು ತಾಂಡವವಾಡುವುದೋ, ಆಗ ಉದ್ಧಾರಕ್ಕಾಗಿ ಮಹಾವಿಷ್ಣುವು ಭೂದೇವಿಯ ಸಹಾಯಕ್ಕೆ ಬರುತ್ತಾನೆ. ಭೂದೇವಿಯ ಅಪಾರ ಸಹನೆಯ ಗುಣವೇ ಮುಖ್ಯ. ಭೂದೇವಿಯ ರೂಪದಲ್ಲಿರುವ ಮಹಾವಿಷ್ಣುವಿಗೆ ನಮಸ್ಕಾರಗಳು. ಭೂದೇವಿಗೆ ನಮಸ್ಕಾರಗಳು.

97. **ವೀತರೋಗಾಯ ನಮಃ**

ಎಲ್ಲ ರೋಗಗಳಿಂದ ಮುಕ್ತನಾದವನು.

ಜೀವಿಗಳು ಅನುಭವಿಸುವ ಎಲ್ಲ ದ್ವಂದ್ವಗಳೂ ದೇಹಕ್ಕಾಗಿಯೇ, ಜೀವಿಗಳಿಗಲ್ಲ ಎಂಬ ಭಾವನೆ ಬಂದಾಗ "ವೀತ ರೋಗಾಯ ನಮಃ" ಸರಿ ಹೋಗುತ್ತೆ. ಈ ನಾಮವು ಜೀವಿಗಳಿಗೆ ಅನ್ವಯಿಸುತ್ತದೆ. ಅದೇ ರೀತಿ ಪರಮಾತ್ಮನಿಗೂ ಅನ್ವಯಿಸುತ್ತದೆ, ಹೇಗೆಂದರೆ - ಪರಮಾತ್ಮನು ತನ್ನ ಲೀಲೆಗಾಗಿ ಈ ಸಂಸಾರ ಸಾಗರವನ್ನು ಸೃಷ್ಟಿಸಿ, ಜೀವಿಗಳನ್ನು ಇದರೊಳಗೆ ಹಾಕಿ, ಅವುಗಳ ಕರ್ಮಾನುಸಾರ ವಿಮೋಚನೆ ಮಾಡಿ ಮುಕ್ತಿಯನ್ನು ಕೊಡುತ್ತಾನೆ. ಇಷ್ಟೆಲ್ಲ ಮಾಡಿದರೂ ಅವನು ಇದನ್ನು ತನ್ನದೆಂದು ಅಂಟಿಸಿಕೊಳ್ಳುವುದಿಲ್ಲ. ಭಗವಂತನು ನಿರ್ಲಿಪ್ತ. ಆದರಿಂದ ವೀತರಾಗನು. ಅಂತಹ ವೀತರಾಗ / ವೀತರೋಗನಿಗೆ ನಮಸ್ಕಾರಗಳು.

98. **ವಿಪ್ರಾಯ ನಮಃ**

ವಿಪ್ರ - ಬ್ರಾಹ್ಮಣ, ಬ್ರಾಹ್ಮಣನಿಗೆ ನಮಸ್ಕಾರಗಳು.

ಬ್ರಹ್ಮಜ್ಞಾನವನ್ನು ಅಂದರೆ ಆತ್ಮಜ್ಞಾನವನ್ನು ತಿಳಿದವನು ಬ್ರಾಹ್ಮಣ. ಅದರಿಂದ ಬ್ರಾಹ್ಮಣನಿಗೆ ನಮಸ್ಕಾರಗಳು. ಇದನ್ನು ತಿಳಿದವನು ಪರಮಾತ್ಮನ ಸಮೀಪಕ್ಕೆ ಹೋಗುತ್ತಾನೆ. ಅಂತಹವನು ಆತ್ಮದ ದಿವ್ಯಸ್ಥಿತಿಯನ್ನು ಪಡೆಯುತ್ತಾನೆ. ಅವನೇ ಜೀವನ್ಮುಕ್ತನು. ಇದು ಹುಟ್ಟಿನಿಂದ ಬರುವುದಿಲ್ಲ. ಅವರವರ ಸಂಸ್ಕಾರಗಳಿಗೆ ತಕ್ಕಂತೆ ಮತ್ತು ಅವರವರ ಸಾಧನೆಯಿಂದ ಬರುತ್ತದೆ.

ಪರಮಾತ್ಮನು ಸ್ವಯಂ ಬ್ರಹ್ಮನೇ ಆದ್ದರಿಂದ ಸಮಸ್ತವನ್ನು ತಿಳಿದಿರುವುದರಿಂದ ವಿಪ್ರನೆಂದು ನಮಸ್ಕರಿಸಲ್ಪಡುತ್ತಾನೆ.

**199. ವಿಕಟಾಂಗಧರಾಯ ನಮಃ**

ವಿಕಟ - ಪ್ರಚಂಡ, ಭಯಂಕರ, ಸುಂದರ ಎಂಬ ಅರ್ಥಗಳಿವೆ.

ಪರಮಾತ್ಮನು ತನ್ನ ಭಕ್ತರ ಉದ್ಧಾರಕ್ಕಾಗಿ ಅನೇಕ ಅವತಾರಗಳನ್ನು ತಳೆಯುವುದರಿಂದ ವಿಕಟಾಂಗಧರನೆಂದು ಹೆಸರು.

ತನಗೆ ತಾನೇ ಸ್ವಯಂ ಇಚ್ಛೆಯಿಂದ ಅನೇಕ ಪ್ರೇರಣೆಗಳನ್ನು ಬುದ್ಧಿಗೆ ಕೊಡುವುದರಿಂದ ವಿಕಟಾಂಗಧರನು.

ನರಸಿಂಹ ಅವತಾರವು ವಿಚಿತ್ರವಾದುದು, ಅತಿ ಉಗ್ರವಾದುದು, ಭಯಂಕರವಾದುದು. ಭಕ್ತ ಪ್ರಹ್ಲಾದನನ್ನು ಕಾಪಾಡುವುದಕ್ಕೆ ಮತ್ತು ಶತ್ರು ಹಿರಣ್ಯಕಶಿಪುವಿನ ಸಂಹಾರಕ್ಕೆ ಮತ್ತು ಬ್ರಹ್ಮನು ಕೊಟ್ಟಿದ್ದ ವರವನ್ನು (ವಿಚಿತ್ರವಾದ್ದು) ಸತ್ಯ ಮಾಡುವುದಕ್ಕೆ ಮಹಾವಿಷ್ಣುವು ಈ ವಿಶೇಷ ರೂಪವನ್ನು ತಳೆದು ವಿಚಿತ್ರ ಸನ್ನಿವೇಶದಲ್ಲಿ ಆವಿರ್ಭವಿಸಿದನು. ನಂತರ ಇಷ್ಟೇ ವಿಚಿತ್ರ ರೀತಿಯಲ್ಲಿ ಶಾಂತರೂಪವನ್ನು ಹೊಂದಿ ಸರ್ವಲೋಕ ಸೃಷ್ಟಿಯನ್ನು ಸಂತೋಷ ಪಡಿಸಿದನು. ತನ್ನ ಭಕ್ತರನ್ನು ಉದ್ಧರಿಸುವುದಕ್ಕಾಗಿ ಸದಾ ಅವರ ಬೆನ್ನ ಹಿಂದೆ ನೆರಳಿನಂತೆ ಇದ್ದೇ ಇರುತ್ತೇನೆಂದು ವರವನ್ನು ಪ್ರದಾನ ಮಾಡಿದನು. ಇಂತಹ ವಿಕಟಾಂಗಧರನಿಗೆ ಕೋಟಿ ಕೋಟಿ ನಮಸ್ಕಾರಗಳು.

*ವಿಪುಲಾಂಗವಿನೀತಾಯ ನಮಸ್ತೇ ವಿಶ್ವಯೋನಯೇ ।*
*ದಿಗಂಬರಾಯ ದೀಪ್ತಾಯ ವಿಶ್ರುತಾಯ ವಿಯೋನಯೇ ॥32॥*
*(200-205)*

**200. ವಿಪುಲಾಂಗವಿನೀತಾಯ ನಮಃ**

ವಿಪುಲ - ವಿಸ್ತೃತವಾದದ್ದು, ಬಹಳ ದಪ್ಪ, ಉದ್ದ, ದೊಡ್ಡದು, ಅತಿಶಯವಾದ, ಅಂಗ - ಅಂಗ, ಅವಯವದಿಂದ.

ವಿನೀತ - ನಯ ಹೊಂದಿದ, ಸಭ್ಯವಾದ ನಡತೆಯುಳ್ಳವನು.

ಈ ಎಲ್ಲ ಅರ್ಥಗಳನ್ನು ಹೊಂದಿದ ವಿಶೇಷ ಅವಯವಗಳಿಂದ ಆವಿರ್ಭವಿಸಿದ ನರಸಿಂಹ ಸ್ವಾಮಿಯು ತನ್ನ ನಖ, ದಂಷ್ಟ್ರಗಳಿಂದ ಹಿರಣ್ಯಕಶಿಪುವನ್ನು ಸಂಹರಿಸಿದನು. ಆದರೂ ಅಷ್ಟೇ ಶಾಂತನಾಗಿ ಸುಂದರ ಸ್ವರೂಪವನ್ನು ಹೊಂದಿ ಲಕ್ಷ್ಮೀ ನರಸಿಂಹ ರೂಪದಲ್ಲಿಯೂ, ಯೋಗಾ ನರಸಿಂಹನಾಗಿಯೂ, ಭೋಗಾನರಸಿಂಹನಾಗಿಯೂ ತನ್ನ ಭಕ್ತರನ್ನು ಅವಿರತ ಕಾಪಾಡುತ್ತಿದ್ದಾನೆ. ಇಂತಹ ವಿಪುಲಾಂಗ ವಿನೀತನಾದ ನರಸಿಂಹನಿಗ **ನಮಸ್ಕಾರಗಳು.**

ಎಂತೆಂತಹ ವಿರೋದಾಭಾಸದ ಭಾವ ರೂಪಗಳಿದ್ದರೂ ಪರಮಾತ್ಮನು ಶತ್ರುಗಳಿಗೆ ಭಯಂಕರನೇ, ಭಕ್ತರಿಗೆ ಪರಮ ಶಾಂತ ಸ್ವರೂಪದವನೇ!! ಅವನಿಗೆ ಎಷ್ಟು ನಾಮ ಸ್ಮರಣೆ ಮಾಡಿದರೂ ಸಾಲದು. ಆದರೆ ಕಲಿಯುಗದಲ್ಲಿ ಅವನನ್ನು ಹೊಂದುವುದು ಪರಮ ಸುಲಭ, ತಿಳಿದೋ ತಿಳಿಯದೆಯೋ, ಎಂತಹ ಸನ್ನಿವೇಶದಲ್ಲಿ ಎಲ್ಲೆಲ್ಲಿ ಅವನನ್ನು ನೆನಸಿದರೂ ಅತಿ ಸುಲಭವಾಗಿ ಪಾರಮಾರ್ಥ ಜ್ಞಾನವನ್ನು ಕೊಟ್ಟು ಕಾಪಾಡುತ್ತಾನೆ. ನಮ್ಮ ಮನಸ್ಸನ್ನು ತನ್ನೆಡೆಗೆ ಅಪಹರಿಸುವುದರಲ್ಲಿ ಇವನನ್ನ ಬಿಟ್ಟರೆ ಬೇರೊಬ್ಬರಿಲ್ಲ. ''ಚೋರಾಗ್ರ ಗಣ್ಯ'' ನೆಂದೇ ಭಕ್ತರಿಂದ ಕರೆಯಲ್ಪಟ್ಟಿದ್ದಾನೆ.

ಇದೇ ರೀತಿ ಪ್ರಾಪಂಚಿಕದಲ್ಲಿ ಮುಳುಗಿದವರನ್ನು ಸಹ ತನ್ನೆಡೆಗೆ ಎಳೆದುಕೊಳ್ಳಲು ಸದಾ ಸಿದ್ಧನಿದ್ದಾನೆ. ಆದರೆ ನಮ್ಮ ಪ್ರಯತ್ನ ಬೇಕು. ಇದಕ್ಕೂ ನಮ್ಮ ಸಂಸ್ಕಾರಗಳೇ ಸಹಾಯಕವಾಗಬೇಕು. ಅದಕ್ಕೂ ಭಗವತ್ಕೃಪೆ ಅವಶ್ಯ. ಇದು ಅವನಿಂದಲೇ ಬರಬೇಕೇ ವಿನಹ ಬೇರೆ ಸಾಧ್ಯವಿಲ್ಲ.

ಹೇ ಪರಮೇಶ್ವರನೇ ಇದನ್ನು ದಯಮಾಡಿ ಕರುಣಿಸು. ನೀನು ಅಪಾರ ಕರುಣಾಳು, ಇದು ನಿನಗೆ ದೊಡ್ಡದಲ್ಲ. ಹೀಗೆಯೇ ಮುಂದುವರಿಯಲಿ - ಈ ಜ್ಞಾನ ಯಜ್ಞ. ಇದು ನಿನ್ನ ಸಂಕಲ್ಪದಿಂದಲೇ ಹೊರಬಂದದ್ದು. ನನ್ನದೇನೂ ಅಲ್ಲ.....

ನಾನು ಎನ್ನುವುದು ನಿನಗೆ ಅರ್ಪಿತವಾದಾಗ ನಾನು ಎಲ್ಲಿದೆ. ನಿನ್ನಲ್ಲಿಯೆ ಅಲ್ವ, ನಾನು, ನೀನು ಗುರು ಎಲ್ಲವೂ ಒಂದೇ. ಜೈ ಗುರು ಮಹಾರಜಕೀ. - ಜೈ ಜೈ ಜೈ

**201. ವಿಶ್ವಯೋನಯೇ ನಮಃ**

ವಿಶ್ವ - ಪ್ರಪಂಚ, ಜಗತ್ತು, ಸೃಷ್ಟಿಯಲ್ಲಿ ಏನೇನು ಇರುವದೋ ಅದೇ ಬ್ರಹ್ಮಾಂಡ. ಅನೇಕ ಬ್ರಹ್ಮಾಂಡಗಳು. ಅವು ತೇಲಾಡುತ್ತಿರುವ ಆಕಾಶ. ಇವುಗಳು ಎಲ್ಲವೂ ಸೇರಿದರೆ ವಿಶ್ವ ಎಂದಾಗುತ್ತದೆ. (ವಿ. ಸ. ವಿಶ್ವಂ ವಿಷ್ಣು ರ್ವಷಟ್ಕಾರೋ.. ಎಂದು ಶುರುವಾಗತ್ತೆ). ವಿಶ್ವ ಎಂದರೆ ಶ್ರೀಮನ್ಮಹಾವಿಷ್ಣು. ಇಡಿ ವಿಶ್ವವನ್ನೇ ತನ್ನ ಉದರದಲ್ಲಿ ಅಡಗಿಸಿಕೊಂಡವನು ಮಹಾವಿಷ್ಣು. ಭಾರತದಲ್ಲಿ ಭಗವದ್ಗೀತೆಯನ್ನು ಅರ್ಜುನನಿಗೆ ಉಪದೇಶಿಸುವಾಗ ಶ್ರೀಕೃಷ್ಣ ಪರಮಾತ್ಮನು ರಣರಂಗದಲ್ಲಿ ಸೈನ್ಯಗಳ ಮಧ್ಯೆ ಉಪದೇಶಿಸಿದನು. ಇದೇ ವಿಶ್ವರೂಪದರ್ಶನ ಯೋಗ ಎಂದು ಗೀತೆಯಲ್ಲಿ ಪ್ರಸಿದ್ಧವಾಗಿದೆ. ಇದು ಗೀತೆಯ ಸರ್ವಸ್ವಯೋಗ.

ಇಂತಹ ವಿಶ್ವವನ್ನೇ ಯೋನಿ ರೂಪದಲ್ಲಿ ನಿಲ್ಲಿಸಿರುವವನು. ವಿಶ್ವಕ್ಕೇನೆ ಯೋನಿ ಯಾಗಿರಬೇಕಾದರೆ ಭಗವತ್ಸ್ವರೂಪ ಎಷ್ಟಿರಬೇಕು?

ಮಹತ್ತಿಗಿಂತ ಮಹತ್ತಾಗಿರುವ ಮತ್ತು ಅಣುವಿಗಿಂತ ಅಣುವಾಗಿರುವ ಪರಮಾತ್ಮನ ರೂಪವನ್ನು ಅರಿತವರಾರು? ಅರಿಯುವವರಾರು? ಅಥವಾ ನಾವು ಅರಿತೇನು ಫಲ? ನಮಗೆ ಬೇಕಾದ್ದು ಮುಕ್ತಿ, ಭವಸಾಗರವನ್ನು ದಾಟಿಸುವ ನಾಮಸ್ಮರಣೆ. ನಾಮಗಳಲ್ಲಿ ಅನೇಕ ಅರ್ಥಗಳನ್ನಿಟ್ಟು ಪಾಡಿ ಪೊಗಳಿ ಕೊಂಡಾಡುವ ಕೆಲಸ ನಮ್ಮದು. ಫಲ ಕೊಡುವುದು ಅವನ ಕೆಲಸ. ಈ ದಾರಿಯಲ್ಲಿ ಹಾಕಿ ಸದಾ ನಮ್ಮನ್ನು ಅದರಲ್ಲಿ ಮುಳುಗಿಸಿ ಭಕ್ತಿಯಲ್ಲಿ ಮಜ್ಜನ ಮಾಡಿಸುವುದು ಅವನ ಕೆಲಸ. ಮನಸ್ಸು ನಾಮ ಸ್ಮರಣೆಯಲ್ಲಿ ಅದ್ದಿರಬೇಕು. ಅವನ ನಾಮಗಳಲ್ಲಿ ಸಂತೋಷ ಪಡಬೇಕು, ಆಟವಾಡಬೇಕು. ''ತುಷ್ಯಂತಿ ಚ ರಮಂತಿ ಚ''.

ಶ್ರೀಕೃಷ್ಣ ಪರಮಾತ್ಮನು ವಿಶ್ವವನ್ನು ತನ್ನ ದೇಹದಲ್ಲಿ ಅಡಗಿಸಿ ಕೊಂಡನೋ ಇಲ್ಲಾ ತನ್ನ ದೇಹವನ್ನು ವಿಶ್ವದಷ್ಟು ದೊಡ್ಡದು ಮಾಡಿದನೋ, ಒಂದಂತೂ ಸತ್ಯ - ವಿಶ್ವವು ಅವನ ದೇಹದಲ್ಲಿ ಇದ್ದಿತು.

ಯಶೋದೆಗೆ ತನ್ನ ಬಾಯಿಯಲ್ಲಿ ವಿಶ್ವ - ಬ್ರಹ್ಮಾಂಡವನ್ನು ತೋರಿಸಿದನು, ಆಗ ವಿಶ್ವವು ಶ್ರೀಕೃಷ್ಣನ ಬಾಯಿಯಲ್ಲಿದ್ದಿತೇ ಅಥವಾ ಬಾಯಿ ವಿಶ್ವದಷ್ಟಾಯಿತೆ?

ಒಂದು ಮಗವನ್ನು ಪಡೆದರೆ (ಸ್ವಂತ, ಅದಾಗದಿದ್ದರೆ ದತ್ತು ಮಗು) ತಂದೆ ತಾಯಿಗಳಿಗೆ ಎಷ್ಟು ಸಂತೋಷವಾಗುತ್ತದೆ. ಹಾಗೆಯೇ ವಿಶ್ವವನ್ನೇ ತನ್ನ ಯೋನಿ ರೂಪದಲ್ಲಿ ಪಡೆದು, ಸಾಕಿ, ಸಲಹಿ ಮುಕ್ತಿ ಕೊಡುವ ಅಗಾಧ ಕಾರ್ಯವನ್ನು ನಡೆಸುವ ಪರಮಾತ್ಮನಿಗೆ ತನ್ನ ಲೀಲಾ ಜಾಲದ ಹೆಣಗೆಗೆ ಎಷ್ಟು ಸಂತೋಷ ಪಡಬೇಕು ಎಂಬುದು ಊಹಿಸಲು ಅಸಾಧ್ಯ.

ಪ್ರತಿಯೊಬ್ಬರೂ ಪುರುಷ ಮತ್ತು ಮಾಯೆಯಾಗಿ ಯೋನಿ ರೂಪದಲ್ಲಿ ತಮ್ಮ ವಿಶ್ವವನ್ನೇ ಸೃಷ್ಟಿಸುತ್ತಾರೆ. ಇದು ಭಗವಂತನ ವಿಶ್ವದ ಚಿಕ್ಕ ರೂಪ / ಅಣು ಮಾತ್ರ ರೂಪ.

ಇನ್ನೂ ಮುಂದೆ ಯೋಚಿಸಿದರೆ ಪ್ರತಿ ಮನಸ್ಸು ಒಂದು ವಿಶ್ವವನ್ನೇ ಸದಾ ಸೃಷ್ಟಿಸುತ್ತಿರುತ್ತದೆ. ಅದರಲ್ಲಿ ಸೃಷ್ಟಿ, ಸ್ಥಿತಿ, ಲಯಗಳು ಸದಾ ನಡೆಯುತ್ತಿರುತ್ತವೆ.

ಇಂತಹ ಮಹಾ ವಿಶ್ವದಲ್ಲಿ ನಮ್ಮ ನಮ್ಮ ನಶಿಸಿ ಹೋಗುವ ವಿಶ್ವಗಳು ಅದೆಷ್ಟೋ? ಕೋಟಿ ಕೋಟಿ ಪರಸ್ಪರ ಬೇರೆ ಬೇರೆ ಯಾದ ''ಮನೋ ಬುದ್ಧಿ ಅಹಂಕಾರ - ಚಿತ್ತ - ಜೀವಾತ್ಮ''ಗಳ ವಿಶ್ವ ಒಂದೊಂದು ಆದರೂ ಎಲ್ಲಾ ಜೀವ ಕೋಟಿಗಳಲ್ಲಿ ಸಂಪರ್ಕವಿರುವಂತಹ ವಿಶಾಲ ವಿಶ್ವವನ್ನು ರಚಿಸಿದ್ದಾನೆ, ಆ ಪರಮಾತ್ಮ. ಅವನ ಸಂಕಲ್ಪವೇ ವಿಚಿತ್ರ, ಇಂತಹ ಜೀವಿಗಳ ವಿಶ್ವ, ಒಂದೊಂದು ಯೋಚನೆ ಬಂದಾಗ ಒಂದು ವಿಶ್ವ ಚಕ್ರ ಆ ಜನ್ಮ ಮುಗಿಯುವವರೆಗ ನಂತರ ಇನ್ನೊಂದು ಜನ್ಮದಲ್ಲಿ ಮತ್ತೊಂದು ವಿಶ್ವಚಕ್ರ,

ಜೀವಕೋಟಿಯ ಪ್ರತಿ ಜೀವಾತ್ಮನಿಗೂ ನಿರಂತರ ವಿಶ್ವಚಕ್ರ,

ತನ್ನ ಪರಮಾತ್ಮನಲ್ಲಿ ಲೀನವಾಗುವವರೆಗೆ ಇದು ನಡೆಯುತ್ತಲೇ ಇರುತ್ತದೆ. ಇದು ಜೀವಾತ್ಮಗಳ ವಿಚಾರವಾದರೆ - ಇಂತಹ ಜೀವ ಸಮೂಹ ಚರಾಚರ ವಸ್ತುಗಳ ಸಮೂಹದ ಸೃಷ್ಟಿ ಪರಮಾತ್ಮನ ಮನಸ್ಸಿನ ಇಚ್ಛೆಯಂತೆ, ಅವನು ಕಾಮಿಸಿದಂತೆ ನಡೆಯುತ್ತದೆ. ಇಂತಹ ಸಂಕಲ್ಪವೇ ಮಹಾ ಸಂಕಲ್ಪ, ವಿಶ್ವಯೋನಿಯವನಿಗೆ ಎಷ್ಟು ನಮಸ್ಕಾರ ಮಾಡಿದರೂ ಸಾಟಿಯಾಗಲಾರದು, ಬೆಳೆಯುತ್ತಲೇ ಇದೆ.

ಇಂತಹ ಕೊನೆ ಮೊದಲಿಲ್ಲದ ಸೃಷ್ಟಿ, ಪ್ರಳಯದಲ್ಲಿ ಕೊನೆಯಾಗುತ್ತೆಂದು ಭಾವಿಸಿದರೆ ಅದು ಮತ್ತೊಂದು ಸೃಷ್ಟಿ ಚಕ್ರಕ್ಕೆ ನಾಂದಿಯಾಗುತ್ತದೆ.

ಈ ಎಲ್ಲಾ ಸೃಷ್ಟಿಯ ಪರಮಾತ್ಮನ ಸಂಕಲ್ಪವನ್ನು ಯೋಚಿಸಿದರೆ, ಯೋಚಿಸಿದಷ್ಟೂ ಜಟಿಲ, ಗೊಂದಲ, ಗೋಜು ಆಗಿ ನಮ್ಮ ಯೋಚನಾ ತರಂಗಕ್ಕೆನೇ ನಾವೇ ಕೊನೆ ಹಾಡಬೇಕಾಗುತ್ತದೆ.

ನಮ್ಮ ಯೋಚನಾ ಶಕ್ತಿಯ ವಿಸ್ತರಣೆಯೇ ವಿಚಿತ್ರ. ಇದೆಲ್ಲ ವಿಚಿತ್ರದೊಡನೆ ಬಹು ದೊಡ್ಡದು ಆ ಪರಮಾತ್ಮನ ಸಂಕಲ್ಪ.

ಇದರೊಳಗೆ ಸಿಕ್ಕಿಸಿರುವ ನಮ್ಮ ಸ್ವಂತದ ಮನಸ್ಸಿನ ಯೋಚನೆ, ನಮ್ಮ ಜೀವನದ ಗುರಿ (ನಮ್ಮ ಆಯುಃ ಪ್ರಮಾಣ) ಇದೆಲ್ಲ ಸೊನ್ನೆ, ಶೂನ್ಯ. ಇದಕ್ಕೆ ನಾವು ನಾವೇ ಬಲೆಯಲ್ಲಿ ಬಿದ್ದಿರುವಾಗ ಅನುಭವಿಸುವುದೇ ಮೇಲು. ಎಲ್ಲವನ್ನು ಆ ಪರಮಾತ್ಮನಿಗೆ ಬಿಟ್ಟು ತನಗೆ ತಾನೇ ಮುಂದೆ ಹೋಗುವ ಕಾಲದೇವನಿಗ ನಮಸ್ಕಾರಗಳು ಎಂದು ಶರಣಾಗತಿಯಾಗುವುದು ಮೇಲು. ಇದು ಬಹು ಮುಖ್ಯ.

.02. ದಿಗಂಬರಾಯ ನಮಃ

ದಿಕ್ - ಅಂಬರ = ದಿಗಂಬರ.

ದಿಕ್ಕುಗಳನ್ನು ಅಂದರೆ ದಶ ದಿಕ್ಕುಗಳನ್ನು ತನ್ನ ಬಟ್ಟೆಯಾಗಿಸಿಕೊಂಡಿರುವವನು. ಅಂದರೆ ಪರಮಾತ್ಮನ ಸ್ವರೂಪ ಬಹು ದೊಡ್ಡದು, ಊಹಿಸಲು ಅಸಾಧ್ಯ.

ಜೈನ ಧರ್ಮದಲ್ಲಿ ದಿಗಂಬರರು, ಶ್ವೇತಾಂಬರರು ಎಂದು ಎರಡು ವಿಧ.

ದಿಗಂಬರರಲ್ಲಿ ವಸ್ತ್ರವಿಲ್ಲದೇ ದೇವನನ್ನು ಆಶ್ರಯಿಸಿ ಪೂಜಿಸುವುದು. ಇದರಲ್ಲಿ ಒಂದು ತತ್ವವಿದೆ. ಯಾವ ರೀತಿ ಪ್ರಪಂಚಕ್ಕೆ ಬಂದೆವೋ ಅದರಲ್ಲಿಯೇ ಪರಮಾತ್ಮನನ್ನು ಪೂಜಿಸುವುದು. ಮತ್ತೆ ಇಲ್ಲಿಂದ ಹೋಗುವಾಗ ಯಾವ ರೀತಿ ಜೊತೆಯಲ್ಲಿನ ಮತ್ತು ಸಂಪಾದಿಸಿದ ಎಲ್ಲವನ್ನು ಬಿಟ್ಟು (ದೇಹವನ್ನು ಸಹಾ ಬಿಟ್ಟು) ಜೀವಾತ್ಮನು ತನ್ನ ಸೂಕ್ಷ್ಮ ಶರೀರದಲ್ಲಿ, ಅಂದರೆ ಜೀವಾತ್ಮ, ಹತ್ತು ಇಂದ್ರಿಯಗಳು ಮತ್ತು ಅವುಗಳ ದೇವ ತೇಜಸ್ಸು, ಪಂಚಪ್ರಾಣಗಳು,

ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ ಇವುಗಳುಳ್ಳ ಸೂಕ್ಷ್ಮ ಶರೀರ ಮಾತ್ರ ಒಂದಾಗಿ ಹೋಗುತ್ತದೆ. ಜೊತೆಯಲ್ಲಿ ಕರ್ಮ ಫಲಗಳು ಹೊಗುತ್ತವೆ.

ಎಂದಿಗೆ ಕರ್ಮಫಲಗಳು ಭಗವನ್ನಾಮ ಸ್ಮರಣೆಯಿಂದ ಸಂಪೂರ್ಣವಾಗಿ ನಶಿಸಿ ಹೋಗುವುದೋ ಆಗ ಇಂದ್ರಿಯಗಳು ತಮ್ಮ ತಮ್ಮ ದೇವ ಶಕ್ತಿಯಲ್ಲಿ ಅಡಗಿ ಹೋಗುತ್ತವೆ. ನಂತರ ಪಂಚಪ್ರಾಣಗಳು ವಾಯುವಿನಲ್ಲಿಯೂ, ತದನಂತರ ಮನಸ್ಸು ಬುದ್ಧಿಗಳು ಪರಮಾತ್ಮನ ಅವಪೂಗಳಲ್ಲಿ ಸೇರುತ್ತದೆ. ಕೊನೆಗೆ ಅಹಂಕಾರ, ಚಿತ್ತಗಳು ಮಹತ್ತಿನಲ್ಲಿ ಸೇರಿದಾಗ ಉಳಿಯುವುದು ಜೀವಾತ್ಮ ಒಂದೇ. ಅದು ಪರಮಾತ್ಮನಲ್ಲಿ ಸಾರೂಪ್ಯ, ಸಾಯುಜ್ಯ, ಸಾಮಿಪ್ಯ, ಸಾಲೋಕ್ಯದಲ್ಲಿ ಸೇರಿ ಹೋಗುತ್ತದೆ. ಇದೇ ಕೈವಲ್ಯ ಪಾಪ್ತಿ. ಇಲ್ಲಿಂದ ಆತ್ಮವು ಮತ್ತೆ ಬರುವುದಿಲ್ಲ. ಜನ್ಮ ತಾಳುವುದಿಲ್ಲ. ಯೋಗಿಗಳು ಬಯಸುವುದು ಇದನ್ನೇ. ಈಗ ಜೀವಾತ್ಮನು ತನ್ನ ಎಲ್ಲ ಸಂಪರ್ಕಗಳಿಂದಲೂ (ಅಂದರೆ ಸೂಕ್ಷ್ಮ ದೇಹದಲ್ಲಿದ್ದ ಎಲ್ಲ ಬಂಧನಗಳಿಂದಲೂ) ಬಿಡುಗಡೆಯಾಗಿ ಏಕಾಂಗಿಯಾಗಿ ಇರುತ್ತದೆ. ಇದೇ ದಿಗಂಬರ ಸ್ಥಿತಿ. ಅಂತಹ ಸ್ಥಿತಿಗೆ ನಮಸ್ಕಾರಗಳು.

ಮತ್ತೂ ವಿಶೇಷವೆಂದರೆ ಈಗ ಆತ್ಮಪರಮಾತ್ಮ ಬೇರೆಯಲ್ಲ ಒಂದೇ, ಇದೇ ಅದ್ವೈತ ಸ್ಥಿತಿ. ಇದರ ಚಿಂತನೆಯಿಂದ ಮನಸ್ಸು ಕ್ರಮ ಕ್ರಮವಾಗಿ ಹದವಾಗಿ ಕೊನೆಯನ್ನು ಸೇರುವುದೇ ಪರಮ ಗುರಿ. ದಿಗಂಬರಾಯ ನಮಃ. ಈಗ ಯೋಚನಾಲಹರಿ ಎಲ್ಲಿಗೆ ಮುಟ್ಟಿದೆ! ಇದಕ್ಕೆ ಅಂತ ಉಂಟೆ? ಇಲ್ಲ ಅದು ಅನಂತ, ಅನಾದಿ.....

03. ದೀಪ್ತಾಯ ನಮಃ

ದೀಪ - ಬೆಳಕು, ತೇಜಸ್ಸು ದೀಪ, ದೀಪ್ತ - ತೇಜಸ್ಸಿನಿಂದ ಕೂಡಿದ್ದು ಅಥವ ಬೆಳಕಿನಿಂದ ಹೊಳೆಯುವಂತಹ ವಸ್ತು.

ಪರಮಾತ್ಮನು ತನ್ನ ತೇಜಸ್ಸಿನಿಂದ ಹೊಳೆಯುತ್ತಿರುತ್ತಾನೆ. ಅಂತಹ ದೀಪ್ತನಿಗೆ ನಮಸ್ಕಾರಗಳು. ಜಾಜ್ವಲ್ಯಮಾನನಾದ ಪರಮಾತ್ಮನಿಗೆ ನಮಸ್ಕಾರಗಳು.

ಪ್ರತಿ ದೇಹವಿರುವ ವಸ್ತುವು ಒಳಗಿರುವ ಆತ್ಮ ತೇಜಸ್ಸಿನಿಂದ ಪ್ರಕಾಶಮಾನವಾಗಿರುತ್ತದೆ. ಆ ತೇಜಸ್ಸಿನಿಂದ ಕೂಡಿದ ಆತ್ಮವು ಹೊರಟು ಹೋದರೆ ದೇಹವು ವ್ಯರ್ಥವಾಗುತ್ತದೆ.

ಜ್ಞಾನದಿಂದ ದೀಪ್ತನಾದ ಮನುಷ್ಯನು ಜ್ಞಾನಿಯಾಗುತ್ತಾನೆ.

ಸೂರ್ಯನು ಕಿರಣಗಳಿಂದ ಸುಡುತ್ತಾನೆ, ಅವನೂ ದೀಪ್ತನೇ

ದೀಪವು ಹತ್ತಿಸಿದ ಮೇಲೆ ಬೆಳಕಿನಿಂದ ಕತ್ತಲನ್ನು ಹೋಗಲಾಡಿಸುತ್ತದೆ (ದೀಪ್ತವಾದ್ದು).

ಜ್ಞಾನದಿಂದ ಅಜ್ಞಾನವೆಂಬ ಕತ್ತಲು ಓಡುತ್ತದೆ (ದೀಪ್ತ).

ಒಬ್ಬರು ಮತ್ತೊಬ್ಬರಿಗೆ ಜ್ಞಾನದಾನ ಮಾಡುವುದರಿಂದ ಅವ ದೀಪ್ತರನ್ನಾಗಿ ಮಾಡುತ್ತಾರೆ.

ದೀಪ್ತರಾದವರು ಮತ್ತೊಬ್ಬರನ್ನು ದೀಪ್ತ ಮಾಡುತ್ತಾರೆ. ಸೃಷ್ಟಿಯಲ್ಲಿ ಬೆಳಕನ್ನು ಮತ್ತು ಜ್ಞಾನವನ್ನು ಕೊಡುವುದು ಅತ್ಯುನ್ನತ ಸ್ಥಿತಿಯಲ್ಲಿರುವ ಪರಮಾತ್ಮನು. ಇವನಿಗಿಂತ ಉತ್ತಮ ದೀಪ್ತರು ಬೇರೆ ಯಾರೂ ಅದರಿಂದ ಇಂತಹ ದೀಪ್ತನಾದ ಪರಮಾತ್ಮನಿಗೆ ನಮಸ್ಕಾರಗಳು.

**204. ವಿಶ್ರುತಾಯ ನಮಃ**

ಶ್ರುತ - ಕೇಳಲ್ಪಟ್ಟವನು, ಕೇಳಲ್ಪಟ್ಟ ವಸ್ತು, ಅಥವಾ ಕೇಳಲ್ಪಟ್ಟ ಮುಂತಾದವು.

ಕೇಳಲ್ಪಟ್ಟವರಲ್ಲೆಲ್ಲ ಉತ್ತಮನು ವಿಶ್ರುತ - ಪರಮಾತ್ಮ. ಕೇ ವಿಶಯಗಳಲ್ಲೆಲ್ಲ ಅತ್ಯುತ್ತಮವಾದ್ದು ಜ್ಞಾನ. ಜ್ಞಾನದಲ್ಲಿ ಪರಮಾ ಸಂಬಂಧಿಸಿದ್ದು ಉತ್ತಮ. ಜೀವಾತ್ಮನಿಗೆ ಪರಮಾತ್ಮನಲ್ಲಿ ಸೇರಿಸುವ ದಾರಿ - ವಿಶ್ರುತವಾದ್ದು. ಅದರಿಂದ ವಿಶ್ರುತನಾದ ಪರಮಾತ ನಮಸ್ಕಾರಗಳು.

**205. ವಿಯೋನಯೇ ನಮಃ**

ವಿಶೇಷವಾದ ಯೋನಿ - ಜನನದ ದಾರಿ.

ಪರಮಾತ್ಮನ ಸಂಕಲ್ಪದಿಂದ ಬ್ರಹ್ಮಾದಿಗಳು, ಬ್ರಹ್ಮಾಂಡಗಳು, ಈ ಜ ಎಲ್ಲ ಅವನಿಂದಲೇ ಹೊರಬಂದುದರಿಂದ ಪರಮಾತ್ಮನು ವಿಲಕ್ಷಣ ವಿಶೇಷವಾದ ''ವಿಯೋನಿ'' - ವಿಯೋನಯೇ ನಮಃ.

ನಮ್ಮ ಮನಸ್ಸು ಸಹ ಅನೇಕ ವಿಚಿತ್ರವಾದ ವಿಶಯಗಳನ್ನು ಹೊಮ್ಮುತ್ತದೆ. ಇದಕ್ಕೂ ವಿಯೋನಿ ಎಂದು ಕರೆಯಬಹುದು. ''ವಿಯೋನ ಮನಸೇ ನಮಃ.

ಜಗತ್ತು ಸಹ ವಿಯೋನಿಯೆ, ಏಕೆಂದರೆ ಅದರಲ್ಲಿ ಜನಿಸುವ ವಿ ಚರಾಚರ ಜಗತ್ತು ವಿಚಿತ್ರ.

ಸಂಸಾರ ಸಾಗರವು ಸಹ ಈ ಧಾಟಿಯಲ್ಲಿ ''ವಿಯೋನಿ''ಯೇ.

*ವಿಹ್ವಲಾಯ ವಿವಾಹಾಯ ನಮೋ ವ್ಯಾಹೃತಯೇ ನಮಃ /*
*ವಿಲಾಸಾಯ ವಿಕಲ್ಪಾಯ ಮಹಾಕಲ್ಪಾಯ ನಮಃ //33// (206-*

**206. ವಿಹ್ವಲಾಯ ನಮಃ**

ವಿಹ್ವಲ - ವ್ಯಾಕುಲ, ದುಃಖಿತ, ತೊಂದರೆಗೀಡಾದ ಎಂದು ಅರ್ಥ

ವಿಹ್ವಲ - ಒಂದು ತರಹ ವಿಕಾರವಾದ್ದು ಅಥವಾ ವಿಚಿತ್ರವಾದ್ದು ಎಂದು ಮೇಲ್ನೋಟಕ್ಕೆ ಅರ್ಥವಾಗುತ್ತದೆ.

ಪರಮಾತ್ಮನಿಗೆ ಮೇಲಿನ ಅರ್ಥದಂತೆ ವ್ಯಾಕುಲ, ದುಃಖ, ತೊಂದರೆ ಎಲ್ಲಿರುತ್ತೆ. ಅವನು ದ್ವಂದ್ವಾತೀತನು, ಗುಣಾತೀತನು, ಭವಸಾಗರದ ಪೀಡೆಗಳಿಗೆ ಮೀರಿದವನು. ಆದರೆ ಸಂಸಾರ ಸಾಗರಕ್ಕೆ ಮತ್ತು ಅದರಲ್ಲಿರುವ ಜೀವಾತ್ಮ ಮತ್ತು ಚರಾಚರ ವಸ್ತು ಮತ್ತು ಪ್ರಾಣಿಗಳಿಗೆ ಮುಕ್ತಿ ಕೊಡುವುದೇ ಒಂದು ಕಷ್ಟದ ಕೆಲಸ. ಭಕ್ತರ ಕರೆಗಳಿಗೆ 'ಓ'ಗೊಡುವುದು ಸಹ ಒಂದು ದೊಡ್ಡ ಸಮಸ್ಯೆ. ಪ್ರತಿಯೊಂದು ಪ್ರಾರ್ಥನೆಯೂ ಅವವುಗಳ ಸಮಯಕ್ಕೆ ತಕ್ಕಂತೆ ಫಲಿಸುವಂತೆ ಮಾಡುವುದೂ ಒಂದು ಕಷ್ಟ ಸಾಧ್ಯವಾದ ಕೆಲಸ. ಇದು ಒಬ್ಬ ಭಕ್ತನು ಪರಮಾತ್ಮನ ಕಷ್ಟ ಸುಖಗಳನ್ನು ವಿಮರ್ಶಿಸುತ್ತ ಮುಟ್ಟಿರುವ "ವಿಹ್ವಲ". ಆದರೆ ಭಕ್ತನ ಯೋಚನಾ ಶಕ್ತಿಗಿಂತ ದೊಡ್ಡವನು ಅವನು. ಲೀಲಾಜಾಲವಾಗಿ ಎಲ್ಲವನ್ನು ನಡೆಸಿ ಬಿಡುತ್ತಾನೆ ಅವನು. ಹೀಗೆ ನಡೆಸುವುದೂ ಒಂದು ವಿಚಿತ್ರವೇ. ಎಲ್ಲರನ್ನು ವಿಹ್ವಲವಾಗುವಂತೆ ಆಡಿ ತಾನು ಅತೀತನಾಗಿ ತನ್ನ ಸಂಕಲ್ಪವನ್ನು ನಡೆಸುತ್ತಾನೆ. ಇದು ಪರಮಾತ್ಮನ ಒಂದು ಲೀಲೆ. ಈ ಜಗನ್ನಾಟಕಕ್ಕೆ ಅವನೇ ಸೂತ್ರಧಾರಿ.

07. **ವಿವಾಹಾಯ ನಮಃ**

ವಿವಾಹ ಎಂದರೆ ಶುಭವಾದ ಸಂಸಾರ / ಮದುವೆ. ಪುರುಷ ಮತ್ತು ಸ್ತ್ರೀಯರ ಸಂಗವೇ (ಶ್ರೇಷ್ಠ ವೇದವಿದಿತವಾದ್ದು) ಮದುವೆ. ಇದರಿಂದ ಗೃಹಸ್ಥ ಧರ್ಮವನ್ನು ನಡೆಸಬೇಕು. ತಾನು ಮಾಡಿದ್ದನ್ನೆ ಲೋಕವು ಅನುಸರಿಸುತ್ತದೆ ಎಂದು ಗೀತೆಯಲ್ಲಿ ಶ್ರೀಕೃಷ್ಣನು ಹೇಳಿದ್ದಾನೆ. ಅದರಂತೆ ಪರಮಾತ್ಮನು ಪರಬ್ರಹ್ಮನಾದನು. ತನ್ನ ಲೀಲೆಯನ್ನು ನಡೆಸಲು ಅನೇಕ ದೇವರುಗಳಾಗಿ ಭಾಗವಾಗಿ ಕೆಲಸಗಳನ್ನು ಹಂಚಿರುತ್ತಾನೆ. ಬ್ರಹ್ಮನಾಗಿ ಸೃಷ್ಟಿಯನ್ನು, ವಿಷ್ಣುವಾಗಿ ಸ್ಥಿತಿ - ನಡೆಸುವುದನ್ನು ಮತ್ತು ರುದ್ರನಾಗಿ ಲಯವನ್ನು ಮಾಡುತ್ತಾನೆ. ಹಾಗೆಯೇ ಬ್ರಹ್ಮನಿಗೆ ಸರಸ್ವತಿ, ವಿಷ್ಣುವಿಗೆ ಲಕ್ಷ್ಮಿ, ಶಿವನಿಗೆ ಪಾರ್ವತಿ ಸ್ತ್ರೀ ದೇವತೆಗಳು. ಇವರುಗಳಿಗೆ ಕಲ್ಯಾಣಗಳೂ ನಡೆಯುತ್ತವೆ. ಇದರಂತೆ ಅನೇಕ ದೇವ - ದೇವಿಯರ ಕಲ್ಯಾಣಗಳು ವೇದ, ಪುರಾಣ, ಉಪನಿಷತ್ತುಗಳಲ್ಲಿ ಹೇಳಲ್ಪಟ್ಟಿವೆ. ಮರ್ತ್ಯಲೋಕದಲ್ಲಿ ಹೇಗೆ ವಿವಾಹಗಳು ನಡೆಯುತ್ತವೆಯೋ ಹಾಗೆಯೇ ದೇವಲೋಕದಲ್ಲಿ ನಡೆಯುತ್ತವೆ. ಆ ಕಲ್ಯಾಣಗಳನ್ನು ಈ ಲೋಕದಲ್ಲಿ ಭಕ್ತರು ನಡೆಸಿ ಭಕ್ತಿ ಪ್ರದಾನವನ್ನು ಹೆಚ್ಚಿಸಿ ಸಂತೋಷ, ಆನಂದ ಪಟ್ಟು ತಮ್ಮ ಇಷ್ಟಗಳಂತೆ ವರಗಳನ್ನು ಪಡೆದು ಕೈವಲ್ಯದ ದಾರಿ ಕಂಡುಕೊಂಡಿದ್ದಾರೆ. ಅವರಿಂದ ''ವಿವಾಹಾಯ ನಮಃ' ಎಂದು ಪರಮಾತ್ಮನನ್ನು ನಾಮ ಜಪಮಾಡುವುದರಲ್ಲಿ ಶ್ರೇಯಸ್ಸು ಇದ್ದೇ ಇದೆ.

208. ವ್ಯಾಹೃತಯೇ ನಮಃ

ಹೃ - ಆಕರ್ಷಿಸು. ಹೃತ - ಆಕರ್ಷಿಸಲ್ಪಟ್ಟವನು.

ವ್ಯಾ - ಹೃತ , ವಿಶೇಷವಾಗಿ ಆಕರ್ಷಿಸಲ್ಪಟ್ಟವನು.

ನರಸಿಂಹನು ದಶ ಅವತಾರಗಳಲ್ಲೆಲ್ಲ ವಿಶೇಷವಾದ ಸಿಂಹ - ನರನ ಶರೀರ ಉಳ್ಳವನಾದ್ದರಿಂದ ಬಹಳ ಬೇಗ ಜ್ಞಾಪಕಕ್ಕೆ ಬರುತ್ತಾನೆ.

ಇವನ ರೂಪ, ಶತ್ರುವನ್ನು ಸಂಹರಿಸುವಾಗ ಉಪಯೋಗಿಸಿದ ನಖಾಯುಧ, ಸಂಹರಿಸಿದ ವಿಕೃತ ರೀತಿ, ಉದ್ಭವವಾದ ವಿಚಿತ್ರ ಸನ್ನಿವೇಶ, ಕಂಭದಿಂದ ಬಂದದ್ದು ಎಲ್ಲವೂ ವಿಚಿತ್ರಗಳ ಮತ್ತು ವಿಶೇಷಗಳ ಸಮೂಹ. ಅದರಿಂದ ವ್ಯಾಹೃತಯೇ ನಮಃ ಎಂದು ತಿಳಿಯಬಹುದು.

209. ವಿಲಾಸಾಯ ನಮಃ

ವಿಲಾಸನಿಗೆ ನಮಸ್ಕಾರಗಳು, ಸಂತೋಷ ಪಡುವವನಿಗೆ ನಮಸ್ಕಾರಗಳು.

ನರಸಿಂಹನು ಹಿರಣ್ಯಕಶಿಪುವನ್ನು ಸಂಹರಿಸಿದ ಮೇಲೆ ಶಾಂತ ರೂಪನಾಗಿ ಬಹಳ ಸಂತೋಷಪಟ್ಟನು. ಇದಕ್ಕೆ ಕಾರಣಗಳು (1) ಪ್ರಹ್ಲಾದನಂತಹ ಪರಮ ಶ್ರದ್ಧೆಯ ಭಕ್ತನನ್ನು ಅವನ ತಂದೆಯ ವಿಚಿತ್ರ ಹಿಂಸೆಗಳಿಂದ ರಕ್ಷಿಸಿದನು. (2) ತನ್ನ ವೈಕುಂಠದ ದ್ವಾರ ಪಾಲಕರಾದ ಜಯ, ವಿಜಯರನ್ನು (ಇವರು ಪರಮ ಬೇಕಾದವರಾಗಿ ಅತ್ಯಂತ ಶ್ರದ್ಧೆಯಿಂದ ಸೇವಿಸಿದರೂ ಸಹ) ಋಷಿಗಳ ಶಾಪದಿಂದ ಬಿಡುಗಡೆ ಮಾಡಿದ್ದಕ್ಕಾಗಿ. (3) ಲೋಕ ಕಂಟಕನಾದ ಹಿರಣ್ಯಕಶಿಪುವನ್ನು ಸಂಹರಿಸದ್ದರಿಂದ ಮತ್ತು (4) ಬ್ರಹ್ಮನ ವಿಚಿತ್ರ ವರವನ್ನು ಪಾಲಿಸಿ ಸೂಕ್ತವಾದ ರೂಪವನ್ನು ತಾಳಿ ಹಿರಣ್ಯಕಶಿಪುವನ್ನು ಸಂಹರಿಸಿದ್ದರಿಂದ.

ವಿಲಾಸ - ಕ್ರೀಡೆ, ಆಟ. ಈ ಪ್ರಪಂಚವನ್ನು ಸೃಷ್ಟಿಸಿ ಜೀವಿಗಳೊಡನೆ ಆಟವಾಡುವವನು. ಸೂಕ್ಷ್ಮ ರೀತಿಯಲ್ಲಿ ನೋಡಿದರೆ ಪರಮಾತ್ಮನು ತನ್ನ ಜೀವಾತ್ಮಗಳೊಡನೆ ಆಟವಾಡುತ್ತಾನೆ. ಪರಮಾತ್ಮ, ಆತ್ಮಗಳು ಮಾಯಾ ಪ್ರಪಂಚದಲ್ಲಿ ಯೋಗಮಾಯೆಯ ಮೂಲಕ ಕ್ರೀಡಿಸುತ್ತಾರೆ. ಇದರಲ್ಲಿ ಜೀವಾತ್ಮನು ಮಾಯಾ ಜಾಲದಲ್ಲಿ ಸಿಕ್ಕಿ, ದೇಹದಿಂದ ದೇಹಕ್ಕೆ ಪ್ರಯಾಣ ಮಾಡುತ್ತ ಮಾಯೆಯ ಕಾರಣದಿಂದ ಪರಮಾತ್ಮನನ್ನು ಮರೆತು ಕರ್ಮಗಳನ್ನು ಮಾಡುತ್ತ ಅವುಗಳ ಫಲ ಸ್ವರೂಪವಾಗಿ ದ್ವಂದ್ವಗಳನ್ನು ಅನುಭವಿಸುತ್ತಾನೆ (ಸುಖ ದುಃಖ, ಕಷ್ಟ ಸುಖ, ಲಾಭ ನಷ್ಟ ಇತ್ಯಾದಿ). ಹೀಗೆ ಅನುಭವಿಸುತ್ತಾ ಪರಮಾತ್ಮನ ಅಪಾರ ಕರುಣೆಯಿಂದ ಅವನ ಸನ್ನಿಧಿಗೆ ಹೋಗುವ ದಾರಿಯನ್ನು ಪಡೆಯುತ್ತಾನೆ. ನಂತರ, ಅದುವರೆಗೂ ಹೇಗೆ ಮಾಯಾ ಪ್ರಪಂಚದ ಒಳಗೆ ಹೇಗೆ ಅತಿ ಆಳದಲ್ಲಿ ಹೋಗಿದ್ದನೋ ಹಾಗೆಯೇ ಹರಿಗೆ ಶರಣನಾಗಿ ಮೇಲೆದ್ದು ಕರ್ಮಬಂಧನದಿಂದ ಮತ್ತು ಭವಸಾಗರದಿಂದ ಬಿಡುಗಡೆ ಹೊಂದಿ ಪರಮ

ಪದವನ್ನು ಅಂದರೆ ಪುನಾರಾವೃತ್ತಿ ರಹಿತವಾದ ಪರಮ ಪದವನ್ನು ಸೇರುತ್ತಾನೆ ಮತ್ತು ಇಂತಹ ಆತ್ಮ ಜ್ಯೋತಿಯು ಪರಮಾತ್ಮನ ಪರಂ ಜ್ಯೋತಿಯಲ್ಲಿ ಐಕ್ಯವಾಗಿ ತನ್ನತನವನ್ನು ಕಳೆದುಕೊಳ್ಳುತ್ತದೆ. ಈಗ ಅದನ್ನು ಬೇರ್ಪಡಿಸಿ ನೋಡಲು ಸಾಧ್ಯವಿಲ್ಲ.

1. ಹೇಗೆ ಘಟಾಕಾಶವು ಘಟ ಒಡೆದ ಮೇಲೆ ಆಕಾಶದಲ್ಲಿ ಒಂದಾದರೆ ಬೇರ್ಪಡಿಸಲು ಸಾಧ್ಯವಿಲ್ಲವೋ, ಆ ರೀತಿ ಒಂದಾಗುತ್ತದೆ.

2. ಹೇಗೆ ಸಮುದ್ರದಲ್ಲಿ ನದಿಯು ಸೇರಿ ತನ್ನ ತನವನ್ನು ಕಳೆದುಕೊಂಡ ಮೇಲೆ ಬೇರ್ಪಡಿಸಲು ಸಾಧ್ಯವಿಲ್ಲವೋ, ಹಾಗಾಗುತ್ತದೆ.

3. ಹೇಗೆ ಒಂದು ತೊಟ್ಟು ತುಪ್ಪವು ತುಪ್ಪದಲ್ಲಿ ಸೇರಿದರೆ ಒಂದಾಗುತ್ತದೊ ಹಾಗಾಗುತ್ತದೆ.

ಈ ಉದ್ದವಾದ ದಾರಿಯಲ್ಲಿ ಪರಮಾತ್ಮನು ಎಂತಹ ವಿಚಿತ್ರದಲ್ಲಿ ವಿಲಾಸಿಸುತ್ತಾನೋ ಅದೇ ವಿಲಾಸ.

ವಿಲಾಸನಿಗೆ ನಮಸ್ಕಾರಗಳು.

10. ವಿಕಲ್ಪಾಯ ನಮಃ

ವಿಕಲ್ಪ ಎಂದರೆ ಅನೇಕ ಭಾವನೆಗಳು ಹುಟ್ಟುತ್ತವೆ, ಉದಾಹರಣೆಗೆ - ಸರಿಯಾಗಿದ್ದು ಸರಿಯಾಗಿಲ್ಲದಂತೆ ಕಾಣುವುದು ಅಥವಾ ಸರಿಯಾಗಿಲ್ಲದ್ದು ಸರಿಯಾಗಿದ್ದಂತೆ ಕಾಣುವುದು, ಅಂದರೆ ಯಥಾ ಸ್ಥಿತಿಯನ್ನು ತಿಳಿಸುವುದಿಲ್ಲ. ಇದರಿಂದ ಮನಸ್ಸಿನಲ್ಲಿ ಒಂದು ರೀತಿಯ ಡೋಲಾಯಮಾನ ಸ್ಥಿತಿ ಉದ್ಭವಿಸುತ್ತದೆ. ಇದರಿಂದ ಪರಮಾತ್ಮನ ನಿಜ ರೀತಿ ಕಾಣುವುದಿಲ್ಲ.

ಜಗತ್ತು ಸತ್ಯವಾಗಿ ಕಾಣುತ್ತದೆ. ಬ್ರಹ್ಮವು ಊಹೆಗೆ ಎಟುಕದಂತಹದು. ನಿಜವಾಗಿ ಜಗತ್ತು ನಾಶವಾಗುವಂತಹದು. ಬ್ರಹ್ಮವು ಸತ್ಯವಾದ್ದು "ಬ್ರಹ್ಮ ಸತ್ಯಂ ಜಗನ್ಮಿಥ್ಯಾ".

ದೇಹದಲ್ಲಿರುವ ಆತ್ಮವು ಸತ್ಯವಾದ್ದು. ಅದಕ್ಕೆ ನಾನು ಎಂಬುವುದು ಅಂಟುವುದಿಲ್ಲ. ಆದರೆ ನಾನು ಎಂಬುದನ್ನು ದೇಹವೇ ಎಂದು ತಿಳಿದು ದೇಹಕ್ಕಾಗುವ ವ್ಯತ್ಯಾಸಗಳನ್ನು ನೋವು, ಸುಖ, ದುಃಖ, ಆಸ್ತಿ ಪಾಸ್ತಿ ಮುಂತಾದವುಗಳನ್ನು ನನ್ನದೆ ಎಂದು ಭಾವಿಸಿ ತಾನು ಇದ್ದು ದೇಹವನ್ನು ನಡೆಸುವ "ಆತ್ಮ" ಅಥವಾ ತೇಜಶ್ಶಕ್ತಿಯನ್ನು ಮರೆತಿರುತ್ತೇವೆ. ಇದು ಒಂದು ರೀತಿಯ ವಿಕಲ್ಪವೇ. ಈ ವಿಚಿತ್ರ ಭಾವನೆಯು ಪರಮಾತ್ಮನ ಸಂಕಲ್ಪದಂತೆ ನಡೆಯುತ್ತದೆ.

ಇನ್ನೊಂದು ವಿಕಲ್ಪವೆಂದರೆ ಸೂತ್ರಧಾರನಾದ ಪರಮಾತ್ಮನನ್ನು ಮರೆತು ಎಲ್ಲವೂ ನಾನೇ, ನನ್ನಿಂದಲೇ ಸರ್ವವೂ ನಡೆಯುತ್ತದೆ ಎಂದು ಭಾವಿಸುವುದು.

ಇಂತಹ ವಿಕಲ್ಪ, ಅಹಂಕಾರಗಳೊಡನೆಯೂ "ನಾನು" ಎಂಬುದರ ಸ್ವ ಸ್ವರೂಪವನ್ನು ಭಗವಂತನ ಸಂಕಲ್ಪದಂತೆ ತೋರಿಸಿ ವಿಕಲ್ಪದಿಂದ ಪಾರುಮಾಡಿ "ನಾನು" ಯಾವುದು, "ನೀನು" ಯಾವುದು, "ಪರಮಾತ್ಮ" ಯಾರು ಎಂಬುದರ ಜ್ಞಾನವೂ ಸಹ ಬರುತ್ತದೆ. ಇದು ಬಂದಾಗ ಉಳಿಯುವುದು ದೇಹದಲ್ಲಿರುವ "ಆತ್ಮ ಶಕ್ತಿಯೊಂದೇ". ಇದು ಪ್ರತಿ ಜೀವಿಯಲ್ಲಿಯೂ ಸಮಾನವೇ. ಎಲ್ಲ "ಆತ್ಮಗಳೂ" ಪರಮಾತ್ಮನಿಂದಲೇ ಬಂದವುಗಳು ಮತ್ತು ಎಲ್ಲವೂ ಮತ್ತೆ ಪರಮಾತ್ಮನಲ್ಲಿಯೇ ಲೀನವಾಗುತ್ತವೆ. ಆಗ ಯಾವ ರೀತಿಯ ಭೇದವೇ ಇರುವುದಿಲ್ಲ. "ನಾನು" ಎಂಬುದು ಹೋದ ಮೇಲೆ ಉಳಿಯುವುದು "ಆತ್ಮ - ಪರಮಾತ್ಮ" ಎರಡು ... ಮುಂದೂ ಯೋಚನಾ ಲಹರಿಯನ್ನು ಬಿಟ್ಟರೆ ಆತ್ಮ ಪರಮಾತ್ಮನಲ್ಲಿ ಲೀನವಾದಾಗ ಉಳಿಯುವುದು ಪರಮಾತ್ಮನೇ. ಇದೇ ದ್ವೈತ ಭಾವದಿಂದ ಅದ್ವೈತ ಭಾವವನ್ನು ಹೊಂದುವುದು.... ಎಷ್ಟು ಚೆನ್ನಾಗಿದೆ ಈ ಸ್ಥಿತಿ.... ವಿಕಲ್ಪನಾದವನಿಗೆ ಆದರಿಂದ "ಏಕಮೇವಾ ದ್ವಿತೀಯಂ", ಅಹಂ ಬ್ರಹ್ಮಾಸ್ಮಿ, ಮುಂತಾದ ರೀತಿ ಲಹರಿಗಳು ಬರುವುದು...!

ವಿಕಲ್ಪಾಯ ನಮಃ, ವಿಚಿತ್ರ ಕಲ್ಪನಿಗೆ ನಮಸ್ಕಾರಗಳು.

1. ಮಹಾಕಲ್ಪಾಯ ನಮಃ

ಮಹಾಕಲ್ಪನಿಗೆ ನಮಸ್ಕಾರಗಳು.

ಕಲ್ಪವೃಕ್ಷಗಳು, ಜಗತ್ತಿನಲ್ಲಿ ಕೇಳಿದ ವಸ್ತುಗಳನ್ನು ತಕ್ಷಣ ಕೊಡುವ ಕಲ್ಪವೃಕ್ಷಗಳಲ್ಲೆಲ್ಲ ಕಲ್ಪವೃಕ್ಷವೇ ಪರಮಾತ್ಮ. ಇವನು ಕೊಡದಿರುವ ವಸ್ತುವೇ ಇಲ್ಲ. ಜೀವಿಗಳಿಗೆ ಬೇಕಾದ ಅತ್ಯಂತ ಅಮೂಲ್ಯ ವಸ್ತು ಕೈವಲ್ಯ. ಇದನ್ನು ಕರುಣಿಸುವವನು ಪರಮಾತ್ಮ. ಕಲ್ಪ, ಕಲ್ಪತರು, ಕಲ್ಪವೃಕ್ಷ ಎಲ್ಲಾ ಪರ್ಯಾಯ ಪದಗಳು. ಕಾಮಧೇನುವೇ ಕಲ್ಪತರು ಮುಂತಾದದನ್ನು ನಿರೂಪಿಸುತ್ತದೆ. ಕಾಮಧೇನುವೇ ಪರಮಾತ್ಮ. ಅದಕ್ಕೆ ಈ ವಿಚಿತ್ರ ಶಕ್ತಿಯನ್ನು ಕೊಟ್ಟವನೂ ಪರಮಾತ್ಮನೇ.

ಕಲ್ಪ - ಪ್ರಳಯ, ಅದರಲ್ಲೆಲ್ಲಾ ದೊಡ್ಡದು ಮಹಾಕಲ್ಪ.

ಕಲ್ಪ ಎಂದರೆ ಬ್ರಹ್ಮದೇವರ ಒಂದು ದಿನಕ್ಕೆ ಕಲ್ಪ ಎಂದು ಹೆಸರು. ಅಂದರೆ ಬ್ರಹ್ಮದೇವನಿಗೆ 30 ದಿನಗಳಿಗೆ 30 ಕಲ್ಪಗಳು. ಪ್ರತಿ ಕಲ್ಪದ ಹೆಸರು ಬೇರೆ ಬೇರೆ. ಮೊದಲನೆಯ ದಿನ ಶ್ವೇತ. ಈಗ ನಡೆಯುತ್ತಿರುವುದು ಶ್ವೇತವರಾಹ ಕಲ್ಪ. ಪ್ರತಿ ದಿನವೂ ದಿನದಲ್ಲಿ ಸೃಷ್ಟಿ, ರಾತ್ರಿಯಲ್ಲಿ ಪ್ರಳಯ, ಹೀಗೆ ಇದು ನಿತ್ಯ ಪ್ರಳಯ.

ಬ್ರಹ್ಮನ ಆಯಸ್ಸಿನ ಮೊದಲು ನಡೆಯುವುದು ಮಹಾಕಲ್ಪ. ಆಗ ಮಹತ್ತತ್ವ ಮುಂತಾದವು ಪ್ರಕೃತಿಯಿಂದ ಬರುತ್ತವೆ. ಬ್ರಹ್ಮನ ಆಯುಸ್ಸಿನ ಕೊನೆಯಲ್ಲಿ

ಹತ್ತತ್ವ ಲೀನವಾಗುತ್ತೆ. ಅದುವರೆಗೆ ನಿತ್ಯ ನೈಮಿತ್ತಿಕ ಪ್ರಳಯದಲ್ಲಿ ಜೀವಿಗಳು ಾತ್ರ ಲೀನವಾಗುತ್ತವೆ. ಅದರಿಂದ ಮಹಾಕಲ್ಪನೂ ಪರಮಾತ್ಮನೇ. ಅವನಲ್ಲಿ ೀನ, ಅದರಿಂದ ಅವನೇ ಮಹಾಕಲ್ಪ. ಇಂತಹ ಮಹಾಕಲ್ಪನಿಗೆ ನಮಸ್ಕಾರಗಳು.

*ಬಹುಕಲ್ಪಾಯ ಕಲ್ಪಾಯ ಕಲ್ಪಾತೀತಾಯ ಕಲ್ಪಿನೇ ।*
*ಕಲ್ಪಾನಾಂ ಮುಖರೂಪಾಯ ವ್ಯನುಕಲ್ಪಾದಯೇ ನಮಃ ॥24॥*
*(212-217)*

ಬಹುಕಲ್ಪಾಯ ನಮಃ

ಕಲ್ಪ - ಎಂದರೆ ಬ್ರಹ್ಮದೇವನ ಆಯುಸ್ಸಿನಲ್ಲಿ ಒಂದು ದಿನಕ್ಕೆ ಅಂದರೆ ಂದು ಹಗಲು ಮತ್ತು ಒಂದು ರಾತ್ರಿ ಸೇರಿದರೆ ಒಂದು ಕಲ್ಪ ಎಂದು ಸರು. ಒಂದು ತಿಂಗಳಿಗೆ 30 ಕಲ್ಪಗಳು. ಒಂದು ವರ್ಷದಲ್ಲಿ 365 X 30 ಲ್ಪಗಳು. ಬ್ರಹ್ಮ ಆಯುಸ್ಸಿನಲ್ಲಿ 100 X 365 X 30 ಕಲ್ಪಗಳಿರುತ್ತವೆ. ಬ್ಬ ಬ್ರಹ್ಮನ ನಂತರ ಇನ್ನೊಬ್ಬ ಬ್ರಹ್ಮನು ಬರುತ್ತಾನೆ. ಹೀಗೆ ಪರಮಾತ್ಮನು ನ್ನ ಇಚ್ಛೆ ಮುಗಿಯುವವರೆಗೆ ಅನೇಕ ಬ್ರಹ್ಮಗಳನ್ನು ಕಲ್ಪಗಳನ್ನು ನಡೆಸುತ್ತಾನೆ. ದೇ ಮಹಾ ಅವಿರತ ನಿರಂತರ ಸೃಷ್ಟಿ, ಸ್ಥಿತಿ, ಲಯಗಳ ವ್ಯೂಹ. ಇಂತಹ ್ಯೂಹದಲ್ಲಿ ನಮ್ಮಂತಹ ಜೀವಿಗಳು ಎಷ್ಟೋ? ಪ್ರತಿ ಜೀವಿಗೂ ಮುಕ್ತಿ ುವವರೆಗೆ ನಿರಂತರ ದೇಹಗಳು, ಜನ್ಮಗಳು ಎಷ್ಟೋ? ಲೆಕ್ಕವಿಡುವವರ್ಯಾರು? ದರಿಂದೇನು ಪ್ರಯೋಜನ? ನಮಗೆ ಅಂದರೆ ಪ್ರತಿ ಜೀವಾತ್ಮನಿಗೆ ಬೇಕಾದ್ದು ಜನ್ಮ ಮೃತ್ಯು, ಸಂಸಾರ, ಭವಸಾಗರದಿಂದ ಬಿಡುಗಡೆ ಹೊಂದಿ ರಮಾತ್ಮನಲ್ಲಿ ಲೀನವಾಗುವುದು. ಅಷ್ಟೆ, ಹಾಗಾದರೂ ಈ ಕಲ್ಪಗಳ ಸರಣಿಯು ಹು ದೊಡ್ಡದು. ಬಹು-ಸಂಖ್ಯೆ, ಲೆಕ್ಕವನ್ನು ಸೂಚಿಸುತ್ತದೆ. ಅದರಿಂದಲೇ ಹುಕಲ್ಪಾಯ ನಮಃ ಎಂದು ಅವನಿಗೆ ಹೇಳುತ್ತೇವೆ. ಸ್ತೋತ್ರ ಮಾಡುತ್ತೇವೆ.

ಕಲ್ಪಾಯ ನಮಃ

ಕಲ್ಪಾಯ ಅಂದರೆ ಕಲ್ಪನಿಗೆ, ಕಲ್ಪಕ್ಕೆ ನಮಃ ನಮಸ್ಕಾರ.

ಕಲ್ಪವೇ ಪರಬ್ರಹ್ಮ, ಬ್ರಹ್ಮನ ದಿನ ಮಾನಕ್ಕೆ ಕಲ್ಪವೆಂದು ಹೆಸರು. ಈ ಲ್ಪದಲ್ಲಿ ಬ್ರಹ್ಮನು ಪರಮಾತ್ಮನಿಂದ ಹೊರ ಬಂದ ಜೀವಾತ್ಮಗಳು ಮತ್ತೆ ರಮಾತ್ಮನನ್ನು ಸೇರುವ ಗುರಿಯನ್ನಿಟ್ಟುಕೊಂಡು ಭವಸಾಗರದಲ್ಲಿ ಲುತ್ತಿರುತ್ತವೆ. ಬ್ರಹ್ಮನು ತನ್ನ ಸೃಷ್ಟಿ, ಸ್ಥಿತಿ, ಲಯಗಳ ಸಮೂಹದಲ್ಲಿ ೀವಾತ್ಮಗಳ ವ್ಯೂಹದಲ್ಲಿಯೇ ಪರಮಾತ್ಮನು ಲೀಲಾ ಜಾಲವಾಗಿ ತನ್ನ ೀಲೆಯನ್ನು ನಡೆಸುತ್ತಿರುವುದರಿಂದ ಎಲ್ಲೆಲ್ಲೂ ಪರಮಾತ್ಮನ ಅಂಶವೇ ುವುದರಿಂದ ಕಲ್ಪವೂ ಪರಮಾತ್ಮನೇ. ಅದರಿಂದ ಕಲ್ಪನಾದ ಪರಮಾತ್ಮನಿಗೆ ಮಸ್ಕಾರಗಳು. ಅದೇ ಅವನಿಗೆ ಕಲ್ಪಾಯ ನಮಃ ಎನ್ನುತ್ತೇವೆ.

**14. ಕಲ್ಪಾತೀತಾಯ ನಮಃ**

ಅಗಣಿತ ಕಲ್ಪಗಳು ನಡೆಯುತ್ತಿರುವುದಕ್ಕೆ ಒಬ್ಬ ಸೂತ್ರಧಾರನು ಬೇಕು. ಅವನು ಕಲ್ಪಗಳನ್ನು ನಡೆಸುತ್ತಿದ್ದರೂ ಅದರ ಒಳಗೆ ಸೇರುವುದಿಲ್ಲ. ಹೊರಗೆ ನಿಂತು ಯಾವ ಸಮಯದಲ್ಲಿಯೂ ಕಲ್ಪಗಳಿಗೆ ಅಂಟಿಕೊಳ್ಳದೆ ಇರುವುದರಿಂದ ಅವನಿಗೆ ಕಲ್ಪಾತೀತನೆಂದು ಕರೆಯುತ್ತೇವೆ. ಕಲ್ಪಗಳಿಗೆ ಮೀರಿದವನು, ಅವನಿಗೆ ನಮಸ್ಕಾರಗಳು.

**15. ಕಲ್ಪಿನೇ ನಮಃ**

ಕಲ್ಪಗಳನ್ನು ಮಾಡುವವನು ಕಲ್ಪಿ. ಕಲ್ಪಗಳ ಸೂತ್ರಧಾರನಾದ ಕಲ್ಪಾತೀತಾನಾದ ಪರಮಾತ್ಮ, ಅವನೇ ಕಲ್ಪಿ.

ಇಂತಹ ಕೊನೆ ಮೊದಲಿಲ್ಲದ ಕಲ್ಪಗಳನ್ನು ಸೃಷ್ಟಿಸಿ ನಡೆಸುವ ಕೆಲಸವನ್ನು ನಡೆಸುವವನೇ ವಿಶೇಷವಾಗಿರಬೇಕು. ಯಾವ ಪುರುಷಾರ್ಥಕ್ಕಾಗಿ ಇಂತಹ ಕೆಲಸವನ್ನು ಮಾಡಬೇಕು ಅವನು! ಇದೇ ಉತ್ತರ ಸಿಗದ ಪ್ರಶ್ನೇ. ಉತ್ತರ ಸಿಕ್ಕಿತೆಂದು ಅಂದುಕೊಂಡರೂ, ಅದರಿಂದ ಜೀವಾತ್ಮನಿಗೆ ಏನು ಉಪಯೋಗ? ಈ ವಿಚಿತ್ರ ಕೆಲಸದಲ್ಲಿ ಸಿಕ್ಕಿಕೊಂಡಿರುವ ಜೀವಾತ್ಮನಿಗೆ ತನ್ನದೆನ್ನುವ ತನ್ನತನಕ್ಕೆ ಯಾವ ಅಣುಮಾತ್ರವೂ ಸ್ವತಂತ್ರವಿಲ್ಲ. ಹೀಗೆ ಜ್ಞಾನ ತಾನಾಗಿಯೇ ಬರುತ್ತದೆ. ಇದಕ್ಕೆ ಪರಮಾತ್ಮನ ಕೃಪೆಯೇ ಬೇಕು. ಅದು ಅವನ ಕರುಣೆ, ಕೃಪೆ, ಸಂಕಲ್ಪದಿಂದಲೇ ಸಾಧ್ಯ.

ಏನಾದರೂ ಊಹಿಸಿಕೊಂಡರೆ ಅದು ಮನಸ್ಸಿನ ಭಾವನೆ. ಈ ಭಾವನೆಗೆ ಕಲ್ಪನೆ ಎನ್ನುತ್ತೇವೆ. ಇದನ್ನು ಹೊಂದುವುದು ಬುದ್ಧಿಯ ಮತ್ತು ಮನಸ್ಸಿನ ಭಾವ. ಇವುಗಳು ದೇಹದಲ್ಲಿ ಜೀವಾತ್ಮ ಇರುವವರೆಗೂ ನಿರಂತರ ಮನಸ್ಸು ಮತ್ತು ಬುದ್ಧಿಯಲ್ಲಿ ಸದಾ ನಡೆಯುತ್ತವೆ. ಅದರಿಂದ ಇವುಗಳನ್ನು ಕಲ್ಪಿ ಎಂದು ಕರೆಯಬಹುದು. ಇದೆಲ್ಲದರಲ್ಲಿಯೂ ಯಾವ ಸಮಯದಲ್ಲಿಯೂ ಒಳಹೋಗದ, ಅಂಟದ ಜೀವಾತ್ಮನು ಪರಮಾತ್ಮ ಎಂದು ತಿಳಿಯಬಹುದು. ಜೀವಾತ್ಮನೇ ಕಲ್ಪಿನೇ ನಮಃ ಎಂದು ಹೇಳಬಹುದು.

**16. ಕಲ್ಪಾನಾಂ ಮುಖರೂಪಾಯ ನಮಃ**

ಕಲ್ಪಗಳಿಗೆ ಅಥವಾ ಕಲ್ಪಗಳನ್ನು ನಡೆಸುವವನು ಯಾರೋ ಅವನಿಗೆ ಮುಖ ಸ್ವರೂಪದಲ್ಲಿರುವವನಿಗೆ ಹೀಗೆ ಹೆಸರು.

ಅಥವಾ ಎಲ್ಲಾ ಕಲ್ಪಗಳನ್ನು ಪರಮಾತ್ಮನ ದೇಹ ಎಂದುಕೊಂಡರೆ ಆ ದೇಹಕ್ಕೆ ಒಂದು ಮುಖವಿರಬೇಕು. ಆ ಮುಖವೇ ಪರಮಾತ್ಮ, ಮುಖವೂ ದೇಹದ ಒಂದು ಭಾಗ ಅದೇ ಪರಮಾತ್ಮ.

ದೇಹದಲ್ಲಿ ಪರಮಾತ್ಮನು ಮುಖ ಸ್ವರೂಪನು, ದೇಹಕ್ಕೆ ಮುಖವೇ

ಮುಖ್ಯವಾದುದು. ಅದರಿಂದ ಪರಮಾತ್ಮನು ಬ್ರಹ್ಮ ಸ್ವರೂಪದಲ್ಲಿ ಅಲ್ಲಿ ಉದ್ಭವವಾಗುತ್ತಾನೆ. ''ಬ್ರಾಹ್ಮಣೋಽಸ್ಯ ಮುಖಮಾಸೀತ್'', ''ಮುಖಾದಿಂದ್ರಾಶ್ಚಾಗ್ನಿಶ್ಚ'' ಎಂದು ಪುರುಷ ಸೂಕ್ತದಲ್ಲಿ ಪ್ರಾರ್ಥಿಸುತ್ತೇವೆ.

ಕಲ್ಪಗಳೇ ಒಂದು ಯಾಗ, ಯಜ್ಞಸ್ವರೂಪ, ದೇವತೆಗಳು ವಿರಾಟ್ ಸ್ವರೂಪನಾದ ಪರಮಾತ್ಮನನ್ನು ಸೇರಿಸಿ ಅವನನ್ನೇ ಯಜ್ಞ ಪಶುವನ್ನಾಗಿ ಮಾಡಿ ಯಜ್ಞ ಮಾಡಿದರು, (ಸೃಷ್ಟಿಯ ಮೊದಲಲ್ಲಿ).

ನಾವು ಪರಮಾತ್ಮನು ಓಂಕಾರ ಸ್ವರೂಪ, ,ನಿರಾಕಾರ, ಸಾಕಾರ ರೂಪ, ಆದರೂ ಓಂ ಕಾರವನ್ನೇ ಮೊದಲು ಮಾಡಿಕೊಂಡು ಮುಖ ನೋಡಿಕೊಂಡು ನಾಮಸ್ಮರಣೆ ಮಾಡುತ್ತೇವೆ. ''ಓಂ ನಮೋ ನಾರಾಯಣಾಯ'' ಎಂದು ಮಾಡುತ್ತೇವೆ.

ಪರಮಾತ್ಮನನ್ನು ಓಂ ಮೊದಲು ಮುಖ ಮಾಡಿಕೊಂಡು ತತ್ ಆ ಪರಮಾತ್ಮನನ್ನು ಸತ್, ಸತ್ ಸ್ಥಿರಸ್ವರೂಪನೆಂದು ''ಓಂ ತತ್ಸತ್'' ಎಂದು ನಿರ್ದೇಶಿಸುತ್ತೇವೆ. ಎಲ್ಲ ವೇದ, ಉಪನಿಷತ್, ಪುರಾಣ ಎಲ್ಲವೂ ಹೀಗೆಯೇ ಪರಮಾತ್ಮನನ್ನು ನಿರ್ದೇಶಿಸುತ್ತವೆ.

ಪರಮಾತ್ಮನನ್ನು ''ಹೀಗೆಯೆ'' ಎಂದು ತಿಳಿಯಲು ಮನಸ್ಸು, ಬುದ್ದಿಯಿಂದ ಸಾಧ್ಯವಿಲ್ಲ ಎಂದು, ಏನೇ ಪ್ರಯತ್ನ ಮಾಡಿದರೂ ಯಾವ ಇಂದ್ರಿಯ ಬುದ್ಧಿ ಮನಸ್ಸು ಮುಂತಾದವುಗಳಿಂದ ಸಾಧ್ಯವಿಲ್ಲ ಎಂದು ಎಲ್ಲಾ ವೇದ ಪುರಾಣಗಳು ಹೇಳುತ್ತವೆ. ಅದರಿಂದಲೇ ಅವನನ್ನು ಲಿಂಗ ಭೇದವಿಲ್ಲದೆ ''ತತ್'' ಎಂದೂ ''ಸತ್'' ಎಂದೂ ಓಂಕಾರದೊಡನೆ ತೋರಿಸುತ್ತೇವೆ ಮತ್ತು ಕರೆಯುತ್ತೇವೆ. ಇದಕ್ಕೆ ಅವನನ್ನು ಕಲ್ಪಾನಾಂ ಮುಖರೂಪಾಯ ನಮಃ ಎಂದು ಹೇಳುತ್ತೇವೆ.

17. **ಅನುಕಲ್ಪಾದಯೇ ನಮಃ**

ಅನು - ಕ್ರಮಾನುಸಾರವಾಗಿ, ಪ್ರತಿಯೊಂದು, ಕಲ್ಪ - ಕಲ್ಪ, ಆದಿ - ಮೊದಲು ಅಥವಾ ಮುಂತಾದವುಗಳು.

ಪರಮಾತ್ಮನು ತನ್ನ ಇಚ್ಛೆಯಂತೆ ಕಲ್ಪಗಳನ್ನು ನಡೆಯುವಂತೆ ಮಾಡುತ್ತಾನೆ. ಇವುಗಳ ಸರಣಿಯು ಆದಿ, ಅಂತಗಳಿಲ್ಲದ್ದು, ಆದರೂ ಕ್ರಮವಾಗಿ ನಡೆಯುತ್ತವೆ. ಪ್ರತಿ ಕಲ್ಪವೂ ನಿರ್ದಿಷ್ಟ ರೀತಿಯಲ್ಲಿ ಒಂದಾದ ಮೇಲೆ ಒಂದು, ಹಿಂದು ಮುಂದಾಗದೆ ತಪ್ಪುಗಳಿಲ್ಲದೆ ನಡೆಯುತ್ತವೆ. ಇದರಿಂದ ಇವನಿಗಿಂತ ಉತ್ತಮ ಸೂತ್ರಧಾರನು ಬೇರೊಬ್ಬನಿಲ್ಲ. ಹೆಚ್ಚೆಂದರೆ ಇವನ ಸಂಕಲ್ಪ ಮಾತ್ರದಿಂದ ಮಾತ್ರವೇ ಕಲ್ಪಗಳು ತಮಗೆ ತಾವಾಗಿ ನಡೆಯುತ್ತವೆ. ಇನ್ನೂ ಹೆಚ್ಚೆಂದರೆ ಅವನು ಇವುಗಳೊಳಗೆ ಹೋಗದೆ ಹೊರ ನಿಂತು ನಡೆಸುವುದು. ಇದೇ ವಿಶೇಷ. ಇಂತಹ ಸರಣಿಯ ಕಲ್ಪಗಳನ್ನು ನಡೆಸುವುದರಿಂದ ಯಾರಿಗೆ ಏನು

ಪ್ರಯೋಜನ? ಈ ಪ್ರಶ್ನೆಗೆ ಉತ್ತರ ಅವನಿಗೇ ತಿಳಿದದ್ದು. ಗೂಢವಾದ್ದು. ಪರಮಾತ್ಮನ ಸಂಕಲ್ಪಗಳೇ ವಿಚಿತ್ರ. ಇದನ್ನು ಮನಸ್ಸಿನಲ್ಲಿ ಗುಂಗಿನಲ್ಲಿದ್ದಾಗ, ನಮ್ಮ ಈಗಿನ ಜೀವನದ ಆಗು ಹೋಗುಗಳು ತಾವಾಗಿಯೇ ಅಜ್ಞಾತವಾಗಿ ಶೂನ್ಯವಾಗಿ ಎಲ್ಲೋ ದೂರದಲ್ಲಿ (ಗಣನೆಗೆ ಬಾರದೆ) ನಿಲ್ಲುತ್ತವೆ. ಇದೇ ಪರಮಾತ್ಮನ ವಿಚಿತ್ರ ಇಚ್ಛೆ. ಹೇಗಾದರಾಗಲಿ, ಅನುಕಲ್ಪಾದಯೇ ನಮಃ.

*ತಟಿತ್ಪ್ರಭಾಯ ತಾರ್ಕ್ಷ್ಯಾಯ ತರುಣಾಯ ತಪಸ್ವಿನೇ /*
*ತಾರಕಾಯ ತಮೋಘ್ನಾಯ ತತ್ವಜ್ಞಾಯ ತರಸ್ವಿನೇ //35//*
*(218-225)*

218. **ತಟಿತ್ಪ್ರಭಾಯ ನಮಃ**

ಸಂಸಾರ ಸಾಗರವೇ ಸಾಗರ, ಸಾಗರದ ದಂಡೆಯಲ್ಲಿ ತೇಜಸ್ಸು ಕಾಣುತ್ತದೆ. ಈ ತೇಜಸ್ಸೇ ಪರಮಾತ್ಮನ ದಿವ್ಯ ತೇಜಸ್ಸು. ಈ ದಿವ್ಯ ತೇಜಸ್ಸು, ಸೂರ್ಯ ಚಂದ್ರ, ನಕ್ಷತ್ರಗಳರೂಪದಲ್ಲಿ ಪ್ರತ್ಯಕ್ಷವಾಗಿ ಕಾಣುತ್ತವೆ. ಪೃಥಿವ್ಯಾಪಸ್ತೇಜೋವಾಯುರಾಕಾಶಗಳಲ್ಲಿ ಅಗ್ನಿಯ ರೂಪದಲ್ಲಿ ಕಾಣುತ್ತವೆ. ಇವುಗಳು ಬ್ರಹ್ಮಾಂಡದಲ್ಲಿ, ಆಕಾಶದಲ್ಲಿ ತೇಲುತ್ತಿರುವುದರಿಂದ ಸೂರ್ಯ, ಚಂದ್ರ, ನಕ್ಷತ್ರಗಳು ಭೂಮಂಡಲದ ಆಚೆಯ ಆಕಾಶದ ಕೊನೆಯಲ್ಲಿ, ದಡದಲ್ಲಿ ಇರುವ ಹಾಗೆ ಭಾಸವಾಗುತ್ತವೆ. ಸೂರ್ಯ, ಚಂದ್ರ, ನಕ್ಷತ್ರಗಳು ಪರಮಾತ್ಮನ ರೂಪವೇ, ಈ ಪ್ರಭೆಯೇ ಅಸಮಾನ್ಯ ಅದರಿಂದಲೇ ಇವುಗಳಲ್ಲಿ ಪರಮಾತ್ಮನಿರುವುದರಿಂದಲೇ ಅವನನ್ನು ''ತಟಿತ್ಪ್ರಭಾಯ ನಮಃ'' ಎಂದು ನಮಸ್ಕರಿಸುತ್ತೇವೆ.

ಪರಮಾತ್ಮನ ರೂಪಗಳೇ ಇಷ್ಟೆಂದು ಎಣಿಸಲು ಸಾಧ್ಯವಿಲ್ಲ. ಜೀವ ಕೋಟಿಯ ಪ್ರತಿಯೊಂದು ಜೀವಿಯು ತನ್ನ ತನ್ನ ದೇಹದಲ್ಲಿ ಹೃದಯಾಕಾಶದಲ್ಲಿ ಜ್ಯೋತಿರ್ಮಯ ಆತ್ಮನಾಗಿ ಲಿಂಗಭೇದವಿಲ್ಲದೆ ಅಡಗಿಕೊಂಡಿರುತ್ತದೆ. ಇದು ಸೂತ್ರಧಾರನಾಗಿ ದೇಹವೆಂಬ ದೇವಾಲಯದಲ್ಲಿ (ದೇಹೋ ದೇವಾಲಯೋ ಪ್ರೋಕ್ತಾ ಜೀವೋದೇವಃ ಸನಾತನಃ) ವಿರಾಜಮಾನನಾಗಿ ದೇಹವನ್ನು ನಡೆಸುತ್ತದೆ. ದೇಹದಲ್ಲಿ ಎಲ್ಲಿದೆ ಎಂದು ತಿಳಿಯಲು ಸಾಧ್ಯವಿಲ್ಲ. ಆದರೆ ಇಂದ್ರಿಯಗಳಿಗೆ ಇಂದ್ರಿಯಗಳ ಅಧಿದೇವತೆಗಳಿಗೆ ಆತ್ಮ ಶಕ್ತಿಯನ್ನು ಕೊಟ್ಟು ಸಂಸಾರ ಸಾಗರದಲ್ಲಿ ವಿಶಯ ಸುಖದೊಡನೆ ವ್ಯಾಪಾರ ಮಾಡುತ್ತದೆ. ದೇಹಕ್ಕೆ ಹೃದಯವೇ ದಡ. ದಡದಲ್ಲಿ ಎಲ್ಲೋ ಹುದುಗಿರುವ ಪ್ರಭೆಯೇ ''ಆತ್ಮ''. ಅದರಿಂದಲೇ ಇವನಿಗೂ ತಟಿತ್ಪ್ರಭಾಯ ನಮಃ ಎಂದು ಹೇಳಬಹುದು.

219. **ತಾರ್ಕ್ಷ್ಯಾಯ ನಮಃ**

ತಾರ್ಕ್ಷ್ಯಾನಿಗೆ ನಮಸ್ಕಾರಗಳು.

ತಾರ್ಕ್ಷ್ಯ ಎಂದರೆ ಗರುಡ, ಗರುಡನು ವಿಷ್ಣುವಿನ ವಾಹನ. ಗೀತೆಯಲ್ಲಿ

ಕೃಷ್ಣನು ಹೇಳಿರುವಂತೆ ಪಕ್ಷಿಗಳಲ್ಲೆಲ್ಲ ಗರುಡನೇ ನಾನು ಎಂದಿದ್ದಾನೆ. ಅಂದರೆ ಗರುಡನೇ ಮಹಾವಿಷ್ಣುವಿನ ಒಂದು ರೂಪ.

ಅದರಿಂದ ತಾರ್ಕ್ಷ್ಯಾಯ ನಮಃ ಎಂದು ಹೇಳುತ್ತೇವೆ.

ಸ್ವಸ್ತಿನಃ ತಾರ್ಕ್ಷ್ಯೋ ಅರಿಷ್ಠ ನೇಮಿಃ - ತಾರ್ಕ್ಷ್ಯನಾದ ಪರಮಾತ್ಮನು ನಮಗೆ ಶುಭವನ್ನು ಮಾಡಲಿ.

20. **ತರುಣಾಯ ನಮಃ**

ತರುಣ ಎಂದರೆ ಯೌವನದಿಂದ ಕೂಡಿದವನು, ಪ್ರಮು, ನೂತನವಾದ್ದು, ಹೊಸದು ಎಂದು ಅರ್ಥ. ಪರಮಾತ್ಮನಿಗೆ ಆಯುಸ್ಸಿನ ರೂಪಗಳಿಲ್ಲ.

ಅದು ಸದಾ ಕೋಮಲವಾದ ಆಕರ್ಷಕವಾದ ರೂಪವುಳ್ಳವನು. ಯಾರ ರೂಪದಲ್ಲಿದ್ದರೂ (ರಾಮ, ಕೃಷ್ಣರ ರೂಪಗಳು) ಸದಾ ಕೋಮಲ ಭಾವವುಳ್ಳವನು. ಪಿತೇವ ಪುತ್ರಸ್ಯ, ರೂಪದಲ್ಲಿಯೂ ಸಖೇನ ಸಖ್ಯುವಾಗಿಯೂ ಪ್ರಿಯರಿಗೆ ಪ್ರಿಯನಾಗಿಯೂ ಇರುವವನು. ಅದರಿಂದ ತರುಣಾಯ ನಮಃ ಎಂದು ನಮಸ್ಕರಿಸುತ್ತೇವೆ.

21. **ತಪಸ್ವಿನೇ ನಮಃ**

ತಪಸ್ವಿಯಾದವನಿಗೆ ನಮಸ್ಕಾರಗಳು.

ಪರಮಾತ್ಮನು ಮಹಾ ತಪಸ್ವಿ, ನರ, ನಾರಾಯಣ ರೂಪದಲ್ಲಿ ಹಿಮಾಲಯದಲ್ಲಿ ತಪಸ್ಸು ಮಾಡುತ್ತಿದ್ದಾನೆ. ಅಂತಹ ತಪಸ್ವಿಗೆ ನಮಸ್ಕಾರಗಳು.

ಪರಮಾತ್ಮನಷ್ಟು ತಪಸ್ಸು ಮಾಡುವವರು ಯಾರೂ ಇಲ್ಲ. ಇವನ ತಪಸ್ಸು ಬಹಳ ಮಹತ್ತಾದುದು, ಏಕೆಂದರೆ ಇವನ ತಪಸ್ಸಿನ ಗುರಿ ತಪಸ್ಸೇನೆ. ಋಷಿ ಮುನಿಗಳು, ದೇವತೆಗಳು, ಮನುಷ್ಯರು, ರಾಕ್ಷಸರು ಇತರರು ಮಾಡುವ ತಪಸ್ಸುಗಳಿಗೆ ಪರಮಾತ್ಮನನ್ನು ಹೊಂದುವ ಧ್ಯೇಯ ಇರುತ್ತದೆ. ಇದು ಪರಮೋನ್ನತ ಧ್ಯೇಯ, ಇದಕ್ಕಿಂತ ಉನ್ನತವಾದ್ದು ಪರಮಾತ್ಮನಿಗಾಗಿ, ಪರಮಾತ್ಮನ ಇಚ್ಛೆಗಾಗಿ ಮಾಡುವುದು. ಆದರೆ ಪರಮೇಶ್ವರ - ಪ್ರೀತಿಗಾಗಿ, ಮಾಡುವುದು ಇನ್ನೂ ಉನ್ನತವಾದುದು. ಇನ್ನೂ ಹೆಚ್ಚಿನದು ಪರಮಾತ್ಮನೇ ಮಾಡುವ ತಪಸ್ಸು. ಇದು ಅವನ ಲೀಲೆಗಾಗಿ ಮಾಡುತ್ತಾನೆ. ಅದರಿಂದ ಇಂತಹ ತಪಸ್ವಿಯಾದ ಪರಮಾತ್ಮನಿಗೆ ನಮಸ್ಕಾರಗಳು.

ಮನುಷ್ಯರು ಪರಮಾತ್ಮನಿಗೋಸ್ಕರ ಮಾಡುವ ಜಪ, ತಪ, ಪೂಜೆ, ಕೆಲಸ, ಕಾರ್ಯಗಳು, ನಿಷ್ಕಾಮ ಕೆಲಸಗಳು ಎಲ್ಲವೂ ತಪಸ್ಸೇನೇ. ಅದರಿಂದ ಮನುಷ್ಯರಾದ ನಾವೂ ಸಹ ತಪಸ್ವಿಗಳಾಗಲು ಸಾಧ್ಯ.

ಗೀತೆಯಲ್ಲಿ "ತಪಸ್ವಿಭ್ಯಶ್ಚಾಧಿಕೋ ಯೋಗೀ" ಎಂದು ಶ್ರೀ ಕೃಷ್ಣನು ಹೇಳಿದ್ದಾನೆ. ಅಂದರೆ ಯೋಗಿಯಾಗುವುದು ತಪಸ್ವಿಗಿಂತ ಹೆಚ್ಚು. ಇದರಲ್ಲೂ

ಭಗವಂತನು ಕರ್ಮಯೋಗ, ಭಕ್ತಿಯೋಗ ಮತ್ತು ಜ್ಞಾನಯೋಗಗಳು ತಪಸ್ಸಿಗಿಂತ ಹೆಚ್ಚು ಎಂದ ಮೇಲೆ ಭಗವಂತನ ವಿಶಾಲ ಭಾವನೆ ವ್ಯಕ್ತವಾಗುತ್ತದೆ. ಇಂತಹ ತಪಸ್ವಿಯಾದ ಭಗವಂತನಿಗೆ ನಮಸ್ಕಾರಗಳು.

222. ತಾರಕಾಯ ನಮಃ

ತಾರಕ - ದಾಟಿಸುವವನು.

ಸಂಸಾರ ಸಾಗರದಿಂದ ದಾಟಿಸುವವನು ಯಾರೋ ಅವನು ಪರಮಾತ್ಮ. ಅವನಿಗೆ ನಮಸ್ಕಾರಗಳು. ದಾಟಿಸುವವರಲ್ಲೆಲ್ಲ ಇವನೇ ಅತ್ಯಂತ ದೊಡ್ಡವನು. ಇವನಿಗಿಂತ ಉತ್ತಮರು ಯಾರೂ ಇಲ್ಲ. (ತಾರಕ ಎಂದರೆ ದಾಟಿಸುವುದು) ಅದಕ್ಕೆ ತಾರಕಾಯ ನಮಃ

ಎಲ್ಲಿ ಯಾವ ಕಠಿಣ ಪರಿಸ್ಥಿತಿ ಬಂದರೂ ಅದನ್ನು ಅನುಭವಿಸಿ ಅದರಿಂದ ಬಿಡುಗಡೆ ಹೊಂದಿದರೆ ಬರುವ ಸ್ಥಿತಿ - ತಾರಣ. ಸಾಮಾನ್ಯವಾಗಿ ಪ್ರತಿ ನಿತ್ಯವೂ ಪ್ರತಿ ನಿಮಿಷದಲ್ಲಿಯೂ ''ದುರ್ಗ''ಗಳು ಬರುತ್ತವೆ. ಅದನ್ನು ಪರಮಾತ್ಮನು ಹೇಗೋ ದಾಟಿಸುತ್ತಾನೆ. ಪರಮಾತ್ಮನ ಕೃಪೆ ಜೊತೆಗೆ ಸರ್ವರ ಮತ್ತು ಸಂತರ ಶುಭವಾದ ಎಲ್ಲೋ ಮಾಡಿದ ಪ್ರಾರ್ಥನೆ - ''ಸರ್ವಸ್ತರತು ದುರ್ಗಾಣಿ'' ಎಂಬುದೇ ಕಾರಣ. ಆದರೆ ಎಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ತಾರಕರೇ! ಆದರೆ ಅದು ನಮ್ಮ ಅರಿವಿಗೆ ಬರುವುದಿಲ್ಲ. ಬಂದರೂ ಹೆಚ್ಚು ಗಮನ ಕೊಡುವುದಿಲ್ಲ. ಸರ್ವರು ತಾರಕರೇ. ಅದರಿಂದ ಸರ್ವರಿಗೂ ಸರ್ವಕಾಲದಲ್ಲಿಯೂ ನಮಸ್ಕಾರಗಳು.

ರಾಮನಾಮವು ತಾರಕಮಂತ್ರ, ಇದರ ಜಪದಿಂದ ಸಂಸಾರ ಸಾಗರವನ್ನು ದಾಟಬಹುದು. ಇದು ದೇಹದಿಂದ ಜೀವಾತ್ಮ ಬಿಟ್ಟು ಹೋದ ಮೇಲೆ ಮಾತ್ರವಲ್ಲ. ದೇಹದಲ್ಲಿರುವಾಗಲೂ ದೇಹಿಯು ಪರಮಾತ್ಮನ ಚಿಂತನದಿಂದ, ನಾಮಸ್ಮರಣೆಯಿಂದ, ಜಪ, ಪೂಜೆಗಳಿಂದ ತನ್ನ ಅನನ್ಯ ಶ್ರದ್ಧೆ, ಅವ್ಯಭಿಚಾರಿಣೀ ಭಕ್ತಿಯಿಂದ ಜೀವನದಲ್ಲಿ ಬರತಕ್ಕ ಕಷ್ಟತರವಾದ ಪ್ರತಿಯೊಂದು ಸನ್ನಿವೇಶವನ್ನು ಸುಲಭವಾಗಿ ದಾಟಬಹುದು.

ಏನೇ ಕೆಲಸ ಕಾರ್ಯ ಮಾಡುತ್ತಿದ್ದರೂ ಮನಸ್ಸಿನಲ್ಲಿ ನಾಮ ಜಪ, ನಾಮ ಸ್ಮರಣೆ ಮಾಡುತ್ತಿದ್ದರೆ, ಕೆಲಸಗಳು ತಾವಾಗಿಯೇ ಸಿದ್ಧಿ ಹೊಂದುತ್ತವೆ. ಇಂತಹ ತಾರಕಗಳಿಗೂ ಸಹ ನಮಸ್ಕಾರಗಳು.

223. ತಮೋಘ್ನಾಯ ನಮಃ

ತಮಸ್ಸು ಎಂದರೆ ಕತ್ತಲು. ರಾತ್ರಿಯಾಗುವ ಕತ್ತಲು ಸೂರ್ಯನಿಂದ ಚಂದ್ರನಿಂದ ಹೋಗುತ್ತದೆ.

ಜ್ಞಾನವನ್ನು ತಿಳಿಯದಿದ್ದರಿಂದ ಅಜ್ಞಾನದ ಮೂಲಕ ಬರುವ ಸ್ಥಿತಿ ಕತ್ತಲೇ. ಇದಕ್ಕೆ ಜ್ಞಾನವೇ ಬೆಳಕನ್ನು ಕೊಡುತ್ತದೆ.

ತಮೋಗುಣ ಮನುಷ್ಯನ ನಾಶಕ್ಕೆ ಕಾರಣ. ಅದರಿಂದ ಇದನ್ನು ರಜೋಗುಣದಿಂದ ಕಡಿಮೆ ಮಾಡಬಹುದು. ಸತ್ವಗುಣದಿಂದ ಸಂಪೂರ್ಣವಾಗಿ ತಮೋಗುಣ ನಾಶವಾಗುತ್ತದೆ.

ಮನಸ್ಸಿನ, ಬುದ್ಧಿಯ ಸಂಕಲ್ಪದಿಂದ ತಮಸ್ಸು ಹೋಗುತ್ತದೆ ಅದು ತಮೋಘ್ನವಾಗುತ್ತದೆ.

ಜಗತ್ತಿನ ಕತ್ತಲೆಗೆ ತಮಸ್ಸು ಕಾರಣ, ಜೀವಿಗಳ ಆಲಸ್ಯವೇ ಕಾರಣ. ಇದರ ನಿವಾರಣೆ ಪರಮಾತ್ಮನೊಬ್ಬನಿಂದಲೇ ಸಾಧ್ಯ. ಅದರಿಂದ ಅವನೇ ಅತ್ಯುನ್ನತ, ಅತ್ಯುತ್ತಮ ತಮೋಘ್ನನು. ಅಂತಹ ತಮೋಘ್ನನಿಗೆ ನಮಸ್ಕಾರಗಳು. ಎಲ್ಲೆಲ್ಲಿ ಭಕ್ತಿಯ / ಪರಮಾತ್ಮನ ಚಿಂತನೆಯ ಅಭಾವವಿರುವುದೋ ಅಲ್ಲಿ ಪರಮಾತ್ಮನ ಕೃಪೆ ಮತ್ತು ಸಂಕಲ್ಪ ಮಾತ್ರದಿಂದ ತಮಸ್ಸು ಹೋಗಿ ಸತ್ವ ಗುಣವು ಅಂಕುರಿಸುತ್ತದೆ. ಅದಕ್ಕೆ ತಮೋಘ್ನ ಸ್ಥಿತಿ ಎನ್ನಬಹುದು.

## 24. ತತ್ತ್ವಜ್ಞಾಯ ನಮಃ

ತತ್ತ್ವಜ್ಞ - ತತ್ತ್ವವನ್ನು ತಿಳಿದವನು, ತತ್ತ್ವವೆಂದರೆ ಭಾವ. ಗುರುವಿನ ಭಾವಕ್ಕೆ ಗುರುತತ್ತ್ವ, ಆತ್ಮದ ಭಾವ ಎಂದರೆ ಆತ್ಮ ತತ್ತ್ವ. ತತ್ ಎಂಬುದರ ಭಾವ ತತ್ತ್ವ. ಇವುಗಳನ್ನು ತಿಳಿದವನು ತತ್ತ್ವಜ್ಞ. ತತ್ ತನ ತತ್ವವನ್ನು ತಿಳಿದವನು ಯಾರು ಬೇಕಾದರೂ ಆಗಬಹುದು. ಆದರೆ ಎಷ್ಟರ ಮಟ್ಟಿಗೆ ಆಳವಾಗಿ ತಿಳಿದಿದ್ದಾರೆ ಎಂಬುದು ಗಹನವಾದ ವಿಚಾರ. ಸೃಷ್ಟಿಯಲ್ಲಿ ಅತ್ಯಂತ ಹೆಚ್ಚಾಗಿ, ವಿಚಾರವಾಗಿ, ಗಹನವಾಗಿ ತಿಳಿದಿರುವವನು ಪರಮಾತ್ಮ. ಅವನಿಗೆ ಎಷ್ಟು ತಿಳಿದಿದೆ ಎಂದು ಅಳೆಯುವವನು ಯಾರು ಇಲ್ಲ. ಅವನೇ ಅಳೆಯಬೇಕು. ತತ್ ಎಂಬ ತತ್ತ್ವ ಅವನ ಭಾವವನ್ನೇ ಅಳೆಯುತ್ತದೆ. ತತ್ ಎಂಬುದು ಪರಮಾತ್ಮನನ್ನೇ ನಿರ್ದೇಶಿಸುತ್ತದೆ. ಬ್ರಹ್ಮನನ್ನೆ ತೋರಿಸುತ್ತದೆ.

ತತ್ ಎಂಬುದರ ಭಾವ (ತತ್ತ್ವ)ಕ್ಕೆ ಸಮಾನವಾದ ತತ್ತ್ವ ಬೇರೆ ಇಲ್ಲ. ಇದನ್ನು ಜ್ಞ - ತಿಳಿದವನು ಪರಮಾತ್ಮನೇ.

ಸಾಮಾನ್ಯ ರೀತಿಯಲ್ಲಿ ಎಲ್ಲರೂ ತತ್ತ್ವಜ್ಞರೇ, ಏಕೆಂದರೆ ಅವರದೇ ಆದ ಭಾವವನ್ನು ಮತ್ತು ಇತರರ ಭಾವವನ್ನು ತಿಳಿದಿದ್ದಾರೆ.

ತತ್ - ತ್ವಂ - ಜ್ಞ ಎಂದೂ ಅರ್ಥಮಾಡಿಬಹುದು.

ತತ್ ಎಂದರೆ ಅದು. (ಯಾವ ಪರಮಾತ್ಮನನ್ನು ಹುಡುಕುತ್ತಿದ್ದೇವೆಯೋ ಅದು ತ್ವಂ - ಎಂದರೆ ನೀನೆ (ಇದು ಪರಮಾತ್ಮನೇ). ಜ್ಞ - ನಿನ್ನನ್ನು ನೀನೇ ತಿಳಿದವನು (ತತ್-ತ್ವಂ-ಅಸಿ) ಆಗಿದ್ದೀಯೆ. ಅಂದರೆ ನಮ್ಮ ಮನೋ ಚಿಂತನ

ಲಹರಿ ಎಲ್ಲಿಂದ ಎಲ್ಲಿಗೆ ಬಂತು. ಎಲ್ಲೆಲ್ಲಿ ಎಲ್ಲಿಂದ ಹೋದರೂ ಅದು ತತ್ತ್ವ ಪರಮಾತ್ಮನನ್ನೇ ಸುತ್ತುತ್ತಿರುತ್ತದೆ. ಮೂಲವೇ ಪರಮಾತ್ಮ. ಅವನೇ ತತ್ತ್ವಜ್ಞನು. ಆ ತತ್ತ್ವಜ್ಞನಿಗೆ ನಮಸ್ಕಾರಗಳು.

ಆತ್ಮ ತತ್ತ್ವವನ್ನು ಪೂರ್ಣವಾಗಿ ತಿಳಿದವನು ಆತ್ಮನೇ. ಗುರುತತ್ತ್ವವನ್ನು ತಿಳಿದವನು ಸ್ವಯಂ ಗುರುವೇ. ಗುರುವೇ ಪರಮಾತ್ಮ. ಪರಮಾತ್ಮನಿಗಿಂತ ಬೇರೆಯವರು ಈ ತತ್ತ್ವಗಳನ್ನು ತಿಳಿದವರು ಯಾರೂ ಎಲ್ಲ.

ಸೃಷ್ಟಿ, ಸ್ಥಿತಿ, ಲಯಗಳ ಕಾರ್ಯ - ಕಾರಣರೂಪನಾದವನು, ಅದರ ಕಾರಣವನ್ನು ತಿಳಿದವನು ಪರಮಾತ್ಮನೊಬ್ಬನೇ ಬೇರೆಯವರಿಲ್ಲ. ಎಲ್ಲಿಂದ ಎಲ್ಲಿಗೆ ವಿಚಾರ ಮಾಡಿದರೂ ಕೊನೆಗೆ ಉಳಿಯುವವನು ಅವನೊಬ್ಬನೇ, ಸೃಷ್ಟಿ ಎಲ್ಲಾ ಶೂನ್ಯವಾದಾಗ ಉಳಿಯುವವನು ಅವನೊಬ್ಬನೇ, ಅವನೇ ತತ್ತ್ವಜ್ಞ. ಅವನಿಗೆ ತತ್ತ್ವಜ್ಞನಿಗೆ ನಮಸ್ಕಾರಗಳು.

225. **ತರಸ್ವಿನೇ ನಮಃ**

ತರತಿ - ದಾಟುತ್ತಾನೆ (ಧಾತು), ತರಸ್ವಿ - ದಾಟಿಸುವವನು.

ಯಾವನು ದಾಟಿಸುತ್ತಾನೆಯೋ ಅವನು ತರಸ್ವಿ. ಏನನ್ನಾದರೂ ದಾಟಿಸುವವನು ಪರಮಾತ್ಮ. ಅವನೇ ತರಸ್ವಿ. ಎಲ್ಲಾ ಜೀವಿಗಳನ್ನು ಭವ ಸಾಗರದಿಂದ ಬಿಡುಗಡೆಮಾಡಿ ಪರಮ ಪದವನ್ನು ಸೇರಿಸುವವನು - ತರಸ್ವಿ - ಪರಮಾತ್ಮ.

ಭಕ್ತ ಪ್ರಹ್ಲಾದನನ್ನು ಅವನ ತಂದೆಯು ಕೊಡುತ್ತಿದ್ದ ಎಲ್ಲ ಕಠಿಣ ಶಿಕ್ಷೆಗಳಲ್ಲಿಯೂ ಪ್ರಹ್ಲಾದನು ಅನುಭವಿಸಿದರೂ ತನ್ನ ಕೃಪೆಯಿಂದ ಅವನನ್ನು ಬಿಡಿಸುತ್ತಿದ್ದನು. ಕಡೆಗೂ ಅತಿ ಕಷ್ಟವಾದ ಹರಿಯನ್ನು ಕಂಬದಲ್ಲಿ ತೋರಿಸುವ ಪರೀಕ್ಷೆಯಲ್ಲಿಯೂ ತನ್ನ ಭಕ್ತನಿಗಾಗಿ ಅಪಾರ ಕರುಣೆಯಿಂದ ಹಿರಣ್ಯಕಶಿಪುವಿಗೆ ಬ್ರಹ್ಮನು ಕೊಟ್ಟಿದ್ದ ಕಠಿಣವಾದ ನಡೆಯಲಸಾಧ್ಯವಾದ ವರದಂತೆ (ವರವನ್ನು ಸತ್ಯ ಮಾಡಲು) ಕಂಬದಲ್ಲಿ ನರಸಿಂಹನ ರೂಪದಲ್ಲಿ ಬಂದನು. ಮತ್ತು ಹಿರಣ್ಯಕಶಿಪುವನ್ನು ಮುನಿಗಳ ಶಾಪದಿಂದ ಬಿಡುಗಡೆ ಮಾಡಿದನು ಮತ್ತು ಪ್ರಹ್ಲಾದನನ್ನು ಕಾಪಾಡಿದನು. ಅವನ ವಾಣಿ - ಪರಮಾತ್ಮನು ಎಲ್ಲೆಡೆಯೂ ಇದ್ದಾನೆಂಬುವ ಮಾತನ್ನು ಸತ್ಯ ಮಾಡಿದನು. ಅದಕ್ಕೆ ತರಸ್ವಿನೇ ನಮಃ ಎಂದು ಹೇಳುತ್ತೇವೆ.

ಪ್ರತಿ ಕ್ಷಣದಲ್ಲಿಯೂ ಪ್ರತಿಯೊಂದು ಜೀವಿಯನ್ನೂ ಪರಮಾತ್ಮನು ಜೀವನದಲ್ಲಿ ಬರುವ ಕಷ್ಟಗಳಿಂದ ದಾಟಿಸುತ್ತಲೇ ಇದ್ದಾನೆ. ಇದು ಅವನ ಸಂಕಲ್ಪ. ಆದರೆ ಅನೇಕರಿಗೆ ಇದು ಜ್ಞಾತವಾಗುವುದಿಲ್ಲ. ಮತ್ತು ಪರಮಾತ್ಮನ ಈ ಕರುಣೆಗೆ ನಾವು ಕೃತಜ್ಞತೆಯನ್ನು ಸಲ್ಲಿಸುವುದಿಲ್ಲ. ಏಕೆಂದರೆ ಇದನ್ನು

ನಾವು ಗಮನಿಸುವುದಿಲ್ಲ, ಅಷ್ಟೆ. ತಿಳಿದಲ್ಲಿ ಅಪಾರ ಕೃತಜ್ಞತೆ ಸಲ್ಲಿಸುವುದು ಬಾಕಿ ಉಳಿದಿರುತ್ತೆ. ಹೀಗೆ ಯೋಚಿಸುವವರು ಯಾರು? ಯಾರೋ ಕೆಲವರು ಜ್ಞಾನಿಗಳು, ಸಂತರು ಮುಂತಾದವರು ವಿಶ್ವಕ್ಕೆ ಶ್ರೇಯಸ್ಸನ್ನು ಬಯಸುವವರು ಅಷ್ಟೆ.

*ತಕ್ಷಕಾಯ ತನುತ್ರಾಯ ವಟವೇ ತರಲಾಯ ಚ ।*
*ತರಕ್ಷವೇ ತಾಪನಾಯ ತಾಪತ್ರಯಹರಾಯ ಚ ॥36॥ (226-232)*

**226. ತಕ್ಷಕಾಯ ನಮಃ**

ತಕ್ಷಕ - ತಕ್ಷಕನು ಸರ್ಪಗಳ ಒಡೆಯ, ಕದ್ರುವಿನ ಮಗ. ಜನಮೇಜಯ ರಾಜನ ಸರ್ಪಯಾಗದಲ್ಲಿ ಎಲ್ಲ ಸರ್ಪಗಳು ನಾಶ ಹೊಂದಿದವು. ಆಸ್ತೀಕ ಋಷಿಯ ಮಧ್ಯಸ್ತಿಕೆಯಿಂದ ಈತನು ಉಳಿದನು, ಮಹಾ ಭಾರತದಲ್ಲಿ ಬರುವ ತಕ್ಷನ ಪ್ರಸಂಗ ಹೀಗಿದೆ.

ಶ್ರೀಕೃಷ್ಣ ಅರ್ಜುನರು ವಿಹಾರದಲ್ಲಿದ್ದಾಗ ಅಗ್ನಿಯು ಬ್ರಾಹ್ಮಣನ ರೂಪದಲ್ಲಿ ಬಂದು ಹಸಿವೆಯನ್ನು ತೀರಿಸಲು ಕೇಳಿದನು. ಆಗ ಅರ್ಜುನನು ಶ್ರೀಕೃಷ್ಣನ ಪ್ರೇರಣೆಯಿಂದ ಒಪ್ಪಿದನು. ಬ್ರಾಹ್ಮಣನು ತನ್ನ ನಿಜವಾದ ಅಗ್ನಿ ರೂಪವನ್ನು ಪ್ರದರ್ಶಿಸಿ ಖಾಂಡವ ವನವನ್ನು ದಹಿಸಿದನು. ಆ ಕಾಲದಲ್ಲಿ ಅರ್ಜುನನು ಅಗ್ನಿಯನ್ನು ಕಾಪಾಡಿದನು. ಯಥೇಚ್ಛವಾಗಿ ಆಹಾರವನ್ನು ಕೊಡಿಸಿದನು. ಈ ಕಾಲದಲ್ಲಿ ತಕ್ಷಕನೆಂಬ ಸರ್ಪರಾಜನು ಅಲ್ಲಿಂದ ತಪ್ಪಿಸಿಕೊಂಡನು. ಅರ್ಜುನನ ಮೇಲಿನ ಕ್ರೋಧದಿಂದ ಕರ್ಣನ ಹತ್ತಿರ ಸರ್ಪಾಸ್ತ್ರವಾಗಿ ಇದ್ದು ಮಹಾಭಾರತ ಯುದ್ಧದಲ್ಲಿ ಶ್ರೀಕೃಷ್ಣನ ಕೃತಿಯಿಂದ ಅರ್ಜುನನ್ನು ಕೊಲ್ಲಲು ಸಾಧ್ಯವಾಗಲಿಲ್ಲ. ಮತ್ತೆ ಅರ್ಜುನನ ಮೊಮ್ಮಗನಾದ ಪರೀಕ್ಷದ್ರಾಜನು ತನ್ನ ಬೇಟೆಯ ಕಾಲದಲ್ಲಿ ವಿಧಿಯ ಮಹಿಮೆಯಿಂದ ಶಮೀಕ ಮುನಿಯ ಕತ್ತಿಗೆ ಸತ್ತ ಸರ್ಪವನ್ನು ಹಾಕಿದನು. ಇದನ್ನು ನೋಡಿ ಕುಪಿತನಾದ ಶಮೀಕನ ಮಗ ಶೃಂಗಿಯು "ಯಾರು ಈ ಅಪಚಾರ ಮಾಡಿರುವರೋ ಅವರು ಏಳು ದಿನದಲ್ಲಿ ಸರ್ಪದಷ್ಟನಾಗಲಿ" ಎಂದು ಶಾಪವನ್ನು ಕೊಟ್ಟನು. ಪರೀಕ್ಷದ್ರಾಜನಿಗೆ ಇದು ತಿಳಿದ ಮೇಲೆ ರಾಜ್ಯವನ್ನು ತನ್ನ ಮಗ ಜನಮೇಜಯನಿಗೆ ವಹಿಸಿ ಪ್ರಾಯೋಪವೇಶ ಮಾಡಿದನು. ಆ ಏಳು ದಿನದಲ್ಲಿ ಶುಕ ಮುನಿಯು ಭಾಗವತವನ್ನು ಹೇಳಿದನು. ಇದರಿಂದ ವೈರಾಗ್ಯ ತಾಳಿದ ಪರೀಕ್ಷದ್ರಾಜನನ್ನು ತಕ್ಷಕನು ಅವ್ಯಕ್ತವಾಗಿ ಬಂದು ಕಚ್ಚಿದ್ದರಿಂದ ರಾಜನು ದಿವಂಗತನಾದನು.

ಇದನ್ನು ಕೇಳಿ ಜನಮೇಜಯ ರಾಜನು ಸರ್ಪಯಾಗ ಮಾಡಿದನು. ಆಗ ತಕ್ಷಕನನ್ನು ಕೊಲ್ಲಲು ಅವನನ್ನು ಕರೆದರೆ ಬರಲಿಲ್ಲ. ನಂತರ "ಸಹೇಂದ್ರಾಯ, ತಕ್ಷಕಾಯ ಸ್ವಾಹಾ" ಎಂದು ಕರೆದಾಗ ಇಂದ್ರನೂ, ತಕ್ಷಕನು ಬರುತ್ತಿರಲು ಬೃಹಸ್ಪತಿಯು ತಕ್ಷನು ಅಮೃತ ಕುಡಿದಿರುವುದರಿಂದ ಸಾಯುವುದಿಲ್ಲ ಎಂದು

ಹೇಳಿದ್ದರಿಂದ ಯಾಗವನ್ನು ರಾಜನು ನಿಲ್ಲಿಸಿದನು.

ಇನ್ನೊಂದು ಸಂದರ್ಭದಂತೆ ಆಸ್ತೀಕ ಮುನಿಯ ಆದೇಶದಂತೆ ಸರ್ಪಗಳು ಬದುಕಿದವು. ಆಸ್ತೀಕನನ್ನು ಮತ್ತು ಅವನ ವಚನವನ್ನು ಕೇಳಿದರೆ ಸರ್ಪಗಳು ಯಾರನ್ನೂ ಕಚ್ಚುವುದಿಲ್ಲ.

*ಸರ್ಪ ಸರ್ಪ ಮಹಾಸರ್ಪ ಗಚ್ಛ ಗಚ್ಛ ಯಥಾ ಸುಖಮ್ ।*
*ಜನಮೇಜಯ ಯಜ್ಞಾಂತೇ ಆಸ್ತೀಕವಚನಂ ಸ್ಮರ ॥*

ಅಂದರೆ ತಕ್ಷಕನ ಕಥೆಯು ಹೇಗೆ ಪ್ರಕಾಶವಾಯಿತು ಕೊನೆಗೆ ಇದರ ಕಾರಣದಿಂದ ಭಾಗವತವು ಹೊರಗೆ ಬಂದಿತು. ಅಂತಹ ತಕ್ಷಕಾಯ ನಮಃ ಎಂದರೆ ಪರಮಾತ್ಮನಿಗೇ ಅದು ಸೇರುತ್ತದೆ. ಭಾಗವತವನ್ನೇ ಹೊರತಂದಂತಹ ಈ ಪ್ರಸಂಗಕ್ಕೆ ತಕ್ಷಕನೇ ಕಾರಣ. ಅದರಿಂದ ಅವನಿಗೆ ನಮಸ್ಕಾರಗಳು.

227. ತನುತ್ರಾಯ ನಮಃ

ತನು - ದೇಹ, ಶರೀರ, ಕೋಮಲವಾದದ್ದು

ತ್ರಾ - ಕಾಪಾಡುವುದು, ರಕ್ಷಿಸುವುದು.

ದೇಹವನ್ನು ಕಾಪಾಡುವವನು ಅಥವಾ ಕೋಮಲವಾದ ವಸ್ತುವನ್ನು ಕಾಪಾಡುವವನು ಎಂದು ಅರ್ಥಮಾಡಬಹುದು.

ಪರಮಾತ್ಮನು ಸೃಷ್ಟಿಯಲ್ಲಿ ಜೀವಿಗಳಿಗೆ (ದೇಹವನ್ನು) ಅವರವರ ಕರ್ಮಗಳಿಗನುಗುಣವಾಗಿ ದೇಹವನ್ನು ಕೊಡುತ್ತಾನೆ ಮತ್ತು ಕಾಪಾಡುತ್ತಾನೆ. ಹೀಗೆ ಈ ದೇಹಗಳನ್ನು ಕೊಡುವುದು ಅನಂತವಾಗಿ ನಡೆಯುತ್ತದೆ. ಆದರೆ ಯಾವಾಗ ಸಂಸಾರ ಬಂಧನದಿಂದ ಮುಕ್ತಿ ಬರುವುದೋ ಆಗ ಜೀವಿಗೆ ಪರಮ ಪದವು ಬರುತ್ತದೆ. ಆಗ ಈ ಸಂಸಾರ ಸಾಗರದಲ್ಲಿ ದೇಹಗಳ ಅವಶ್ಯಕತೆಯಿರುವುದಿಲ್ಲ.

ಅದರಿಂದಲೇ ಪರಮಾತ್ಮನನ್ನು ತನುತ್ರಾಯ ನಮಃ ಎಂದು ಕರೆಯುವುದು.

ಕೋಮಲವಾದ ವಸ್ತುವನ್ನು ರಕ್ಷಿಸುವುದು ಎಂದರೆ ಬುದ್ಧಿ, ಮನಸ್ಸು, ಅಹಂಕಾರ, ಚಿತ್ತ ಇವುಗಳಲ್ಲಿ ಪ್ರತಿಯೊಂದೂ ಅವವುಗಳ ರೀತಿಯಲ್ಲಿ ಬಹಳ ಮೃದುವಾಗಿರುತ್ತವೆ. ಇಂತಹ ಮೃದುತ್ವವನ್ನು ರಕ್ಷಿಸುವವನು ಎಂದು ಅರ್ಥ. ಪ್ರತಿ ಜೀವಿಯ ಇವುಗಳನ್ನು ರಕ್ಷಿಸುವುದು ಪರಮಾತ್ಮನ ಹೊರತಾಗಿ ಬೇರೆಯವರಿಂದ ಸಾಧ್ಯವಿಲ್ಲ.

ಅದರಿಂದಲೇ ಇವನಿಗೆ ತನುತ್ರಾಯ ನಮಃ ಎಂದು ಹೇಳುತ್ತೇವೆ.

228. ವಟವೇ ನಮಃ

ವಟ - ಆಲದ ಮರ, ವಟ ವೃಕ್ಷ. ಪರಮಾತ್ಮನು ವಟ ಪತ್ರಶಾಯಿ,

ಆಲದ ಮರದ ಎಲೆಯ ಮೇಲೆ ಪ್ರಪಂಚವನ್ನೆಲ್ಲ ಪ್ರಳಯಕಾಲದಲ್ಲಿ ಉಪಸಂಹರಿಸಿದ ಮೇಲೆ ವಟಪತ್ರದ ಮೇಲೆ ಶಿಶುರೂಪದಲ್ಲಿ ಮಲಗುತ್ತಾನೆ, ಅದರಿಂದ ಅಲ್ಲಿ ವಟಪತ್ರ, ಶಿಶು ರೂಪದ ಪರಮಾತ್ಮ ಇಬ್ಬರೇ ಅಂತ್ಯದಲ್ಲಿ ಮತ್ತು ಆದಿಯಲ್ಲಿ ಇರುತ್ತಾರೆ. ಹೀಗೆ ಯೋಗ ನಿದ್ರೆಗೆ ಹೋಗುವ ಮೊದಲು ಪರಮಾತ್ಮನು ಕಾಲದೇವನನ್ನು ಕರೆದು ಹೇಳುತ್ತಾನೆ - ಈ ಪ್ರಳಯವು ಕೊನೆಯಾಗಿ ಬ್ರಹ್ಮನ ಬೆಳಗಾಗುವ ಹೊತ್ತಿಗೆ ಸರಿಯಾಗಿ ಎಬ್ಬಿಸಲು ಹೇಳುತ್ತಾನೆ. ಅಂದರೆ ಕಾಲ, ಪರಮಾತ್ಮ, ವಟಪತ್ರ ಮಾತ್ರ ಇದ್ದ ಹಾಗಾಯಿತು. ಈ ಪರಿಸ್ಥಿತಿ ನಿತ್ಯ ಪ್ರಳಯದಲ್ಲಿಯೂ, ಬ್ರಹ್ಮನ ಆಯುಸ್ಸು ಮುಗಿದು ಹೊಸ ಬ್ರಹ್ಮ ಬರುವ ಕಾಲದಲ್ಲಿಯೂ ಇರುತ್ತದೆ. ಅದರಿಂದ ವಟಪತ್ರವನ್ನು ಪಡೆದ ವಟವೃಕ್ಷವು ಎಷ್ಟು ಪುಣ್ಯಶಾಲಿಯೋ ಊಹಿಸಲು ಅಸಾಧ್ಯ. ಇದು ಒಂದು ವಿಧದ ಆಧಾರ.

ಇನ್ನೊಂದು ವಟವೃಕ್ಷದ ಕೆಳಗೆ ಪರಮಾತ್ಮನು ಯೋಗ ನಿದ್ರೆಯಲ್ಲಿರುವುದು.

ವಟ - ಎಂದರೆ ಶೂನ್ಯ ಎಂದು, ಸೂನ್ನೆ ಎಂದೂ ಅರ್ಥ. ಈ ಅರ್ಥವಾದಾಗ ಪರಮಾತ್ಮನು ಶೂನ್ಯ, ಸೊನ್ನೆ ಎಂದು ಅರ್ಥ ಮಾಡಿದರೆ, ಪರಮಾತ್ಮನು ನಿರಾಕಾರನೆಂದೂ, ಆಕಾರವೇ ತಿಳಿಯದಾಗ ಆರಾಧಿಸುವುದು ಹೇಗೆ ಎಂದು ಅನ್ನಿಸುತ್ತದೆ. ಆಗ ಆಕಾರವಿಲ್ಲದವನು, ನೇತಿ, ನೇತಿ ಎಂದು ಎಲ್ಲವನ್ನು ವರ್ಜಿಸುತ್ತ ಹೋದಾಗ ಉಳಿಯುವದು ಏನು ಏನೂ ಇಲ್ಲ ಎನ್ನುವ ಅರ್ಥಮಾಡಿ ''ವಟ'' ಎಂದು ಆರಾಧಿಸಬಹುದು. ಅಂದರೆ ವಟವೇ ನಮಃ ಎಂದರ್ಥವಾಯಿತು.

ಇನ್ನೊಂದರ್ಥದಲ್ಲಿ ಗುಳಿಗೆ, ಉಂಡೆ, ಸಿಹಿವಸ್ತು ಎಂದರೆ, ಆಗ ಪರಮಾತ್ಮನಷ್ಟು ಎಲ್ಲ ಸಂಸಾರ ವ್ಯಾಧಿಗಳಿಗೂ ಔಷಧ ಯಾವುದೂ ಇಲ್ಲ. ಪರಮಾತ್ಮನನ್ನು ಭವರೋಗ ವೈದ್ಯ ಎಂದು ಆರಾಧಿಸುತ್ತೇವೆ. ಭವರೋಗ ವೈದ್ಯನಾದ ಪರಮಾತ್ಮನಿಗೆ ನಮಸ್ಕಾರಗಳು.

ಸಿಹಿವಸ್ತು ಎಂದು ಅರ್ಥಮಾಡಿದರೆ, ಪರಮಾತ್ಮನ ನಾಮದಷ್ಟು ಮಧುರವಾದುದು ಬೇರೊಂದಿಲ್ಲ. ನಾಮವೂ ಮಧುರ, ನಾಮಸ್ಮರಣೆಯೂ ಮಧುರ, ಅದರಿಂದ ಬರುವ ಆನಂದವೂ ಮಧುರ. ಮೈಮರೆಯುವ, ಮೈಮರೆಯಿಸುವ ನಾಮಸ್ಮರಣೆಯ ಆನಂದ ಹೆಚ್ಚಿದಷ್ಟೂ ನಾವು ಲೋಟ ನೀರು, ಬಿಂದಿಗೆಯಷ್ಟು ನೀರು, ಕೊಳದಷ್ಟು ನೀರು, ಸಾಗರದಷ್ಟು ನೀರು ನಮ್ಮದಾಗಿಸಿದರೆ ಬರುವ ಮನಸ್ಸು ತೃಪ್ತಿಗೆ ಹೋಲಿಸಿದಷ್ಟು ಮಹದಾನಂದವು ಸ್ವಲ್ಪ ಸ್ವಲ್ಪದ್ದು, ಸ್ವಲ್ಪ ಕಾಲದ್ದು ಹೆಚ್ಚುತ್ತಾ ಹೋಗಿ ಆನಂದ ಸಾಗರದಲ್ಲಿ ತೇಲಿಸಿ ಸ್ನಾನ ಮಾಡಿಸಿ, ಮುಳುಗಿಸಿ ನನ್ನನ್ನು ಅದರಲ್ಲಿ ಹೇಳ ಹೆಸರಿಲ್ಲದಾಗಿಸುತ್ತದೆ. ಪರಮಾತ್ಮನೇ ಜ್ಯೋತಿ ಸ್ವರೂಪ, ನಮ್ಮಲ್ಲಿ ಆತ್ಮಜ್ಯೋತಿ

ಇವು ಒಂದಾದಾಗ ನಮ್ಮದನ್ನು ಬೇರ್ಪಡಿಸಲು ಸಾಧ್ಯವಾಗುವುದಿಲ್ಲ ಅದು ಪರಮಾತ್ಮನ ಮತ್ತು ಈ ಆತ್ಮ ಜ್ಯೋತಿಯ ಮಿಲನ, ಪುನಃ ಬೇರ್ಪಡಿಸಲಾಗದ ಮಿಲನ. ಹೇ ಐಕ್ಯ, ಬ್ರಹ್ಮಲೀನ, ಇದು ಎಷ್ಟು ಗಹನವಾದುದು.

ನಾವು ಊಹಿಸುವ ಪರಮಾತ್ಮನ ದೇಹದ ಯಾವ ಅವಯವವೂ ಮಾತೂ ಎಲ್ಲವೂ ಮಧುರವಾದದ್ದೇ.

ಪುರುಷ ಸೂಕ್ತದಲ್ಲಿ ವಿವರಿಸುವ ಪರಮಾತ್ಮನ ದೇಹ, ಅವಯವಗಳಿಂದಾದ ಸೃಷ್ಟಿ ಎಲ್ಲವೂ ಒಂದು ರೀತಿ ವಿಚಿತ್ರವಾದದ್ದೆ. ಒಂದು ದೇಹದ ಒಂದೊಂದು ಭಾಗವೂ ಹೇಗೆ ಬಂತು, ಎಷ್ಟು ವಿಶಾಲವಾದದ್ದು. ಭಗವಂತನ ದೇಹದಿಂದ ಪೂರ್ಣ ಸೃಷ್ಟಿಯೇ ಹೊರಹೊಮ್ಮಿದೆ. ಇಂತಹ ಪರಮಾತ್ಮನ ಪ್ರತಿಯೊಂದು ಭಾಗವೂ ಮಧುರ, ಮಧುರವಾದದ್ದನ್ನೆ ಹೊರ ಹೊಮ್ಮುವ ಪರಮಾತ್ಮನಾದವನಿಗೆ ''ವಟವೇ ನಮಃ'' ಎನ್ನುತ್ತೇವೆ.

ಎಂತಹ ಅರ್ಥವೇ ಇರಲೀ ಪರಮಾತ್ಮನ ಮಹತ್ತನ್ನೇ ತೋರಿಸುತ್ತದೆ.

9. ತರಲಾಯ ನಮಃ

ತರಲ ಎಂದರೆ ಹಾರ, ಕಂಠಿ, ವಜ್ರ ಎಂದು ಅರ್ಥಗಳು.

ಭಗವಂತನು ಧರಿಸುವ ಪ್ರತಿಯೊಂದು ವಸ್ತುವೂ ಅವನ ಸ್ಪಂದನದಿಂದ ಪವಿತ್ರತೆಯನ್ನು ಮಹಿಮೆಯನ್ನೇ ಹೊಂದುತ್ತದೆ. ಅವನ ಇಚ್ಛೆಯಿಂದ ಅವನೇ ಆಗಿ ಬಿಡುತ್ತವೆ. ನಮಕಸ್ತೋತ್ರದಲ್ಲಿ ಹೇಳುವಂತೆ ಅವನ ಅಭಿಷೇಕವನ್ನು ಮಾಡುವ ನಮ್ಮ ಹಸ್ತವೇ ಅವನ ಕೃಪೆಯಿಂದ ಅವನಿಗಿಂತ ಉತ್ತಮವಾಗಿ ಬಿಡುತ್ತದೆ. ''ಅಯಂ ಮೇ ಹಸ್ತೋ ಭಗವಾನಯಂ ಮೇ ಭಗವತ್ತರಃ'' ಎಂಬಂತೆ ನಮ್ಮ ಹಸ್ತವೇ ಅವನ ಶಕ್ತಿಯನ್ನು ಪಡೆಯುವುದರಲ್ಲಿ ಅನುಮಾನವಿಲ್ಲ. ಹಾಗೆಯೇ ಅವನು ಧರಿಸುವ ಕಂಠ ಹಾರಗಳು, ವಜ್ರ ವೈಡೂರ್ಯಗಳು, ಆಭರಣಗಳು ತಮ್ಮ ತಮ್ಮ ಅತೀವ ಪುಣ್ಯ ವಿಶೇಷದಿಂದ ಭಗವಂತನ ದೇಹ ಸ್ಪರ್ಶವಾಗುತ್ತವೆ. ಅವನೇ ಆಗಿ ಬಿಡುತ್ತವೆ.

ಶ್ರೀ ರಾಮನು ಉಪಯೋಗಿಸುವ ಪಾದುಕೆಯು ಕ್ಷಣವೂ ಎಡಬಿಡದೇ ರಾಮನ ಸೇವೆ ಮಾಡುತ್ತವೆ. ರಾಮನು ನಿದ್ರಿಸುವ ಸಮಯದಲ್ಲಿ ಮಾತ್ರ ಅವನಿಂದ ಪಲಂಕದ ಹತ್ತಿರದಲ್ಲಿಯೇ ರಾಮನಿಗಾಗಿ ಕಾಯುತ್ತಿರುತ್ತವೆ. ಸೀತಾದೇವಿಯೂ ಸಹ ಪಾದುಕೆಯಷ್ಟು ರಾಮನ ದೇಹ ಸ್ಪರ್ಶ ಮಾಡುತ್ತಾ ಸೇವೆ ಮಾಡಲು ಸಾಧ್ಯವಿಲ್ಲ, ಏಕೆಂದರೆ ಶ್ರೀರಾಮನು ನಾರಾಯಣ, ಸೀತೆಯು ಲಕ್ಷ್ಮಿ ''ಸೀತಾ ಲಕ್ಷ್ಮೀರ್ಭವಾನ್ ವಿಷ್ಣು'' ಎಂದು ಬ್ರಹ್ಮದೇವರು ರಾಮನಿಗೆ ಸೀತೆಯ ಅಗ್ನಿಪರೀಕ್ಷೆಯಾದ ನಂತರ ಹೇಳುತ್ತಾರೆ. ಆದರೆ ರಾಮನು ಹೇಳಿದ್ದು ರಾಮನು ಮನುಷ್ಯ ದಶರಥನ ಮಗ ಅಷ್ಟೆ. ಒಟ್ಟಿನಲ್ಲಿ ಈ ಪ್ರಸಂಗ ಈಗ

ಬಂದಿದ್ದು ಸೀತೆಯ ವಾಸಸ್ಥಾನ ರಾಮನ ವಕ್ಷ ಸ್ಥಳ. ಪಾದುಕೆಯ ಮಹಾತ್ಮೆ ಹೇಳಲು ಅಷ್ಟೆ. ಅಂದರೆ ಭಗವಂತನ ಅನುಗ್ರಹದಿಂದ ಸ್ಪರ್ಶದಿಂದ ವಸ್ತುವು ಭಗವಂತನೇ ಆಗಿಬಿಡುತ್ತದೆ. ಅವನ ಶಕ್ತಿಯನ್ನೇ ಪಡೆಯುತ್ತದೆ. ಅದರಿಂದ "ತರಲಾಯ ನಮಃ" ಎಂದು ವಂದಿಸುತ್ತೇವೆ.

**30. ತರಕ್ಷವೇ ನಮಃ**

ರಕ್ಷ - ರಕ್ಷಿಸುವವನು, ತರಕ್ಷವೇ ನಮಃ ಎಂದರೆ ಆತ್ಮರಾದ, ಭಕ್ತರಾದ ಯಾರನ್ನು ವಿಂಗಡಿಸದೇ ರಕ್ಷಿಸುವವನು.

ಎಷ್ಟೇ ಪಾಪ ಸಂಘಟನೆಯಿರಲೀ ಯಾರು ಅವನನ್ನು ಶ್ರದ್ಧೆ ಭಕ್ತಿಯಿಂದ ಆಶ್ರಯಿಸುತ್ತಾರೋ ಅವರನ್ನು ತಾರತಮ್ಯವಿಲ್ಲದೆ ಪರಮಾತ್ಮನು ಉದ್ಧರಿಸುತ್ತಾನೆ. ಎಲ್ಲರಿಗೂ ಸದಾ ಅಭಯವನ್ನು ಕೊಡುತ್ತಾನೆ. ಕಲಿಯುಗದಲ್ಲಿ ಭಗವಂತನನ್ನು ಹೊಂದುವುದು, ಅವನ ಕೃಪೆಯನ್ನು ಪಡೆಯುವುದು ಇತರ ಯುಗಗಳಿಗಿಂತ ಸುಲಭ, ಅದರಿಂದ ತರಕ್ಷವೇ ನಮಃ ಎಂದು ನಮಸ್ಕರಿಸುತ್ತೇವೆ.

**31. ತಾಪನಾಯ ನಮಃ**

ತಾಪ - ಉಷ್ಣತೆ, ಬಿಸಿ, ದುಃಖ, ಸಂಕಟ, ತೊಂದರೆ, ಜ್ವರ ಇತ್ಯಾದಿ. ಜೀವಿಗಳಿಗೆ ದೇಹವನ್ನು ಕೊಟ್ಟು ಸಂಸಾರ ಸಾಗರದೊಳಗೆ ಹಾಕಿ, ತನ್ನ ಮಾಯೆಯೊಳಗೆ ಸಿಲುಕಿಸಿ, ಅನೇಕ ಜ್ಞಾತಾಜ್ಞಾತ ವ್ಯಾಪಾರಗಳನ್ನು ಮಾಡಿಸುತ್ತಾನೆ. ಒಂದು ರೀತಿ ಇದು ಅವನ ಲೀಲೆಗಾಗಿ ಅವನಿಂದಲೇ ನಡೆಯುವ ಕೆಲಸಗಳು. ಹೀಗೆ ಮಾಡಿ ಜೀವಿಗಳಿಗೆ ಕರ್ಮಲೇಪನ ಮಾಡಿಸುತ್ತಾನೆ. ತಾನು ಮಾತ್ರ ಅಂಟಿಕೊಳ್ಳದೆ ಸೂತ್ರಧಾರನಾಗಿ ಹೊರಗೆ ಇರುತ್ತಾನೆ.

ಆದಿಯಲ್ಲಿ ಎಲ್ಲ ಜೀವಿಗಳೂ ಅವನ ದೇಹದಿಂದಲೇ ಸಂಕಲ್ಪ ಮಾತ್ರದಿಂದ ಬಂದ ಕಾರಣ ಎಲ್ಲವೂ ನೈಜ ಸ್ವರೂಪದಲ್ಲಿ ಉತ್ತಮವಾಗಿಯೆ ಇದ್ದವು. ನಿರ್ಮಲವಾಗಿದ್ದವು. ಆದರೆ ವಿಷಯ ಸುಖಗಳ ಮತ್ತು ಜಗತ್ತಿನ ವ್ಯಾಪಾರದಿಂದ ಮಲಿನವಾದವು. ಮಾಯೆಯಲ್ಲಿ ಸಿಕ್ಕಿ ಅನೇಕ ರೀತಿಯ ತಾಪಗಳನ್ನು ಅಂಟಿಸಿಕೊಂಡವು. ಒಂದು ತಾಪದಿಂದ ಮತ್ತೊಂದು, ಅದರಿಂದ ಇನ್ನೊಂದು ಹೀಗೆ ಬೆಳೆಯುತ್ತ ಇವು ಕರ್ಮರೂಪವಾಗಿ ಸೂಕ್ಷ್ಮ ಶರೀರದಲ್ಲಿ ಪರ್ವತ ರೂಪವಾಗಿ ಬೆಳೆಯುತ್ತವೆ. ಅನೇಕ ದೇಹಗಳನ್ನು ಒಂದಾದ ಮೇಲೊಂದು ದೇಹ ಪಡೆದು ಸಕಲ ಯೋನಿಗಳಲ್ಲಿ ಜಗತ್ತಿಗೆ ಬರುತ್ತವೆ. ಬೆಳೆದ ಕರ್ಮ ಫಲಗಳನ್ನು ಅನುಭವಿಸದೆ ಬೇರೆ ದಾರಿಯೇ ಇಲ್ಲ, ಆದರೆ ಯಾವುದೋ ಕ್ಷಣದಲ್ಲಿ ತನ್ನದೇ ಆದ ಕರ್ಮ ವಿಶೇಷದಿಂದ ಭಗವತ್ಕೃಪೆಗೆ ಪಾತ್ರವಾಗಿ ಉದ್ಧಾರದ ದಾರಿಯನ್ನು ಕಂಡುಕೊಳ್ಳುತ್ತದೆ. ಭಗವತ್ಕೃಪೆಯು ತಾನಾಗಿಯೇ

ಯಾವುದೋ ರೀತಿಯಲ್ಲಿ ಗುರುವಿನ ಮುಖೇನ ಅಂಟಿಕೊಳ್ಳುತ್ತದೆ. ಮತ್ತು ಗುರುಕೃಪೆಯಿಂದ ವಿಕಾಸವಾಗುತ್ತದೆ. ಆ ಗುರು ದರ್ಶಿತ ಮಾರ್ಗದಿಂದ ನಡೆದು ಭಗವಂತನನ್ನು ಪೂಜಿಸಿ, ಜಪಿಸಿ, ಧ್ಯಾನಿಸಿ ಸಾಕ್ಷಾತ್ಕಾರವನ್ನು ಪಡೆಯುತ್ತದೆ. ಭವ ತಾಪಗಳನ್ನು ಮಾಡುವುದೂ ಅವನ ಮಾಯೆಯೇ. ಬಿಡಿಸುವುದೂ ಅವನ ಮಾಯೆಯೇ. ಸಕಲಕ್ಕೂ ಅವನೇ ಸೂತ್ರಧಾರ, ಅಂತಹವನಿಗೆ ತಾಪನಾಯ ನಮಃ ಎಂದು ನಮಸ್ಕರಿಸುತ್ತೇವೆ.

ತಾಪಗಳನ್ನು ಕೊಡುವವನೂ ಅವನೇ, ಅವುಗಳಿಂದ ಬಿಡಿಸುವವನೂ ಅವನೇ. ಜೀವಿಯು ಅವನ ಅಧೀನ, ಅವನ ಸಂಕಲ್ಪದಂತೆಯೇ ನಡೆಯುತ್ತದೆ.

**32. ತಾಪತ್ರಯಹರಾಯ ನಮಃ**

ತಾಪ - ಎಂದರೆ 231 ನಾಮದಲ್ಲಿ ಹೇಳಿದ ದುಃಖ, ಶಾಖ, ಸಂಕಟ, ತೊಂದರೆಗಳು.

ತ್ರಯ - ಎಂದರೆ ಮೂರು.

ತಾಪತ್ರಯ - ಮೂರು ರೀತಿಯ ತಾಪಗಳು.

ಹರ - ಬಿಡಿಸುವವನು.

ತಾಪತ್ರಯ ಹರ - ಮೂರು ರೀತಿಯ ತಾಪಗಳನ್ನು ಬಿಡಿಸುವವನು ಯಾವನೋ ಅವನು - ಪರಮಾತ್ಮ. ಅವನು ಸಾಮಾನ್ಯ ಮನುಷ್ಯನು ಆಗಬಹುದು.

1. ಆ ತಾಪತ್ರಯಗಳನ್ನು ಅನುಭವಿಸುವವನೇ ದಾರಿ ಕಂಡುಕೊಂಡು ತಾನೇ ಬಿಡಿಸಿಕೊಳ್ಳಬಹುದು.

2. ತನ್ನಿಂದ ನಿವಾರಣೆ ಮಾಡಿಕೊಳ್ಳಲಾಗದಿದ್ದರೆ ತನ್ನ ಹತ್ತಿರದ ಬಂಧುಗಳಿಂದ ಪರಿಹಾರವನ್ನು ಕಂಡು ಕೊಳ್ಳಬಹುದು. ಇದು ಆಗದಿದ್ದರೆ,

3. ಬೇರೆ ಹಿತೈಷಿಗಳಿಂದ ಕಂಡು ಕೊಳ್ಳಬಹುದು. ಇದರಿಂದಲೂ ಆಗದಿದ್ದರೆ,

4. ಉತ್ತಮರಾದ ಗುರುಗಳಿಂದ, ಸಾಧುಗಳಿಂದ, ಸಂತರಿಂದ ತನಗನುಕೂಲವಾಗುವಂತಹ ಪರಿಹಾರ ಕಂಡು ಕೊಳ್ಳಬಹುದು. ಜೊತೆಗೆ

5. ಪರಮಾತ್ಮನಲ್ಲಿ ಮೊರೆಹೊಕ್ಕು ಪ್ರಾರ್ಥನೆ ಮಾಡಿ ಆರ್ತನಾಗಿ ಬೇಡಿ ಪಡೆಯಬಹುದು.

ಈ ಬೇಡಿಕೆಗಳಲ್ಲಿ ಆರ್ತಭಾವದಿಂದ, ಜಿಜ್ಞಾಸು ಭಾವದಿಂದ, ಅರ್ಥಭಾವದಿಂದ, ಜ್ಞಾನ ಪಡೆಯುವ ಭಾವದಿಂದ ಪರಿಹಾರಗಳನ್ನು ಪಡೆಯಬಹುದು.

ಮೇಲಿನ (1) ರಿಂದ (5)ವರೆಗೆ ಎಲ್ಲ ಸಮಯ, ಸನ್ನಿವೇಶದಲ್ಲಿಯೂ

ತಾಪತ್ರಯಗಳನ್ನು ಹರಿಸುವವನು ತಾಪತ್ರಯಹರನಾಗುತ್ತಾನೆ. ಅದರಿಂದ ಅವನಿಗೆ ಕೃತಜ್ಞತೆಯನ್ನು ಸಲ್ಲಿಸಲು ನಮಸ್ಕರಿಸುತ್ತೇನೆ.

ಪ್ರತಿ ಕ್ಷಣದಲ್ಲಿಯೂ ಒಂದಲ್ಲ ಒಂದು ರೀತಿಯ ತಾಪವು ಮನುಷ್ಯನಿಗೆ ಉದ್ಭವಿಸುತ್ತದೆ. ಆಗ ತಾಪತ್ರಯ ಹರನೂ ಸಹ ಉದ್ಭವಿಸುತ್ತಾನೆ. ಒಂದು ರೀತಿಯಲ್ಲಿ ಅವನು ಪ್ರತಿ ಕ್ಷಣದಲ್ಲಿಯೂ ನಮ್ಮ ನೆರಳಿನಂತೆ ನಮ್ಮ ಬೆನ್ನಿನಲ್ಲಿಯೆ ಇರುತ್ತಾನೆ.

ತಾಪಗಳು ಯಾವುವು, ಎಂದರೆ ಕಾಯವಾಚ ಮನಸ್ಸಿಗೆ ಸಂಬಂಧಿಸಿದ ತಾಪಗಳು.

ದೇಹಕ್ಕೆ ಸಂಬಂಧಿಸಿದ ತಾಪಗಳು, ಮಾತಿಗೆ ಸಂಬಂಧಿಸಿದ ತಾಪಗಳು, ಮನಸ್ಸಿಗೆ ಸಂಬಂಧಿಸಿದ ತಾಪಗಳು. ಇವುಗಳು ಕಡಿಮೆಯಿಂದ ಹೆಚ್ಚು ಪ್ರಮಾಣದವರೆಗೆ ಅವುಗಳ ಅನುಸಾರವಾಗಿ (1) ರಿಂದ (5)ವರೆಗಿನ ತಾಪತ್ರಯಹರರು ಒದಗಬೇಕು. ಆದರೆ ಸದಾ ಎಲ್ಲ ಸ್ಥಿತಿಯಲ್ಲಿಯೂ ಮೊರೆ ಹೋಗಲು ಪರಮ ಪವಿತ್ರನಾದ ಮತ್ತು ಕ್ಷಣದಲ್ಲಿ ಒದಗುವ ಪರಮಾತ್ಮನೆ ಅತ್ಯಂತ ಸಮೀಪದಲ್ಲಿರುವವನು. ಮತ್ತು ನಮ್ಮಿಂದ ಯಾವ ರೀತಿಯ ವಸ್ತುವನ್ನು ಅಪೇಕ್ಷಿಸದ ಬಂಧು ಮತ್ತು ಯಾವ ಕ್ಷಣದಲ್ಲಿಯೂ ಕೈ ಬಿಡದವನು, ಇವನು ಎಲ್ಲರಿಗೂ ಎಲ್ಲ ಕಾಲದಲ್ಲಿಯೂ ನಮ್ಮ ಉಸಿರಾಡುವ ಶಕ್ತಿಯಂತೆ ದೊರಕುತ್ತಾನೆ.

ಅದರಿಂದ ಅತ್ಯುತ್ತಮವಾದ, ಕ್ಷಣದಲ್ಲಿ ದೊರಕುವ, ನಮ್ಮಿಂದ ಏನನ್ನು ಅಪೇಕ್ಷಿಸದ ತಾಪತ್ರಯಹರನು ಪರಮಾತ್ಮನು. ಅದರಿಂದ ಅವನಿಗೆ ನಮಸ್ಕಾರಗಳು.

ಸೃಷ್ಟಿಯಲ್ಲಿ ಸಕಲ ಜೀವಿಗಳಿಗೂ ಎಲ್ಲ ಕಾಲದಲ್ಲಿಯೂ ಕಲ್ಪಾದಿಯಿಂದ ಕಲ್ಪಾಂತದವರೆಗೆ ಮತ್ತು ಇನ್ನು ಮುಂದಕ್ಕೆ ದೊರಕುವ ಅತ್ಯಂತ ಶ್ರೇಷ್ಠವಾದ ತಾಪತ್ರಯಹರನು ಇವನು. ಇವನಲ್ಲಿ ಯಾವ ತಾರತಮ್ಯವೂ ಇಲ್ಲ. ಭಕ್ತಿ, ಶ್ರದ್ಧೆ ಮಾತ್ರ ಇರಬೇಕು.

ಎಲ್ಲಿ ಭಕ್ತಿ - ಅನನ್ಯ ಅವ್ಯಭಿಚಾರಿಣೀ ಭಕ್ತಿ ಮತ್ತು ಅನನ್ಯ ನಿಷ್ಕಪಟವಾದ ಶ್ರದ್ಧೆ, ನಿಸ್ವಾರ್ಥವಾದ ಭಕ್ತಿ, ಶ್ರದ್ಧೆ ಇರುವುದೋ ಅಲ್ಲಿ ಪರಮಾತ್ಮನು ಪ್ರಕಟವಾಗುವವನು. ಯಾವುದಾದರೂ ಒಂದು ರೀತಿಯಲ್ಲಿ ಗುರುವಿನ ರೂಪದಲ್ಲಿ, ಬಂಧುವಿನ ರೂಪದಲ್ಲಿ, ಅನಿರೀಕ್ಷಿತ ರೂಪದಲ್ಲಿ, ಅನಿರೀಕ್ಷತ ಸನ್ನಿವೇಶದ ರೀತಿ ಬಂದು ತಾಪತ್ರಯಗಳನ್ನು ನಿವಾರಿಸುವನು. ನಿವಾರಿಸುವ ಸೂಚನೆ, ದಾರಿಯನ್ನು ತೋರಿಸುವನು. ಇವನ ಮಹಿಮೆಯೇ ಅನಂತ, ಅನಾದಿ. ಸಮಯಕ್ಕೆ ತಕ್ಕ ಬಂಧು. ಅದರಿಂದಲೇ ಇವನನ್ನು ತಾಪತ್ರಯ ಹರನೆಂದು ನಮಸ್ಕರಿಸುತ್ತೇವೆ.

*ಚತುರೋಪಾಯ ಶಾಂತಾಯ ಶಾಂತ್ಯಾಧಾರಾಯ ತೇ ನಮಃ ।*
*ಶತಪತ್ರಾಯ ತಾರ್ಕ್ಷ್ಯಾಂಸಸ್ಥಿತಯೇ ಶತಮೂರ್ತಯೇ ।।37।।*

*(233-237)*

33. **ಚತುರೋಪಾಯ ಶಾಂತಾಯ ನಮಃ**

ಚತುರ - ತೀಕ್ಷ್ಣವಾದ ಬುದ್ಧಿ, ಪರಿಸ್ಥಿತಿಗೆ ತೀಕ್ಷ್ಣವಾಗಿ, ಸೂಕ್ತವಾಗಿ ಹೆಚ್ಚು ಕಾಲಾವಕಾಶ ತೆಗೆದುಕೊಳ್ಳದೆ ಪ್ರತಿಕ್ರಿಯಿಸುವ ಬುದ್ಧಿ ಕುಶಲತೆ.

ಉಪಾಯ - ಪರಿಹಾರ, ಕ್ಲಿಷ್ಟವಾದ ಸಮಸ್ಯೆಗೆ ಸೂಕ್ತವಾದ ಪರಿಹಾರ ಕಂಡು ಹಿಡಿಯುವುದು.

ಶಾಂತ - ಸಮ ಬುದ್ಧಿ ಇಟ್ಟುಕೊಂಡು ಯಾವ ರೀತಿಯಲ್ಲಿಯೂ ಸಮಸ್ಯೆಗೆ ಸಂಬಂಧ ಪಟ್ಟವರಿಗೆ ನೋವಾಗದ ರೀತಿಯಲ್ಲಿ ನಡೆಯುವುದು.

ಈ ಮೂರೂ ಸೇರಿದರೆ ಚತುರೋಪಾಯ ಶಾಂತಾಯ ಎಂದಾಗುತ್ತದೆ.

ಈ ರೀತಿ ನಡೆಯುವವರು ಬಹಳ ಸಮ ಬುದ್ಧಿ, ತೀಕ್ಷ್ಣವಾಗಿ ತತ್ಕಾಲದಲ್ಲಿ ಶಾಂತಿಯಿಂದ ಪ್ರತಿಕ್ರಿಯಿಸುವವರು ಸಿಗುವುದು ಬಹಳ ಅಪರೂಪ, ಸಮಾಜದಲ್ಲಿ ನಿಸ್ವಾರ್ಥ ನಿಷ್ಕಾಮ ಮನೋಭಾವದವರು ಸಿಗುವುದು ಅಪರೂಪ. ಸಾಧುಗಳು, ಸಂತರು, ಸನ್ಯಾಸಿಗಳು, ಭಗವಂತನ ಉಪಾಸಕರು ಈ ತರಹದವರಿರಬಹುದು. ಸರಿಯಾಗಿ ವಿವೇಚಿಸಿದರೆ ಇವರೇ ಚತುರೋಪಾಯಶಾಂತರು.

ಸ್ವಾತಿಕ ಮನೋಭಾವ ಬೆಳೆಸುವವರು ತಮ್ಮ ಸಮಸ್ಯೆಗಳಿಗೆ ಮತ್ತು ಆಧ್ಯಾತ್ಮಿಕ ಮುನ್ನಡೆಗೆ ಇಂತಹ ಸಾಧುಗಳನ್ನು, ಸಂತರನ್ನು, ಸನ್ಯಾಸಿಗಳನ್ನು ಆದ್ಯ ಗುರುಗಳಾಗಿ ಪರಿಗ್ರಹಿಸಿ, ಇವರುಗಳು ಹೇಳಿದ ಆದೇಶಗಳನ್ನು ಅನನ್ಯ ಶ್ರದ್ಧೆಯಿಂದ ಪಾಲಿಸಬೇಕು. ಆಗ ಅವರ ಜೀವನ ಫಲಪ್ರದವಾಗುತ್ತದೆ. ಮತ್ತು ಅವರವರ ಆತ್ಮದ ಉದ್ಧಾರದ ದಾರಿ ಕಂಡುಕೊಂಡಂತಾಗುತ್ತದೆ. ಇಂತಹವರು ಪರಮಾತ್ಮನ ಸಂಕಲ್ಪ ಮಾತ್ರದಿಂದ ಅವರವರ ಕರ್ಮಾನುಸಾರ ಸಂಸ್ಕಾರಾನುಸಾರ ಪರಸ್ಪರ ಸೇರುತ್ತಾರೆ. ಸೇರಿದ್ದಕ್ಕೆ ಶಿಷ್ಯನು ಗುರುವನ್ನು, ಗುರುವು ಪಕ್ವ ಶಿಷ್ಯನನ್ನು ಪರಸ್ಪರ ಸ್ಪಂದಿಸಿ ಆತ್ಮೋದ್ಧಾರ ಕಾರ್ಯವನ್ನು ನಡೆಸುತ್ತಾರೆ. ಕಾಲಾನುಕಾಲಕ್ಕೆ ಒಬ್ಬರಿಗೊಬ್ಬರು ಅಂತರಂಗವನ್ನು ತಿಳಿದು ಗುರು ಶಿಷ್ಯ ಭೇದವನ್ನು ತೊರೆದು ಒಂದಾಗುತ್ತಾರೆ. ಇವರು ಒಬ್ಬರೊಬ್ಬರನ್ನು ಒಂದಾಗಿ ಪರಮಾತ್ಮನನ್ನು ತಿಳಿಯುತ್ತಾರೆ. ಗುರುವಿಗೆ ಶಿಷ್ಯನಿಗೆ ಸಾಕ್ಷಾತ್ಕರಿಸಬೇಕೆಂದು, ಶಿಷ್ಯನಿಗೆ ಗುರುವಿನ ಅಂತರಂಗದಂತೆ ನಡೆಯುವ ಧ್ಯೇಯವೇ ಹೆಚ್ಚೆಂದು ತಿಳಿಯುತ್ತಾರೆ. ಆದಾಗ ಪರಸ್ಪರ ಒಂದೇ ಭಾವದಲ್ಲಿ ಗುರುವು ಶಿಷ್ಯನನ್ನು ಉದ್ಧಾರ ಮಾಡುತ್ತಾನೆ. ಗುರುವೇ ಪರಮಾತ್ಮ, ನಂಬಿ

ನಿಂತರೆ ಗುರುವಿಗೂ ಪರಮಾತ್ಮನಿಗೂ ಭೇದವೇ ಇಲ್ಲ. ಇವರು ಗುರುವೇ ಚತುರೋಪಾಯ ಶಾಂತಾಯ ನಮಃ.

ಲೋಕದಲ್ಲಿ ಮನುಷ್ಯರು ಈ ರೀತಿ ಸಮಯದಲ್ಲಿ ಚತುರೋಪಾಯ ಶಾಂತರಾದರೂ, ಸದಾ ದೊರಕುವ ಪರಮಾತ್ಮನೇ ಚತುರೋಪಾಯ ಶಾಂತನು. ಇವನಿಗೆ ಸಮರೂ ಇಲ್ಲ ಮತ್ತು ಇವನನ್ನು ಮೀರಿಸುವವರೂ ಇಲ್ಲ.

ಜಗತ್ತಿಗೇನೆ ಪರಮಾತ್ಮನು ಚತುರೋಪಾಯ ಶಾಂತನು, ಅವನಿಗೆ ಕೋಟಿ ಕೋಟಿ ಜೀವಿಗಳು ಕೋಟಿ ಕೋಟಿ ನಮಸ್ಕಾರ ಮಾಡುತ್ತಲೇ ಇರುತ್ತವೆ.

## 34. ಶಾಂತ್ಯಾಧಾರಾಯ ನಮಃ

ಪರಮಾತ್ಮನು ಪರಮೋಚ್ಚನಾದವನು, ಶಾಂತಿಗೆ ಆಧಾರನಾದವನು, ಶಾಂತಿಪ್ರಿಯನು, ಪರಮಾತ್ಮನಲ್ಲಿ ಶಾಂತಿಯ ಭಾವನೆಯು ಸದಾ ನೆಲಸಿರುತ್ತದೆ.

ಶಾಂತಿ - ಶಾಂತಿ, ಸರ್ವಕಾಲದಲ್ಲಿಯೂ ದ್ವಂದ್ವಗಳನ್ನು ಸಮ ಭಾವನೆಯಿಂದ ನೋಡಿ ಶಾಂತಿಯಿಂದ ಇರುವವನು.

ಧರ - ಧರಿಸಿರುವವನು, ತನ್ನಲ್ಲಿಯೇ ಇಟ್ಟುಕೊಂಡಿರುವವನು.

ಆಧಾರ - ಶಾಂತಿಯೆಂಬ ವಸ್ತುವು ನಿಲ್ಲಲು, ಪ್ರಸರಿಸಲು ಬೇಕಾದ ಸ್ಥಳವನ್ನು ಕೊಟ್ಟಿರುವವನು.

ಮೂರು ಸೇರಿದರೆ ಶಾಂತಿಯೇ ಆಗಿರುವವನು, ಪರಮಾತ್ಮನ ಸಂಕಲ್ಪವೇ ''ಶಾಂತಿಯನ್ನು ಹರಡುವುದು''.

ಅನೇಕ ಸಾತ್ವಿಕರು ಶಾಂತಿ ಪ್ರಿಯರು. ಪ್ರಿಯರಾದ ಮಾತ್ರಕ್ಕೆ ಹೆಚ್ಚು ಉಪಯೋಗವಿಲ್ಲ, ಅವರ ಮನಸ್ಸೇ ಶಾಂತಿಯೆಂಬ ಸಮುದ್ರದಲ್ಲಿ ಮುಳುಗಿದಾಗ ಪ್ರಪಂಚವನ್ನು ಶಾಂತಿಮಯ ಮಾಡುವ ಶಕ್ತಿಯು ಅವರಲ್ಲಿ ನೆಲೆಗೊಳ್ಳುತ್ತದೆ. ಇಂತಹ ಶಾಂತಿ ಮಯವಾದ ಜನರು ಸಾತ್ವಿಕರು ಆಗಿ ತಮ್ಮ ಸುತ್ತ ಮುತ್ತಲಿನ ವಾತಾವರಣದಲ್ಲಿ ಶಾಂತಿಯಿರುವ ಹಾಗೆ ಮಾಡುತ್ತಾರೆ.

ಸಾಧುಸಂತರು, ಸನ್ಯಾಸಿಗಳು ಇರುವ ಸ್ಥಳವೇ ಶಾಂತಿಮಯ ಪ್ರದೇಶವಾಗುತ್ತದೆ. ಅವರು ಹೋದ ಕಡೆಯಲ್ಲೆಲ್ಲಾ ಶಾಂತಿಯೋ ಶಾಂತಿಯಾಗುತ್ತದೆ. ಕಲುಶಿತ ವಾತಾವರಣವು ತಿಳಿಯಾಗುತ್ತದೆ ಮುಕ್ತರಾಗುತ್ತಾರೆ. ಮುಕ್ತರಾದವರು ಪಂಕ್ತಿ ಪಾವನರಾಗುತ್ತಾರೆ. ಇತರರನ್ನು ಸಂಸಾರ ಬಂಧನದಿಂದ ಬಿಡಿಸಲು ಸಹಾಯಕರಾಗುತ್ತಾರೆ. ಇವರೇ ದೇವರ ಅಂಶದಿಂದ ಇತರರನ್ನು ಉದ್ಧಾರ ಮಾಡುತ್ತಾರೆ. ಯಾರು ಇವರಿಗೂ ಪರಮಾತ್ಮನಿಗೂ ಶಾಂತ್ಯಾಧಾರಾಯ ನಮಃ ಎಂದು ನಮಸ್ಕರಿಸಿದರೆ ಅವರು ಉದ್ಧಾರವಾಗುತ್ತಾರೆ, ಇದರಲ್ಲಿ ಸಂಶಯವಿಲ್ಲ.

**35. ಶತಪತ್ರಾಯ ನಮಃ**

ಶತ - ನೂರು, ಪತ್ರ ಎಂದರೆ ಎಲೆ.

ಪರಮಾತ್ಮನು ಶತಪತ್ರನು, ಎಲೆಗಳೇ ಪರಮಾತ್ಮ. ಬಿಲ್ವ ಪತ್ರೆಯು ಹೇಗೆ ಶಿವನಿಗೆ ಇಷ್ಟವೋ, ಪತ್ರೆಗಳು ಪರಮಾತ್ಮನಿಗೆ ಹೇಗೆ ಪೂಜೆಗಳಲ್ಲಿ ಪೂಜಿಸಲ್ಪಡುವುವೋ, ಯಾವ ಭಾವನೆಯಿಂದ ಪೂಜಿಸುತ್ತೇವೆಯೋ ಪತ್ರೆಗಳು ಆ ರೀತಿ ಪರಮಾತ್ಮನಿಗೆ ಪ್ರಿಯವಾಗುತ್ತವೆ. ಪರಮಾತ್ಮನ ಸಂಪರ್ಕದಿಂದ ಪರಮಾತ್ಮನೇ ಆಗುತ್ತವೆ. ಅದರಿಂದ ಶತಪತ್ರಾಯ ನಮಃ ಎಂದು ಪೂಜಿಸುತ್ತೇವೆ.

**36. ತಾರ್ಕ್ಷ್ಯಾಂಸಸ್ಥಿತಯೇ ನಮಃ**

ತಾರ್ಕ್ಷ್ಯ - ಎಂದರೆ ಗರುಡ, ಅಂಸ - ಅಂಶ - ಭಾಗ, ಸ್ಥಿತ - ಇರುವುದು, ಎಂದರೆ ಗರುಡನಲ್ಲಿ ತನ್ನ ಒಂದಂಶವನ್ನು ಇಟ್ಟಿರುವವನು, "ಖಗಾಣಾಂ ವೈನತೇಯೋಸ್ಮಿ" ಎಂದಿದ್ದಾನೆ ಕೃಷ್ಣ ಗೀತೆಯಲ್ಲಿ. ಪರಮಾತ್ಮನೇ ಗರುಡನಲ್ಲಿದ್ದಾನೆ, ಅಂತಹ ತಾರ್ಕ್ಷ್ಯಾಂಸಸ್ಥಿತನಾದ ಪರಮಾತ್ಮನಿಗೆ ನಮಸ್ಕಾರಗಳು.

ತಾರ್ಕ್ಷ್ಯ ಒಬ್ಬನು ಮಹಾನ್ ವ್ಯಕ್ತಿ. ಸ್ವಸ್ತಿ ಮಂತ್ರದಲ್ಲಿ ಈ ಹೆಸರನ್ನು ಹೇಳುತ್ತೇವೆ. ಅವನ ಆಶೀರ್ವಾದವನ್ನು ಕೇಳುತ್ತೇವೆ. ಇವನೂ ಪರಮಾತ್ಮನ ಒಂದಂಶವೇ ಆಯಿತು.

ಇನ್ನೂ ಮುಂದೆ ಹೋದರೆ ಸತ್ಪುರುಷರು ಪರಮಾತ್ಮನಿಗೆ ಸಮಾನವಾಗಿ ಗುರುಗಳಾಗಿ ವಿರಾಜಿಸುತ್ತಾರೆ. ಅದರಿಂದ ತಾರ್ಕ್ಷ್ಯಾಂಸಸ್ಥಿತನಿಗೆ ನಮಸ್ಕಾರಗಳು.

**37. ಶತಮೂರ್ತಯೇ ನಮಃ**

ಶತ - ಎಂದರೆ ನೂರು, ಮೂರ್ತಿ - ಸ್ವರೂಪ.

ಪರಮಾತ್ಮನ ಸ್ವರೂಪ ಮೂಲದಲ್ಲಿ ಒಂದೇ ಆದರೂ ರೂಪಗಳು ಹಲವು, ನೂರಾರು, ಸಹಸ್ರಾರು. ಸಂಖ್ಯೆಗಳು ನಮ್ಮ ಮನಸ್ಸಿನಲ್ಲಿ ಯೋಚಿಸುವ ಪರಿಮಿತಿಗೆ ಬರಲೆಂದು ಶತಮೂರ್ತಿ ಎಂದು ಹೇಳಲಾಗಿದೆ. ಶತಮೂರ್ತಿ ಎಂಬಂತೆ ಪುರುಷ ಸೂಕ್ತದಲ್ಲಿ 'ಸಹಸ್ರಶೀರ್ಷನು, ಸಹಸ್ರಾಕ್ಷನು, ಸಹಸ್ರಪಾದನು ಎಂದು ಮುಂತಾಗಿ ಹೇಳಿ ಸ್ತುತಿಸಲಾಗಿದೆ. ಶತ, ಸಹಸ್ರ ಎಂಬುದು ಅಪರಿಮಿತನಾದ ಭಗವಂತನ ರೂಪಗಳನ್ನು ಸಾಮಾನ್ಯ ಚಕ್ಷುಗಳ ಮತ್ತು ಮನಸ್ಸು ಬುದ್ಧಿಗಳ ಪರಿಮಿತಿಗೆ ಅರ್ಥವಾಗುವ ಹಾಗೆ ಹೇಳಲಾಗಿದೆ. "ಏಕಂ ವಿಪ್ರಾ ಬಹುಧಾ ವದಂತಿ" ಒಬ್ಬನೇ ಆದ ಪರಮಾತ್ಮನನ್ನು ಅನೇಕ, ಬಹಳ ಎಂದು ಹೇಳಲಾಗುತ್ತದೆ. ಪರಮಾತ್ಮನ ಒಂದೊಂದು ಮೂರ್ತಿಗೂ ರೂಪಕ್ಕೂ ಒಂದೊಂದು ಹೆಸರು. ಇವುಗಳನ್ನು ಪ್ರತಿ ಸಹಸ್ರನಾಮದಲ್ಲಿ ಹೇಳಿದೆ. ಸಹಸ್ರ

ನಾಮಗಳೇ ಹಲವಾರು. ಒಂದೊಂದು ದೇವರಿನ ಹೆಸರಿಗೂ ರೂಪಕ್ಕೂ ಸಹಸ್ರಾರು ನಾಮಗಳು. ಅದರಿಂದ ಶತಮೂರ್ತಯೇ ನಮಃ ಎನ್ನುತ್ತೇವೆ.

*ಶತಕ್ರತುಸ್ಸ್ವರೂಪಾಯ ಶಾಶ್ವತಾಯ ಶತಾತ್ಮನೇ ।*
*ನಮಃ ಸಹಸ್ರಶಿರಸೇ ಸಹಸ್ರವದನಾಯ ಚ ॥38॥ (238-242)*

**238. ಶತಕ್ರತುಸ್ಸ್ವರೂಪಾಯ ನಮಃ**

ಕ್ರತು ಎಂದರೆ ಯಜ್ಞ, ಯಾಗ.

ಶತಕ್ರತು - ನೂರು ಯಜ್ಞಮಾಡಿದವನು, ಎಂದರೆ ದೇವೇಂದ್ರ.

ಅಂದರೆ ನೂರು ಯಾಗಗಳನ್ನು ಮಾಡಿದ ದೇವೇಂದ್ರನ ಸ್ವರೂಪನು ಎಂದಾಯಿತು.

ಅಥವಾ ನೂರು ಯಜ್ಞಗಳನ್ನು ಮಾಡಿದವನ ಸ್ವರೂಪನು ಎಂದೂ ಹೇಳಬಹುದು.

ನೂರು ಯಾಗ ಮಾಡಿದ ಯಾರೇ ಆಗಲೀ ಪರಮಾತ್ಮನ ಸ್ವರೂಪವನ್ನು ಪಡೆಯುತ್ತಾರೆ.

ನೂರು ಯಾಗಗಳನ್ನು ಮಾಡಿದವರು ಪರಮಾತ್ಮನ ಸ್ವರೂಪವನ್ನು ಹೊಂದಬಹುದು ಅಥವಾ ದೇವೇಂದ್ರ ಪದವಿಯನ್ನು ಪಡೆಯಬಹುದು. ಇಂತಹವನಿಗೆ ನಮಸ್ಕಾರ. ಸಾಮಾನ್ಯರಿಗೇ ನಮಸ್ಕಾರ ಮಾಡುವಾಗ ಇಂತಹ ಶತಕ್ರತು ಸ್ವರೂಪನಿಗೆ ನಮಸ್ಕಾರ ಮಾಡದೇ ಉಂಟೆ? ಅನೇಕ ರಾಜರು (ಮನುಷ್ಯರು, ರಾಕ್ಷಸ ಸಂತತಿಯವರು) ನೂರು ಯಜ್ಞಗಳನ್ನು ಮಾಡಿದವರು ಪುರಾಣ, ಭಾರತ, ಭಾಗವತ, ರಾಮಾಯಣದಲ್ಲಿ ಬಂದಿದ್ದಾರೆ. ಎಲ್ಲರೂ ದೇವೇಂದ್ರ ಪದವಿಯನ್ನು ಉದ್ದೇಶಿಸಿ ಯಾಗಗಳನ್ನು ಮಾಡಿದರು ಮತ್ತು ಶತಕ್ರತುಗಳಾದರು, ಅಂತಹವರಿಗೆ ನಮಸ್ಕಾರಗಳು.

**239. ಶಾಶ್ವತಾಯ ನಮಃ**

ಶಾಶ್ವತ ಎಂದರೆ ಯಾವಾಗಲೂ ಇರುವವನು, ನಶಿಸಿ ಹೋಗದವನು, ಸ್ಥಿರವಾಗಿ ಇರುವವನು. ಅಂದರೆ ಸೃಷ್ಟಿ, ಸ್ಥಿತಿ, ಪ್ರಲಯ ಕಾಲಗಳಲ್ಲಿಯೂ ಕಾಲಾತೀತನಾಗಿಯೂ ಇರುವವನು. ಕಾಲ ಮಾನದಲ್ಲಿ ಗಣನೆಗೆ ತೆಗೆದುಕೊಂಡರೆ ಯಾವಾಗಲೂ ಇರುವವನು ಎಂದು ಅರ್ಥ. ಹೇಗೆ ಇರುವನೋ ಹಾಗೆಯೇ ಇರುವವನು, ಮಾಯಾತೀತನು, ರೂಪಾತೀತನು, ನಿರ್ಗುಣನು, ನಿರಾಕಾರನು ಹೀಗೆಯೇ ಇರುವನೆಂದೂ ಹೇಳಲು ಸಾಧ್ಯವಿಲ್ಲ. ಅದರಿಂದಲೇ ಒಂದು ರೀತಿಯಲ್ಲಿ ನೇತಿ, ನೇತಿ ಎಂದು ಎಲ್ಲವನ್ನು ವರ್ಜಿಸಿದ ನಂತರ ಉಳಿಯುವ ರೀತಿಯವನು ಎಂದು ವೇದಾಂತಿಗಳು ಹೇಳುತ್ತಾರೆ. ಅಂದರೆ ನಮ್ಮ ಬುದ್ಧಿ,

ಮನಸ್ಸುಗಳಿಗೆ ಸಿಕ್ಕದವನು ಎಂದೂ ಸಹ ಹೇಳಬಹುದು. ಏನೇ ಆಗಲೀ, ಹೇಗೆ ಆಗಲಿ, ನಮಗೇನು, ನಾವು ನಮ್ಮ ಊಹೆಯಲ್ಲಿ ಯಾವ ರೀತಿ ಅವನನ್ನು ಅಂದುಕೊಂಡು ಆರಾಧಿಸುತ್ತೇವೆಯೋ, ಜಪಿಸುತ್ತೇವೆಯೋ, ಧ್ಯಾನಿಸುತ್ತೇವೆಯೋ, ಪೂಜಿಸುತ್ತೇವೆಯೋ ಹಾಗೆಯೇ ಅವನು ಇರುತ್ತಾನೆ. ಭಕ್ತನೊಬ್ಬ ಎಲ್ಲ ರೀತಿಯಲ್ಲಿಯೂ ವರ್ಣಿಸಿದ ನಂತರ ತೃಪ್ತಿಯಾಗದೆ ಹೀಗೆ ಹೇಳುತ್ತಾನೆ.

*"ಯಥಾ ತಥಾ ಯಥಾ ತಥಾ ತಥೈವ ಕೃಷ್ಣ ಸತ್ವದಾ ।*
*ಮಯಾ ಸ ದೈವ ಗೀಯತಾಂ ತಥಾ ಕೃಪಾ ವಿಧೀಮತಾಮ್ ॥"*

ಅಂದರೆ ಎಂತಹ ಭಾವನೆ. ಎಲ್ಲಾ ಭಾವನೆಗಳೂ ಮನಸ್ಸಿನಲ್ಲಿ ಕಲ್ಪವಾದ ನಂತರ, ಶರಣಾಗತಿಯ ಮನಸ್ಸಾಗಿ ಕೊನೆಗೆ ಅವನಿಗೇ ಬಿಟ್ಟ ಮನಸ್ಸು. ಇದೇ ಪರಮಭಕ್ತಿ. ಪರಮೋನ್ನತ ಮನಸ್ಸು, ಬುದ್ಧಿ. ಅಂತಹ ಪರಮಾತ್ಮನಾದ "ಶಾಶ್ವತಾಯ ನಮಃ" ಎಂದು ಹೇಳುತ್ತೇವೆ. ಯಾವ ಭಾವನೆಯಿಂದ ಮನಸ್ಸು ಹೊರಟರೂ ಕೊನೆಗೆ ಬರುವ ಉನ್ನತ ಮನಸ್ಸು ಸೋತ ಮೇಲೆ ಇದೇ. ಇದು ಸೋಲಲ್ಲ, ಕಲ್ಪನೆಯ ಹಂತಗಳ ಕೊನೆಯ ಹಂತ ಅಷ್ಟೆ!

**40. ಶತಾತ್ಮನೇ ನಮಃ**

ಶಬ್ದಾರ್ಥದಂತೆ ನೂರು ಆತ್ಮಉಳ್ಳವನು ಎಂದು ಹೇಳಬಹುದು.

ಪರಮಾತ್ಮನ ವಿಚಾರದಲ್ಲಿ ಶತ, ಸಹಸ್ರ ಇವುಗಳಿಗೆ ನೂರೇ, ಸಹಸ್ರವೇ ಎಂಬ ಸಂಖ್ಯಾರ್ಥವಿಲ್ಲ. ಅಗಣಿತ ಮತ್ತು ಎಣಿಸಲು ಬಾರದವನು ಎಂದು ಅರ್ಥ.

ಅಂದರೆ ನೂರಾರು ಆತ್ಮಗಳುಳ್ಳವನು ಎಂದು ಅರ್ಥ. ಇದರಿಂದ ಇಷ್ಟೊಂದು ಆತ್ಮಗಳಿಗೆ ಹೋಲಿಸಿದರೆ ಅವನನ್ನು ಉತ್ತಮ ಆತ್ಮನು ಎಂದರೆ ಪರಮಾತ್ಮನು ಎಂದು ಹೇಳುತ್ತೇವೆ.

ಕಲ್ಪಾದಿಯಲ್ಲಿ ಒಬ್ಬ ಪರಮಾತ್ಮನಿಂದ ಲೆಕ್ಕವಿಲ್ಲದಷ್ಟು ಆತ್ಮಗಳು ಹೊರಹೊಮ್ಮಿದವು. ಹಾಗೆಯೇ ಕಲ್ಪಾಂತದಲ್ಲಿ ಎಲ್ಲವೂ ಅವನಲ್ಲಿ ಅಡಗಿಕೊಳ್ಳುತ್ತವೆ.

ಈ ನಾಮದಿಂದ ತಿಳಿಯುವುದೇನೆಂದರೆ ಪರಮಾತ್ಮನು ಅಪರಿಮಿತ ಶಕ್ತಿಯುಳ್ಳವನು. ತನ್ನ ಇಚ್ಛೆಯಿಂದ ಏನು ಬೇಕಾದರೂ ಮಾಡಬಲ್ಲನು, ಆಗಬಲ್ಲನು. ತನ್ನ ಲೀಲೆಗೋಸ್ಕರ ಈ ರೀತಿ ಒಬ್ಬನು ಅನೇಕನಾಗುತ್ತಾನೆ. ಅನೇಕಗಳಲ್ಲಿ ತನ್ನದೇ ಆದ ಅಂಶವನ್ನಿಟ್ಟು ಸಂಸಾರ ಸಾಗರವನ್ನು ನಡೆಸುತ್ತಾನೆ. ಆತ್ಮಗಳು ತಮ್ಮ ತಮ್ಮ ದೇಹಗಳಲ್ಲಿ ನಿಂತು ಮಾಯೆಯಲ್ಲಿ ಸಿಲುಕಿ,

ಕರ್ಮಗಳನ್ನು ಮಾಡಿ ಅದನ್ನು ಅಂಟಿಸಿಕೊಂಡು ಅನೇಕ ದೇಹಗಳನ್ನು ಪಡೆಯುತ್ತಲೇ ಇರುತ್ತವೆ. ಆದರೆ ಶಾಶ್ವತ ಗುಣ ಹೊಂದಿದ್ದರೂ ಸಹ ಸಂಸಾರದಲ್ಲಿ ಅಂಟಿಕೊಂಡಿರುವುದರಿಂದ ಬಿಡುಗಡೆಗೆ ಪ್ರಯತ್ನ ಮಾಡುತ್ತವೆ. ಆದರೆ ಪರಮಾತ್ಮನು ಹೊರಗೇ ಇರುವುದರಿಂದ ಅವನದು ವಿಶೇಷವಾದ ಶಾಶ್ವತ ಗುಣ, ಅದರಿಂದಲೆ ಶತಾತ್ಮನು ಎಂದು ಹೇಳುತ್ತೇವೆ. ಪ್ರತಿ ಆತ್ಮಕ್ಕೂ ಈ ಗುಣ ಇರುವುದಿಲ್ಲ. ಅವು ತಾವಾಗಿಯೇ ಬೇರೆ ಬೇರೆಯಾಗಿ ಸೂತ್ರಧಾರನಾದ ಪರಮಾತ್ಮನ ಅಧೀನದಲ್ಲಿರುತ್ತವೆ.

41. **ಸಹಸ್ರಶಿರಸೇ ನಮಃ**

ಸಾವಿರ ತಲೆಯುಳ್ಳವನು, ಆದಿಶೇಷ, ಆದಿಶೇಷನು ವಿಷ್ಣುವಿನ ಒಂದು ಅವತಾರ. ಶೇಷನು ಪರ್ಯಂಕವಾಗಿ ಮಹಾವಿಷ್ಣುವನ್ನು ಸೇವಿಸುತ್ತಾನೆ. ಮಹಾವಿಷ್ಣುವಿನ ಗುಣಗಳನ್ನು ಹೇಳುವುದರಲ್ಲಿ ಆದಿಶೇಷನಿಗಿಂತ ಬೇರೆ ಯಾರೂ ಇಲ್ಲ, ಇವನು ಸಹ ಸಾಕ್ಷಾತ್ ವಿಷ್ಣುವೇ ಎಂದು ಹೇಳುತ್ತಾರೆ.

ವಿಷ್ಣುವಿನ ಅಂಶವೆಂದು ಹೇಳಿದರೂ ಪರಮಾತ್ಮನ ಪರ್ಯಂಕವಾದ್ದರಿಂದ ವಿಶೇಷವಾದ ಸೇವಕ ಎಂದು ಹೆಸರಾಗಿದ್ದಾನೆ. ಇವನನ್ನು ಅನಂತ, ಶೇಷ, ಶೇಷನಾಗ, ಆದಿಶೇಷ ಎಂದು ಮುಂತಾಗಿ ಹೇಳಿ ಕೊನೆಗೆ ಸಹಸ್ರ ಶಿರಸ್ಸುಳ್ಳವನು ಎಂದು ವರ್ಣಿಸುತ್ತಾರೆ.

ಪುರುಷ ಸೂಕ್ತದಲ್ಲಿ ಪರಮಾತ್ಮನನ್ನೇ ಸಹಸ್ರ ಶೀರ್ಷಾಃ ಪುರುಷಃ ಎಂದು ಪ್ರಾರ್ಥಿಸುತ್ತಾರೆ. ಎಂದರೆ ಸಾವಿರ ತಲೆಯುಳ್ಳವನು ಎಂದು ವರ್ಣಿಸುತ್ತಾರೆ. ಸಾವಿರ ತಲೆಯುಳ್ಳವನು ಎಂದರೆ ಸಾವಿರವೇ ಎಂದರೆ ಬಹಳ ತಲೆಗಳುಳ್ಳವನು ಎಂದರ್ಥ. ಇಂತಹ ಪರಮಾತ್ಮನ ರೂಪವನ್ನು ಊಹಿಸಲು ಸಾಧ್ಯವಿಲ್ಲ. ಹಾಗೆ ಊಹಿಸಿದರೂ ಅವನು ಹೇಗಿರಬಹುದು ಎಂದು ಹೇಳಲು ಅಥವಾ ಕಲ್ಪಿಸಲು ಸಾಧ್ಯವೇ! ಇಲ್ಲ. ಅದರಿಂದ ಸಹಸ್ರಶಿರಸೇ ನಮಃ ಎಂದು ಹೊಗಳಿದರೆ ಸಾಕು. ಅವನೇ ನಮ್ಮಲ್ಲಿ ಉದ್ಭವಿಸುತ್ತಾನೆ.

42. **ಸಹಸ್ರವದನಾಯ ನಮಃ**

ಸಾವಿರ ಮುಖವುಳ್ಳವನು ಎಂದರೆ ಈ ನಾಮವೂ ಸಹಸ್ರ ಶಿರಸೇ ನಮಃ ಎಂಬುದರ ಮೇಲೆ ಬಂದಿದೆ. ಅಗಣಿತ ವದನವುಳ್ಳವನು ಎಂದು ಹೇಳಬಹುದು. ಏಕಮಾತ್ರ ವದನದಿಂದ ಮಹಾವಿಷ್ಣುವು ತನ್ನ ಲೀಲೆಗಾಗಿ ಸೃಷ್ಟಿ, ಸ್ಥಿತಿ, ಲಯವನ್ನು ನಡೆಸುತ್ತಾನೆ. ಅವನು ಯಾವ ರೀತಿ ಪ್ರಕಟವಾದರೂ ನಡೆಸುವ ಕಾರ್ಯ ಒಂದೇ. ಕಾರ್ಯ ಕಾರಣ ರೂಪನಾಗಿ ಎಲ್ಲದರಲ್ಲಿ ಇದ್ದರೂ ಇಲ್ಲದವನ ಹಾಗೆ ಇರುತ್ತಾನೆ. ಇದೇ ಅವನ ವಿಶೇಷ ಗುಣ, ಶಕ್ತಿ, ಮಾಯೆ.

*ಸಹಸ್ರಾರ್ಕಪ್ರಕಾಶಾಯ ಸಹಸ್ರಾಯುಧಧಾರಿಣೇ ।*
*ನಮಃ ಸ್ಥೂಲಾಯ ಸೂಕ್ಷ್ಮಾಯ ಸುಸೂಕ್ಷ್ಮಾಯ ನಮೋ ನಮಃ ।।39।।*
*(243-247)*

3. **ಸಹಸ್ರಾಕ್ಷಪ್ರಕಾಶಾಯ ನಮಃ**

ಸಹಸ್ರ - ಸಾವಿರ, ಅಕ್ಷ - ಕಣ್ಣುಗಳು, ಪ್ರಕಾಶ - ಬೆಳಕು ಇರುವವನು. ಪರಮಾತ್ಮನು ಸಾವಿರ ಕಣ್ಣುಗಳ ಬೆಳಕನ್ನು ಏಕಕಾಲದಲ್ಲಿ ಪ್ರಕಾಶಿಸುವವನು ಅಥವಾ ಸಾವಿರ ಕಣ್ಣುಗಳಿಂದ ಬೆಳಕನ್ನು ಅನೇಕ ಕಡೆ ಚೆಲ್ಲುವವನು.

ಸಾವಿರ ಎಂಬುದು ಗಣನೆಯಲ್ಲಿ ಅಗಣಿತ ಎಂಬುದನ್ನು ಸೂಚಿಸುತ್ತದೆ.

ಸಹಸ್ರ ಕಣ್ಣುಗಳಿಂದ ಏಕ ಕಾಲದಲ್ಲಿ ಬಂದ ಬೆಳಕಿಗೆ ಸಮವಾದ್ದು ಯಾವುದೂ ಇಲ್ಲ. ಅಂದರೆ ಬೆಳಕಿನ ಪ್ರಮಾಣವನ್ನು ಅಳೆಯಲು ಸಾಧ್ಯವಿಲ್ಲ. ಅದು ಹರಡುವ ವಿಸ್ತಾರ ಮತ್ತು ಯಾವ ಕೊನೆಯನ್ನು ಮುಟ್ಟುವುದು ತಿಳಿಯುವುದಿಲ್ಲ.

ಹಾಗೆಯೇ ಸಹಸ್ರ ಕಣ್ಣುಗಳಿಂದ ಬೇರೆ ಬೇರೆ ದಿಕ್ಕಿಗೆ ಬೆಳಕು ಹೋದರೆ ಅದರ ವಿಸ್ತಾರ ಇನ್ನೂ ಅಳೆಯಲು ಸಾಧ್ಯವಿಲ್ಲ.

ಸಾಮಾನ್ಯ ಮನುಷ್ಯನ ಕಣ್ಣಿನಿಂದ ಹೊರಡುವ ಬೆಳಕೇ ಬಹಳ ವಿಸ್ತಾರವಾಗಿರುತ್ತೆ. ಅಂದ ಮೇಲೆ ಭಗವಂತನ ಚಕ್ಷುವಿನಿಂದ ಹೊರಡುವ ಬೆಳಕಿನ ಪ್ರಮಾಣವನ್ನು ಅಳೆಯಲು ಸಾಧ್ಯವೇ ಇಲ್ಲ. ಅದರ ಪ್ರಮಾಣ ಅವನಿಗೇ ಗೊತ್ತು.

ಆದರೆ ಸ್ತೋತ್ರಗಳನ್ನು ರಚಿಸಿದವರು, ಮಾಡಿದವರು ಸಹಸ್ರ ಎಂಬ ಗಣನೆಯಿಂದ ಅಪರಿಮಿತ ಎಂಬುದನ್ನು ನಮ್ಮ ಮನಸ್ಸಿನ ಊಹೆಗೆ ನಿಲುಕುವಂತೆ ಮಾಡಿದ್ದಾರೆ. ಅದಕ್ಕೆ ಸಹಸ್ರಾಕ್ಷಾಯ ನಮಃ ಎನ್ನುವುದು.

3. **ಸಹಸ್ರಾರ್ಕಪ್ರಕಾಶಾಯ ನಮಃ**

ಸಹಸ್ರ - ಸಾವಿರ, ಅರ್ಕ - ಸೂರ್ಯನ, ಪ್ರಕಾಶ - ಬೆಳಕು.

ತೇಜಸ್ಸು ಉಳ್ಳವನು ಯಾರೋ ಅವನು ಪರಂಜ್ಯೋತಿ ಸ್ವರೂಪನಾದ ಪರಮಾತ್ಮನು.

ಜಗತ್ತಿನಲ್ಲಿ ಒಬ್ಬ ಸೂರ್ಯನ ಮಂಡಲದಲ್ಲಿರುವ ನಕ್ಷತ, ಗ್ರಹ, ತಾರಾ ಮಂಡಲದಲ್ಲಿ ಎಷ್ಟು ಪ್ರಕಾಶವು ಬರುತ್ತದೆ, ಹೊರ ಹೊಮ್ಮುತ್ತದೆ ಎಂಬುದನ್ನು ಗ್ರಹಿಸುವುದಕ್ಕೆ ಮತ್ತು ಕಲ್ಪಿಸಿಕೊಳ್ಳುವುದಕ್ಕೆ ಸಾಧ್ಯವೇ ಇಲ್ಲ. ಹಾಗಿರುವಾಗ ಸಾವಿರ ಸೂರ್ಯರ ಪ್ರಕಾಶವು ಯಾವ ರೀತಿ ಇರಬಹುದು, ಆ ತೇಜಸ್ಸನ್ನು ನಾವು ಊಹಿಸಿಕೊಳ್ಳಬಹುದೇ ಎಂಬುದು ಪ್ರಶ್ನೆ.

ಒಬ್ಬ ಸೂರ್ಯನ ತೇಜಸ್ಸಿನ ಮೇಲೆ ನಾವು ಎಷ್ಟೋ ತತ್ವಗಳನ್ನು ಕಂಡು ಹಿಡಿಯಲು ಪ್ರಯತ್ನ ಪಡುತ್ತೇವೆ. ಗ್ರಹಗಳ, ನಕ್ಷತ್ರಗಳ ಮತ್ತು ಚಂದ್ರನ ಪರಸ್ಪರ ದೂರ, ಪ್ರಕಾಶ, ಆ ಬೆಳಕುಗಳು ನಮಗೆ ಬರುವ ಹಾಗೆ ನಡೆಯಲು ಕಾಲ ಪ್ರಮಾಣ, ಎಲ್ಲವನ್ನು ಭಾರಿ ಯತ್ನದಿಂದ ಕಂಡು ಹಿಡಿದು ವಿಮರ್ಶಿಸುತ್ತೇವೆ. ಆದರೆ ನಮಗೆ ಬರುವ ಸಂಖ್ಯೆಯನ್ನು ಊಹಿಸಲು ಆಗುವುದಿಲ್ಲ. ಇಂತಹ ಮಾನುಷ ಕಲ್ಪನೆಗೆ ಸಾಧ್ಯವಿಲ್ಲದ್ದನ್ನು ಕಂಡುಹಿಡಿದು ನಮಗಾಗುವ ಪ್ರಯೋಜನವಾದರೂ ಏನು! ಒಬ್ಬ ಸೂರ್ಯನ ಸೂರ್ಯಮಂಡಲದ ರೀತಿಯೇ ಹೀಗಿರುವಾಗ ಸಹಸ್ರ ಸೂರ್ಯಪ್ರಕಾಶದ ಮಂಡಲದ ಬಗೆ ಹೇಗೆ!

ಅಂದರೆ ಪರಮಾತ್ಮನ ತೇಜಸ್ಸು, ಪ್ರಕಾಶ, ಬೆಳಕುಗಳನ್ನು ಅಳೆಯಲು ಸಾಧ್ಯವಿಲ್ಲ. ಕಲ್ಪಿಸಲು ನಮ್ಮ ಮನಸ್ಸಿನಿಂದ ಮಿತಿ ಮೀರಿದ್ದು. ಪರಮಾತ್ಮನ ಯಾವ ಗುಣಗಳನ್ನು ತೆಗೆದುಕೊಂಡರೂ ''ಅಣೋರಣೀಯಾನ್ ಮಹತೋ ಮಹೀಯಾನ್'' ಎಂದಾಗುತ್ತದೆ.

ಒಂದೇ ಸೂರ್ಯನಿರುವ ಮಂಡಲದಲ್ಲಿರುವ ಸೂರ್ಯನು ಇಂತಹ ಸಹಸ್ರ ಮಂಡಲಗಳಲ್ಲಿರುವ ಸೂರ್ಯರ ಒಟ್ಟು ಪ್ರಕಾಶ ಅಥವಾ ಸಾವಿರ ಸೂರ್ಯರಿರುವ ಮಂಡಲದ ಪ್ರಕಾಶದ ಕಲ್ಪನೆ - ಇವೆಲ್ಲ ಮಹತೋ ಮಹೀಯಾನ್ ಎಂಬ ಅರ್ಥಕ್ಕೆ ಸಲ್ಲುತ್ತದೆ. ಇನ್ನು ಇಲ್ಲಿ ಸಾವಿರ ಎಂಬುದು ಸಾವಿರವೇ ಅಲ್ಲ, ಅಂತಹ ''ಸಾವಿರಾರು'' ಎಂದಾಗ ನಮ್ಮ ಬುದ್ಧಿ ಮನಸ್ಸುಗಳಿಗೆ ದಿಗ್ಭ್ರಮೆಯಾಗಿ ಇದನ್ನು ಕಲ್ಪಿಸಲು ಪ್ರಯತ್ನವೇ ಶೂನ್ಯ ಎಂದಾಗುತ್ತದೆ. ಅದರಿಂದ ಸಹಸ್ರಾರ್ಕ ಪ್ರಕಾಶಾಯ ನಮಃ ಎಂದರೆ ಪರಮಾತ್ಮನು ಪರಮಾತ್ಮನೇ ನಾವು ನಾವೇ. ಆತನ ಪಾದ ಧೂಳಿನ ಅನೇಕ ಸಹಸ್ರಾಂಶಕ್ಕೂ ಹೋಲಿಸಲು ಸಾಧ್ಯವಿಲ್ಲ. ಇನ್ನು ಈ ಭ್ರಮೆ ಸಾಕು. ಅವನು ಪರಮ ಶಕ್ತಿವಂತ, ಯುಕ್ತಿವಂತ ಎಂದು ತಿಳಿದರೆ ಸಾಕು, ಅಷ್ಟೆ.

## 44. ಸಹಸ್ರಾಯುಧಧಾರಿಣೇ ನಮಃ

ಸಹಸ್ರ - ಸಾವಿರ, ಆಯುಧ - ಆಯುಧಗಳನ್ನು, ಧರ - ಧರಿಸಿರುವವನಿಗೆ, ನಮಃ - ನಮಸ್ಕಾರಗಳು.

ಪರಮಾತ್ಮನು ಎರಡು ಕೈಯುಳ್ಳವನು - ಉದಾಃ ರಾಮನ ಅವತಾರ, ಅವನು ಕೋದಂಡ ರಾಮ, ವರದ ಹಸ್ತನು. ಕೆಲವು ಅವತಾರಗಳು ನಾಲ್ಕು ಹಸ್ತಗಳವು. ಇದು ಬಹಳ ಹೆಚ್ಚು ಕಡಿಮೆ ಎಲ್ಲ ಅವತಾರಗಳಲ್ಲಿಯೂ ಮತ್ತು ಎಲ್ಲ ದೇವತಾ ಮೂರ್ತಿಗಳಲ್ಲಿ ಚತುರ್ಹಸ್ತಗಳಿವೆ. ಸಹಸ್ರ ಬಾಹುಗಳಿರುವವನಿಗೆ ಸಹಸ್ರ ಆಯುಧಗಳಿರುತ್ತವೆ ಎಂದು ಊಹಿಸುವುದು ಸಂಭವನೀಯ.

ಆದರೆ ಸಹಸ್ರ ಬಾಹುವಿರುವ ಪರಮಾತ್ಮನ ಶರೀರವನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುವುದು ಕಷ್ಟ. ಈ ರೂಪವನ್ನು ಪುರುಷ ಸೂಕ್ತದಲ್ಲಿ ಹೇಳಿರುವ ಪುರುಷನೆಂದು ನಾವು ಭಾವಿಸಬಹುದು.

''ಸಹಸ್ರ ಶೀರ್ಷಾಃ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್''. ''ಸಹಸ್ರ ಶೀರ್ಷಂ ದೇವಂ'', ಎಂದು ಮಂತ್ರಪುಷ್ಪದಲ್ಲಿದೆ. ಹಾಗಾದರೆ ಇದು ಇರಬಹುದು. ಕಲ್ಪನಾತೀತ, ಪರಮಾತ್ಮನು ಈ ವಿಶ್ವವನ್ನು ''ಏಕಾಂಶೇನ ಸ್ಥಿತೋ ಜಗತ್'' ಎಂದು ತನ್ನ ಒಂದು ಅಣುವಿನ ಅಂಶದಿಂದ ಈ ಜಗತ್ತು ನಿಂತಿದೆ ಎಂದು ಗೀತೆಯಲ್ಲಿ ಹೇಳಿರುವುದರಿಂದ ಸಾವಿರ ಹಸ್ತವುಳ್ಳವನು, ಸಹಸ್ರಾಯುಧ ಧಾರಿ ಎಂದು ಕಲ್ಪಿಸಿಕೊಳ್ಳುವುದು ಕಷ್ಟವಿಲ್ಲ.

ಹೀಗೆಯೇ ''ಅತ್ಯತಿಷ್ಠದ್ದಶಾಂಗುಲಂ'' ಎಂದು ಪುರುಷಸೂಕ್ತದಲ್ಲಿ ಹೇಳಿದೆ. ದಶಾಂಗುಲದ ಪ್ರಮಾಣವನ್ನು ಭಾಗವತದಲ್ಲಿ ಹೇಳಿದೆ. ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶ, ಮಹತ್ ತತ್ವ, ಇವುಗಳು ಕ್ರಮವಾಗಿ ಮೊದಲಿನದರ 10 ರಷ್ಟು ಮುಂದಿನದು ಒಂದೊಂದು ಆಗಿ ಎಲ್ಲ ಸೇರಿದ ನಂತರ ಬರುವುದರ ಘನ ಪ್ರಮಾಣವು ಕೇವಲ ಭಗವಂತನ 1/10 ರಷ್ಟು ಇದೆ. ಇದು ದಶಾಂಗುಲ ಪ್ರಮಾಣ. ಅಂದ ಮೇಲೆ ಭಗವಂತನು ಸಹಸ್ರಶೀರ್ಷ, ಸಹಸ್ರಾಕ್ಷ, ಸಹಸ್ರಪಾದ, ಸಹಸ್ರಾಯುಧಧರ ಎಂದು ಹೇಳುವುದು ಏನು ಮಹಾ ಎನಿಸುತ್ತದೆ. ಏಕೆಂದರೆ ಪಂಚಭೂತಗಳನ್ನು ನಾವು ಊಹಿಸಬಲ್ಲೆವು ಅದರಲ್ಲೂ ಭೂಮಿಯ ಪ್ರಮಾಣ, ನೀರಿನ ಪ್ರಮಾಣ ನಮಗೆ ದೊರಕುತ್ತದೆ.

ಮತ್ತೊಂದು - ವಿಶ್ವರೂಪದಲ್ಲಿ ಶ್ರೀಕೃಷ್ಣನು ತೋರಿಸಿದ ರೂಪವು ಅತಿ ದೊಡ್ಡದು ಇದರಲ್ಲಿ ಅರ್ಜುನನು ಎಣಿಸಲಾಗದೆ ಸಂಖ್ಯೆಯನ್ನು ''ಅನೇಕ'' ಎಂದು ವಿವರಿಸಿರುತ್ತಾನೆ. ಇಷ್ಟೆಲ್ಲ ತಿಳಿದಿದ್ದರಿಂದ, ವಿವರಿಸಿದ್ದರಿಂದೇನು ಪ್ರಯೋಜನ? ಶ್ರೀಕೃಷ್ಣನು ಗೀತೆಯಲ್ಲಿ ಹೇಳಿದ ಹಾಗೆ ಇದೆಲ್ಲ ವಿಭೂತಿಗಳನ್ನು ತಿಳಿದಿದ್ದರಿಂದ ಏನು ಪ್ರಯೋಜನ ''ಕಿಂ ತತ್ ಜ್ಞಾತೇನ ತವಾರ್ಜುನ? ವಿಷ್ಟಭ್ಯಾಹಮಿದಂ ಸರ್ವಂ ಏಕಾಂಶೇನ ಸ್ಥಿತೋ ಜಗತ್''. ಅದೇ ರೀತಿ ನಾವು ಸಹ ಇಷ್ಟು ತಿಳಿದರೆ ಸಾಕು. ಪರಮಾತ್ಮನ ರೂಪ, ಶಕ್ತಿಗಳನ್ನು ಎಲ್ಲ ತಿಳಿದಿದ್ದರಿಂದೇನು ಪ್ರಯೋಜನ - ಅವನ ರೂಪ, ಶಕ್ತಿ, ಯುಕ್ತಿಗಳು ಅಪಾರ, ಅಪರಿಮಿತ, ಅಳೆಯಲಸಾಧ್ಯ - ''ಮಹತೋ ಮಹೀಯಾನ್''.

ಅಷ್ಟೇ, ಸಹಸ್ರಾಯುಧ ಧಾರಿಣೇ ನಮಃ । ಆಯುಧಗಳು ಬೇರೆ ಬೇರೆ ದೇವತೆಗಳಿಗೆ ಬೇರೆ ಬೇರೆ. ಶಂಖ, ಚಕ್ರ, ಗದಾ, ಶಾಂರ್ಙ್ಗ, ಕಮಲಗಳು ಹಸ್ತದಲ್ಲಿ. ಒಂದು ಅಭಯ ಹಸ್ತ ಇನ್ನೊಂದು ವರದ ಹಸ್ತ. ಹೀಗಿರುವಾಗ ಸಾವಿರ ಆಯುಧಗಳನ್ನು ತಿಳಿದುದರಿಂದೇನು ಪ್ರಯೋಜನ.

ನಮಗೆ ಬೇಕಾದ್ದು ಅವನ ಅಭಯ ಹಸ್ತ ಮತ್ತು ವರದ ಹಸ್ತ ಮಾತ್ರ ಭಕ್ತರಿಗೆ. ಇತರ ಆಯುಧ ಮುಂತಾದವುಗಳು ಬೇರೆಯವರಿಗೆ.

ಸಹಸ್ರಾಯುಧ ಧಾರಿಣೇ ನಮಃ - ದುಷ್ಟರ ಶಿಕ್ಷೆಗಾಗಿ.

**45.** ಸ್ಥೂಲಾಯ ನಮಃ

ಸ್ಥೂಲ - ದೊಡ್ಡದಾದ ಶರೀರ ಉಳ್ಳವನು.

ಸ್ಥೂಲ ಶರೀರವುಳ್ಳವನಿಗೆ ನಮಸ್ಕಾರಗಳು, ಸ್ಥೂಲತನದ ಶರೀರವೇ ದಶಾಂಗುಲ ಪ್ರಮಾಣದಲ್ಲಿ ಬರುವ, ಊಹಿಸಲಸಾಧ್ಯವಾದ ಶರೀರ - ಸ್ಥೂಲ ಶರೀರ.

ವರಾಹಾವತಾರದಲ್ಲಿ ಬರುವಂತೆ, ವರಾಹನ ಪಾದದ ಒಂದೊಂದು ಬೆರಳುಗಳು (ಹಿಮಾಲಯ) ಪರ್ವತಗಾತ್ರವಿತ್ತಂತೆ. ಅಂದರೆ ದೇಹ ಪ್ರಮಾಣವೆಷ್ಟಿರಬೇಕು! ಅದೇ ಸ್ಥೂಲ ಶರೀರ.

ಹಾಗೇಯೆ ಮತ್ಸ್ಯ, ಕೂರ್ಮ ಅವತಾರಗಳು ಮಹತ್ತಾದ ಶರೀರ, ಶಕ್ತಿಯುಳ್ಳವುಗಳು.

ಒಂದೊಂದು ರೀತಿಯಲ್ಲಿ ತೆಗೆದುಕೊಂಡರೂ ಭಗವಂತನ ನಾಮಾವಳಿಗಳು ಭಕ್ತನ ಮನಸ್ಸಿನ ಒಳಗೆ ಹೋಗಿ ಎಲ್ಲಿಯೋ ಒಂದು ಭಾಗದಲ್ಲಿ - ಅಂದರೆ ಗಗನಾಕಾರವಾದ ಈ ಮನಸ್ಸಿನ ಒಳಗೆ ಹೋಗಿ ನಾಮಾವಳಿಯು ಅಂಕುರುವಾಗಿ ತನ್ನ ಪ್ರತಿಭೆಯಿಂದ ಬೆಳಕಾಗಿ ಪರಿಣಮಿಸಿ ತನ್ನದೇ ಆದ ಒಂದು ವಿಶಿಷ್ಟ ಪ್ರಪಂಚವಾಗಿ ಹರಡಿ ಸ್ಥಿರವಾಗಿ ಜ್ಞಾಪಕ ಶಕ್ತಿಯಾಗಿ ಉಳಿಯುತ್ತದೆ. ಸಮಯ ಬಂದಾಗ ಮನಸ್ಸಿನ ಶ್ರದ್ಧೆಯ ಪ್ರಮಾಣಕ್ಕೆ ತಕ್ಕಂತೆ ತತ್‌ಕ್ಷಣದಲ್ಲಿ ಅಂಕುರಿಸಿ ವ್ಯಕ್ತವಾಗುತ್ತದೆ. ಯಾವ ನಾಮ, ರೂಪ, ಪ್ರಮಾಣ, ಅದರ ವಿಶೇಷ ಅರ್ಥ ಚಿಂತನೆ ತಾನಾಗಿಯೇ ಆಗ ಪ್ರಕಾಶವಾಗುತ್ತದೆ. ಇದಕ್ಕೆ ಭಗವಂತನ ಕೃಪೆ, ಭಕ್ತನ ಸಂಸ್ಕಾರ, ಅತೀವ ಆಳವಾದ ಅನನ್ಯ ಶ್ರದ್ಧೆ, ಅವ್ಯಭಿಚಾರಿಣೀ ಭಕ್ತಿಗಳೇ ಕಾರಣ, ಬೇರೆಯಲ್ಲ. ಪರಮಾತ್ಮನ ಸಂಕಲ್ಪವೇ ಕಾರಣ. ಇನ್ನೂ ಹೆಚ್ಚಾಗಿ ಒಂದು ಹೆಜ್ಜೆ ಮುಂದೆ ಹೋದರೆ ಆ ಭಕ್ತನಿಗೂ ಪರಮಾತ್ಮನಿಗೂ ಸಂಬಂಧ ಕಲ್ಪಿಸುವ ಗುರುವಿನ ಅನುಗ್ರಹವೇ ಮಹತ್ಕಾರಣವಾಗಿ ನಿಲ್ಲುತ್ತದೆ.

*ಓಂ ಶ್ರೀ ಮಹತ್ ಸದ್ಗುರುವೇ ನಮಃ*

*ನ ಗುರೋರಧಿಕಂ ನ ಗುರೋರಧಿಕಂ ನ ಗುರೋರಧಿಕಂ ನ ಗುರೋರಧಿಕಂ।*

*ಶಿವಶಾಸನತಃ ಶಿವಶಾಸನತಃ ಶಿವಶಾಸನತಃ ಶಿವಶಾಸನತಃ ॥*

*ಇದಮೇವ ಶಿವಂ ಇದಮೇವ ಶಿವಂ ಇದಮೇವ ಶಿವಂ ಇದಮೇವ ಶಿವಂ।*

*ಮಮ ಶಾಸನತಃ ಮಮ ಶಾಸನತಃ ಮಮ ಶಾಸನತಃ ಮಮ ಶಾಸನತಃ ॥*

(ಗುರುಗೀತಾದಿಂದ ತೆಗೆದ ಶ್ಲೋಕಗಳು).

ಇದಿಷ್ಟೂ ಭಗವಂತನ ಸ್ಥೂಲತೆಯ ವಿಶಯ.

ಭಗವಂತನು ಬ್ರಹ್ಮಾಂಡವನ್ನೆಲ್ಲ ಕಲ್ಪಾಂತದಲ್ಲಿ ತನ್ನ ಉದರದಲ್ಲಿ ಅಡಗಿಸಿಕೊಳ್ಳುತ್ತಾನೆ. ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನಾದ ಪರಮಾತ್ಮನು ಸಕಲ ಬ್ರಹ್ಮಾಂಡವನ್ನು ತನ್ನ ಉದರದಲ್ಲಿ ಇರಿಸಿಕೊಂಡಾಗ ಅವನ ಆಕಾರ ಹೇಗಿರಬೇಕು? ಸ್ಥೂಲವಾದ ಬ್ರಹ್ಮಾಂಡವನ್ನು ಅಡಗಿಸಿಕೊಂಡಾಗ ಅವನೆಷ್ಟು ಸ್ಥೂಲನಾಗಬಹುದು? ಊಹಿಸಲು ಸಾಧ್ಯವೇ? ಉತ್ತರ - ಆಗಲ್ಲ ಎಂದು.

ಇಂತಹ ಸ್ಥೂಲಾಯ ನಮಃನಿಗೆ ಅನಂತ ಕೋಟಿ ನಮಸ್ಕಾರಗಳು.

46. ಸೂಕ್ಷ್ಮಾಯ ನಮಃ

ಅಣು ರೂಪನಾದ ಪರಮಾತ್ಮನಿಗೆ ನಮಸ್ಕಾರಗಳು. ಕ್ರಿಮಿ ಕೀಟಗಳಲ್ಲಿ ಇರುವ ಪರಮಾತ್ಮನ ತೇಜಶ್ಶಕ್ತಿ - ಜೀವಾತ್ಮದ ಪ್ರಮಾಣವು ದೊಡ್ಡ ರೂಪದ ಆನ, ಸಿಂಹ ಮುಂತಾದವುಗಳಲ್ಲಿರುವ ಜೀವಾತ್ಮದ ಪ್ರಮಾಣ ಎರಡೂ ಒಂದೇ. ಅಷ್ಟೇ ಜೀವಾತ್ಮ, ಅದೇ ಜೀವಾತ್ಮ ಅಂದರೆ ಎಲ್ಲ ಜೀವಿಗಳ ಆಕಾರ, ಪ್ರಮಾಣ, ಶಕ್ತಿ ಎಲ್ಲವೂ ಒಂದೇ. ಜೀವಾತ್ಮನೇ ಸೂಕ್ಷ್ಮರೂಪ, ಪರಮಾತ್ಮನು ಇನ್ನೂ ಸೂಕ್ಷ್ಮರೂಪ "ಅಣೋರಣೀಯಾನ್"

ಪರಮಾತ್ಮನು ಸೂಕ್ಷ್ಮನು, ಅತಿ ನಯವಾದವನು, ನಾಜೂಕಾದವನು, ಕೋಮಲವಾದವನು ಅದರಿಂದ ಸೂಕ್ಷ್ಮನು - ಸೂಕ್ಷ್ಮ ಸ್ವರೂಪನು. - ಸೂಕ್ಷ್ಮಾಯ ನಮಃ.

47. ಸುಸೂಕ್ಷ್ಮಾಯ ನಮಃ

ಸೂಕ್ಷ್ಮವಾಗಿರುವ ರೂಪಗಳಲ್ಲೆಲ್ಲಾ ಸೂಕ್ಷ್ಮವಾದ ರೂಪವುಳ್ಳವನು ಪರಮಾತ್ಮ. ಜೀವ ಕೋಟಿಯ ಯಾವ ಆತ್ಮದಿಂದಲೂ ಬುದ್ಧಿ ವಿವೇಚನೆಗೆ ಒಳಪಡದ ಸೂಕ್ಷ್ಮತಮ ರೂಪ. ಅತಿ ಸೂಕ್ಷ್ಮವಾದ ಆತ್ಮವೇ ಪರಮಾತ್ಮನ ರೂಪಕ್ಕೆ ಸುಸೂಕ್ಷ್ಮವಾದ್ದು.

*ಸಹಸ್ರಾಕ್ಷಾಯ ದೇವಾಯ ದಿಕ್ಶ್ರೋತ್ರಾಯ ನಮೋ ನಮಃ ।*
*ಸಹಸ್ರನಾಮಧೇಯಾಯ ಸಹಸ್ರಾಕ್ಷಧರಾಯ ಚ ॥40॥ (248-252)*

48. ಸಹಸ್ರಾಕ್ಷಾಯ ನಮಃ

ಸಹಸ್ರಾಕ್ಷ - ಸಾವಿರ ಕಣ್ಣುಗಳುಳ್ಳವನು, ದೇವೇಂದ್ರ.

ದೇವೇಂದ್ರನು ಒಂದು ಯಾವುದೋ ಸನ್ನಿವೇಶದಲ್ಲಿ ಸಹಸ್ರ ಯೋನಿಗಳು ನಿನ್ನ ದೇಹದಲ್ಲಿ (ದೇಹವೆಲ್ಲ) ಆಗಲಿ ಎಂಬುದಾಗಿ ಶಾಪಗ್ರಸ್ತನಾಗುತ್ತಾನೆ. ಆಗ ಪರಮಾತ್ಮನನ್ನು ಪ್ರಾರ್ಥಿಸಲಾಗಿ ಪರಮಾತ್ಮನು ಯೋನಿಗಳೆಲ್ಲವು

ಆಕ್ಷಗಳಾಗಿ ನಿನಗೆ ಅಲಂಕಾರ ಪ್ರಾಯವಾಗಲಿ ಎಂದು ಶಾಪ ನಿವಾರಣೆ ಮಾಡುತ್ತಾನೆ. ಅಂದಿನಿಂದ ದೇವೇಂದ್ರನ ದೇಹವೆಲ್ಲವೂ ನವಿಲುಗರಿಗಳ ಕಣ್ಣಿನಂತೆ ಕಣ್ಣುಗಳಾಗುತ್ತವೆ. ಅಂದಿನಿಂದ ಸಹಸ್ರಾಕ್ಷ ಎಂದು ಕರೆಯಲ್ಪಡುತ್ತಾನೆ. ದೇವೇಂದ್ರನು ಪರಮಾತ್ಮ ರೂಪ. ಈ ರೂಪದಲ್ಲಿ ದೇವ ಲೋಕವನ್ನು ಮತ್ತು ದೇವತೆಗಳನ್ನು ಆಳುತ್ತಾನೆ.

ಸಹಸ್ರಾಕ್ಷ - ಎಂದರೆ ಸಾವಿರ ಕಣ್ಣುಳ್ಳವನು. ಒಂದು ಕಣ್ಣಿನಿಂದಲೇ ಪರಮಾತ್ಮನು ಇಡೀ ಪ್ರಪಂಚವನ್ನು ನೋಡುತ್ತಾನೆ. ಸೂರ್ಯ, ಚಂದ್ರರೇ ಎರಡು ಕಣ್ಣುಗಳು. ಅಗ್ನಿಯೇ ಅವನ ಮೂರನೆ ಕಣ್ಣು. ಇದು ಮೂರನೆಯದು ಶಿವನಿಗೆ ಮಾತ್ರ ಇದೆ.

ಪರಮಾತ್ಮನು ತನ್ನ ಅನುಕೂಲಕ್ಕಾಗಿ ಸಾವಿರ ಕಣ್ಣುಳ್ಳ ಪುರುಷನಾಗುತ್ತಾನೆ.

ಪರಮಾತ್ಮನು ತನ್ನ ಅಧಿ ದೇವತೆಯ ಮೂಲಕ ಪ್ರತಿ ದೇಹದಲ್ಲಿಯೂ ಕಣ್ಣುಗಳಿಂದ ಪ್ರಪಂಚವನ್ನು ನೋಡುತ್ತಾನೆ. ಅಂದರೆ ಒಬ್ಬನೇ ಪರಮಾತ್ಮ ಕೋಟ್ಯಾಂತರ ಜೀವಿಗಳ ಕಣ್ಣುಗಳಿಂದ ನೋಡಿ "ಅನೇಕ" ನಾಗುತ್ತಾನೆ. ಸಹಸ್ರಾಕ್ಷನೆಂದರೆ ಸಾವಿರವೆಂದೇ ಅಲ್ಲ, ಎಷ್ಟು ಬೇಕಾದರೂ ಆಗಬಹುದು.

ಅದರಿಂದ ಸಹಸ್ರಾಕ್ಷಾಯ ನಮಃ.

## 49. ದೇವಾಯ ನಮಃ

ದೇವ ಎಂದರೆ ದೇವತೆ, ಬೆಳಕು, ಜ್ಞಾನ ರೂಪನು, ಇದು ಪರಮಾತ್ಮನ ಒಂದು ರೂಪ. ಎಲ್ಲಿ ಬೆಳಕಿರುವುದೋ ಅಲ್ಲಿ ದೇವನು ಪ್ರಕಾಶನಾಗುತ್ತಾನೆ.

ದೇವತೆಗಳಿಗೆ ಸಂಬಂಧ ಪಟ್ಟಿದ್ದು ಅಥವಾ ದೇವಲೋಕಕ್ಕೆ ಸಂಬಂಧಿಸಿದ್ದು - ದಿವ್ಯ, ಅದರ ಭಾವ ದಿವ್ಯತೆ.

ಪ್ರತಿಯೊಂದರಲ್ಲಿಯೂ, ಸೃಷ್ಟಿಯ ಪ್ರತಿಯೊಂದು ವಸ್ತು, ಜೀವವಿರುವ ದೇಹದಲ್ಲಿಯೂ, ಸಕಲ ಚರಾಚರ ವಸ್ತುವಿನಲ್ಲಿಯೂ ದೇವತ್ವದ ಭಾವವಿರುತ್ತದೆ. ಒಂದಲ್ಲ ಒಂದು ರೀತಿಯಲ್ಲಿ ಸೂಕ್ತ ಸಮಯದಲ್ಲಿ ಈ ದಿವ್ಯತೆಯು ಪ್ರಕಾಶವಾಗುತ್ತದೆ. ಆತ್ಮದ ಜೊತೆಯಲ್ಲಿ ಅಂಟಿಕೊಂಡಿರುವ ಸಂಸ್ಕಾರ, ಕರ್ಮಗಳು ಈ ಸೂಕ್ತ ಸಮಯ ನಿದಾನವಾಗುವುದಕ್ಕೆ ಅಥವಾ ಬೇಗ ಬರುವುದಕ್ಕೆ ಕಾರಣವಾಗುತ್ತದೆ. ಬಂದದ್ದು ಇರತಕ್ಕ ಕಾಲವೂ ಈ ಸಂಸ್ಕಾರವನ್ನೇ ಅವಲಂಬಿಸಿರುತ್ತದೆ.

ಪರಮಾತ್ಮನು ತನ್ನ ಲೀಲೆಗಾಗಿ ಅನೇಕ ಜೀವಿಗಳನ್ನು ಜೀವಿಗಳ ಆಧಾರಕ್ಕಾಗಿ ಜೀವನ ನಡೆಯುವುದಕ್ಕಾಗಿ ದೇವತೆಗಳನ್ನು ನಿರ್ಮಿಸಿರುತ್ತಾನೆ. ಸೃಷ್ಟಿಯ ಮೊದಲಲ್ಲಿ / ನಂತರ ದೇವತೆಗಳನ್ನೂ ಮನುಷ್ಯರನ್ನೂ ಕರೆದು ಹೀಗೆ ಹೇಳಿದನು. - ಮನುಷ್ಯರು ಯಜ್ಞಗಳನ್ನು ಮಾಡಲಿ ಅದರಿಂದ ಬರುವ ಹವಿಸ್ಸಿನಿಂದ

ದೇವತೆಗಳು ಒಳ್ಳೆಯ ಫಲಗಳನ್ನು ಮನುಷ್ಯರಿಗೆ ಕೊಡಲಿ. ಹೀಗೆ ಒಬ್ಬರನ್ನೊಬ್ಬರು ಭಾವಿಸಿ ಪ್ರಜೋತ್ಪತ್ತಿ, ಪ್ರಪಂಚದ ಮುನ್ನಡೆಗಾಗಿ ಮಾಡಿರಿ ಎಂದು ಪರಮಾತ್ಮ ಹೇಳಿದನು. ಈ ರೀತಿಯಾಗಿ ಕೃಷ್ಣನು ಗೀತೆಯಲ್ಲಿ ತಿಳಿಸುತ್ತಾನೆ. ಆದರಿಂದ ದೇವನಿಗೆ ನಮಸ್ಕಾರಗಳು.

ಜೀವನದಲ್ಲಿ ಪರಮಾತ್ಮನನ್ನು ನಮ್ಮ ನಮ್ಮ ಅವಶ್ಯಕತೆಗಾಗಿ ಪ್ರಾರ್ಥಿಸುತ್ತೇವೆ. ಆರ್ತರಾಗಿ, ಜಿಜ್ಞಾಸುಗಳಾಗಿ, ಅರ್ಥಿಗಳಾಗಿ, ಜ್ಞಾನಿಗಳಾಗಿ ನಮ್ಮ ನಮ್ಮ ಇಷ್ಟಗಳನ್ನು ಕೇಳುತ್ತೇವೆ. ಪರಮಾತ್ಮನು ಎಲ್ಲವನ್ನು ಅವರವರ ಪ್ರಾರ್ಥನೆಗೆ ಅನುಸಾರವಾಗಿ ಕೊಡುತ್ತಾನೆ. ಅವನು ಪರಮ ಕರುಣಾಳು, ಕರುಣಾಮಯಿ, ದಯಾಸಾಗರ, ಸಾಗರ. ಒಂದು ಬಿಂದುವಿನ ಕಣಕ್ಕಾಗಿ ನಾವು ಕಾಯುತ್ತೇವೆ. ಅನೇಕ ದೇವತೆಗಳ ಮೂಲಕ ಬೇರೆ ಬೇರೆಯ ಇಷ್ಟಗಳನ್ನು ಪಡೆಯುತ್ತೇವೆ. ಇಷ್ಟಗಳು ಸಾತ್ವಿಕ, ರಾಜಸ, ತಾಮಸವಾಗಿರಬಹುದು. ಯಾರು ಯಾವ ರೀತಿಯ ಫಲಕ್ಕಾಗಿ ಪ್ರಾರ್ಥಿಸುತ್ತಾರೋ ಅವರು ಅದದೇ ರೀತಿಯಲ್ಲಿ ಫಲವನ್ನು ಪಡೆಯುತ್ತಾರೆ. ''ಯೇ ಯಥಾ ಮಾಂ ಪ್ರಪದ್ಯಂತೇ ತಾಂ ತಥೈವ ದದಾಮ್ಯಹಮ್ ||'' ಎಂದು ಗೀತೆಯಲ್ಲಿ ಹೇಳಿದ್ದಾನೆ.

ಆದರೆ ಜ್ಞಾನಕ್ಕಾಗಿ ಪರಮಾತ್ಮನನ್ನು ಪ್ರಾರ್ಥಿಸುವವರು ವಿರಳ, ಆದರೆ ಪ್ರಾರ್ಥನೆಗಳಲ್ಲೆಲ್ಲ ಇದೇ ಅತ್ಯುನ್ನತವಾದ್ದು ಪ್ರಾರ್ಥಿಸುವವರ ಮನಸ್ಸು, ಬುದ್ಧಿಯ ವಿಕಾಸದ ಮೇಲೆ ಇದೆ. ಇದು ಅವರವರ ಸಂಸ್ಕಾರ, ಭಗವತ್ಕೃಪೆಯನ್ನು ಅವಲಂಬಿಸಿರುತ್ತದೆ. ಒಟ್ಟಿನಲ್ಲಿ ಸಂಸಾರ ಸಾಗರದಲ್ಲಿ ತೇಲುತ್ತಾ ಬಂದ ಆತ್ಮ, ಭವಸಾಗರವನ್ನು ದಾಟಿ ಪರಮಾತ್ಮನನ್ನು ಸೇರಬೇಕಾದರೆ ಬಹಳವಾಗಿ ಶ್ರಮಿಸಬೇಕಾಗುತ್ತದೆ ಅದಕ್ಕೆ ''ದೇವಾಯ ನಮಃ'' ಎಂಬುದೇ ಉತ್ತಮವಾದ ಔಷಧ.

''ದೇವಾಯ ನಮಃ'' ಎಂಬುದೇ ನಾಮ ಸ್ಮರಣೆ. ನಾಮ ಸ್ಮರಣೆಯೇ ಭವತಾರಕ ಮಂತ್ರ. ಇದನ್ನು ಬಿಟ್ಟರೆ ಬೇರೆ ದಾರಿಯೇ ಇಲ್ಲ ಈ ಸಂಸಾರದಿಂದ ಬಿಡುಗಡೆ ಹೊಂದಲಿಕ್ಕೆ.

### 50. ದಿಕ್ಶ್ರೋತ್ರಾಯ ನಮಃ

ದಿಕ್ - ದಿಕ್ಕುಗಳು, ಶ್ರೋತ್ರಾಯ - ಕೇಳುವವನು. ಆದರೆ ಎಲ್ಲ ದಿಕ್ಕುಗಳಲ್ಲಿ ಕೇಳುವವನು ಯಾರೋ ಅವನಿಗೆ ನಮಸ್ಕಾರಗಳು. ದಿಕ್ಕುಗಳು ಸುತ್ತಲು, ಎಂಟು. ಮೇಲೆ ಒಂದು, ಕೆಳಗೆ ಒಂದು ಒಟ್ಟು ಹತ್ತು ದಿಕ್ಕುಗಳು. ದಶ ದಿಕ್ಕುಗಳು, ಈ ಎಲ್ಲ ದಿಕ್ಕುಗಳಲ್ಲಿಯೂ ಕೇಳುವವನು.

ನಾವು ಮಾಡುವ ಪ್ರಾರ್ಥನೆ ಯಾವ ದಿಕ್ಕಿನಲ್ಲಾದರೂ ಆಗಬಹುದು, ಆದರ ಕೂಗು ಯಾವ ದಿಕ್ಕಿನಲ್ಲಿ ಬೇಕಾದರೂ ಹೋಗಬಹುದು. ಶಬ್ದವು

ಎಷ್ಟು ದೂರ ಬೇಕಾದರೂ ಹೋಗಿ ಕೇಳಿಸಬಹುದು. ಆದರೆ ನಾವು ಹೇಗೆ ಕೂಗಿದರೂ, ಎಷ್ಟು ಗಟ್ಟಿಯಾಗಿ ಅಥವಾ ಮೆಲ್ಲಗೆ ಅಥವಾ ಮನಸ್ಸಿನಲ್ಲಿ ಕೂಗಿದರೂ ನಮ್ಮ ಕೂಗು ಅವನನ್ನು ಮುಟ್ಟಿ ತದನಂತರ ಅವನು ನಮಗೆ ಸೂಕ್ತವಾದ ಪರಿಹಾರವನ್ನು ಕೊಡುತ್ತಾನೆ. ಇದು ಪರಮಾತ್ಮನ ವೈಶಿಷ್ಟ್ಯ, ಭಕ್ತ ಪರಿಪಾಲನೆಯೇ ಅವನ ಧ್ಯೇಯ.

ನಮ್ಮ ಅನನ್ಯ ಶ್ರದ್ಧೆಯ ಪ್ರಾರ್ಥನೆ, ಆರ್ತನಾದ ಪರಮ ಕರುಣಾಮಯನಾದ ಭಕ್ತ ವತ್ಸಲನಾದ ಪರಮಾತ್ಮನನ್ನು ತಕ್ಷಣ ಮುಟ್ಟುತ್ತದೆ. ಅದಕ್ಕೆ ಸೂಕ್ತವಾದ ಉತ್ತರವನ್ನು ಪರಮಾತ್ಮನು ಕೊಡುತ್ತಾನೆ. ನಮ್ಮನ್ನು ಕಷ್ಟದಿಂದ, ದುರ್ಗಮವಾದ ದುರ್ಗಗಳಿಂದ (ದುರ್ಗತಿಗಳಿಂದ) ಪಾರುಮಾಡಿ ಮೇಲೆತ್ತುತ್ತಾನೆ. ಆಗ ನಮಗೆ ಅಪಾರವಾದ ಶಾಂತಿ ದೊರೆಯುತ್ತದೆ. ಪರಮಾತ್ಮನೊಬ್ಬನನ್ನೇ ಕೇಂದ್ರವಾಗಿ ಇಟ್ಟುಕೊಂಡು ಜೀವ ಕೋಟಿಯ ಸಮಸ್ತ ಜೀವಿಗಳೂ ಒಂದಲ್ಲ ಒಂದು ರೀತಿಯಲ್ಲಿ ನಾನಾ ಕೋಟ್ಯಾಂತರ ರೀತಿಯಲ್ಲಿ ಕೋಟ್ಯಾಂತರ ಪ್ರಾರ್ಥನೆ, ಆರ್ತನಾದ ಮಾಡಿ ಪರಮಾತ್ಮನನ್ನು ಕೂಗುತ್ತಿರುವಾಗ ಅವನು ದಿಕ್ ಶ್ರೋತ್ರನಾಗಿರಬೇಕೇ ಹೊರತು ಬೇರೆ ದಾರಿ ಅವನಿಗೆ ಇಲ್ಲ. ತನ್ನನ್ನು ಬೇಡಿದವರನ್ನು ಉದ್ಧರಿಸುವುದು ಒಂದೇ ಪರಮಾತ್ಮನ ಗುರಿ. ಈ ಗುರಿಯಲ್ಲಿ ಅವನು ಎಷ್ಟು ಭಕ್ತರಿಂದ ಭಕ್ತಿಪಾಶದಲ್ಲಿ ಹುದುಗಿ ಕೊಳ್ಳಬೇಕಾಗುತ್ತೋ, ಪ್ರಾಯಶಃ ಅವನಿಗೇ ತಿಳಿಯದು. ಯಾವಾಗ ಅವನಿಗೆ ಈ ಭಕ್ತಿಪಾಶದಿಂದ ಬಿಡುಗಡೆಯಾಗುವುದೋ, ಅದಕ್ಕೆ ಅವನು ಯಾವ ದಾರಿ ಹುಡುಕಬೇಕೋ ಅವನಿಗೆ ತಿಳಿಯದೆಂದು ನನ್ನ ಕಲ್ಪನೆ. ಇದು ಚಿಂತನೆಯ ಚಕ್ಷುವಿನಿಂದ ಅಷ್ಟೆ, ಇಂತಹ ಬ್ರಹ್ಮಾಂಡವನ್ನೇ ರಚಿಸಿದ ಈ ಮಹನೀಯನಿಗೆ ತಿಳಿಯದ ದಾರಿ ಇದೆಯೇ? ಅದಕ್ಕಾಗಿಯೇ ದಿಕ್ಶ್ರೋತ್ರನಾಗಿ ಆಯಾ ಭಕ್ತರ ಕೂಗನ್ನು ಸೂಕ್ತ ಕಾಲದಲ್ಲಿ ಕೇಳಿ ಫಲಗಳನ್ನು ಕೊಟ್ಟು ನಂತರ ಮುಂದಿನ ಕೂಗುಗಳನ್ನು ಕೇಳುವುದಕ್ಕೆ ಮತ್ತು ಫಲ ಕೊಡಲು ತಯಾರಾಗುತ್ತಾನೆ. ಇದನ್ನ ನೋಡಿದರೆ ಸೃಷ್ಟಿಯಿಂದ ಲಯದವರೆಗೆ ನಿರಂತರವಾಗಿ ಈ ಕೆಲಸವನ್ನು ಅವನೇ ನಡೆಸಬೇಕು. ಅದಕ್ಕಾಗಿಯೇ ಏನೋ ಏಕಂ ವಿಪ್ರಾ ಬಹುಧಾ ವದಂತಿ, ಏಕೇನ ಅನೇಕ ರೂಪವಾಗಿ ಆಗುತ್ತಾನೆ. ಇವು ಅವತಾರಗಳಾಗಬಹುದು, ದೇವ ದೇವತೆಗಳಾಗಬಹುದು, ಗುರುಗಳಾಗಬಹುದು, ಒಟ್ಟಿನಲ್ಲಿ ಈ ಫಲವನ್ನು ಕೊಡುವ, ಸಾಂತ್ವನ ಕೊಡುವ ರೀತಿ ವಿಶೇಷ. ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನಿಗೆ ಕಷ್ಟವಾದದ್ದೇನೂ ಇಲ್ಲ! ಅಂತಹ ದಿಕ್ಶ್ರೋತ್ರನಿಗೆ ನಮಸ್ಕಾರಗಳು.

**51. ಸಹಸ್ರನಾಮಧೇಯಾಯ ನಮಃ**

ಭಗವಂತನಿಗೆ ಅನೇಕ ಹೆಸರುಗಳು, ಯಾವ ಹೆಸರಿನಿಂದ ಕರೆದರೂ ಅದು

ಅವನಿಗೆ ಕೇಳಿಸುತ್ತದೆ. ಕೇಳಿಸಿದ ನಂತರ ಫಲವನ್ನು ಕೊಡುತ್ತಾನೆ. ಅವನು ಸಹಸ್ರನಾಮಧೇಯನು. ಜೀವ ಕೋಟಿಯು ಯಾವ ಭಾವನೆಯಿಂದ ಬೇಕಾದರೂ ಕರೆಯಬಹುದು ಅದಕ್ಕೆ ತಕ್ಕಂತೆ ಒಂದಾದರೂ ನಾಮವಿರುತ್ತದೆ. ಮೂವತ್ತು ಮೂರು ಕೋಟಿ ದೇವತೆಗಳಿರುತ್ತಾರೆ. ಅನೇಕ ದೇವತೆಗಳಿಗೆ ಅವರವರದೇ ಆದ ಸಹಸ್ರನಾಮಗಳಿವೆ. ಉದಾಹರಣೆಗೆ ಬಹಳ ಪ್ರಚಾರದಲ್ಲಿರುವ ವಿಷ್ಣು ಸಹಸ್ರನಾಮ, ಲಲಿತಾ ಸಹಸ್ರನಾಮ, ಲಕ್ಷ್ಮೀ ಸಹಸ್ರನಾಮ, ಸರಸ್ವತಿಗೆ ಸಹಸ್ರನಾಮ, ರಾಮನದು, ಶಿವ ಸಹಸ್ರನಾಮ, ಗಣಪತಿ ಸಹಸ್ರನಾಮಗಳು, ಗಕಾರ ಗಣಪತಿ ಸಹಸ್ರನಾಮಗಳು, ಸುಬ್ರಮಣ್ಯ ಸಹಸ್ರನಾಮ, ನರಸಿಂಹ ಸಹಸ್ರನಾಮ, ಇನ್ನೂ ಅನೇಕವು ಇವೆ. ಜೊತೆಗೆ ಅನೇಕ ಅಷ್ಟೋತ್ತರಗಳು, ನಾಮಾವಳಿಗಳು ಬಹಳವಿವೆ. ಪ್ರಾಯಶಃ ಎಲ್ಲ ಜೀವಿಗಳಿಗೂ ಅವವುಗಳ ಭಾವನೆಗೆ ನಿಲುಕುವಂತೆ ನಾವು ನಾಮಗಳನ್ನು ಕೇಳಿದ್ದೇವೆ. ಹಾಗೆಯೇ ನಾಮ ಜಪಕ್ಕೆ ಅನುಕೂಲವಾಗುವಂತೆ ತಾರಕ ನಾಮಗಳು, ರಾಮ ತಾರಕಮಂತ್ರ, ಶಿವನ ಮಂತ್ರ, ಇತ್ಯಾದಿ.

ಒಬ್ಬ ಭಗವಂತನು ಅನೇಕ ರೂಪಗಳನ್ನು ಹೊಂದಿ ಅನೇಕ ಹೆಸರುಗಳನ್ನು ತೆಗೆದುಕೊಂಡು ಭಕ್ತರನ್ನುದ್ಧರಿಸುತ್ತಾನೆ. ಸೃಷ್ಟಿ ಮಾಡಿದ ದೇವರು ಈ ರೀತಿ ಪ್ರಾಯಶಃ ಮಾಡದಿದ್ದರೆ ಜೀವಿಗಳ ಉದ್ಧಾರ ಹೇಗಾಗುತ್ತಿತ್ತೋ.

ಮತ್ತೆ ಸಹಸ್ರನಾಮಗಳ ರಚನೆ, ಕೆಲವು ಸಹಸ್ರನಾಮಗಳು ದೇವ ದೇವನಿಂದಲೇ ರಚಿತವಾಗಿದೆ. ಉದಾ - ಬ್ರಹ್ಮನಿಂದ ನರಸಿಂಹ ಸಹಸ್ರನಾಮ, ಅಗಸ್ತ್ಯರಿಂದ ಲಲಿತಾ ಸಹಸ್ರನಾಮ ಇತ್ಯಾದಿ.

ಪಠಿಸಲು, ಮನನ ಮಾಡಲು, ಜಪ ಮಾಡಲು, ಧ್ಯಾನ ಮಾಡಲು ಅನೇಕ ದಾರಿಗಳನ್ನು ಕಲ್ಪಿಸಿ ಭಗವಂತನು ಅಪಾರ ಕರುಣಾಮಯಿಯಾಗಿ ಭಕ್ತರನ್ನು ಉದ್ಧರಿಸುತ್ತಿದ್ದಾನೆ. ಅಷ್ಟೇ ಅಲ್ಲ ತಾನಾಗಿಯೇ ಆಗಲೀ, ಗುರುವಿನ ಮೂಲಕವಾಗಿಯೇ ಆಗಲೀ, ಏನೋ ಒಂದು ಸನ್ನಿವೇಶದಿಂದಲೇ ಆಗಲೀ ಭಕ್ತರಿಗೆ ದಾರಿ ತೋರಿಸಿ ಉದ್ಧರಿಸುತ್ತಾನೆ. ಉದ್ಧರಿಸುತ್ತಿದ್ದಾನೆ. ಇದು ಸತ್ಯ, ಸತ್ಯ ನೂರಕ್ಕೆ ನೂರು ಸತ್ಯ, ಅದರಿಂದಲೇ ಸಹಸ್ರನಾಮಧೇಯಾಯ ನಮಃ.

52. ಸಹಸ್ರಾಕ್ಷಧರಾಯ ನಮಃ

ಸಾವಿರ ಕಣ್ಣುಗಳನ್ನು ಧರಿಸಿರುವವನು, ಸಹಸ್ರಾಕ್ಷಧರನು. ಇವನೇ ಪುರುಷ ಸೂಕ್ತದಲ್ಲಿ ಮಂತ್ರ ಪುಷ್ಪದಲ್ಲಿ ವರ್ಣಿಸಲ್ಪಟ್ಟಿರುವ ಪುರುಷ.

ಈ ರೂಪವನ್ನು ನೋಡುವುದೇನು ಕಲ್ಪಿಸಲಿಕ್ಕೇನೆ ಬಹಳ ಕಷ್ಟ.

ಭಗವಂತನ ಸಾಕ್ಷಾತ್ಕಾರವಾದ ಹೊರತು ಇದು ಸಾಧ್ಯವಿಲ್ಲ. ವಿಶ್ವರೂಪ ದರ್ಶನದ ರೂಪಗಳಲ್ಲಿ ಭಗವಂತನ ಒಂದೊಂದು ಶಿರವೂ ಬೇರೆ ಬೇರೆಯ

ತರಹವಿದೆ. ಅಂದ ಮೇಲೆ ಸಾವಿರ ಶಿರಗಳೂ ನಾನಾ ರೀತಿಯಲ್ಲಿರಬಹುದು. ಅದಕ್ಕೆ ತಕ್ಕಂತೆ ಕಣ್ಣುಗಳು, ಕಿವಿಗಳು, ಬಾಯಿಗಳು, ಕೈಗಳು, ಅದಕ್ಕೆ ಆಯುಧಗಳು ಹೀಗೆಯೇ ಕಲ್ಪಿಸುತ್ತ ಹೋದರೆ ನಮ್ಮ ಬುದ್ಧಿ ಮನಸ್ಸು ಎಲ್ಲಿಗೆ ಹೋಗುವುದೋ ಅಥವಾ ಯಾವ ಸನ್ನಿವೇಶದಲ್ಲಿ ನಿಲ್ಲುವುದೋ ಅದನ್ನು ಈ ಕ್ಷಣದಲ್ಲಿ ಅಂದುಕೊಳ್ಳಲು ಸಾಧ್ಯವಿಲ್ಲ. ಇದೆಲ್ಲ ನಾವು ಭಗವಂತನನ್ನು ಅಳೆಯಲು ಸಾಧ್ಯವಿಲ್ಲ ಎನ್ನುವುದಕ್ಕೆ ಸಾಧನೆ. ಸಹಸ್ರಾಕ್ಷಧರಾಯ ನಮಃ.

ಒಂದೇ ಕಣ್ಣು ಅನೇಕವಾಗಬಹುದು, ಅದೂ ಸಾಧ್ಯ. ಪರಮಾತ್ಮನಿಗೆ ಸೂರ್ಯ, ಚಂದ್ರ, ಅಗ್ನಿಯೇ ಚಕ್ಷುಗಳು.

ನಮಗೆ ಅವನು ಕೊಟ್ಟಿರುವ ಎರಡು ಕಣ್ಣುಗಳ ಜೊತೆಗೆ ಜ್ಞಾನ ಚುಕ್ಷುವನ್ನು ಒಳಗಿನ ಕಣ್ಣನ್ನು (ಅಂತಃ ಚಕ್ಷುವನ್ನು) ಕೊಟ್ಟಿರುತ್ತಾನೆ. ಇದರಿಂದಲೇ ಬುದ್ಧಿ ಮನಸ್ಸುಗಳು ಎಲ್ಲವನ್ನು ಕಲ್ಪಿಸಿಕೊಳ್ಳುತ್ತೇವೆ.

*ಸಹಸ್ರಬಾಹವೇ ತಸ್ಮೈ ಸಹಸ್ರಚರಣಾಯ ಚ ।*
*ಸುಕ್ಷೀಣಾಯ ಸುಭಿಕ್ಷಾಯ ಸೂರ್ಯಾಧ್ಯಕ್ಷಾಯ ಶಾಲಿನೇ ।।41।।(253-258)*

53. **ಸಹಸ್ರಬಾಹವೇ ನಮಃ**

ಸಾವಿರ ಬಾಹುಗಳು (ತೋಳುಗಳು) ಉಳ್ಳವನು ಯಾರೋ ಅವನಿಗೆ ನಮಸ್ಕಾರಗಳು.

''ಸಹಸ್ರ'' ಶಬ್ದವನ್ನು ದೇಹದ ಎಲ್ಲ ಭಾಗಗಳಿಗೂ ಸೇರಿಸಿ ಪರಮಾತ್ಮನ ಪ್ರಾರ್ಥನೆ ಮಾಡಲಾಗಿದೆ.

ಸಹಸ್ರ ಬಾಹುಗಳು ಶಕ್ತಿಯುಳ್ಳ ತೋಳುಗಳುಳ್ಳವನು ಎಂದೂ ಅರ್ಥ ಮಾಡಬಹುದು. ಸಾಮಾನ್ಯವಾಗಿ ಎರಡು ತೋಳುಗಳುಳ್ಳ ಶ್ರೀರಾಮ, ಕೃಷ್ಣ ಅವತಾರ, ನಾಲ್ಕು ಕೈಗಳುಳ್ಳ ನರಸಿಂಹ ಅವತಾರ, ಎರಡು ತೋಳುಗಳುಳ್ಳ ವಾಮನ, ಪರಶುರಾಮ, ಬುದ್ಧ, ಕಲ್ಕಿ ಇವೆ. ಮಹಾವಿಷ್ಣುವಿಗೆ ನಾಲ್ಕು ಕೈಗಳ ರೂಪ ಪ್ರಚಲಿತ. ಆದರೆ ಸಾವಿರ ಬಾಹುಗಳ ರೂಪ ಪ್ರಚಲಿತವಿಲ್ಲ. ಹಾಗಾದರೂ ಸಾವಿರ ಎಂದಾಗ ಅಷ್ಟು ಶಕ್ತಿಯುತವಾದ್ದು ಎಂದು ತಿಳಿಯುವುದು ಸರಿ ಹೊಂದುತ್ತದೆ. ಅದರಿಂದ ಸಹಸ್ರ ಬಾಹುಗಳುಳ್ಳ ಪರಮಾತ್ಮನಿಗೆ ನಮಸ್ಕಾರಗಳೂ ಎಂದರೆ ಅತ್ಯಂತ ಶಕ್ತಿಶಾಲಿ ಎಂದು ಅರ್ಥ ಮಾಡಿದರೆ ತಪ್ಪಾಗಲಾರದು.

54. **ಸಹಸ್ರಚರಣಾಯ ನಮಃ**

ಸಾವಿರ ಪಾದಗಳುಳ್ಳವನು, ಪುರುಷ ಸೂಕ್ತದಲ್ಲಿ ಈ ರೀತಿ ''ಸಹಸ್ರ

ಶೀರ್ಷಾಃ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್'' ಎಂದು ಹೇಳಿದೆ. ಪರಮಾತ್ಮನ ರೂಪ ಅಗಾಧವಾದುದು, ಅಗಾಧ ಶಕ್ತಿಯುಳ್ಳದ್ದು, ಸರ್ವಶಕ್ತ, ಸರ್ವವ್ಯಾಪಿ, ಸರ್ವೇಶ್ವರ, ಸರ್ವಕಾರಣಕರ್ತ್ರು, ಪರಮಾತ್ಮನು ಏನನ್ನು ಬೇಕಾದರೂ ಸಾಧಿಸಬಹುದು. ಅವನಿಗೆ ಇಂತಹದು ಸಾಧ್ಯವಿಲ್ಲ ಎಂಬುದು ಇಲ್ಲ.

ಪಾದಗಳನ್ನು ತೆಗೆದುಕೊಂಡರೆ ರಾಮನಾಗಿ ತನ್ನ ಪಾದಸ್ಪರ್ಶದಿಂದ ಕಲ್ಲಾದ ಅಹಲ್ಯೆಯನ್ನು ಸ್ತ್ರೀಯಾಗುವಂತೆ ಮಾಡಿದನು.

ವಾಮನನಾಗಿ ತನ್ನ ಮೂರು ಪಾದದಿಂದ ಬಲಿಯನ್ನು ಬೇಡಿ, ಒಂದು ಪಾದದಿಂದ ಭೂಲೋಕದಿಂದ ಸತ್ಯಲೋಕದವರೆಗೂ, ಎರಡನೆಯ ಪಾದದಿಂದ ಭೂಲೋಕದ ಕೆಳಗಿರುವ ಪಾತಾಳ ಲೋಕದವರೆಗೂ, ಮೂರನೆಯದರಿಂದ ಬಲಿಯ ತಲೆಯ ಮೇಲೆ ಇಟ್ಟು ಅಳೆದನು. ಇದನ್ನು ಇಂತಹ ಮಹದ್ರೂಪವನ್ನು ವಾಮನನು ಮಾಡುವನೆಂದು ಸೃಷ್ಟಿಯಲ್ಲಿ ಯಾರೂ ಊಹಿಸಿರಲಿಲ್ಲ.

ಸ್ವಾಮಿಯ ದೇಹದಲ್ಲಿ ಪಾದಕ್ಕಿರುವ ಮಹಿಮೆ ಬೇರೆ ಯಾವ ಅವಯವಕ್ಕೂ ಇರುವುದಿಲ್ಲ.

ಸ್ವಾಮಿಯ ಪಾದದಿಂದ ದೇವಗಂಗೆಯು ಬರುತ್ತಾಳೆ.

ಸ್ವಾಮಿಯ ಪಾದವನ್ನು ಮಹಾಲಕ್ಷ್ಮಿಯು ಒತ್ತುತ್ತಾ ವಿಷ್ಣುವನ್ನು ಸೇವಿಸುತ್ತಾಳೆ.

ಸ್ವಾಮಿಯ ಪಾದ ಧೂಳಿಯನ್ನು ಬ್ರಹ್ಮ, ಮಹೇಶ್ವರ ಮೊದಲಾಗಿ ಎಲ್ಲರೂ ಶಿರಸ್ಸಿನಲ್ಲಿ ಇಟ್ಟುಕೊಳ್ಳುತ್ತಾರೆ.

ಮಗು ಶ್ರೀಕೃಷ್ಣನು ತನ್ನ ಪಾದ ಸ್ಪರ್ಶದಿಂದ ದೊಡ್ಡ ವೃಕ್ಷಗಳು ಬೀಳುವಂತೆ ಮಾಡಿ ಗಂಧರ್ವರಿಬ್ಬರಿಗೆ ಶಾಪ ವಿಮೋಚನೆ ಮಾಡಿದನು.

ಅದೇ ಪಾದದಿಂದ ಶ್ರೀಕೃಷ್ಣನು ಕಾಳಿಂಗನ ಮದವನ್ನು ಹೋಗಿಸಿದನು. ಕಾಳಿಂಗನ ಹೆಡೆಗಳ ಮೇಲೆ ನರ್ತನ ಮಾಡಿದನು. ಅದೇ ಪಾದಕ್ಕೆ ಬಾಣದ ಹೊಡೆತದಿಂದ ಕೃಷ್ಣಾವತಾರ ಸಮಾಪ್ತಿಯಾಯಿತು.

ಪಾದಾಂಗುಷ್ಠದಿಂದ ಶಿವನು ಕೈಲಾಸದ ನೆಲವನ್ನು ಮೆಟ್ಟಿ ರಾವಣನ ಶಕ್ತಿ ಸಂಹಾರ ಮಾಡಿದನು.

ಅದೇ ಪಾದಗಳೇ ಅವರ ಶಕ್ತಿಯನ್ನು ಶಿಷ್ಯರಿಗೆ ಕಳಿಸಲು ಪಾದವೇ ದಾರಿಯಾಯಿತು.

ಎಲ್ಲರೂ ಹಿರಿಯರ ಪಾದವನ್ನು ಮುಟ್ಟಿ ನಮಸ್ಕರಿಸುವುದರಿಂದ ಶ್ರೇಯಸ್ಸನ್ನು ಕಿರಿಯರು ಪಡೆಯುತ್ತಾರೆ.

ಪಾದದಲ್ಲಿ ಧರಿಸುವ ಪಾದುಕೆಯೇ ರಾಮನ ಪ್ರತಿನಿಧಿಯಾಗಿ 14 ವರ್ಷ ಅಯೋಧ್ಯೆ ರಾಜ್ಯವನ್ನಾಳಿತು.

ಇಂತು ಒಂದೊಂದು ಪಾದದ ಮಹಿಮೆಯೇ ಹೀಗಿರುವಾಗ ಸಹಸ್ರ ಪಾದಗಳ ಮಹಿಮೆಯನ್ನು ಬಣ್ಣಿಸುವುದು ಸಾಮಾನ್ಯರಿಗಾಗಲೀ, ದೇವ ದೇವತೆಗಳಿಗಾಗಲೀ ಸಾಧ್ಯವಾ! ಇಲ್ಲ ಅದಕ್ಕೆ ನಾವು ಸಹಸ್ರ ಚರಣಾಯ ನಮಃ ಎಂದು ಪರಮಾತ್ಮನಿಗೆ ನಮಸ್ಕರಿಸುತ್ತೇವೆ.

55. ಸುಕ್ಷೀಣಾಯ ನಮಃ

ಕ್ಷೀಣ ಎಂದರೆ ದುರ್ಬಲ, ಸಣ್ಣದು, ಕೋಮಲವಾದ್ದು. ಸುಕ್ಷೀಣ ಎಂದರೆ ಬಹಳ ಸಣ್ಣದು, ಪರಮಾತ್ಮನು ಅಣುರೂಪದವನು.

1. ಸಣ್ಣವನು - ಅತಿ ಸಣ್ಣ ಪ್ರಮಾಣದವನು. ಎಷ್ಟು ಸಣ್ಣವನೆಂದರೆ, ಅಣುರೂಪದವನೆಂದರೆ ಅದಕ್ಕಿಂತ ಅಣುರೂಪದವನಿಲ್ಲ. ಈ ರೂಪವು ಪರಮ ಸಣ್ಣದು. ಅಂದರೆ ಪರಮಾಣು ರೂಪನು.

2. ಕೋಮಲನು ಎಂದು ಅರ್ಥ ಮಾಡಿದರೆ ಮೃದುವಾದವನು. ಎಷ್ಟು ಕೋಮಲ ಸ್ವಭಾವದವನೆಂದರೆ ಅವನಷ್ಟು ಆರ್ತರಿಂದ ಪ್ರಾರ್ಥಿಸಲ್ಪಟ್ಟಾಗ ಅವನ ಹಾಗೆ ಓಡಿ ಬರುವವರು ಯಾರೂ ಇಲ್ಲ. ನಮ್ಮ ಕೂಗಿಗೆ ಇವನಷ್ಟು ಬೇಗ ಬಂದು ಕಾಪಾಡುವವನು ಯಾರೂ ಇಲ್ಲ. ಅವನ ಮನಸ್ಸು ಬಹಳ ಮೃದು. ಅವನ ದೇಹ ಅತಿ ಕೋಮಲವಾದ್ದು. ಗೋಪಿಕಾಗೀತದಲ್ಲಿ ಹೇಳಿದೆ, ಏನೆಂದರೆ ಶ್ರೀಕೃಷ್ಣನು ಕಾಡಿನಲ್ಲಿ ಹಸುಗಳನ್ನು ಕರೆದುಕೊಂಡು ಹೋಗಿ ಸಾಯಂಕಾಲ ಗೋಧೂಳೀ ಸಮಯದಲ್ಲಿ ಧೂಳಿನಲ್ಲಿ ಬರುತ್ತಾನೆ. ಬೆಳಗಿನಿಂದ ಸಾಯಂಕಾಲದವರೆಗೆ ಕಾಡಿನಲ್ಲಿ ಕಲ್ಲು ಮುಳ್ಳುಗಳಲ್ಲಿ ಓಡಾಡಿ ಬರುತ್ತಾನೆ. ಗೋಪಿಕಾ ಸ್ತ್ರೀಯರು ಶ್ರೀಕೃಷ್ಣನ ಕೋಮಲ ಪಾದಗಳಿಗೆ ಏನು ನೋವು ಆಗುತ್ತದೆಯೋ ಎಂದು ರೋದಿಸಿ, ಸಂಕಟ ಪಟ್ಟು ಅಂದು ಕೊಳ್ಳುವುದೇನೆಂದರೆ, ''ಹೇ ಕೃಷ್ಣನೇ ನಿನ್ನ ಕೋಮಲ ಪಾದಗಳಿಗೆ ಕಲ್ಲು, ಮುಳ್ಳು, ಮಣ್ಣು ಕಣಗಳಿಂದ ಎಷ್ಟು ನೋವು ಆಗಿರುವುದೋ ಏನೋ, ನೀನು ಬಂದ ಮೇಲೆ ನಿನ್ನ ಕೋಮಲ ಪಾದಗಳನ್ನು ನಮ್ಮ ಮೃದುವಾದ ಘನ ಕುಚ ದ್ವಂದ್ವಗಳ ಮೇಲೆ ಜೋಪಾನವಾಗಿರಿಸಿ ನಮ್ಮ ಹಸ್ತಗಳಿಂದ ನೇವರಿಸುತ್ತೇವೆ. ಹೀಗೆ ನೇವರಿಸುವಾಗ ನಮ್ಮ ಹಸ್ತದ ರೇಖೆಗಳ ಆಳ, ಉಬ್ಬು, ತಗ್ಗುಗಳಿಂದ ನಿನ್ನ ಕೋಮಲ ಪಾದಗಳಿಗೆ ಎಲ್ಲಿ ನೋವಾಗುತ್ತದೆಯೋ ಎಂಬುದೇ ನಮ್ಮ ಹೆದರಿಕೆ. ಅದನ್ನು ತಡೆದುಕೊಳ್ಳಲು ನಿನಗೆ ಶಕ್ತಿ, ಸಮಾಧಾನ, ತಾಳ್ಮೆಯಿರುತ್ತದೆಯಾ ಏನು ಎಂದು ನಾವು ಯೋಚಿಸುತ್ತಿದ್ದೇವೆ. ಹೇ ಕೃಷ್ಣ, ಕೋಮಲತೆಯಲ್ಲೆಲ್ಲ ಕೋಮಲತೆಯ ಸ್ವರೂಪವೇ, ನಮ್ಮ ಮನಸ್ಸಿನ ಆಳದಲ್ಲಿರುವ ಚಿತ್ತವನ್ನು ನೋಡು. ನಮ್ಮ ಅಳಲನ್ನು ಕೇಳು'' ಎಂದು ರೋಧಿಸುತ್ತಾರೆ ಗೋಪಿಯರು! ''ಸುಕ್ಷೀಣಾಯ ನಮಃ''

ದುರ್ಬಲ ಎಂದು ಅರ್ಥ ಮಾಡಿದರೆ ಭಗವಂತನು ಯಾವಾಗ ದುರ್ಬಲನಾಗುತ್ತಾನೆ ಎಂದು ನಮಗೆ ಪ್ರಶ್ನೆ ಬರುತ್ತದೆ. ಭಕ್ತರಿಗಾಗಿ ಭಗವಂತನು ಏನು ಬೇಕಾದರೂ ಮಾಡುತ್ತಾನೆ. ಈ ಕೃಪಾ ಸಾಗರನಾದವನು ತನ್ನ ಶಕ್ತಿಯನ್ನು, ಬಲವನ್ನು ಗಣನೆಗೆ ತೆಗೆದುಕೊಳ್ಳದೆ ಭಕ್ತನ ಶತ್ರುಗಳ ಹತ್ತಿರ ಹೋಗಿ ಏನಾದರೂ ಆಗಿ ಬೇಡುತ್ತಾನೆ. ಯಾವ ರೂಪವನ್ನಾದರೂ ಹೊಂದಿ ಭಕ್ತರನ್ನು ಕಾಪಾಡುತ್ತಾನೆ. ಇದಕ್ಕೆ ದಶಾವತಾರಗಳೇ ಸಾಕ್ಷಿ.

ಮೊದಲು ವೇದಗಳ ಉದ್ಧಾರಕ್ಕಾಗಿ ಮೀನಾಗಿ ಅನೇಕ ಕಠಿಣ ಕೆಲಸ ಮಾಡುತ್ತಾನೆ. ಮತ್ಸ್ಯಾವತಾರವೇ ದಶಾವತಾರಗಳಲ್ಲಿ ಮೊದಲನೆಯದು.

ನಂತರ ಕೂರ್ಮನಾಗಿ, ಬಲವನ್ನು ಉಪಯೋಗಿಸಿ ಸಮುದ್ರದಲ್ಲಿ ಮಂದರ ಪರ್ವತವನ್ನು ಎತ್ತಿ ಹಿಡಿಯುತ್ತಾನೆ.

ನಂತರ ವರಾಹನಾಗಿ ಹಿರಣ್ಯಾಕ್ಷನನ್ನು ಸಂಹರಿಸುತ್ತಾನೆ.

ನರಸಿಂಹನಾಗಿ ಪ್ರಹ್ಲಾದನಿಗೋಸ್ಕರ ಹಿರಣ್ಯಕಶಿಪುವನ್ನು ಸಂಹರಿಸುತ್ತಾನೆ.

ನಂತರ ಇಂದ್ರನಿಗೋಸ್ಕರ ಬ್ರಾಹ್ಮಣ ವಟುವಾಗಿ ಬಲಿಯನ್ನು ಮೂರಡಿ ನೆಲವನ್ನು ಬೇಡುತ್ತಾನೆ. ಬಲಿಯನ್ನು ಹಾಗೆಯೇ ಸಂಹರಿಸಲು ಸಾಧ್ಯವಿರಲಿಲ್ಲವೇ. ಆದರೆ ಯುಕ್ತಿಯಿಂದ ವಟುವಾಗಿ ಬೇಡಿ ದುರ್ಬಲನಂತೆ ಪ್ರಕಟವಾಗುತ್ತಾನೆ.

ಇಂತಹ ನಿದರ್ಶನಗಳು ಎಷ್ಟೋ? ಸುಕ್ಷೀಣಾಯ ನಮಃ.

**56.** ಸುಭಿಕ್ಷಾಯ ನಮಃ

ಸುಭಿಕ್ಷನು ಎಂದರೆ ಎಲ್ಲದರಲ್ಲಿಯೂ ಸಮೃದ್ಧನು, ಹೇರಳವಾಗಿರುವವನು. ಪರಮಾತ್ಮನ ಹತ್ತಿರ ಇಲ್ಲದ್ದು ಯಾವುದೂ ಇಲ್ಲ. ಕೇಳಿದ್ದನ್ನು ಕೊಟ್ಟೇ ಕೊಡುತ್ತಾನ. ವರಗಳನ್ನು ತತ್‌ಕ್ಷಣದಲ್ಲಿ ಕೊಡುವುದರಲ್ಲಿ ಬ್ರಹ್ಮ ದೇವರು ಹೆಚ್ಚು ಪ್ರಸಿದ್ಧಿ. ಅದರಲ್ಲೂ ಶಿವನು ಕ್ಷಿಪ್ರ ಪ್ರಸಾದ ನೀಡುವವನು, ಆಶುತೋಷನು ಆಸೆಗಳನ್ನು ಕೊಡುವವನು, ಸಂತೋಷ ಪಡಿಸುವವನು. ಪರಮಾತ್ಮನ ಹತ್ತಿರ ಇಲ್ಲದ ವರಗಳೇ ಇಲ್ಲ, ಹೇರಳವಾಗಿದೆ. ಆದರೆ ಭಕ್ತನ ಹತ್ತಿರ ಕೇಳುವ ಪ್ರಾರ್ಥನೆಯು ಏನೇ ಆದರೂ ಭಗವಂತನು ನಡೆಸುತ್ತಾನೆ. ಭಕ್ತರಿಗಾಗಿ ಮಾಡದ ಕೆಲಸವಿಲ್ಲ.

ಪುಂಡರೀಕನಿಗಾಗಿ ಇಟ್ಟಿಗೆಯ ಮೇಲೆ ನಿಂದು ಪಾಂಡುರಂಗನು ಮನೆ ಬಾಗಿಲ್ಲಲ್ಲಿ ಕಾಯುತ್ತಾನೆ.

ಪ್ರಹ್ಲಾದನಿಗಾಗಿ ನರಸಿಂಹನು ಹಿರಣ್ಯಕಶಿಪುವಿನ ಸಭಾ ಮಂಟಪದಲ್ಲಿ ಕಂಬದಲ್ಲಿ ಅವತರಿಸುತ್ತಾನೆ.

ಸಮಯಾ ಸಮಯ ನೋಡದೆ ತನ್ನ ಇರುವ ಸ್ಥಿತಿಯನ್ನು ಲೆಕ್ಕಿಸದೆ ಭಕ್ತರಿಗಾಗಿ ಓಡಿ ಬರುತ್ತಾನೆ. ಗಜೇಂದ್ರನನ್ನು ಉದ್ಧರಿಸಲು ತಾನು ಲಕ್ಷ್ಮಿಯೊಡನೆ

ಇದ್ದಾಗ ಅವಳ ಸೆರಗನ್ನು ಹಿಡಿದುಕೊಂಡು ತನ್ನ ಉತ್ತರೀಯವು ಹಾರುವುದನ್ನು ಲೆಕ್ಕಿಸದೆ ಚಕ್ರವನ್ನು ಹಿಡಿದು ಓಡಿ ಬರುತ್ತಾನೆ.

ತನ್ನ ಗುರಿಯನ್ನು ತಲುಪಲು ಅನೇಕ ಅವತಾರ ಎತ್ತುತ್ತಾನೆ.

ಜೀವಕೋಟಿಯು ಏನೇನನ್ನು ಪ್ರಾರ್ಥಿಸಿದರೂ ಅದನ್ನು ಕೊಡುತ್ತಾನೆ.

ಹೀಗಾದರೂ ಭಕ್ತರ ಸಂಖ್ಯೆಯು ಕಡಿಮೆಯಾಗುವುದಿಲ್ಲ. ಭಗವಂತನನ್ನು ಬೇಡುವ ಪ್ರಾರ್ಥನೆಯು ಕಡಿಮೆಯಾಗುವುದಿಲ್ಲ. ಇಷ್ಟ ವರಗಳನ್ನು ಕೊಟ್ಟರೂ, ಕೊಡುತ್ತಿದ್ದರೂ ಕೊಡುವುದಿದ್ದರೂ ಅವನು ನಿರಂತರ ಸುಭಿಕ್ಷನಾಗಿ ಇದ್ದೇ ಇದ್ದಾನೆ. ಇದೇ ಅವನ ಸೃಷ್ಟಿಯ ವಿಚಿತ್ರ, ವಿಶೇಷ. ಸದಾ ತನ್ನ ಹಸ್ತಗಳನ್ನೇ ಭಕ್ತರು ನೋಡಿ ನಂಬಲು ಒಂದು ಅಭಯ ಹಸ್ತ ಮತ್ತು ಇನ್ನೊಂದು ವರದ ಹಸ್ತವೇ ಭಕ್ತರ ಕಣ್ಣಿಗೆ ಮೊದಲು ಬೀಳುವ ಹಾಗೆ ಇಟ್ಟು ತೋರಿಸುತ್ತಿದ್ದಾನೆ. ಇದಕ್ಕಿಂತ ಬೇರೆಯದು ಬೇಕೆ? ಇವನನ್ನು ಯಾವ ರೀತಿಯಲ್ಲಿಯಾದರೂ ಹತ್ತಿರ ಹತ್ತಿರ ಹೋಲುವ ಯಾವ ಬಂದು ಬಳಗ ಇದ್ದಾರೆ! ಅತಿ ಹತ್ತಿರದ ದಾರಾ ಪುತ್ರರು ಸಹ ಸಮಯ ಸಾಧಕರು. ನಮ್ಮ ಹತ್ತಿರ ಅವರಿಗೆ ಪ್ರಿಯವಾದ ವಸ್ತುವಿರುವವರೆಗೆ ನಮ್ಮಲ್ಲಿ ಆಸಕ್ತರು, ಇಲ್ಲದಿದ್ದರೆ ಬಿಟ್ಟು ಬಿಡುತ್ತಾರೆ. ಆದರೆ ಪರಮಾತ್ಮನು ಎಂದೆಂದೂ ಕೈ ಬಿಡುವುದಿಲ್ಲ. ಅವನಷ್ಟು ಸುಭಿಕ್ಷನಾದವನು ಕಲ್ಪವೃಕ್ಷ ಬೇರೆ ಇಲ್ಲ ಅದಕ್ಕೇನೆ ಸುಭಿಕ್ಷಾಯ ನಮಃ ಎನ್ನುತ್ತೇವೆ.

## 57. ಸೂರ್ಯಾಧ್ಯಕ್ಷಾಯ ನಮಃ

ಸೂರ್ಯ - ಅಧ್ಯಕ್ಷಾಯ ನಮಃ

ಸೂರ್ಯನು ಅಧ್ಯಕ್ಷನು, ಸಕಲ ಭುವನಕ್ಕೂ, ನಕ್ಷತ್ರ, ಗ್ರಹ, ತಾರಾ ಮಂಡಲ, ಚಂದ್ರ ಮಂಡಲಕ್ಕೂ ಸೂರ್ಯನೇ ಅಧ್ಯಕ್ಷನು. ಸೂರ್ಯನನ್ನು ಕ್ರೇಂದ್ರವಾಗಿರಿಸಿಕೊಂಡು ಎಲ್ಲ ಗ್ರಹಗಳು, ಚಂದ್ರ,ಭೂಮಂಡಲಗಳು ಅವನ ಸುತ್ತಲೂ ಎಡಬಿಡದೆ ತಿರುಗುತ್ತಿರುತ್ತವೆ. ಈ ಚಲನೆ ತನ್ನ ಫಥದಿಂದ ಸ್ವಲ್ಪವೂ ವ್ಯತ್ಯಾಸವಾಗುವುದಿಲ್ಲ. ಸೂರ್ಯ ಚಂದ್ರರಿರುವವರೆಗೂ, ಅಷ್ಟೇಕೆ ಸೃಷ್ಟಿ ಚಕ್ರ ಇರುವವರೆಗೂ ಎಡಬಿಡದೆ ನಿರಂತರ ನಡೆಯುತ್ತಿರುತ್ತದೆ. ಅದರಿಂದ ಸೂರ್ಯನೇ ಇದಕ್ಕೆ ಕೇಂದ್ರ. ಸೂರ್ಯನೇ ಅಧ್ಯಕ್ಷನು, ಸೂರ್ಯನೇ ಭಗವಂತನು. ಸೂರ್ಯ ಭಗವಾನ್, ಅದರಿಂದ ಸೂರ್ಯಾಧ್ಯಕ್ಷಾಯ ನಮಃ ಎಂದಿದೆ. ಚಲನೆಯ ಮೇಲೆ ಈ ಹೆಸರು ಇದೆ. ಮತ್ತೆ,

ಸಕಲ ಸೃಷ್ಟಿಗೂ ಸೂರ್ಯನೇ ಬೆಳಕನ್ನು ನೀಡುವವನು. ಹಗಲು ರಾತ್ರಿ ಆಗುವಂತೆ ಮಾಡುವವನು. ಇವನ ಕಿರಣಗಳಿಂದ ಪ್ರಪಂಚದಲ್ಲಿ ಎಲ್ಲ ವಸ್ತುಗಳೂ ತಮ್ಮ ಹುಟ್ಟಿನಿಂದ ಅಳಿವಿನವರೆಗೆ ತಮ್ಮ ತಮ್ಮ ಜೀವನವನ್ನು ನಡೆಸುತ್ತವೆ. ಸಕಲ ಚರಾಚರ ವಸ್ತುವಿನ ಬದುಕುಗಳಿಗೆ ಸೂರ್ಯನೇ ಕಾರಣ.

ತನ್ನ ಬೆಳಕಿನಿಂದ ಎಲ್ಲವನ್ನು ನಿರ್ದಿಷ್ಟ ರೀತಿಯಲ್ಲಿ ಪರಿವರ್ತಿಸಿ ಕೊನೆಗೆ ಅವಸಾನ ಮಾಡುತ್ತಾನೆ. ಇದರಿಂದಲೂ ಸೂರ್ಯನಿಗೆ ಸೂರ್ಯಾಧ್ಯಕ್ಷಾಯ ನಮಃ ಎಂದು ನಮಸ್ಕರಿಸುತ್ತೇವೆ. ಅಧ್ಯಕ್ಷನಾದವನು ತನ್ನನ್ನು ನಂಬಿದವರಿಗೆಲ್ಲ ಅವರಿಗಿಂತ ಎಲ್ಲ ರೀತಿಯಲ್ಲಿಯೂ ಮೇಲಾಗಿರಬೇಕು. ಸೂರ್ಯ ಭಗವಂತನು ಸಕಲ ವಸ್ತುವಿಗೂ, ಸರ್ವ ಗ್ರಹಗಳಿಗೂ ಅಧಿಪತಿ, ''ಗ್ರಹಾಣಾಂ ಆಧಿಪತಿ''. ಎಲ್ಲ ದೇವತೆಗಳಿಗೂ ಕಿರೀಟ ಪ್ರಾಯಸು, ಅದರಿಂದಲೇ ಅಧ್ಯಕ್ಷನೆಂದು ಹೇಳುವುದು.

ಸೂರ್ಯನು ಸಹ ಭಗವಂತನ (ದೇಹದ) ವಿರಾಟ್ ಸ್ವರೂಪದ ಚಕ್ಷು, ''ಚಕ್ಷೋಃ ಸೂರ್ಯೋಃ ಅಜಾಯತ'' ಎಂದು ಪುರುಷ ಸೂಕ್ತದಲ್ಲಿ ಬರುತ್ತದೆ.

ಯಾವ ಪ್ರತಿಜ್ಞೆಗೂ ಸೂರ್ಯನನ್ನು ಚಂದ್ರನನ್ನು ಸಾಕ್ಷಿಯಾಗಿ ಕರೆದು ಆಚಂದ್ರಾರ್ಕ ಪ್ರತಿಜ್ಞೆ ಎಂದು ಹೇಳುತ್ತೇವೆ.

ಸೂರ್ಯನ ಕಿರಣಗಳಿಂದ ಸಮುದ್ರದ ನೀರು ಆವಿಯಾಗಿ, ಮೋಡವಾಗಿ ನಂತರ ಮಳೆ ಕರೆಯುತ್ತದೆ. ಅದರಿಂದ ಭೂಮಿಯಲ್ಲಿ ಸಸ್ಯಗಳು ವರ್ಧಿಸಿ ಆಹಾರವನ್ನು ಕೊಡುತ್ತವೆ. ಇದನ್ನು ದೇವತೆಗಳಿಗೆ ಯಜ್ಞ ಯಾಗಾದಿಗಳಲ್ಲಿ ಹವ್ಯವಾಗಿ ಮನುಷ್ಯರು ಅರ್ಪಿಸುತ್ತಾರೆ. ಇದರಿಂದ ತೃಪ್ತರಾದ ದೇವತೆಗಳು ಮಳೆ ಕರೆಯುತ್ತಾರೆ. ಈ ರೀತಿ ಪ್ರಪಂಚವು ನಡೆಯುತ್ತಿದೆ. ಎಂದರೆ ಪ್ರಪಂಚದ ಎಲ್ಲ ಆಗು ಹೋಗುಗಳಿಗೂ ಮುಂದುವರಿಯುವುದಕ್ಕೂ ಸೃಷ್ಟಿ, ಸ್ಥಿತಿ, ಲಯಗಳಿಗೂ ಸಹ ಸೂರ್ಯನೇ ಕಾರಣನು, ಇದು ಪರಮಾತ್ಮನ ಸಂಕಲ್ಪ. ಅದರಿಂದಲೇ ಸೂರ್ಯಾಧ್ಯಕ್ಷಾಯ ನಮಃ ಎನ್ನುವುದು.

58. **ಶಾಲಿನೇ ನಮಃ**

ಶಾಲಿ - ಎಂದಾಗ ಧಾನ್ಯ.

ಶಾಲಿನ್ - ಸಂಪನ್ನಯುಕ್ತ, ಕೂಡಿದ ಎಂದಾಗುತ್ತದೆ.

ಪರಮಾತ್ಮನು ಅನ್ನಸ್ವರೂಪನೇ, ಸಕಲ ಜೀವಿಗಳಿಗೂ ಅನ್ನ ಸ್ವರೂಪನಾಗಿ ಎಲ್ಲದರ ಜಠರದಲ್ಲಿ ಜಠರಾಗ್ನಿಯಾಗಿ ಪಚನ ಮಾಡುತ್ತಾನೆ. ಎಲ್ಲವೂ ಅವನೇ, ಧಾನ್ಯವೂ ಅವನೇ, ಅನ್ನವೂ ಅವನೇ. ಭೋಕ್ತಾರ, ಭೋಕ್ತೃ ಅವನೇ. ಸರ್ವವೂ ಪರಮಾತ್ಮಮಯ. ಅದರಿಂದ ಶಾಲಿನೇ ನಮಃ ಎನ್ನುತ್ತೇವೆ.

ಸಕಲ ಗುಣಗಳಿಂದ, ಶಕ್ತಿಯಿಂದ ಕೂಡಿದವನು ಎಂದಾಗ ಅವನು ಎಲ್ಲಕ್ಕೂ ನಿಧಿ ಸ್ವರೂಪನು, ಎಲ್ಲವನ್ನು ತನ್ನಲ್ಲಿ ಅಡಗಿಸಿಕೊಂಡವನು, ಹೆಚ್ಚೇಕೆ. ಸಕಲ ಜೀವ ಕೋಟಿಯನ್ನು ತನ್ನ ದೇಹದಿಂದ ಹೊರ ಹೊಮ್ಮಿಸಿ, ಸಂಸಾರ ಸಾಗರದಲ್ಲಿ ತಳ್ಳಿ ನಂತರ ತನ್ನೊಳಗೆ ಐಕ್ಯಮಾಡುವವನು ಅವನೇ, ಎಲ್ಲದರ ಯುಕ್ತನಾದ, ಕೂಡಿದವನಾದ್ದರಿಂದ ಶಾಲಿನೇ ನಮಃ ಎಂದು ನಮಸ್ಕರಿಸುತ್ತೇವೆ.

*ಧರ್ಮಾಧ್ಯಕ್ಷಾಯ ಧರ್ಮಾಯ ಲೋಕಾಧ್ಯಕ್ಷಾಯ ವೈ ನಮಃ ।*
*ಪ್ರಜಾಧ್ಯಕ್ಷಾಯ ಸ್ವಕ್ಷಾಯಾವಿಪಕ್ಷಾಯ ಸುಮೂರ್ತಯೇ ॥42॥*
*(259-265)*

**59. ಧರ್ಮಾಧ್ಯಕ್ಷಾಯ ನಮಃ**

ಧರ್ಮಾಧ್ಯಕ್ಷ - ಎಂದರೆ (1) ಧರ್ಮಗಳಿಗೆ ಅಧ್ಯಕ್ಷನು, (2) ಧರ್ಮವನ್ನು ಆಚರಿಸುವ ಅಧ್ಯಕ್ಷನು.

ಧರ್ಮಗಳಿಗೆ ಅಧ್ಯಕ್ಷನು, ಎಂದರೆ ಸಕಲ ಧರ್ಮಗಳಿಗೂ ಸೂತ್ರಧಾರನು. ಎಲ್ಲವನ್ನು ವಿವೇಚಿಸಿ ತನ್ನ ತೀರ್ಮಾನಗಳನ್ನು ಕೊಡುವವನು. ಸಕಲ ಧರ್ಮಗಳಿಗೂ ದಾರಿ ತೋರುವ ದೀಪನು. ವಿವಾದಗಳು ಧರ್ಮಗಳನ್ನು ಆಚರಿಸುವಾಗ ಬಂದರೆ ತೀರ್ಮಾನ ಕೊಡುಪವನು.

ಸ್ವಧರ್ಮ, ಪರಧರ್ಮಗಳಿಗೆ ಜಿಜ್ಞಾಸ ಬರಬಹುದು. ತಾನು ತನ್ನ ಧರ್ಮವನ್ನಾಚರಿಸಲು ಇಚ್ಛಿಸದೆ ಬೇರೆಯವರ ಧರ್ಮವನ್ನು ಆಚರಿಸಲು ಮನ ಬಂದು ತೂಗುಯ್ಯಾಲೆಯಲ್ಲಿರುವಾಗ ಪರಮಾತ್ಮನು "ಸ್ವಧರ್ಮೇ ನಿಧನಂ ಶ್ರೇಯಃ" ಎಂದು ಅರ್ಜುನನಿಗೆ ಗೀತೆಯಲ್ಲಿ ಎಚ್ಚರಿಸುತ್ತಾನೆ. ಧರ್ಮಗಳನ್ನು ವಿಚಾರಿಸಿ ತೀರ್ಮಾನಗಳನ್ನು ಹೇಳುತ್ತಾನೆ. ಇದಕ್ಕಿಂತ ಉತ್ತಮವಾದ ತೀರ್ಮಾನವಿಲ್ಲ. ಆದರಿಂದ ಸಕಲ ಧರ್ಮಗಳನ್ನು ವಿಶ್ಲೇಶಿಸಿ ಇದೇ ಸರಿ ಎಂದು ಹೇಳುವ ಧರ್ಮವೇ ಪರಮಾತ್ಮನ ಧ್ಯೇಯ.

ಧರ್ಮರೂಪದಲ್ಲಿ ಪ್ರತಿ ಸನ್ನಿವೇಶದಲ್ಲಿಯೂ ಸೂತ್ರಧಾರನಾಗಿ ಕೆಲಸ ಮಾಡುತ್ತಾನೆ. ವಿವಾದಕ್ಕೆ ಬರದಂತೆ ನೆಡೆಯುವುದು ಅಧ್ಯಕ್ಷನಾಗಿರುವವನ ಕರ್ತವ್ಯ. ನಮ್ಮ ಬುದ್ಧಿ ಮನಸ್ಸುಗಳು ಯಾವುದು ಸರಿ, ಯಾವುದು ತಪ್ಪು ಎಂಬುದರಲ್ಲಿ ಅನುಮಾನ ಪಡುತ್ತಿರುವಾಗ "ಯೋ ಬುದ್ಧೇಃ ಪರತಸ್ತು ಸಃ" ಎಂದು ಬುದ್ಧಿಗೂ ಮೇಲಾಗಿರುವ ಅವನು ತನ್ನ ನಿರ್ಧಾರದ ಮೂಲಕ ದಾರಿ ತೋರುತ್ತಾನೆ.

*ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।*
*ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥* ಗೀತಾ,

ಈ ರೀತಿ ಪರಮಾತ್ಮನು ಪ್ರತಿ ಜೀವಿಗೂ ಅಧ್ಯಕ್ಷನಾಗಿ ಧರ್ಮದಿಂದ ನಿರಂತರವಾಗಿ ಕೆಲಸ ಮಾಡುತ್ತಾನೆ, ಅಧ್ಯಕ್ಷನಾಗಿರುತ್ತಾನೆ. ಆದರಿಂದ ಅವನೇ ಪ್ರತಿಯೊಬ್ಬರಿಗೂ ಅಂದರೆ ನಮಗೆ ಧರ್ಮಾಧ್ಯಕ್ಷನು.

ಈ ವಿಶಾಲ ಸೃಷ್ಟಿಯು ಒಂದು ನಿಯಮಕ್ಕನುಸಾರವಾಗಿ ಚಾಚೂ ತಪ್ಪದೆ ನಿರಂತರ ನಡೆಯುತ್ತಿದೆ. ಸೃಷ್ಟಿಯಿಂದ ಪ್ರಳಯದವರೆಗೆ ಮತ್ತು ಆನಂತರವೂ

ಸಹ ನಡೆಯುತ್ತದೆ. ಅದರಿಂದಲೇ ಅವನು ಅಧ್ಯಕ್ಷರ ಧರ್ಮವನ್ನು ಆಚರಿಸುವವರಲ್ಲಿ ಅವನಿಗಿಂತ ಉತ್ತಮರಿಲ್ಲ.

ಸೃಷ್ಟಿಯಲ್ಲಿರುವ ಪ್ರತಿ ಚರಾಚರ ವಸ್ತುವೂ ತನ್ನ ತನ್ನ ಸ್ವಂತ ಧರ್ಮವನ್ನನುಸರಿಸಿ ಹುಟ್ಟಿ, ನಿಂತು, ಬದಲಾವಣೆಯನ್ನು ಹೊಂದುತ್ತದೆ. ತನ್ನ ಅಂತ್ಯವನ್ನು ಕಂಡುಕೊಳ್ಳುತ್ತದೆ. ಮರಗಳು, ಗಿಡಗಳು, ಹೂವುಗಳು, ಪ್ರಕೃತಿಯ ಸಕಲ ವಸ್ತುಗಳು, ಪ್ರಾಣಿಗಳು, ಮನುಷ್ಯ, ಜೀವಿಗಳ ಜೀವನ, ಪರಿಸರ ಇತ್ಯಾದಿ ಪ್ರತಿಯೊಂದಕ್ಕೂ ಅದದರ ಜೀವನ, ಜೀವನದ ಮೊದಲಿಂದ ನಾಶದವರೆಗೆ, ಒಂದೊಂದು ವರ್ಗಕ್ಕೆ ಅದದರ ಜೀವನದ ಬದಲಾವಣೆಗಳು ನಡೆಯುತ್ತವೆ. ಏನೂ ತೊಂದರೆ ಇಲ್ಲದೆ ಇನ್ನು ಅನೂಚಾನವಾಗಿ ನಡೆದುಕೊಂಡು ಹೋಗುತ್ತದೆ. ಇದೇ ಅವುಗಳ ಧರ್ಮ, ಈ ಧರ್ಮಗಳನ್ನು ನಡೆಸುವವನು - ಧರ್ಮಾಧ್ಯಕ್ಷನು, ಅವನಿಗೆ ನಮಸ್ಕಾರಗಳು.

60. ಧರ್ಮಾಯ ನಮಃ

ಧರ್ಮ ಮೂರ್ತಿಯಾದ ಪರಮಾತ್ಮನಿಗೆ ನಮಸ್ಕಾರಗಳು.

ಪರಮಾತ್ಮನಲ್ಲಿ ಸಕಲ ಧರ್ಮಗಳೂ ನಿಂತಿವೆ, ಅವನಿಂದಲೇ ಹೊರ ಹೊಮ್ಮುತ್ತದೆ, ಅವನಲ್ಲಿಯೇ ಲೀನವಾಗುತ್ತವೆ. ಇವನ ರೋಮ ರೋಮಗಳಲ್ಲಿಯೂ ಎಲ್ಲೆಲ್ಲಿಯೂ ಧರ್ಮವೇ ಧರ್ಮ.

ಧರ್ಮವೇ ಇವನು ಎಲ್ಲೆಲ್ಲಿ ಯಾವ ಯಾವುದರಲ್ಲಿ ಇದೇ ರೀತಿ ನಡೆಯಬೇಕೆಂದು ಹೇಳುತ್ತೇವೆಯೋ ಅದೇ ಧರ್ಮ. ಉದಾ, ಅಗ್ನಿಯ ಧರ್ಮ ಸುಡುವುದು, ಶಾಖವಾಗಿರುವುದು. ಸೂರ್ಯನ ಧರ್ಮ ಬಿಸಿಯ ಕಿರಣಗಳನ್ನು ಹೊರಡಿಸುವುದು. ಮಲ್ಲಿಗೆಯ ಗಿಡದ ಧರ್ಮ ಮಲ್ಲಿಗೆ ಹೂವನ್ನು ಕೊಡುವುದು. ಪ್ರಾಣಿಗಳ ಧರ್ಮ ಆಯಾ ಪ್ರಾಣಿಗಳಲ್ಲಿಗೆ ಅದದೇ ಆದ ಮರಿಗಳಿಗೆ ಜನ್ಮ ಕೊಡುವುದು, ಹೀಗೆ ನಮ್ಮ ಜ್ಞಾನವನ್ನು ಬೆಳೆಸಬಹುದು.

ಪರಮಾತ್ಮನ ಧರ್ಮ, ಭಕ್ತ ಪರಿಪಾಲನೆ, ದುಷ್ಟರ ಶಿಕ್ಷಣ. ರಾಜನ ಧರ್ಮ ರಾಜ್ಯವಾಳುವುದು. ಬ್ರಾಹ್ಮಣನ ಧರ್ಮ, ವೇದವನ್ನು ತಿಳಿಯುವುದು ಇತಿ ಆದಿ, ಮನ ವು ಧರ್ಮ ಶಾಸ್ತ್ರವನ್ನು ಬರೆದಿದ್ದಾನೆ. ಹಾಗೆ ಪ್ರತಿ ಧರ್ಮಗಳನ್ನು ಹೀಗೆಯೇ ಇರಬೇಕೆಂದು ನಿರ್ದೇಶಿಸುವುದು ಪರಮಾತ್ಮನ ಧರ್ಮ. ಅದರಿಂದಲೇ ಅವನಿಗೆ ಧರ್ಮಾಯ ನಮಃ ಎಂದು ನಮಸ್ಕರಿಸುತ್ತೇವೆ.

ಸಕಲ ಸೃಷ್ಟಿಯನ್ನು ವಿಭಾಗಿಸಿ ನಡೆಸುವುದೇ ಪರಮಾತ್ಮನ ಧರ್ಮ. ಪ್ರತಿಯೊಂದು ತನ್ನ ಧರ್ಮದಲ್ಲಿ ಪ್ರವರ್ತಿಸುವಂತೆ ಮಾಡುವುದೇ ಪರಮಾತ್ಮನ ಧರ್ಮ.

ಯಾವಾಗ ಧರ್ಮವು ಅತಿಕ್ರಮಿಸಿ ಅಲ್ಲೋಲ ಕಲ್ಲೋಲವಾಗುವುದೋ

ಆಗ ಅವನೇ ಬಂದು ರೂಪ ಧರಿಸಿ ಅಧರ್ಮವನ್ನು ಹೋಗಿಸಿ ಧರ್ಮವನ್ನು ಸ್ಥಾಪಿಸುತ್ತಾನೆ.

*ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।*
*ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥*
ಎಂದು ಗೀತೆಯಲ್ಲಿ ಹೇಳಿದ್ದಾನೆ.

*ಪರಿತ್ರಾಣಾಯ ಸಾಧೂನಂ ವಿನಾಶಾಯ ಚ ದುಷ್ಕೃತಾಮ್ ।*
*ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥*
ಎಂದಿದ್ದಾನೆ ಪರಮಾತ್ಮ.

ಧರ್ಮವನ್ನು ರಕ್ಷಿಸುವುದು ಪರಮಾತ್ಮನ ಧ್ಯೇಯ. ನಾವು ಧರ್ಮದಲ್ಲಿ ನಡೆಯುವುದು ನಮ್ಮ ಕರ್ತವ್ಯ, ''ಧರ್ಮೋ ರಕ್ಷತಿ ರಕ್ಷಿತಃ'', ನಾವೂ ಸಹ ಧರ್ಮವೇ ಆಗುತ್ತೇವೆ - ಯಾವಾಗ ಅದನ್ನು ಶಿರಸಾವಹಿಸಿ ಪಾಲಿಸಿದಾಗ - ಅಂದರೆ ನಾವೇ ಧರ್ಮವಾಗುತ್ತೇವೆ. ಇದಕ್ಕಾಗಿ ಇತರರು ನಮ್ಮನ್ನು ಅನುಸರಿಸುತ್ತಾರೆ, ಗೌರವಿಸುತ್ತಾರೆ. ನಮಗೇ ಧರ್ಮಾಯ ನಮಃ ಎನ್ನುತ್ತಾರೆ. ಇಂತಹ ಸ್ಥಿತಿಗೆ ಬರುವುದೇ ನಮ್ಮ ಗುರಿಯಾಗಿರಬೇಕು.

### 61. ರೋಗಾಧ್ಯಕ್ಷಾಯ ನಮಃ

ಸಕಲ ರೋಗಗಳಿಗೂ ಅಧ್ಯಕ್ಷನು ಪರಮಾತ್ಮ, ರೋಗಗಳು ಉದ್ಭವವಾದ್ದು ಹೀಗೆ -

ಪ್ರಜಾ ಸೃಷ್ಟಿಯು ನಿರಂತರವಾಗಿ ಆಗುತ್ತಿರಲು ಸಕಲ ಭುವನವೆಲ್ಲ ತುಂಬಿ ಹೋಯಿತು, ಆಗ ಸಂಹಾರ ಮಾಡಲು ಪರಮಾತ್ಮನು ಯೋಚಿಸಿದನು. ನಂತರ ಮೃತ್ಯು ದೇವತೆಯನ್ನು ಸೃಷ್ಟಿಮಾಡಿ ಪ್ರಜೆಗಳ ಸಂಹಾರ ಮಾಡಲು ಹೇಳಿದನು. ಆ ದೇವತೆಯು ಈ ಕ್ರೂರ ಕಾರ್ಯ ಮಾಡಲು ಹೆದರಿ (ಅಂದರೆ ಅದರಿಂದಾಗಬಹುದಾದ ಪಾಪ ಸಂಘಟನೆ, ಶಾಪ ಮುಂತಾದುವುಗಳಿಗೆ ಹೆದರಿ) ಕಣ್ಣೀರು ಹಾಕಿದಳು. ಪರಮಾತ್ಮನು ಯೋಚಿಸಿ ಹೇ ಮೃತ್ಯು ದೇವತೆಯೇ ಹೆದರಬೇಡ, ನಿನ್ನ ಕಣ್ಣಿನಿಂದ ಬರುವ ತೊಟ್ಟು ಕಣ್ಣೀರುಗಳೇ ಲೋಕಕ್ಕೆ ರೋಗ ರುಜಿನಗಳಾಗಲಿ. ಅವುಗಳು ಜೀವಿಗಳ ದೇಹದ ಮೇಲೆ ಬಂದು ಕಾರಣಾಂತರದಿಂದ ಜೀವಿಗಳನ್ನು ದೇಹದಿಂದ ಬೇರ್ಪಡಿಸುತ್ತವೆ. ಆಗ ಉಳಿದ ಜೀವಿಗಳು ರೋಗ ರುಜಿನ ಇತ್ಯಾದಿಗಳಿಂದ ಮೃತರಾದರೆಂದು ತಿಳಿಯುತ್ತಾರೆ ಮತ್ತು ಪ್ರಚಾರ ಮಾಡುತ್ತಾರೆ. ಆಗ ಮೃತ್ಯು ದೇವತೆಯು ಆ ಜೀವಿಯ ದೇಹದ ಬೇರ್ಪಡುವಿಕೆಗೆ ಕಾರಣಳಾಗುವುದಿಲ್ಲ. ಯಾವ ರೀತಿಯಲ್ಲಿಯೂ ದೋಷಾರೋಪಣೆ ಅವಳಿಗೆ ಬರುವುದಿಲ್ಲ ಎಂದು ಪರಮಾತ್ಮನು ಮೃತ್ಯು

ದೇವತೆಗೆ ಹೇಳಿ ಒಪ್ಪಿಸಿ ಆ ಕಾರ್ಯಕ್ಕೆ ಅವಳನ್ನು ನಿಯಮಿಸಿದನು. ಅದರಿಂದ ಈ ದೇವತೆಯೇ ರೋಗಾಧ್ಯಕ್ಷಳು, ಪರಮಾತ್ಮನಿಂದಲೇ ಅವನ ಅಂಶದಿಂದ ಬಂದವಳಾದ್ದರಿಂದ ಪರಮಾತ್ಮನೇ ರೋಗಾಧ್ಯಕ್ಷನು, ಅದರಿಂದ ರೋಗಾಧ್ಯಕ್ಷಾಯ ನಮಃ ಎಂದು ನಮಸ್ಕರಿಸುತ್ತೇವೆ.

ರೋಗಗಳು ಬರುವುದು ದೇಹಕ್ಕೆ, ನಾನು ಎಂಬ ಅಹಂಗೆ ಅಲ್ಲ. ಇಲ್ಲಿ ಎಲ್ಲರೂ ಆತ್ಮದ ಜೊತೆಗೆ ಸನಾತನ ಕಾಲದಿಂದ ಬರುತ್ತಿರುವ ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು (ಇವುಗಳು ಅಧಿದೇವತೆಗಳಿಗೆ ಜೊತೆಯಲ್ಲಿಯೇ ಇರುತ್ತವೆ), ಪಂಚ ಪ್ರಾಣಗಳು ಸಹ ಜೊತೆಯಲ್ಲಿಯೇ ಇರುತ್ತವೆ. ಪಂಚ ಭೂತಗಳಿಂದ ಕೂಡಿ ಆದ ದೇಹ ಮಾತ್ರ ಸೃಷ್ಟಿಯ ಮೊದಲಿಂದ ಜೀವವು ಪರಮಾತ್ಮನನ್ನು ಸೇರುವವರೆಗೆ ಬೇರೆ ಬೇರೆಯಾಗಿ ಜೀವಿಯ ಕರ್ಮಾನುಸಾರವಾಗಿ ಬದಲಾಯಿಸುತ್ತಿರುತ್ತವೆ. ಈ 25 ಮಾತ್ರ ಒಂದು ಗೊಂಪಿನಂತೆ ನಡೆಯುತ್ತಿರುತ್ತವೆ. ಇವೆಲ್ಲದರಲ್ಲಿ ಆತ್ಮನೇ ಅಧ್ಯಕ್ಷನು. ಸಾಕ್ಷೀಭೂತನಾಗಿ ಇರುತ್ತಾನೆ. ಉಳಿದವುಗಳು ಪ್ರಪಂಚದಲ್ಲಿ ಪರಮಾತ್ಮನ ಸೃಷ್ಟಿಯ ಮಹತ್ತತ್ವ, ಪಂಚಮಹಾಭೂತಗಳಿಂದ ಪೃಥವಿ, ಆಪಃ, ತೇಜಸ್ಸು, ವಾಯು, ಆಕಾಶಗಳ ಪರಿವರ್ತನೆಯಿಂದ ಸಂಪರ್ಕದ ಕಾರಣ ( ವಿಶಯ ಸುಖಗಳು, ಮಾಯೆಯ ಸಂಪರ್ಕದಿಂದ) ಅನೇಕ ಕರ್ಮ ಫಲಗಳನ್ನು ಅಂಟಿಸಿಕೊಳ್ಳುತ್ತದೆ. ಈ ಅಂಟು ಸಂಸ್ಕಾರವೆಂದು ಹೇಳಲ್ಪಟ್ಟು ಪೂರ್ವಜನ್ಮಕೃತ ಎಂದು ಹೇಳುತ್ತೇವೆ. ಪ್ರತಿಯೊಂದು ಜೀವಿಗೂ ಈ ಸಂಸ್ಕಾರ, ಕರ್ಮಫಲ ಬಂದೇ ಬರುತ್ತದೆ. ಇದನ್ನು ಆಗಮ, ಸಂಚಿತ, ಪ್ರಾರಬ್ಧ ಎನ್ನುತ್ತೇವೆ. ಸಂಚಿತ ಎಂದರೆ ಸಂಪಾದಿಸಿ ಕೂಡಿಡುವುದು, ಪ್ರಾರಬ್ಧ ಎಂದರೆ ಹಿಂದೆ ಗಳಿಸಿದ್ದ ಕರ್ಮಫಲ ಅನುಭವಿಸಲು ಆರಂಭವಾದದ್ದು, ಆಗಮ ಎಂದರೆ ಮುಂದೆ ಬಂದು ಶೇಖರಿಸಲ್ಪಡುವಂತಹದು. ಈ ರೀತಿ ದೇಹದಿಂದ ದೇಹಗಳಿಗೆ ಜೀವವು ಹೋಗಿ ಅನುಭವಿಸುತ್ತದೆ. ಈ ಕರ್ಮ ಫಲವೇ ನಮಗೆ ದ್ವಂದ್ವಗಳಾದ ಸುಖ, ದುಃಖ, ಲಾಭ ನಷ್ಟ, ಜಯ ಅಪಜಯ ಮುಂತಾಗಿ ಬರುತ್ತದೆ.

ಇವು ರೋಗ ರುಜಿನಗಳಾಗಿ ಪರಿಣಮಿಸಿ ದುಃಖವನ್ನು ಕೊಡುತ್ತವೆ.

ರೋಗಗಳು (ಮನಸ್ಸು, ಮಾತು, ದೇಹ) ಕಾಯ ವಾಚ ಮನಸ್ಸುಗಳಿಗೆ ಬರುತ್ತದೆ. ದೇಹದ ರೋಗಗಳು ದೈಹಿಕವೆಂದು ಆಗುತ್ತದೆ. ಮನಸ್ಸಿಗೆ ಬಂದದ್ದು ಮನೋರೋಗವೆಂದಾಗುತ್ತದೆ. ಮಾತಿಗೆ ಸಂಬಂಧ ಪಟ್ಟಿದ್ದು ವಿಕೃತಮಾತುಗಳಾಗಿ ಪರಿಣಮಿಸುತ್ತವೆ. ಇವುಗಳಿಗೆ ಪ್ರಾಪಂಚಿಕ ವೈದ್ಯರು ಕಾರಣರೂಪ, ಆದರೆ ಭವರೋಗ ವೈದ್ಯನೇ ಸಾಕ್ಷಾತ್ ವೈದ್ಯನಾಥ ಸ್ವಾಮಿ. ಇವನಿಗಿಂತ ಉತ್ತಮ ವೈದ್ಯರಿಲ್ಲ. ಯಾವ ರೀತಿ ಇವನನ್ನು ಮೊರೆ ಹೊಕ್ಕರೂ ಇವನು ಬಂದು

ಗುಣಮಾಡುತ್ತಾನೆ. ರೋಗಗಳಿಗೆ ಅಧ್ಯಕ್ಷನಾಗಿರುವುದರಿಂದ ಇವನು ಗುಣಪಡಿಸಲು ಬಂದು ಸರಿ ಮಾಡುವುದರಲ್ಲಿ ಅನುಮಾನ ಬೇಕಾಗಿಲ್ಲ. ಅದರಿಂದ ನಾವು ಇವನಿಗೆ ರೋಗಾಧ್ಯಕ್ಷಾಯ ನಮಃ ಎಂದು ನಮಸ್ಕಾರ ಮಾಡಿ ದೈಹಿಕ, ಮಾನಸಿಕ ಮತ್ತು ಮಾತುಗಳಿಗೆ ಶಾಂತಿ ಸಾಮ್ರಾಜ್ಯವನ್ನು ಪಡೆಯುತ್ತೇವೆ. ರೋಗಾಧ್ಯಕ್ಷನಾದ ಪರಮಾತ್ಮನಿಗೆ ಜಯವಾಗಲಿ.

62. ಪ್ರಜಾಧ್ಯಕ್ಷಾಯ ನಮಃ

ಪ್ರಜಾ - ಪ್ರಜೆಗಳಿಗೆ, ಅಧ್ಯಕ್ಷನು - ಉತ್ತಮ ದಾರಿ ತೋರಿಸುವವನು, ಪ್ರಜೆಗಳ ಮೇಲೆ ಅಧಿಕಾರ ನಡೆಸುವವನು.

ಪ್ರಜಾ - ಎಂದರೆ ಜನ್ಮ, ಸಂತತಿ, ಪ್ರಜೆಗಳು, ವಂಶಜರು.

ಸಂತತಿಯನ್ನು ಮುಂದುವರಿಸುವುದಕ್ಕೆ ಕಾರಣ ಭೂತನಾದವನು, ಇವನ ಕೃಪೆಯಿಂದ ಸಂತತಿಯು ಮುಂದುವರಿಯುತ್ತದೆ. ಜೀವ ಕೋಟಿಗೆ ಕೋಟ್ಯಾಂತರ ಜನ್ಮಗಳನ್ನು ಕೊಡುವವನು. ಅವವುಗಳು ಕರ್ಮ ಮಾಡುವುದರಲ್ಲಿ ಪ್ರಚೋದಿಸುತ್ತಾನೆ. ಜೀವಿಗಳನ್ನು ಮಾಯಾ ಪ್ರಪಂಚದಲ್ಲಿ ತೊಡಗಿಸಿ ಕರ್ಮಗಳನ್ನು ಮಾಡಿಸುವವನೂ ಅವನೇ. ಈ ಸಂಸಾರ ಸಾಗರದಿಂದ ಬಿಡಿಸುವವನೂ ಅವನೇ. ಸಂಸಾರ ಸಾಗರಕ್ಕೆ ಸೂತ್ರಧಾರನೂ ಇವನೇ. ಸಕಲವೂ ಜಗತ್ತೂ ಸಹ ಇವನ ಆಜ್ಞಾನುಸಾರವಾಗಿ ನಡೆಯುತ್ತದೆ. ''ಮಹಾ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ...'' ಎಂದು ನಾವು ಮಾಡತಕ್ಕ ಕಾರ್ಯಗಳಿಗೆ ಸಮಯ, ಕಾಲ ದೇಶವನ್ನು ನಿರ್ದೇಶಿಸಿ ಸಂಕಲ್ಪಮಾಡುತ್ತೇವೆ. ''ತೇನ ವಿನಾ ತೃಣಮಪಿ ನ ಚಲತಿ'' ಎನ್ನುತ್ತೇವೆ. ಅವನ ಇಚ್ಛೆಯಿಲ್ಲದೆ ಒಂದು ಹುಲ್ಲೂ ಸಹ ಕದಲುವುದಿಲ್ಲ. ಅಂದರೆ ಹುಲ್ಲು ಕದಲುವುದು ಬಹಳ ಚಿಕ್ಕ ಕೆಲಸ, ಅದೂ ಸಹ ಅವನ ಸಂಕಲ್ಪದಂತೆಯೇ ನಡೆಯುತ್ತದೆ.

ಹಾಗೆಯೇ ನಮ್ಮ ಆತ್ಮ - ದೇಹ - ಮನೋಬುದ್ಧಿ - ಅಹಂಕಾರ - ಚಿತ್ತ - ಹತ್ತು ಇಂದ್ರಿಯಗಳು, ಪಂಚ ಪ್ರಾಣಗಳ ಸಮೂಹಕ್ಕೆ ಆತ್ಮನು ಸಾಕ್ಷಿಭೂತ, ಮನೋ ಬುದ್ಧಿಗಳಿಂದ ಎಲ್ಲ ವ್ಯಾಪಾರವನ್ನು ಮಾಯಾ ಜಗತ್ತಿನೊಂದಿಗೆ ಸ್ಪಂದಿಸಿ ನಡೆಸುತ್ತಾನೆ. ಹಾಗೆಂದ ಮೇಲೆ ಆತ್ಮನು ಸಾಕ್ಷಿಭೂತನು. ಬುದ್ಧಿಯನ್ನು ಪರಮಾತ್ಮನು ನಿಯಂತ್ರಿಸಿ ನಡೆಸುತ್ತಾನೆ. ಅದರಿಂದ ಈ ಆತ್ಮ ಸಮೂಹಕ್ಕೂ ಸಹ ಆ ಪರಮಾತ್ಮನೇ ಅಧ್ಯಕ್ಷನಾದ ಹಾಗಾಯಿತು, ಅದರಿಂದ ಅವನೇ ಅಧ್ಯಕ್ಷನು. ಅವನಿಗೆ ನಮಸ್ಕಾರಗಳು.

ಈ ರೀತಿಯಾಗಿ ಪ್ರತಿಯೊಂದು ಆತ್ಮನಿಗೂ ಅವನ ದೇಹೇಂದ್ರಿಯಗಳಿಗೂ ಅವನೇ ಅಧ್ಯಕ್ಷನು.

ಸಕಲ ಸೃಷ್ಟಿಯ ಸಕಲ ಚರಾಚರ ವಸ್ತುಗಳಿಗೂ ಅವನೊಬ್ಬನೇ ಅಧ್ಯಕ್ಷನು.

ಅವನಿಗಿಂತ ಮಿಗಿಲಾದವರು ಯಾರೂ ಇಲ್ಲ. ಎಲ್ಲ ಆತ್ಮಗಳಿಗೂ ವಾಸಸ್ಥಾನನಾಗಿ ಎಲ್ಲದಕ್ಕೂ ನಿಗ್ರಹಾನುಗ್ರಹ ಮಾಡುವ ಅವನು ಪರಮ ಶ್ರೇಷ್ಠನು. ಆದರಿಂದ ಪರಮ ಆತ್ಮನು. ಪ್ರಜಾಧ್ಯಕ್ಷನಾದ ಅವನಿಗೆ ನಮಸ್ಕಾರಗಳು.

63. ಸ್ವಕ್ಷಾಯ ನಮಃ

ಅಕ್ಷ - ಎಂದರೆ ಕಣ್ಣು, ರುದ್ರಾಕ್ಷಿ, ಅಕ್ಷಮಾಲಾ ಎಂದರೆ ರುದ್ರಾಕ್ಷಿಯ ಮಾಲೆ, ರುದ್ರಾಕ್ಷಿಯ ಸರ.

ಒಳ್ಳೆಯ ಕಣ್ಣುಗಳುಳ್ಳವನು, ಒಳ್ಳೆಯ ರುದ್ರಾಕ್ಷಿಯ ಮಾಲೆಯುಳ್ಳವನು.

ಸು - ಅಕ್ಷ = ಸ್ವಕ್ಷನು.

ಪ್ರಪಂಚದಲ್ಲೆಲ್ಲ ಅತ್ಯಂತ ಒಳ್ಳೆಯ ಕಣ್ಣುಗಳುಳ್ಳವನು, ಮನ ಮೋಹಕ ಕಣ್ಣುಗಳುಳ್ಳವನು ಪರಮಾತ್ಮ. ತನ್ನ ಕಣ್ಣಿನ ಕೊನೆಯ ದೃಷ್ಟಿಯಿಂದಲೇ ಅವನು ತನ್ನ ಅಪಾರವಾದ ಕೃಪೆಯನ್ನು ಕರುಣಾಸಿಂಧುವನ್ನು ವರ್ಷಿಸುತ್ತಾನೆ. ಅದಕ್ಕಾಗಿ ಒಳ್ಳೆಯ ಕಣ್ಣುಗಳಿರುವವನಾದ್ದರಿಂದ ಸ್ವಕ್ಷಾಯ ನಮಃ ಎನ್ನುತ್ತೇವೆ.

ರುದ್ರಾಕ್ಷಿ ಮಾಲೆ ಎಂಬ ಅರ್ಥವಾದರೆ ಅವನು ಸಾಲಿಗ್ರಾಮದ ಮಾಲೆಯನ್ನು ರುದ್ರಾಕ್ಷಿ ಮಾಲೆಯನ್ನು ಕೌಸ್ತುಭ ಹಾರವನ್ನು ವನಮಾಲೆಯನ್ನು ಧರಿಸುತ್ತಾನೆ. ರುದ್ರಾಕ್ಷಿ ಮಾಲೆಯನ್ನು ಉತ್ತಮ ರೀತಿಯಲ್ಲಿ ಉಪಯೋಗಿಸುತ್ತಾನೆ. ಆದರಿಂದ ಉತ್ತಮವಾದ ರುದ್ರಾಕ್ಷಿ ಮಾಲೆಯನ್ನು ಧರಿಸಿರುವವನು ಎಂದು ಅರ್ಥ.

ರುದ್ರಾಕ್ಷಿ ಮಣಿಗಳಿಂದ ಮಾಡಿದ ಮಾಲೆಯನ್ನು ಪರಮಾತ್ಮನನ್ನು ಜಪಿಸುವುದಕ್ಕಾಗಿ ಮತ್ತು ನಾಮ ಜಪದ ಸಂಖ್ಯೆಯನ್ನು ಎಣಿಸುವುದಕ್ಕಾಗಿ ಉಪಯೋಗಿಸುತ್ತೇವೆ. ಮಣಿಗಳಲ್ಲೆಲ್ಲ ಶ್ರೇಷ್ಠವಾದ್ದು ರುದ್ರಾಕ್ಷಿ. ಜಪಗಳಲ್ಲೆಲ್ಲ ಶ್ರೇಷ್ಠವಾದುದು ನಾಮ ಜಪ. ಇದಕ್ಕೆ ಉಪಯೋಗಿಸುವ ನಾಮದಲ್ಲಿಯೂ, ರುದ್ರಾಕ್ಷಿಮಣಿಯಲ್ಲಿಯೂ ಪರಮಾತ್ಮನಿರುತ್ತಾನೆ. ಅದರಿಂಧ ಜಪಿಸುವವರಿಗೆ ರುದ್ರಾಕ್ಷಿಯ ಮೂಲಕ ಶಾಂತಿ ಮತ್ತು ಪವಿತ್ರತೆಯನ್ನು ಕೊಡುತ್ತಾನೆ. ಅದಕ್ಕಾಗಿಯೇ ಸ್ವಕ್ಷಾಯ ನಮಃ ಎಂದು ಅವನಿಗೆ ನಮಸ್ಕರಿಸುವುದು.

4. ಅವಿಪಕ್ಷಾಯ ನಮಃ

ಪಕ್ಷ - ವಿಪಕ್ಷ - ಅವಿಪಕ್ಷ.

ಪಕ್ಷ - ಎಂದರೆ ತನ್ನ ಕಡೆಯವರು, ವಿಪಕ್ಷ - ಎಂದರೆ ಎದುರು ಪಕ್ಷದವರು, ಅ - ಎಂದರೆ ಅದು ಇಲ್ಲದವರು.

ಪರಮಾತ್ಮನಿಗೆ ವಿರೋಧಿಗಳೇ ಇಲ್ಲ. ಎಲ್ಲರೂ ಅವನ ಕಡೆಯವರೇ. ಎಲ್ಲರಿಗೂ ತನ್ನ ಅಪಾರ ಪ್ರೇಮ, ಕೃಪೆ, ಕರುಣೆಯನ್ನು ಸಮಾನವಾಗಿ

ಸುರಿಸುತ್ತಿರುವವನಾದ್ದರಿಂದ ಇವನಿಗೆ ಎದುರಾಗಲೂ ಯಾರು ತಾನೇ ನಿಲ್ಲ ಬಲ್ಲರು? ಎಲ್ಲರೂ ಅವನ ಕಡೆಯವರೇ. ಇವನಿಗಿಂತ ಉತ್ತಮವಾಗಿ ಪ್ರೀತಿಸುವವರು, ಕೃಪೆ ಮಾಡುವವರು ಯಾರೂ ಇಲ್ಲ.

ಇನ್ನೊಂದು ಇವನು ತನ್ನ ನಾಮ, ರೂಪ, ಜಪ, ಪೂಜೆ, ಧ್ಯಾನ ಮೊದಲಾದವುಗಳಿಂದ ಎಲ್ಲರ ಮನಸ್ಸನ್ನು ಆಕರ್ಷಿಸುತ್ತಾನೆ. ಅದರಿಂದಲೇ ಕೃಷ್ಣ ಎನ್ನುವುದು.

ಎಲ್ಲರ ಮನವನ್ನು ಒಂದಲ್ಲ ಒಂದು ರೀತಿಯಲ್ಲಿ ಒಂದಲ್ಲ ಒಂದು ಸಮಯದಲ್ಲಿ ತನ್ನ ಎಡೆಗೆ ಎಳೆಯುತ್ತಾನೆ ಮತ್ತು ಸರ್ವರ ಮನಸ್ಸನ್ನು ಅವರಿಗೆ ತಿಳಿದೆಯೇ ಕದಿಯುವುದರಲ್ಲಿ ಮೊದಲಿಗನಾದ್ದರಿಂದ ಇವನನ್ನು "ಚೋರಾಗ್ರಗಣ್ಯಂ ಶಿರಸಾ ನಮಾಮಿ" ಎಂದೊಬ್ಬ ಭಕ್ತ ಮಹನೀಯನು ಹಾಡಿರುವುದು.

ಎದುರು ಪಕ್ಷದವರನ್ನು ಸಹ ತನ್ನಡೆಗೆ ಎಳೆಯುತ್ತಾನೆ. ಮಹಾಭಾರತ ಯುದ್ಧದಲ್ಲಿ ಶ್ರೀಕೃಷ್ಣನ ಚಾತುರ್ಯದಿಂದ ಕೌರವರು ಅವರ ಕಡೆಯ ಸೇನಾಧಿಪತಿಗಳು, ಎಲ್ಲರೂ, ಸ್ವತಃ ದುರ್ಯೋಧನ, ಭೀಷ್ಮ, ಕರ್ಣ, ದ್ರೋಣರೇ ಶ್ರೀಕೃಷ್ಣನ ಎದುರು ನೆಪ ಮಾತ್ರಕ್ಕೆ ರಣರಂಗದಲ್ಲಿದ್ದರು. ಆದರೆ ಎಲ್ಲರೂ ಆಗಲೆ ಶ್ರೀಕೃಷ್ಣನಿಂದ ಮಾರುಹೋಗಿದ್ದರು. ಕೇವಲ ತಮ್ಮ ಕೃತಜ್ಞತೆಯ ದೃಷ್ಟಿಯಿಂದ ದುರ್ಯೋಧನನ ಕಡೆ ಯುದ್ಧ ಮಾಡಿದರು.

ಅದರಿಂದ ಅವನನ್ನು ಅವಿಪಕ್ಷನೆಂದು ಕರೆಯುವುದು ತಪ್ಪೇನಿಲ್ಲ.

## 5. ಸುಮೂರ್ತಯೇ ನಮಃ

ಮೂರ್ತಿ ಎಂದರೆ ಪ್ರತಿಮೆ, ರೂಪ, ಸು - ಎಂದರೆ ಒಳ್ಳೆಯ, ಶುಭವಾದ, ಅಂದರೆ ಪರಮಾತ್ಮನ ರೂಪವು ಬಹಳ ಮನೋಹರವಾದ್ದು. ಯಾವ ದೇವರ ರೂಪವೇ ಆದರೂ ಅತಿ ಸುಂದರ, ಮನೋಹರ, ಸುಂದರ, ರೂಪವು ಸುಂದರ, ಮಧುರ. ಎಂಥವರೇ ಆದರೂ ಅವರ ಮನಸ್ಸನ್ನು ಅಪಹರಿಸುವಂತಹದು, ಗೆಲ್ಲುವಂತಹದು, ಅದಕ್ಕೇನೇ ಮನೋಹರ ಎನ್ನುವುದು. ರೂಪವು ಮನಸ್ಸಿನ ಭಾವದಿಂದ ಪ್ರತಿಮೆಯಾಗುತ್ತದೆ. ಅದನ್ನೇ ಶಿಲ್ಪಿಗಳು ಊಹಿಸಿ ಪ್ರತಿಮೆಯನ್ನು ಮಾಡುತ್ತಾರೆ. ಪ್ರತಿಮೆಗಳು ಸುಮ್ಮನೆ ಆಕರ್ಷಕ ಶಕ್ತಿಯನ್ನು ಪಡೆಯುವುದಿಲ್ಲ. ಅದರಲ್ಲಿ ಪರಮಾತ್ಮನನ್ನು ಆಹ್ವಾನ ಮಾಡಿ, ನಿಲ್ಲಿಸಿ, ಬಿಂಬವಾಗಿ ಮಾಡಿ, ಮಂತ್ರ ಶಕ್ತಿಯಿಂದ ಒಳತಂದು ಅವನ್ನು ಪ್ರತಿಷ್ಠಿಸುತ್ತಾರೆ. ನಂತರ ಒಂದು ಮಂಡಲ ಅಂದರೆ 48 ದಿನ ಉತ್ತಮವಾದ ಪೂಜೆ ಮಾಡಿದನಂತರ ದೇವರ ಕಲೆಯು ಅದಲ್ಲಿ ಪ್ರತಿಷ್ಠಿತವಾಗುತ್ತದೆ. ನಂತರ ಪ್ರತಿ ಪೂಜೆಯಾದಾಗಲೂ ದೈವ ಶಕ್ತಿ ಅದರಲ್ಲಿ ನಿಲ್ಲುತ್ತದೆ. ಭಕ್ತರನ್ನು

ಆಕರ್ಷಿಸಿ ಪೂಜಿಸಿಕೊಂಡ ನಂತರ ಅವರವರ ಮನೋರಥಗಳನ್ನು ವರವಾಗಿ ದಯಪಾಲಿಸುತ್ತದೆ. ಆಗಲೇ ಅದು ಸುಮೂರ್ತಿಯಾಗುವುದು. ಅದರಿಂದ ಸು ಮೂರ್ತಯೇ ನಮಃ ಎಂದು ಪ್ರಾರ್ಥಿಸುತ್ತೇವೆ.

ರೂಪವೇ ಆದರೆ ಧ್ಯಾನದಲ್ಲಿ ಭಾವವನ್ನು ಪಡೆದು ದೇವರನ್ನು ಸಾಕ್ಷಾತ್ಕರಿಸಿ ಕೊಳ್ಳುತ್ತೇವೆ. ಈಗಲೂ ಈ ರೀತಿ ಸುಮೂರ್ತಯೇ ನಮಃ ಎಂಬುದು ಸರಿ ಹೊಂದುತ್ತದೆ.

ಮೂರ್ತಿ ಎಂದರೆ ಇಂತಹದೇ ದೇವರನ್ನು ನಿರ್ದೇಶಿಸುವುದಿಲ್ಲ. ಎಲ್ಲ ಮತ್ತು ಯಾವ ದೇವರಾದರೂ ಮೂರ್ತಿ ಎಂದೇ ಹೇಳಲ್ಪಡುತ್ತದೆ. ಶಿಲ್ಪಿಯೂ ಸಹ ಶಿಲ್ಪ ಶಾಸ್ತ್ರದಂತೆ ಕಲ್ಲನ್ನು ಆರಿಸಿ ಶಾಸ್ತ್ರ ವಿಧಿಗಳನ್ನು ಮಾಡಿ ಭಿನ್ನವಲ್ಲದನ್ನೇ ತೆಗೆದು ಕೊಂಡು ಆಕಾರವನ್ನು ಕಡೆಯುತ್ತಾನೆ. ಅಂದರೆ ಒಂದು ಉದಾತ್ತ ಭಾವನೆಯಿಂದ ಆ ಕಲ್ಲಿನಲ್ಲಿ ಶಿಲ್ಪಿಯು ಯಾವ ಯಾವ ಮೂರ್ತಿಗಳನ್ನು ಭಾವಿಸುತ್ತಾನೋ ಅದೆಲ್ಲ ಆಕಾರಗಳೂ ಅದರಲ್ಲಿ ಕಡೆಯುವ ಮೊದಲೇ ಇದ್ದೇ ಇರುತ್ತವೆ. ಕಲ್ಲಿನಲ್ಲಿ ಆಕಾರಕ್ಕಿಂತ ಹೆಚ್ಚಾದ ಕಲ್ಲಿನ ಭಾಗವನ್ನು ಜಾಗರೂಕತೆಯಿಂದ ತೆಗೆದುಹಾಕುತ್ತಾನೆ ಅಲ್ಲವೇ? ಇದು ಎಂತಹ ಆನಂದ ಕೊಡುವ ವಿಮರ್ಶೆ.

ಮಣ್ಣಿನಲ್ಲಿ ಆಕೃತಿಯನ್ನು ಹೂತಿಟ್ಟು ತೆಗೆಯುವಂತೆ ಅಥವಾ ನೆಲ್ಲದಲ್ಲಿರುವ ಪ್ರತಿಮೆಯನ್ನು ನೀರಿನಲ್ಲಿ ಹಾಕಿ ಸ್ನಾನ ಮಾಡಿಸಿ ತೆಗೆದಂತೆ. ಅದರಿಂದ ಸುಮೂರ್ತಯೇ ನಮಃ.

ಪರಮಾತ್ಮನಲ್ಲಿರುವ ವಿಶೇಷವೆಂದರೆ ಎಂತಹದೇ ರೂಪವಾದರೂ ಭಕ್ತರನ್ನು ಅದರೆಡೆಗೆ ಎಳೆಯುತ್ತಾನೆ. ಉದಾ : ಕಾಲಭೈರವ, ಸರ್ಪದೇವರಾದ ಸುಬ್ರಮಣ್ಯ (ಕುಕ್ಕೆ ಸುಬ್ರಮಣ್ಯ, ಘಾಟಿ ಸುಬ್ರಮಣ್ಯ), ಚಾಮುಂಡೇಶ್ವರಿ, ಮಹಿಷಾಸುರಮರ್ಧಿನಿ, ವರಾಹಸ್ವಾಮಿ, ನರಸಿಂಹಸ್ವಾಮಿ, ಮತ್ಸ್ಯ ಕೂರ್ಮಾವತಾರಗಳು, ದೇವತೆಗಳ ವಾಹನಗಳು, ಗರುಡ, ನಂದಿ, ಸಿಂಹ, ಇಲಿ, ಸುಬ್ರಮಣ್ಯನ ವಾಹನ ನವಿಲು, ವಾಹನಗಳ ಹೆಸರಿನೊಡನೆ ದೇವರ ಹೆಸರನ್ನು ಕರೆಯುತ್ತೇವೆ.

ನಮ್ಮ ಮನಸ್ಸು ಎಷ್ಟು ಹೊಂದಿಕೊಂಡುಬಿಟ್ಟಿದೆ ಎಂದರೆ ಕೆಲವು ದೇವತೆಗಳನ್ನು ಅವರ ವಾಹನವನ್ನು ಜ್ಞಾಪಿಸಿಕೊಳ್ಳದೆ ದೇವರನ್ನು ಊಹಿಸಲು ಸಾಧ್ಯವೇ ಇಲ್ಲ.

ಸಾಕ್ಷಾತ್ ನರಸಿಂಹಸ್ವಾಮಿಯನ್ನು ಆದಿಶೇಷನ ಆಸನವಿಲ್ಲದೆ ಊಹಿಸಲು ಸಾಧ್ಯವಿಲ್ಲ. ಹಾಗೆಯೇ ಮಹಾವಿಷ್ಣು ಅನಂತಶಯನ, ರಂಗನಾಥರನ್ನು, ಆದಿಶೇಷನ ತಲ್ಪವಿಲ್ಲದೆ ಊಹಿಸಲು ಸಾಧ್ಯವಿಲ್ಲ. ವಿಸ್ಮಯವಾದರೂ ಎಲ್ಲ ದೇವತೆಗಳನ್ನು ಆಯಾ ವಾಹನದೊಡನೆಯೂ ಸುಮೂರ್ತಯೇ ನಮಃ

ಎಂಬುದಕ್ಕೆ ಮನಸ್ಸು ಒಪ್ಪುತ್ತದೆ. ಎಂತಹ ಪರಮ ಸತ್ಯದ ನೆಲೆ! ಸುಮೂರ್ತಯೇ ನಮಃ.

*ಕಾಲಾಧ್ಯಕ್ಷಾಯ ತೀಕ್ಷ್ಣಾಯ ಮೂಲಾಧ್ಯಕ್ಷಾಯ ತೇ ನಮಃ ।*
*ಅಧೋಕ್ಷಜಾಯ ಮಿತ್ರಾಯ ಸುಮಿತ್ರಾಯಾರುಣಾಯ ಚ ॥43॥*
*(266-272)*

**6. ಕಾಲಾಧ್ಯಕ್ಷಾಯ ನಮಃ**

ಕಾಲ ಎಂದರೆ ಎರಡು ಕಾರ್ಯಗಳ ಮಧ್ಯೆ ಇರುವ ಅಂತರ. ಕಾರ್ಯವು ಪ್ರಾರಂಭವಾದಾಗಿನಿಂದ ಅಂತವಾಗುವವರೆಗೆ ಇರುವ ಅಂತರಕ್ಕೆ ಸಮಯ, ಕಾಲ ಎಂದು ನಿರ್ದೇಶಿಸುತ್ತೇವೆ. ಮಹತ್ತಾದ ಕಾಲ ಅಥವಾ ಅತ್ಯಂತ ದೊಡ್ಡದಾದ ಕಾಲವೆಂದರೆ ಕಲ್ಪದ ಆದಿಯಿಂದ ಅಂತ್ಯದವರೆಗಿನ ಸಮಯ. ಮಹಾವಿಷ್ಣುವಿನ ಇಚ್ಛೆಯಂತೆ ಇದು ಕಾಲ ನಡೆಯುತ್ತದೆ. ಇದಕ್ಕೆ ಕಾಲ ದೇವ ಎಂಬುದೇ ಅವನ ರೂಪ ಅಥವಾ ಪ್ರತಿನಿಧಿ. ಏಕೆಂದರೆ ಮಹಾವಿಷ್ಣುವು ಪ್ರಳಯದ ಪ್ರಾರಂಭದಿಂದ ಕೊನೆಯವರೆಗೆ ಅಂದರೆ ಸೃಷ್ಟಿಯ ಪ್ರಾರಂಭದವರೆಗಿನ ಕಾಲದಲ್ಲಿ ಯೋಗ ನಿದ್ರೆಯಲ್ಲಿ ಆಲದ ಎಲೆಯಲ್ಲಿ ಮಲಗುತ್ತಾನೆ. ವಟಪತ್ರಶಾಯಿಯಾಗಿ ಯೋಗ ನಿದ್ರೆಯಲ್ಲಿರುತ್ತಾನೆ. ಇಂತಹ ಕಾಲದೇವನಿಗೂ ಎದ್ದಿರಲು ಹೇಳಿರುವುದರಿಂದ ಅದರ ಮೇಲೆ ತನ್ನ ಅಧಿಕಾರ ನಡೆಸಿದಂತಾಯಿತು. ಅದಕ್ಕೇನೆ ಮಹಾವಿಷ್ಣು / ಶ್ರೀಮನ್ನಾರಾಯಣನು ಕಾಲಾಧ್ಯಕ್ಷನು.

ಈ ಕಾಲ ದೇವನೇ ಶ್ರೀರಾಮನನ್ನು ಅವನ ಅವತಾರ ಸಮಯದ ಮುಕ್ತಾಯದ ಸಮಯ ಬಂದಿದೆ ಎಂದು ಎಚ್ಚರಿಸಲು ಯೋಗಿಯ ರೂಪದಲ್ಲಿ ಬಂದಿದ್ದನು.

ಕಾಲದೇವನೆಂದರೆ ಯಮ ಧರ್ಮರಾಯನು. ಎಲ್ಲ ಜೀವಿಗಳಿಗೂ ಮೃತ್ಯು ಸ್ವರೂಪನು, ಆದರೆ ಧರ್ಮದ ಮೂರ್ತಿ, ಧರ್ಮವೇ ಇವನಲ್ಲಿ ಉಪಸ್ಥಿತವಾಗಿದೆ. ಈತನೇ ಧರ್ಮರಾಜ - ಪಾಂಡವರ ಮೊದಲಿಗನಾಗಿ ಅವತಾರವೆತ್ತಿದ್ದನು. ವಿದುರನಲ್ಲಿ ಈ ಅಂಶದಲ್ಲಿಯೆ ಪ್ರತಿಷ್ಠಿತನಾಗಿದ್ದನು.

ಕಾಲವಾದನು, ಕಾಲವಶನಾದನು, ಪಂಚತ್ವ - ಪಂಚ ಮಹಾಭೂತದಲ್ಲಿ ಐಕ್ಯನಾದನು ಎಂದು ಹೇಳುವುದೆಲ್ಲವೂ ತಿಳಿಸುವುದೇನೆಂದರೆ ಆ ದೇಹದಲ್ಲಿದ್ದ ಜೀವಿ / ಆತ್ಮ ತನ್ನ ಸಂಸ್ಕಾರದೊಡನೆ ದೇಹವನ್ನು ತ್ಯಜಿಸಿ ಬೇರೆ ದೇಹವನ್ನು ಹುಡುಕಿಕೊಂಡು ಹೋಗಿದೆ ಎಂದು ಮಾತ್ರ ಅಥವಾ ಪರಮಾತ್ಮನನ್ನು ಸೇರಿದೆ ಎಂದು ಅರ್ಥ ತಿಳಿಸುತ್ತದೆ.

ಕಾಲನಗಣನೆಯನ್ನು ನಾವು ದೇವಮಾನ, ಮನುಷ್ಯಮಾನ, ಚಾಂದ್ರಮಾನ,

ಸೌರಮಾನ ರೀತಿ ತಿಳಿಯುತ್ತೇವೆ. ಇವು ಆಯಾ ಆಚರಣೆಕಾರರಿಗೆ ಸುಲಭವಾಗಿ ತಿಳಿಯುತ್ತದೆ. ಎಲ್ಲವನ್ನು ಸೇರಿಸಿ ತಿಳಿಯಬೇಕಾರೆ ಬಹಳ ಶ್ರಮ ಸಾಧ್ಯ. ಬ್ರಹ್ಮ ದೇವನ ಕಾಲಮಾನ, ಮಹಾವಿಷ್ಣುವಿನ ಕಾಲಮಾನ ತಿಳಿಯುವುದು, ಊಹಿಸುವುದು ಬಹಳ ಕಷ್ಟ, ಇಷ್ಟೊಂದು ತಿಳಿದು ಮಾಡುವುದಾದರೂ ಏನು. ಹೇಗೆಂದರೆ, ಸಕಲ ಭೂಮಿಯನ್ನು ಆದರ ಕಣದ, ಅಲ್ಲ ಅದರ ಧೂಳಿನ ಪ್ರಮಾಣವನ್ನು ಭೂಮಿಯ ಪ್ರಮಾಣಕ್ಕೆ ಹೋಲಿಸಿದಂತಾಗುತ್ತದೆ.

ನಮ್ಮ ನಿಮಿಷ, ಗಂಟೆ, ರಾತ್ರಿ, ಹಗಲು, ದಿನ, ತಿಂಗಳು, ವರ್ಷ ಇತ್ಯಾದಿ ಗಣನೆ ನಮ್ಮ ಆಯುಃ ಪ್ರಮಾಣದ 100 ವರ್ಷ (ಮನುಷ್ಯಮಾನ 100 ವರ್ಷ)ವನ್ನು ಅವಲಂಬಿಸಿರುತ್ತದೆ.

ಇದೇ ರೀತಿ ಬ್ರಹ್ಮ ದೇವರಿಗೂ 100 ವರ್ಷ ಆಯುಸ್ಸು, ಅವರಿಗೂ ಹಗಲು, ರಾತ್ರಿ, ತಿಂಗಳು, ವರ್ಷಗಳು ಇವೆ. ಆದರೆ ಅವುಗಳನ್ನು ಊಹಿಸುವುದು ಕಷ್ಟ.

ಹಾಗೆಯೇ ಮಹಾವಿಷ್ಣುವಿನ ಒಂದು ರಪ್ಪೆ ಹೊಡೆಯುವ ಸಮಯವನ್ನು ಭಾಗವತದಲ್ಲಿ ಹೇಳಿದೆ. ನಾವೂ ಸಹ ರಪ್ಪೆ ಹೊಡೆಯುತ್ತೇವೆ. ನಾವು ಹೇಳುವಂತೆ ಇರುವೆಗೆ ಇರುವೆಯ ಭಾರ, ಆನೆಗೆ ಆನೆಯ ಭಾರ, ಅದೇ ರೀತಿ.

ಈ ಕಾಲಾಧ್ಯಕ್ಷನ ಲೀಲೆಯೇ ವಿಚಿತ್ರ, ಅದಕ್ಕೆ ಕಾಲಾಧ್ಯಕ್ಷನಿಗೆ ಕೋಟಿ ಕೋಟಿ ಜೀವಕೋಟಿಯೇ ನಮಸ್ಕರಿಸುತ್ತದೆ. ಅವನ ಲೀಲೆ ವಿನೋದ ಮುಗಿಯುವುದಿಲ್ಲ. ನಿರಂತರ ನಡೆಯುತ್ತಲೇ ಇರುತ್ತದೆ. ಜೀವಿಗಳು ಮಾತ್ರ ದೇಹಗಳನ್ನು ಬದಲಾಯಿಸುತ್ತ ಹಿಂದಿನ ಮತ್ತು ಮುಂದಿನ ದೇಹದ ಜೀವನದ ಉದ್ದ, ಸ್ಮರಣೆಗಳನ್ನು ತಿಳಿಯದೇ ತಾತ್ಕಾಲಿಕ ದೇಹದಲ್ಲಿ ಸಂಸ್ಕಾರ ಸೇರಿಸಿಕೊಂಡು ಆತ್ಮ ಜೀವಗಳು ಸಾಗುತ್ತಿರುತ್ತವೆ. ಇದುವೇ ಸಂಸಾರ ಸಾಗರ, ಭಗವಂತನು ತನ್ನ ಬಂಧು ಆತ್ಮಗಳೊಡನೆ ನಡೆಯುತ್ತಿರುವ ಲೀಲಾ ವಿನೋದ. ಆತನು ತನ್ನ ಇಚ್ಛೆಪಟ್ಟು ಇದನ್ನೇ ನಡೆಸುತ್ತಿದ್ದಾನೆ. ಕಾಲದ ಮೊದಲೆಲ್ಲಿ! ಕಾಲದ ಕೊನೆಯಲ್ಲಿ! ಕಾಲನ ಮಾಯೆಯಲ್ಲಿ ಸಿಲುಕಿರುವ ಜೀವಿಗಳ ಜೀವನ, ಪರಸ್ಪರ ಸ್ಪಂದನ ವಿಸ್ಮಯ, ಸೇರುವಿಕೆ, ಅಗಲುವಿಕೆ ಎಲ್ಲಾ ವಿಸ್ಮಯ! ವಿಕಾರ! ವಿಚಿತ್ರ! ಇದನ್ನ ತಿಳಿಯುವ ಈ ಭಾವನೆ ಇಲ್ಲಿ ಬರೆದಿರುವುದು ಅವನ ಪ್ರೇರಣೆಯ ಹೊಳೆಯಿಂದಲೇ! ಧಾರೆ ಧಾರಾಕಾರವಾಗಿ ಸುರಿಯುತ್ತಿದೆ. ಕೊನೆ ಎಲ್ಲಿ! ಎಲ್ಲಿ! ಹೇ ಕಾಲಾಧ್ಯಕ್ಷನೇ ನಿನಗೆ ನಮೋನ್ನಮಃ.

**57. ತೀಕ್ಷ್ಣಾಯ ನಮಃ**

ತೀಕ್ಷ್ಣ ಎಂದರೆ ಅನೇಕ ಅರ್ಥಗಳಿವೆ, ಸಾಮಾನ್ಯವಾಗಿ ಚೂಪಾದ, ಖಾರ, ಕಠಿಣ, ಕಠೋರ, ಉದ್ಧಟ ಮುಂತಾದ ಅರ್ಥದಲ್ಲಿ ಉಪಯೋಗಿಸುತ್ತೇವೆ.

ತೀಕ್ಷ್ಣ ಮಾತು ಎಂದರೆ ಇವೆಲ್ಲ ಅರ್ಥಗಳು ಬರುತ್ತವೆ. ಮೊದಲು ಅರಿವಾಗುವುದು ಬಹಳ ಹಿಂದು ಮುಂದು ನೋಡದೆ ಇದ್ದದ್ದನ್ನು ಇದ್ದ ಹಾಗೆ ಹೇಳುವುದಕ್ಕೂ ಈ ಶಬ್ದವನ್ನು ಉಪಯೋಗಿಸುತ್ತೇವೆ.

ಪರಮಾತ್ಮನ ವಿಚಾರದಲ್ಲಿ ಈ ಶಬ್ದವನ್ನು "ಬಹಳ ಗಹನವಾದ, ಧಾರ್ಮಿಕ, ನಿಜ ಹೇಳುವ ಮತ್ತು ಹೃದಯಕ್ಕೆ ಏನೇ ನೋವಾಗಲೀ, ಆಗದಿರಲೀ ಆಡುವ ಮಾತು.

ಪರಮಾತ್ಮನು ಉದಾರವಾದ, ಹರಿತವಾದ ದೃಷ್ಟಿಯುಳ್ಳವನು. ಭಕ್ತರನ್ನು ರಕ್ಷಿಸುವುದರಲ್ಲಿ ಅವರ ಶತ್ರುಗಳೊಡನೆ ಪರಮಾತ್ಮನ ದೃಷ್ಟಿ ತೀಕ್ಷ್ಣವಾದ್ದು.

ಇವನು ಯಾವಾಗಲೂ ದೂರ ದೃಷ್ಟಿಯುಳ್ಳವನು, ತೀಕ್ಷ್ಣ ದೃಷ್ಟಿಯುಳ್ಳವನು, ಅದರಿಂದ ತೀಕ್ಷ್ಣಾಯ ನಮಃ ಎಂದು ನಮಸ್ಕರಿಸುತ್ತೇವೆ.

ಅವನ ಈ ತೀಕ್ಷ್ಣ ದೃಷ್ಟಿಯಿಂದ ಜೀವ ಕೋಟಿಯ ಯಾವುದೇ ತರಹದ ಬ್ರಹ್ಮಾಂಡದಲ್ಲಿ ಎಲ್ಲೇ ಏನೇ ಯಾವ ಜೀವಿಗೂ ಆಗುತ್ತಿರುವ ಆಗು ಹೋಗುಗಳನ್ನು ಮತ್ತು ಅವುಗಳ ಪರಿಹಾರವನ್ನು ಕೊಟ್ಟು, ಜೀವಿಗಳನ್ನು ಅವರವರ ಕಷ್ಟಗಳಿಂದ ಪಾರು ಮಾಡುತ್ತಾನೆ.

ಹರಿತವಾದ ಆಯುಧಗಳಿಂದ ಮತ್ತು ಹರಿತವಾದ ಮನಸ್ಸು ಮತ್ತು ಬುದ್ಧಿಗಳಿಂದ ತಕ್ಷಣವೇ ಎಂತಹದೇ ಕಠಿಣವಾದ ಮತ್ತು ವಿವಾದಗ್ರಸ್ತವಾದ ಶಾಪಕ್ಕೂ ಸಹ ಪರಿಹಾರ ಉಪ ಶಾಪವನ್ನು ಕಂಡುಕೊಳ್ಳುತ್ತಾನ ಈ ಮಹಾವಿಷ್ಣು. ಉದಾಹರಣೆಗೆ ಬ್ರಹ್ಮನು ಹಿರಣ್ಯಕಶಿಪುವಿಗೆ ಕೊಟ್ಟ ವರ, ರಾವಣನಿಗೆ ಬ್ರಹ್ಮನು ಕೊಟ್ಟವರ, ಈಶ್ವರನು ಭಸ್ಮಾಸುರನಿಗೆ ಕೊಟ್ಟ ವರ ಮುಂತಾದವುಗಳು.

ಅದರಿಂದ ಭಗವಂತನು ಪರಮ ತೀಕ್ಷ್ಣಮತಿಯವನು.

ಅದರಂತೆಯೆ ಸಾಧುಗಳು, ಸಂತರು, ಸಜ್ಜನರು, ಸಮಾಜ ವ್ಯಕ್ತಿಗಳಿಗೆ ಸಮಾಧಾನಗಳನ್ನು ಹೇಳುತ್ತಾರೆ. ಕಷ್ಟ ಮತ್ತು ದುಃಖ ಕಾಲದಲ್ಲಿ ಸೂಕ್ತವಾಗಿ ಹೇಳಿ ಕಷ್ಟಗಳನ್ನು ದುಃಖಗಳನ್ನು ಉಪಶಮನ ಮಾಡುತ್ತಾರೆ. ಇದು ಸಮಯಕ್ಕೆ ಸರಿಯಾಗಿ ತಿಳಿಸುವ ತೀಕ್ಷ್ಣಮತಿಯಿಂದ ಬರುವ ಸಲಹೆಗಳು, ಸಾಂತ್ವನಗಳು.

8. ಮೂಲಾಧ್ಯಕ್ಷಾಯ ನಮಃ

ಯಾವುದೇ ಕಾರ್ಯ, ಕಾರಣಗಳಿಗೂ ಮೂಲವೊಂದಿರಬೇಕು, ಮೂಲ ಎಂದರೆ ಮೊದಲು, ಆದಿ, ಪ್ರಾರಂಭವಾಗುವಿಕೆ ಎಂದು ಅರ್ಥ ಮಾಡಬಹುದು. ಈ ಪ್ರಾರಂಭದಲ್ಲಿ ಏನೇ ಕಾರ್ಯ ಮಾಡಲು ಬುದ್ಧಿ ಮನಸ್ಸುಗಳು ಹೊಂದಿಕೊಂಡು ಒಂದು ಯೋಜನೆಯನ್ನು ಹಾಕಿಕೊಳ್ಳುತ್ತವೆ. ಮನಸ್ಸಿಗೆ ಬಂದ ವಿಚಾರದ ಸಮರ್ಥನೆ ಮತ್ತು ವಿರೋಧಗಳನ್ನು ಆಯಾ ಆತ್ಮ ಬುದ್ಧಿ ಮನಸ್ಸು

ಇಂದ್ರಿಯಗಳು ಮತ್ತು ಪೂರ್ವ ಸಂಸ್ಕಾರ, ಪೂರ್ವ ನಿಶ್ಚಿತವಾದ ಭಾವನೆ, ಸ್ವಭಾವಗಳು ಇವುಗಳನ್ನು ಅನುಸರಿಸಿ ಆ ಯೋಚನೆಗೆ ಬಂದ ಕಾರ್ಯವನ್ನು ಮಾಡಬೇಕೇ, ಬೇಡವೇ ಎಂದು ಮನಸ್ಸು ಮತ್ತು ಬುದ್ಧಿಗಳು ಸೇರಿ ನಿಶ್ಚಯಿಸುತ್ತವೆ. ನಂತರ ಇಂದ್ರಿಯಗಳ ಮೂಲಕ ಪ್ರಪಂಚದೊಡನೆ ವ್ಯಾಪಾರ ಮಾಡಿ ನಡೆಸುತ್ತವೆ. ಇದರಿಂದ ಈ ಎಲ್ಲ ವ್ಯವಹಾರಕ್ಕೂ ಮೂಲದಲ್ಲಿ ಬುದ್ಧಿ ಎಂದು ಹೇಳುವ ಕರಣವು ಇದೆ ಎಂದು ಅರ್ಥವಾಯಿತು. ಇದೆಲ್ಲಕ್ಕೂ ಬುದ್ಧಿಯೇ ಮೂಲ ಮತ್ತು ನಿರ್ಧರಿಸುವ ಕರಣ. ಆದರಿಂದ ಬುದ್ಧಿಯೇ ಮೂಲಾಧ್ಯಕ್ಷ, ಇದೆಲ್ಲಕ್ಕೂ ಮೇಲಾದ್ದು ಯೋ ಬುದ್ಧೇಃ ಪರತಸ್ತು ಸಃ - ಬುದ್ಧಿಗಿಂತ ಮೇಲಾದವನು ''ಅವನು'' ಎಂದರೆ ದೇಹದಲ್ಲಿರುವ ಆತ್ಮ. ಆದರೆ ಆತ್ಮನು ಸಾಕ್ಷಿ ರೂಪದಲ್ಲಿರುತ್ತಾನೆ. ಎಲ್ಲ ವ್ಯಾಪಾರಗಳೂ ಅಂಟದೇ ಸ್ವತಂತ್ರವಾಗಿರುತ್ತಾನೆ. ಆದರೆ ಈ ಆತ್ಮ - ಬುದ್ಧಿ - ಮನಸ್ಸು - ದೇಹಗಳನ್ನು ನಡೆಯಿಸುವ ಪರಮೋತ್ತಮ ಸೂತ್ರಧಾರನು ಪರಮಾತ್ಮ. ಸೃಷ್ಟಿಯ ಸಕಲ ಆಗು ಹೋಗುಗಳಿಗೂ, ಪ್ರತಿ ಜೀವಿಯ ಜೀವನಕ್ಕೂ ಉದ್ದಕ್ಕೂ ಕಾಲ ದೇವನು ಎಲ್ಲಿಯವರೆಗೆ ಈ ಸೃಷ್ಟಿ ಸ್ಥಿತಿ ಲಯ ಪ್ರಳಯಗಳ ಚಕ್ರವನ್ನು ನಡೆಸುತ್ತಿರುತ್ತಾನೆಯೋ ಅಲ್ಲಿಯವರೆಗೆ ಪರಮಾತ್ಮನೇ ಮೂಲಾಧ್ಯಕ್ಷನು. ಮೂಲದಲ್ಲಿ ಅವನ ಇಚ್ಛೆ, ಅಧಿಕಾರದಂತೆಯೇ ಎಲ್ಲವೂ ನಡೆಯುತ್ತದೆ. ಅವನನ್ನು ಈ ಕೆಲಸದಿಂದ ಯಾರೂ ಬೇರ್ಪಡಿಸಲು ಸಾಧ್ಯವಿಲ್ಲ.

ಆದರಿಂದಲೇ ಮೂಲಾಧ್ಯಕ್ಷಾಯ ನಮಃ ಎಂದು ನಮಸ್ಕರಿಸುವುದು.

ದೇವಸ್ಥಾನದಲ್ಲಿ ಮೂಲ ದೇವರು, ಉತ್ಸವ ದೇವರು ಇರುತ್ತಾರೆ. ಉತ್ಸವ ದೇವರು ದೇವಸ್ಥಾನದ ಹೊರಗೆ ಮೂಲ ದೇವರ ಪ್ರತಿನಿಧಿಯಾಗಿ ಅಥವಾ ಮೂಲ ದೇವರ ಬಿಂಬವಾಗಿ ಹೋಗಿ ಬರುತ್ತಾರೆ. ಕೊಳಗಳಿಗೆ ವಿಹಾರಾರ್ಥವಾಗಿ ಹೋಗಿ ಬರುತ್ತಾರೆ. ರಥದಲ್ಲಿ ಕುಳಿತು ಉತ್ಸವಗಳನ್ನು ನಡೆಯಿಸಿಕೊಳ್ಳುತ್ತಾರೆ ಆದರೆ ಎಲ್ಲ ಸೇವೆಗಳೂ ನಡೆಯುವುದು ಮೂಲ ದೇವರ ಹೆಸರಿನಲ್ಲಿಯೇ. ಅಭಿಷೇಕ, ಸಹಸ್ರ ನಾಮ, ಅರ್ಚನಾದಿಗಳು ಮೂಲ ದೇವರಿಗೇನೆ ನಡೆಯುತ್ತದೆ. ಈ ಎಲ್ಲ ಕಾರ್ಯಕ್ರಮಗಳಿಗೂ ಪ್ರಾರ್ಥನೆ ಹರಕೆ ಮುಂತಾದ ಸೇವೆಗಳಿಗೂ ಮೂಲದೇವರೇ ಕಾರಣ.

ಹಾಗೆಯೇ ಪ್ರತಿ ಜೀವಿಯ ದೇಹದಲ್ಲಿ ಅದು ನಡೆಸುವ ಎಲ್ಲ ಪರಸ್ಪರ ವ್ಯಾಪಾರ, ಸ್ಪಂದನಗಳಿಗೂ ಅದರಲ್ಲಿರುವ ಬುದ್ಧಿಯೇ ಮೂಲ ಕಾರಣ. ಉಳಿದ ಮನಸ್ಸು ಇಂದ್ರಿಯಗಳು ಎಲ್ಲವೂ ಸಹಾಯಕ. ಇದರಲ್ಲಿ ಆತ್ಮ, ಪ್ರಾಣಗಳು ಇರುವಂತೆ, ದೇವರ ಪ್ರತಿಮೆಯಲ್ಲಿ ದೇವತ್ವವನ್ನು ಆಹ್ವಾನಿಸಿ, ಬಿಂಬ, ಜೀವ, ಶಕ್ತಿ ರೂಪದಲ್ಲಿ ನಿಲ್ಲಿಸಿ ಪೂಜಿಸುತ್ತೇವೆ.

ಜೀವಶಕ್ತಿ ಇಲ್ಲದೆ ದೇಹಕ್ಕೆ ಬೆಲೆಯಿಲ್ಲ. ಹಾಗೆಯೇ ದೇವರ ಆಹ್ವಾನಿತ ಶಕ್ತಿಯಿಲ್ಲದೇ ಪ್ರತಿಮೆಗೆ ಬೆಲೆ ಇಲ್ಲ. ಮೂಲದಲ್ಲಿ ಜೀವಾತ್ಮನು ಪರಮಾತ್ಮನ ಶಕ್ತಿ ಸ್ವರೂಪಗಳೇ ಎಲ್ಲವನ್ನು ಆಳುತ್ತವೆ. ಅದಕ್ಕೆ ಮೂಲಾಧ್ಯಕ್ಷಾಯ ನಮಃ.

59. ಅಧೋಕ್ಷಜಾಯ ನಮಃ

ಅಧ - ಉಕ್ಷ್ - ಜ. ಕೆಳಕ್ಕೆ - ಪ್ರೋಕ್ಷಿಸುವುದರಿಂದ ಪವಿತ್ರವಾಗಿ, ಜ - ಹುಟ್ಟಿದವನು.

ಮಹಾವಿಷ್ಣುವಿನ ಅಂಶ ಮಾತ್ರದಿಂದ ಕೆಳಗೆ ಅಂದರೆ ವಿಷ್ಣುಲೋಕವಾದ ವೈಕುಂಠದಿಂದ ಪ್ರೋಕ್ಷಿಸಲ್ಪಟ್ಟು ಜನಿಸಿದ ದೇವತೆಗಳಿಗೆ ನಮಸ್ಕಾರಗಳು.

ಅಥವಾ (ಸತ್ಯ ಲೋಕದಿಂದ) ವೈಕುಂಠದಿಂದ ಮಹಾವಿಷ್ಣುವು ತನ್ನ ಕಲೆ, ಅಂಶಗಳನ್ನು ಕೆಳ ಲೋಕಗಳಿಗೆ ಅಂದರೆ ಸತ್ಯ ಲೋಕದಿಂದ ಪಾತಾಳದವರೆಗೆ ಚೆಲ್ಲಿ ಅವುಗಳಿಂದ ತನ್ನನ್ನೇ ಪೂಜಿಸುವ ದೇವ, ದೇವತೆಗಳನ್ನು ನಿರ್ಮಿಸಿದನು. ಪ್ರತಿ ದೇವತೆಯೂ ತನ್ನದೇ ಆದ ವೈಶಿಷ್ಟ್ಯದಿಂದ ವರಗಳನ್ನು ದಯಪಾಲಿಸುತ್ತಿರುತ್ತಾರೆ. ಅಥವಾ

ಸೃಷ್ಟಿ ಅಂದರೆ ಕಲ್ಪಾದಿಯಲ್ಲಿ ಅಂದರೆ ಪ್ರಳಯದ ನಂತರ, ತನ್ನಲ್ಲಿ ಅಡಗಿರುವ ಜೀವ ಕೋಟಿಯನ್ನು ಚರಾಚರ ವಸ್ತುಗಳನ್ನು, ತರುಲತೆ ಔಷಧಿಗಳನ್ನು ತನ್ನ ದೇಹದಿಂದ ಹೊರ ಚೆಲ್ಲಿ ಪವಿತ್ರವಾದ ಅವುಗಳನ್ನು ತನ್ನ ಮಾಯೆಯಿಂದಲೇ ಕಲ್ಪಿತವಾದ ಸಂಸಾರ ಸಾಗರದೊಳಕ್ಕೆ ತಳ್ಳುತ್ತಾನೆ. ಜೀವ ಕೋಟಿಗಳು ಭವ ಸಾಗರದಲ್ಲಿ ಮುಳುಗಿ, ತೇಲಿ ನಂತರ ಯಾವುದೋ ನಿರ್ದಿಷ್ಟವಾದ ಭಗವತ್ ಕೃಪೆಯನ್ನು ಎದುರು ನೋಡುತ್ತಾ ನಂತರ ಸಾಕ್ಷಾತ್ಕಾರವನ್ನು ಪಡೆಯುತ್ತದೆ ಮತ್ತು ಅದೇ ಪರಮಾತ್ಮನನ್ನು ಸೇರುತ್ತದೆ. ಇವೆಲ್ಲ ಒಂದು ರೀತಿಯಲ್ಲಿ ಅಧೋಕ್ಷಜಗಳೇ. ಜೀವಿಗಳು ಪವಿತ್ರವಾದ್ದರಿಂದ ಅವುಗಳಿಗೆ ನಮಸ್ಕಾರಗಳು.

ದೇವ ದೇವತೆಗಳು ಅಧೋಕ್ಷಜರೇ, ಅದರಿಂದ ಅವರುಗಳಿಗೆ ನಮಸ್ಕಾರಗಳು.

ಮಹಾವಿಷ್ಣುವಿನಿಂದ ಹೊರಬಂದ ಎಲ್ಲವೂ ಮಾಯೆಯ ಸಂಪರ್ಕ ಬರುವ ಮುನ್ನ ಪವಿತ್ರವಾಗಿದ್ದವು. ಸಂಸಾರದಲ್ಲಿ ಸೇರಿ ಕಲುಷಿತವಾಗಿ ಮತ್ತೆ ಪವಿತ್ರತೆಯನ್ನು ಪಡೆದು ಮುಕ್ತ ಜೀವಿಗಳಾಗಿ ಬೇರೆಯವರನ್ನು ಮುಕ್ತಿ ಪಡೆಯಲು ಸಹಾಯವಾಗುತ್ತವೆ. ಇದೇ ಪ್ರತಿ ಜೀವಿಯ ಆದ್ಯ ಗುರಿ ಮತ್ತು ಗುರಿ ಸೇರಿದ ನಂತರ ಆದ್ಯ ಕರ್ತವ್ಯ. ಒಟ್ಟಿನಲ್ಲಿ ಅಧೋಕ್ಷಜರೇ ಎಲ್ಲರೊನೆ! ಹೇಗಿದೆ ಈ ಚಿಂತನೆ.

ಪರಮಾತ್ಮನನ್ನು ಕೇಶವಾದಿ ನಾಮಗಳಲ್ಲಿ ಅಧೋಕ್ಷಜ ಎಂದು ನಮಸ್ಕಾರ ಮಾಡುತ್ತೇವೆ.

*ಅಧಃ ಅಕ್ಷೇ - ಜಾಯತೇ ಯಥೈವ ಸಃ*

ಕಮಲದಂತೆ ಕಣ್ಣುಳ್ಳವನು ಎಂದು ಸಹ ಅರ್ಥೈಸಬಹುದು.

70. **ಮಿತ್ರಾಯ ನಮಃ**

ಮಿತ್ರ ಎಂದರೆ ಸ್ನೇಹಿತ, ಹಿತ ಚಿಂತಕ, ಹಿತರಕ್ಷಕ, ಇತ್ಯಾದಿ.

ಪ್ರತಿಯೊಬ್ಬರು ಅಪೇಕ್ಷಿಸುವುದು ಮಿತ್ರರನ್ನೇ. ಮಿತ್ರರು ಸದಾ ಕಾಲದಲ್ಲಿಯೂ ಬೇಕಾದವರು, ಅವರು ಬೇಡದಂತಹ ಸಮಯವೇ ಇಲ್ಲ. ಆದರೆ ನಮಗೆ ಶಾಶ್ವತವಾದ ಮಿತ್ರರು ಸಿಕ್ಕುವುದೇ ಇಲ್ಲ. ಒಂದು ಕಾಲದಲ್ಲಿ ಮಿತ್ರನಾದವನು ನಂತರ ಮಿತ್ರನ ಕೆಲಸವನ್ನು ಮಾಡದೆ ಇರಬಹುದು. ಆದರೆ ಮನುಷ್ಯ ಮಾತ್ರದವರ ಪರಸ್ಪರ ಮನಸ್ಸುಗಳು ವಿಚಲಿತವಾಗುವುದು ಈ ತಾತ್ಕಾಲಿಕ ಮಿತ್ರತ್ವಕ್ಕೆ ಕಾರಣ.

ಎಲ್ಲ ಜೀವಯೋನಿಗಳಲ್ಲಿಯೂ ಇದೇ ತೊಂದರೆ ಇರುತ್ತದೆ. ಅದರಿಂದ ಎಲ್ಲರೂ ಸದಾ ಕಾಲದಲ್ಲಿಯೂ ಸರ್ವ ಸನ್ನಿವೇಶದಲ್ಲಿಯೂ ಅಪೇಕ್ಷಿಸುವುದು ಪರಮಾತ್ಮನನ್ನೇ. ವಿಶೇಷವಾದ ಆರ್ತನಾದಕ್ಕೆ ಭಕ್ತಿ ಮತ್ತು ಶ್ರದ್ಧೆಯಿಂದ ಮಾತ್ರ ಪರಮಾತ್ಮನ ಮಿತ್ರತ್ವವು ಸಾಧ್ಯ. ಅದಕ್ಕೆ ಪರಮಾತ್ಮನಿಗೆ ಮಿತ್ರಾಯ ನಮಃ ಎಂದು ಹೇಳುತ್ತೇವೆ.

ಪರಮಾತ್ಮನು ಯಾರಿಗೂ ಶತ್ರುವಲ್ಲ. ಅವನಿಗೆ ತಾರತಮ್ಯವೇ ಇಲ್ಲ. ಸದಾ ನಮ್ಮ ಬೆನ್ನು ಹಿಂದೆ ನಮ್ಮ ಹಿತ ಚಿಂತನೆಗಾಗಿಯೇ ಕಾಯುತ್ತಿರುತ್ತಾನೆ. ಆದರೆ ಅವನು ಅಪೇಕ್ಷಿಸುವುದು ನಮ್ಮ ಶ್ರದ್ಧೆಯ, ಭಕ್ತಿಯ ಕೂಗನ್ನು. ಇಂತಹ ನಿಸ್ವಾರ್ಥ ಮಿತ್ರನು ಎಲ್ಲರಿಗೂ ಬೇಕೇ ಬೇಕು. ಅದಕ್ಕೆ ಎಲ್ಲರೂ ಮಿತ್ರಾಯ ನಮಃ ಎಂದು ಕರೆಯುತ್ತಾರೆ.

71. **ಸುಮಿತ್ರಾಯ ನಮಃ**

ಮಿತ್ರರಲ್ಲಿ ಎರಡು ವಿಧ, ಒಬ್ಬನು ತನ್ನ ಸ್ವಾರ್ಥ ದೃಷ್ಟಿಯಿಂದ ಇನ್ನೊಬ್ಬನಿಗೆ ಮಿತ್ರನಾಗುತ್ತಾನೆ. ಯಾವಾಗ ತನಗೆ ತನ್ನ ಸ್ವಾರ್ಥವನ್ನು ಸಾಧಿಸಲು ಸಾಧ್ಯವಿಲ್ಲವೋ ಆಗ ಅವನು ಕೈಬಿಡುತ್ತಾನೆ. ಆದರೆ ಇವನು ಆಗ ಮಿತ್ರನಾಗುವುದಿಲ್ಲ. ಪ್ರತಿಕೂಲನಾಗಬಹುದು ಅಥವಾ ಸುಮ್ಮನಿರಬಹುದು.

ಆದರೆ ಯಾವನು ತನ್ನ ಸ್ವಾರ್ಥದ ಹಿತ ದೃಷ್ಟಿಯಿಂದ ಸಮಯವು ಪ್ರತಿಕೂಲವಾದರೂ ಸಹಾಯ ಮಾಡುವನೋ ಅವನೇ ಒಳ್ಳೆಯ ಮಿತ್ರನು - ಸುಮಿತ್ರನು. ಇವನಿಗೆ ಸಹಾಯ ಪಡೆಯುವವನ ಒಳಿತೇ ಮುಖ್ಯ. ತನ್ನ ಒಳಿತನ್ನು ಬದಿಗಿಟ್ಟು ಮುಂದೆ ಬರುತ್ತಾನೆ.

ಆದರೆ ಯಾವಾಗ ನಾವು ಭಕ್ತಿ ಮತ್ತು ಶ್ರದ್ಧೆಯಿಂದ ಪರಮಾತ್ಮನ ಸಹಾಯವನ್ನು ಅಪೇಕ್ಷಿಸುವೆವೋ ಆಗ ಪರಮಾತ್ಮನು ಬಂದೇ ಬರುತ್ತಾನೆ.

ಅವನಿಗೆ ಸ್ವಾರ್ಥವೆಂಬುದೇ ಇಲ್ಲ, ಸರ್ವಕಾಲದಲ್ಲಿಯೂ ಅವನೇ ಮಿತ್ರನಾಗಿ, ಹಿತಚಿಂತಕನಾಗಿ, ಹಿತರಕ್ಷಕನಾಗಿ ನಿಲ್ಲುವುದರಿಂದ ಅವನಿಗಿಂತ ಸುಮಿತ್ರರು ಬೇರೆ ಇಲ್ಲ. ಇವನನ್ನು ನಂಬಿ ಕರೆಯಬಹುದು ಸಹಾಯ ಮಾಡುವುದು ಖಚಿತ. ಇತರರನ್ನು ಆಶ್ರಯಿಸುವುದರಲ್ಲಿ ಅನುಮಾನವಿರುತ್ತದೆ. ಆದರೆ ಪರಮಾತ್ಮನ ವಿಷಯದಲ್ಲಿ ಹಾಗಲ್ಲ. ಅವನಂತಹ ಉದಾರಿ, ತತ್ಕ್ಷಣ ಬರುವಂತಹವರು ಯಾರೂ ಇಲ್ಲ. ಅದರಿಂದಲೇ ಇವನು ಸರ್ವಯೋನಿಜರಿಗೂ ಸುಮಿತ್ರನು. ಸದಾ ಸಿಕ್ಕ ತಕ್ಕವನು. ಅದರಿಂದ ಸುಮಿತ್ರಾಯ ನಮಃ.

72. **ಅರುಣಾಯ ನಮಃ**

ಅರುಣನು ಸೂರ್ಯನ ಸಾರಥಿ, ಗರುಡನ ಬಂಧು, ಜಟಾಯು, ಸಂಪಾತಿಗಳ ತಂದೆ.

ಸೂರ್ಯನ ರಥದ ಸಾರಥಿ ಅರುಣ, ಸೂರ್ಯೋದಯವಾಗುವುದಕ್ಕೆ ಮೊದಲು ಅರುಣೋದಯವಾಗುತ್ತದೆ. ಇದು ಸೂರ್ಯನ ಬರುವಿಕೆಯನ್ನು ಸೂಚಿಸುತ್ತದೆ.

ಅರಣೋದಯದ ಸಮಯ ಬಹಳ ಪ್ರಶಸ್ತ, ಇದನ್ನು ಬ್ರಾಹ್ಮೀ ಮುಹೂರ್ತ ಎಂದು ತಿಳಿಯುತ್ತೇವೆ. ಈ ಸಮಯದಲ್ಲಿ ಧ್ಯಾನ, ಜಪ, ಪೂಜೆ, ತಪಸ್ಸು ಮೊದಲಾದವುಗಳನ್ನು ಮಾಡಿದರೆ ಅದೂ ಪರಮಾತ್ಮನ ಸುಪ್ರೀತಿಗಾಗಿ ಮಾಡಿದಾಗ ಅವನನ್ನು ಬಹಳ ಬೇಗ ಮುಟ್ಟುತ್ತದೆ. ಮತ್ತು ಕರ್ತನು ಸಿದ್ಧಿಯನ್ನು ಪಡೆಯುತ್ತಾನೆ. ಪರಮಾತ್ಮನಿಗೆ ಈ ಸಮಯ ಬಹಳ ಪ್ರೀತಿ. ಅದರಿಂದ ಬ್ರಾಹ್ಮೀ ಮುಹೂರ್ತಕ್ಕೆ ಕಾರಣನಾದ ಅರುಣನಿಗೆ ನಮಸ್ಕಾರಗಳು. ಅರುಣಾಯ ನಮಃ ಎಂದು ಭಕ್ತಿ ಪೂರ್ವಕವಾಗಿ ನಮಸ್ಕರಿಸುವುದು ಶ್ರೇಯಸ್ಕರ.

ಹಗಲು ರಾತ್ರಿಗಳು ಸಂಭವಿಸುತ್ತಿರುವುದರಿಂದ ಸಂಧಿಕಾಲದಲ್ಲಿ ಬೆಳಗಿನ ಜಾವ ಅರಣೋದಯವಾಗುತ್ತದೆ.

ಆದರೆ ಸೂರ್ಯನ ಸುತ್ತಲು ಭೂಮಿಯು ತಿರುಗುತ್ತಿರುವುದರಿಂದ ಮತ್ತು ಭೂಮಿಯು ತನ್ನ ಅಕ್ಷದಲ್ಲಿ ತಾನೇ ತಿರುಗುತ್ತಿರುವುದರಿಂದ ಸೂರ್ಯನಿಗೆ ಎದುರಾಗಿರುವ ಪ್ರದೇಶದಲ್ಲಿ ಬೆಳಕು ಮತ್ತು ಹಿಂದಿರುವ ಭಾಗದಲ್ಲಿ ಕತ್ತಲು ಆಗುತ್ತದೆ. ಅಂದರೆ ನಿರಂತರವಾಗಿ ಭೂಮಿಯ ಯಾವುದೋ ಒಂದು ಭಾಗದಲ್ಲಿ ಅರುಣೋದಯ ಆಗುತ್ತಲೇ ಇರುತ್ತದೆ. ಹಾಗೆಯೇ ಸಾಯಂಕಾಲ ಸಂಧ್ಯೆಯು ನಡೆಯುತ್ತಿರುತ್ತದೆ.

ವಾಸ್ತವವಾಗಿ ಸೂರ್ಯನು ತಿರುಗುವುದಿಲ್ಲ. ಅವನು ಕೇಂದ್ರದಲ್ಲಿ ನಿಂತೇ ಇರುತ್ತಾನೆ. ಭೂಮಿಯು ತಿರುಗುವ ಕಾರಣ ಹಗಲು ರಾತ್ರಿಗಳಾಗುತ್ತವೆ. ನಮಗೆ ಭಾಸವಾಗುವುದು ತದ್ವಿರುದ್ಧ. ವಾಸ್ತವವಾಗಿ ಸೂರ್ಯನ ಕಾರಣ ಅರುಣೋದಯವಾಗುವುದಿಲ್ಲ.

ವಾಸ್ತವವಾಗಿ ಗಮನಿಸಿದರೆ ಭಗವಾನ್ ಸೂರ್ಯನಾರಾಯಣನು ಸಕಲ ಗ್ರಹ ಮಂಡಲಕ್ಕೂ ಅಧಿಪತಿ. ತನ್ನ ಸುತ್ತಲೂ ತಮ್ಮ ಅಕ್ಷದಲ್ಲಿ ಬೇರೆ ಕಾಲ ದೇಶದ ಮಾನದಲ್ಲಿ ಗ್ರಹಗಳು ತಿರುಗುತ್ತವೆ. ಇಂತಹ ಬ್ರಹ್ಮಾಂಡವು ಸೂರ್ಯನನ್ನು ಕೇಂದ್ರವಾಗಿರಿಸಿಕೊಂಡು ತಿರುಗುತ್ತಿರುತ್ತವೆ. ಅರುಣನು ಸೂರ್ಯನ ರಥದಲ್ಲಿ ಸಾರಥಿ. ಅದರಿಂದಲೂ ಮಹತ್ವವನ್ನು ಪಡೆಯುತ್ತಾನೆ. ಹಾಗಾಗಿ ಅರುಣಾಯ ನಮಃ ಎಂದು ಹೇಳುತ್ತೇವೆ.

ಅರುಣನು ಸಹ ಪರಮಾತ್ಮನ ರೂಪವೇ. ಅದಕ್ಕೆ ಅರುಣನನ್ನು ನಮಸ್ಕರಿಸುತ್ತೇವೆ.

ರಾಮಾಯಣದಲ್ಲಿ ಶ್ರೀರಾಮನಿಗೆ ಸೀತಾಪಹರಣದ ಕಾಲದಲ್ಲಿ ಜಟಾಯು ಸಂಪಾತಿಗಳು ಸೀತಾ ದೇವಿಯನ್ನು ಹುಡುಕುವುದಕ್ಕೆ ಸಹಾಯಕರಾಗುತ್ತಾರೆ. ಅರುಣನು ಇವರ ತಂದೆ. ಆದರಿಂದ ವಂದ್ಯನು. ಅದಕ್ಕಾಗಿ ಅರುಣಾಯ ನಮಃ ಎಂದು ಸಂಬೋದಿಸುತ್ತೇವೆ.

*ಶತ್ರುಘ್ನಾಯ ಸುಮಿತ್ರಾಯ ವಿಘ್ನಕೋಟಿಹರಾಯ ಚ ।*
*ರಕ್ಷೋಘ್ನಾಯಾಕೃತಘ್ನಾಯ ಭೂತಜ್ಞಾಯ ನಮೋ ನಮಃ ॥44॥*
*(273-278)*

73. ಶತ್ರುಘ್ನಾಯ ನಮಃ

ಶತ್ರುಗಳನ್ನು, ಘ್ನ - ಸಂಹರಿಸುವವನು ಯಾರೋ ಅವನು ಶತ್ರುಘ್ನ.

ಯಾವ ರೀತಿಯಲ್ಲಿ ಗಮನಿಸಿದರೂ ಸಕಲರಿಗೂ ಶತ್ರುಗಳು ಒಂದಲ್ಲ ಒಂದು ಸಮಯದಲ್ಲಿರುತ್ತಾರೆ. ಇವರು ಹೊರಗಿನವರಾಗಬಹುದು ಇಲ್ಲಾ ನಮ್ಮ ಒಳಗಿರುವ ಕಾಮ, ಕ್ರೋಧ, ಮೋಹ, ಮದ, ಲೋಭ, ಮಾತ್ಸರ್ಯಗಳು ಆಗಬಹುದು.

ಹೊರಗಿನ ಶತ್ರುಗಳು ತಾತ್ಕಾಲಿಕ, ಬದಲಾಗುವಂತಹವರು, ವ್ಯಕ್ತಿಗಳು ಬೇರೆ ಬೇರೆಯಾಗಬಹುದು.

ಆದರೆ ಒಳಗಿನ ಶತ್ರುಗಳು ಸ್ವಭಾವದಲ್ಲಿ ಯಾವಗಲೂ ಜನ್ಮಾದಿಯಿಂದ ಕೊನೆಯವರೆಗೂ (ಒಂದು ಜನ್ಮದಲ್ಲಿ) ಇರುತ್ತಾರೆ. ಏಕೆ, ಕಲ್ಪಾದಿಯಿಂದ ಜೀವಾತ್ಮ ಪರಮಾತ್ಮನಿಂದ ಹೊರ ಹೊಮ್ಮಿದ ಕ್ಷಣದಿಂದ ಮತ್ತೆ ಪರಮಾತ್ಮನಲ್ಲಿ ಐಕ್ಯವಾಗುವವರೆಗೆ ಇರುತ್ತಾರೆ (ಕಾಮ, ಕ್ರೋಧ, ಲೋಭ, ಮದ, ಮೋಹ, ಮಾತ್ಸಾರ್ಯ - 6 = ಅರಿಷಡ್ವರ್ಗಗಳು). ಆದರೆ ಇವು ಪರಮಾತ್ಮನ್ನು ಹೊಂದುವುದಕ್ಕೆ ತಿರುಗಿಸಿದರೆ ಪರಮೋಚ್ಚ ಮಿತ್ರರಾಗುತ್ತಾರೆ. ಇವರಿಗಿಂತ ಉತ್ತಮರು ಶಾಶ್ವತವಾದವರು, ಸದಾ ನಮ್ಮಲ್ಲಿಯೆ ಇರುವವರು ಬೇರೆ ಇಲ್ಲ.

ಪ್ರಪಂಚದ ಮಾಯೆಯ ಕಡೆಗೆ ಈ ಆರು ರೂಪಗಳು ತಿರುಗಿದಾಗ ಸಂಪರ್ಕ ಹೊಂದಿದಾಗ ಇವು ನಮ್ಮ ಉದ್ಧಾರಕ್ಕೆ ಶತ್ರುಗಳಾಗುತ್ತವೆ. ಆಗ ಮನಸ್ಸು ದ್ವಂದ್ವದಲ್ಲಿ ಸಿಕ್ಕಿ ತೊಳಲಾಡುತ್ತದೆ. ಬುದ್ಧಿಯು ವಿವೇಕವನ್ನು ಹೇಳಿ ಮನಸ್ಸನ್ನು ಸಂಯಮದಿಂದ ವರ್ತಿಸಲು ಪ್ರಚೋದಿಸುತ್ತದೆ. ಆಗ ಬುದ್ಧಿಯು ಶತ್ರುಗಳನ್ನು ಸಂಹರಿಸುವ ದಾರಿ ತೋರಿಸಿ ಮನಸ್ಸನ್ನು ಮತ್ತು ಕಾಮ ಕ್ರೋದಾದಿಗಳನ್ನು ಪ್ರಾಪಂಚಿಕ ವಿಷಯ ಸುಖದಿಂದ ಎಳೆಯುತ್ತದೆ. ಮತ್ತು ಪಾರಮಾರ್ಥಿಕದ ಕಡೆಗೆ ತಿರುಗಿಸಿ ಉದ್ಧಾರ ಮಾಡುತ್ತದೆ. ಆಗ ಬುದ್ಧಿಯು ಶತ್ರುಗಳನ್ನು ಸಂಹರಿಸಿ ಶತ್ರುಘ್ನನಾಗುತ್ತದೆ. ಅದರಿಂದ ಬುದ್ಧಿಗೆ ಶತ್ರುಘ್ನಾಯ ನಮಃ ಎಂದು ಹೇಳಬಹುದು. ಆದರೆ ಬುದ್ಧಿಗೂ ಈ ವಿವೇಚನಾ ರೂಪವನ್ನು ತೋರಿಸುವವನು ಪರಮಾತ್ಮನು, - ಸಃ - ''ಯೋ ಬುದ್ಧೇಃ ಪರತಸ್ತು ಸಃ'' ಎಂದು ಕೃಷ್ಣನು ಗೀತೆಯಲ್ಲಿ ಹೇಳಿದ್ದಾನೆ. ಅದಕ್ಕ

*ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ |*
*ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ||*
*ಗೀತಾ.*

ಬುದ್ಧಿಯು ೬ ವೇಹ - ದೇಹಿಗ ಶತ್ರುಘ್ನ.

ಬುದ್ಧಿಗೆ ಪರಮಾತ್ಮನು ಶತ್ರುಘ್ನ.

ಶತ್ರುಘ್ನ ಸ್ವರೂಪದಲ್ಲಿ ಪರಮಾತ್ಮನು ಸದಾ ಸರ್ವಕಾಲದಲ್ಲಿಯೂ ಬುದ್ಧಿಗೆ ಲಭ್ಯ.

ಶ್ರೀರಾಮನ ತಮ್ಮನೂ ಶತ್ರುಘ್ನನು. ಇವನು ಎಂತಹ ಶತ್ರುವನ್ನಾದರೂ ನಿಗ್ರಹಿಸುತ್ತಾನೆ. ಅದರಿಂದ ಇವನನ್ನು ಪ್ರಾರ್ಥಿಸಿದರೆ ಎಲ್ಲರ ಶತ್ರುಗಳೂ ನಾಶವಾಗುತ್ತಾರೆ.

ಅದರಿಂದ ಶ್ರೀರಾಮನ ತಮ್ಮನಾದ ಶತ್ರುಘ್ನನಿಗೆ ನಮಸ್ಕಾರಗಳು.

ಒಳಗಿನ ಶತ್ರುಗಳನ್ನು ಸಂಹರಿಸಲು ನಾವೇ ಪ್ರಯತ್ನಿಸಬೇಕು. ಹೊರಗಿನ ಶತ್ರುಗಳನ್ನು ಸಂಹರಿಸಲು ನಮ್ಮ ಬುದ್ಧಿ, ವಿವೇಕ ಮತ್ತು ಇತರರ ಸಹಾಯ ಮತ್ತು ಪರಮಾತ್ಮನ ಸಹಾಯ ಬೇಕು. ಶತ್ರುಗಳು ಒಳಗಿನವರು, ಹೊರಗಿನವರು ಇದಕ್ಕೆ ಪರಮಾತ್ಮನ ಸಂಕಲ್ಪ ಮಾತ್ರದಿಂದ ಸಾಧ್ಯ. ನಿಸ್ವಾರ್ಥದಿಂದ ಶತ್ರುಗಳನ್ನು ಸಂಹರಿಸುವವನು ಪರಮಾತ್ಮ. ಆದ್ದರಿಂದ ಅವನೇ ಅತ್ಯುತ್ತಮ ಶತ್ರುಘ್ನನು - ಶತ್ರುಘ್ನಾಯ ನಮಃ.

**4. ಸುಮಿತ್ರಾಯ ನಮಃ**

ಶತ್ರುಗಳನ್ನು ಸಂಹರಿಸುವವನು, ಹಿತ ಚಿಂತಕನೇ ಆದ್ದರಿಂದ ಅವನೇ ಸುಮಿತ್ರನೂ ಆಗುವನು. ಪರಮಾತ್ಮನೇ ಇದಕ್ಕೆ ಪರಮೋಚ್ಚ ಬಂಧು ಮಿತ್ರನು, ಇವನಿಗಿಂತ ಉತ್ತಮರಿಲ್ಲ.

ಆದ್ದರಿಂದ ಸುಮಿತ್ರನಿಗೆ ನಮಸ್ಕಾರಗಳು.

ಸುಮಿತ್ರಾಯ ನಮಃ

ಶತ್ರುಘ್ನನು ಸುಮಿತ್ರನಾಗುತ್ತಾನೆ.

ಮಿತ್ರನು ಸುಮಿತ್ರನಾಗುತ್ತಾನೆ.

75. **ವಿಘ್ನಕೋಟಿಹರಾಯ ನಮಃ**

ವಿಘ್ನ - ಅಂದರೆ ಕೆಲಸವು ಸುಗಮವಾಗಿ ನಡೆಯುವುದಕ್ಕೆ ಬರುವ ಅಡ್ಡಿ, ತಡೆಗಳು.

ಕೋಟಿ - ಕೋಟಿ, 100 ಲಕ್ಷ, ಅಂದರೆ ಲೆಕ್ಕವಿಲ್ಲದಷ್ಟು, ಅಗಣಿತವಾದ ಸಂಖ್ಯೆ.

ಹರ - ಬಿಡಿಸುವವನು, ಅಂದರೆ ವಿಘ್ನಗಳನ್ನು ಓಡಿಸುವವನು.

ಅಂದರೆ ಲೆಕ್ಕವಿಲ್ಲದಷ್ಟು ಅಡ್ಡಿ, ಆತಂಕಗಳನ್ನು ತೆಗೆದು ಹಾಕುವವನು. ಇಷ್ಟು ಪರಿಮಿತಿಯ ವಿಘ್ನಗಳನ್ನು ಹೋಗಲಾಡಿಸುವವನು ಬಹಳ ಬಲಶಾಲಿ, ಶಕ್ತಿಶಾಲಿ, ಬುದ್ಧಿಶಾಲಿ, ಸೂಕ್ಷ್ಮ ಮತ್ತು ಸ್ಥೂಲ ರೂಪದವನಾಗಿ ಇರಬೇಕು. ಅಂದರೆ ಜೀವ ಕೋಟಿಯ ಸಾಮಾನ್ಯ ಯೋನಿಜನಿಗೆ ಸಾಧ್ಯವಿಲ್ಲ, ಸಾಧ್ಯವಿದ್ದರೂ ಅವನು ಪರಮಾತ್ಮನ ಅಂಶದಿಂದ ಬಂದವನಾಗಿರಲೇ ಬೇಕು. ಹೆಚ್ಚೇಕೆ, ಅವನು ಪರಮಾತ್ಮನೇ ಇರುತ್ತಾನೆ.

ಅನೇಕ ಜೀವಿಗಳ ಕೋಟಿ ಕೋಟಿ ವಿಘ್ನಗಳನ್ನು ಅವುಗಳ ಸ್ಥಾನದಿಂದ ಎಳೆದು ಹಾಕಬೇಕಾಗಿದ್ದರೆ ಅವನಿಗೆ ಇದೇ ನಿರಂತರ ಕೆಲಸ. ಹೇಗೆ ಮತ್ತು ಏಕೆ ಪರಮಾತ್ಮನು ಇಂತಹ ಕೆಲಸವನ್ನು ಮಾಡುತ್ತಾನೆ ಎಂದರೆ ಅವನಿಗೂ ಸಹ ಯಾವುದಾದರೂ ಬಂಧನವಿರಬೇಕಷ್ಟೆ. ಹಾಗಾದರೆ ಬಂಧನವನ್ನು ಕೊಡುವವರು ಅಥವಾ ನಿರ್ಮಿಸುವವರು ಯಾರು? ಪರಮಾತ್ಮನನ್ನು ಬಂಧಿಸುವವರು ಯಾರು? ಎಂದರೆ ಅವನು ಎಂತಹ ಯೋಗ, ತಪಸ್ಸು ಮುಂತಾದವುಗಳಿಗೆ ಈ ಕಾರಣಕ್ಕೆ ಸಿಕ್ಕುವವನಲ್ಲ. ಆದರೆ ಅತ್ಯಂತ ಶುದ್ಧವಾದ ಪ್ರೇಮಕ್ಕೆ ಬರುತ್ತಾನೆ. ಗೋಪಿಯರ ವಿರಹ ತಾಪದ ಪ್ರೇಮಕ್ಕೆ, ರಾಧಾ ಮಾಧವರ ಅಮರ ದಿವ್ಯ ಅಂತರಾಳದ ಪ್ರೇಮಕ್ಕೆ, ಅವ್ಯಭಿಚಾರಿಣೀ ಭಕ್ತಿಗೆ, ಅನನ್ಯ ಶ್ರದ್ಧೆಗೆ, ಅಂತಃ ಕರಣದಿಂದ ಹೃದಯದ ಒಳಗೆ ಆಳದಲ್ಲಿ ಹುಟ್ಟುವ ಕೂಗಿಗೆ, ಭಗವಂತನಿಗಾಗಿ ಅತ್ಯಂತ ಭಾವದಿಂದ ಅಳುವ ಭಕ್ತರಿಗೆ, ನಿಷ್ಕಾಮ ಭಕ್ತಿ, ಶ್ರದ್ಧೆ, ಪ್ರೇಮಕ್ಕೆ. ಅಂದರೆ ಭಕ್ತನಿಗೂ ಭಗವಂತನಿಗೂ ಇದು ಹೇಗಿರಬೇಕು ಎಂದರೆ ನಾರದರು, ಪ್ರಹ್ಲಾದ ಮೊದಲಾದವರು ನವ ವಿಧ ಭಕ್ತಿಯನ್ನು ವಿವರಿಸುತ್ತಾರೆ. ಭಗವಂತನನ್ನೇ ನಾವು ಅವನು ನಮ್ಮ ಪಿತಾ ಎಂದು, ತಾಯಿ ಎಂದು ತಿಳಿದು ಮಗುವಿನಂತೆ ಅವನನ್ನು ಯಾಚಿಸುವುದು. ಆಗ ಅವನು

''ಪಿತೇವ ಪುತ್ರಸ್ಯ'' ಭಾವನೆಯಿಂದ ತಂದೆಯು ಮಗವನ್ನು ವಾತ್ಸಲ್ಯದಿಂದ ನೋಡುವಂತೆ ಕಾಪಾಡುತ್ತಾನೆ. ತಾಯಿಯು ಮಗುವಿಗೆ ಕೊಡುವ ಮಾತೃವಾತ್ಸಲ್ಯದಿಂದ ಕಾಪಾಡುತ್ತಾನೆ. ಸಖನಂತೆ ಆ ಭಾವನೆಯಲ್ಲಿಯೂ ಕಾಪಾಡುತ್ತಾನೆ. ಪ್ರಿಯೆಯು ತನ್ನ ಪ್ರಿಯನ ಹಾಗೆ ಭಾವನೆಯಲ್ಲಿ ಹಾಗೆಯೇ ಬರುತ್ತಾನೆ. ಎಲ್ಲಕ್ಕಿಂತ ದೊಡ್ಡದು ತನ್ನನ್ನು ತಾನೆ ಅವನಿಗೆ ಕೊಟ್ಟು ಬಿಡುವುದು. ಇದಕ್ಕೂ ಹೆಚ್ಚಾದ್ದು ತನ್ನ ಸರ್ವಸ್ವವನ್ನು ಈ ಲೋಕದಲ್ಲಿ ಇತರ ಲೋಕಗಳಲ್ಲಿ ಎಲ್ಲೆಲ್ಲಿರುವ ಎಲ್ಲ ಜನ್ಮಗಳಲ್ಲಿಯೂ ಬರುವ ಕಲ್ಪಾದಿಯಿಂದ ಈವರೆಗೆ ಈ ಕ್ಷಣದವರೆಗೆ ಮತ್ತು ಮುಂದೆ ಕಲ್ಪಾಂತದವರೆಗೆ ಇರುವ ಬರುವ ಈ ಆತ್ಮಕ್ಕೆ ಸಂಪರ್ಕವಿರುವ ಭಗವಂತನನ್ನೇ ಸೇರಿಸಿ ಎಲ್ಲವನ್ನು ಏನನ್ನು ಇಟ್ಟುಕೊಳ್ಳದೆ ಅವನಿಗೆ ಸಮರ್ಪಿಸಿ ಬಿಡುವುದು ಮತ್ತು ಎಂದೂ ಇವುಗಳನ್ನು ಲವಲೇಶ ಮಾತ್ರವೂ ಹಿಂದಕ್ಕೆ ಪಡೆಯದಿರುವ ಬುದ್ಧಿಯಿಂದ ಸಮರ್ಪಿಸುವುದು ಅತಿ ಉತ್ತಮವಾದ ಶರಣಾಗತಿ. ಇದು ಅಂತರಾಳದ ಕೂಗಿನಿಂದ ಭಕ್ತಿ ಶ್ರದ್ಧೆ ಪ್ರೇಮದಿಂದ ಬಂದಾಗ ಎಂತಹ ವಿಘ್ನ ಕೋಟಿ ಕೋಟಿ ವಿಘ್ನ ಬಂದರೂ ಲವಲೇಶ ಪರಿಣಾಮ ತೋರಿಸಲಾರದೆ ಆಯಾ ಸ್ಥಳ ಕಾಲ ದೇಶಗಳಿಂದ ಹರಣ ಮಾಡಲ್ಪಡುತ್ತದೆ. ಆಗಲೇ ಪರಮಾತ್ಮನು ಈ ಆತ್ಮಕ್ಕೆ ಸಾಕ್ಷಾತ್ಕಾರಕೊಟ್ಟು ತನ್ನ ಸಾಯುಜ್ಯ, ಸಾಮೀಪ್ಯ, ಸಾರೂಪ್ಯ, ಸಾಲೋಕ್ಯಗಳನ್ನು ಕೊಟ್ಟು ತನ್ನಲ್ಲಿ ಲೀನವಾಗಿರಿಸಿಕೊಳ್ಳುತ್ತಾನೆ. ಇದೇ ಸಕಲ ಜೀವಿಗಳು ಯೋಗಿಗಳು, ಭಕ್ತರು ಕೇಳುವ ಕೈವಲ್ಯ ಪದವಿ. ಪುನರಾವೃತ್ತಿ ರಹಿತ ಪರಮ ಪದ - ಮಹಾವಿಷ್ಣುವಿನ ಸನ್ನಿಧಿ.

ಕೋಟಿ ಕೋಟಿ ಜೀವಗಳ ಕೋಟಿ ಕೋಟಿ ಪ್ರಾರ್ಥನೆಗಳಿಗೊಂದೊಂದೇ ಕೂಗಿಗೆ ಬರುವ ನರಹರೀ ನಿನ್ನ ಸಮಾನರ್‍ಯಾರಯ್ಯಾ.....

ನರಹರಿಯ ನಾಮ ಎಲ್ಲ ನಾಮಗಳಿಗೂ ಸಮ ಅದನ್ನು ನಿರೂಪಿಸುತ್ತದೆ. ಕೋಟಿ ಕೋಟಿ ಪ್ರಾರ್ಥನೆ ಮಾಡುವ ಜೀವಿಯು ಭಗವಂತನೇ ಆಗುತ್ತಾನೆ. ಭಗವಾನಯಂ ಮೇ ಹಸ್ತೋ ಭಗವತ್ತರಃ ಎಂದು ರುದ್ರ ನಮಕದಲ್ಲಿ ಹೇಳುವಂತೆ! ಅಲ್ಲವೆ!

76. ರಕ್ಷೋಘ್ನಾಯ ನಮಃ

ರಕ್ಷ - ರಾಕ್ಷಸರು, ಭೂತ, ಪ್ರೇತ, ಪಿಶಾಚಿಗಳು ಎಂದು ಅರ್ಥಮಾಡಬೇಕು, ಘ್ನ - ಸಂಹಾರ ಮಾಡುವುದು.

ರಕ್ಷೋಘ್ನ, ರಾಕ್ಷಸರನ್ನು ಸಂಹಾರ ಮಾಡುವವನು ಯಾರೋ ಅವನು.

ದುಷ್ಟ ಶಕ್ತಿಗಳನ್ನು ಸಂಹರಿಸುವವನು ಯಾರೋ ಅವನು.

ರಾಕ್ಷಸರು, ದುಷ್ಟಶಕ್ತಿಗಳು ಸಾತ್ವಿಕರನ್ನು ಪೀಡಿಸಲು ಸದಾ

ಹಾತೊರೆಯುತ್ತಿರುತ್ತಾರೆ. ಅದರಿಂದ ಪ್ರತಿ ಕ್ಷಣದಲ್ಲಿಯೂ ಸಾತ್ವಿಕರು ಜಾಗರೂಕರಾಗಿರಬೇಕು.

ಸಾಮಾನ್ಯವಾಗಿ ಭೂಮಿಯ ಮೇಲೆ ಎಲ್ಲೆಲ್ಲೂ ಈ ದುಷ್ಟ ಶಕ್ತಿಗಳು ಹರಡಿರುತ್ತವೆ. ಇವುಗಳನ್ನು ಸಂಹರಿಸಿ ಶಾಂತಿ ಮಾಡಲು ಮತ್ತು ಶಾಂತಿ ನೆಲಸಲು ಗೃಹ ಪ್ರವೇಶದ ಸಮಯದಲ್ಲಿ ಸೂರ್ಯಾಸ್ತದ ನಂತರ ರಾತ್ರಿ ಸೂರ್ಯೋದಯದ ಮುನ್ನ ಸಮಯದಲ್ಲಿ ಈ ರಕ್ಷೋಘ್ನ ಹೋಮವನ್ನು ಮಾಡುತ್ತೇವೆ. ರಾಕ್ಷಸ ಗುಣಗಳ, ದುಷ್ಟಶಕ್ತಿಗಳ ನಿಯಂತ್ರಣಕ್ಕೆ ರಾತ್ರಿಕಾಲ ಬಹಳ ಪ್ರಶಸ್ತ. ಅದರಿಂದ ಈ ಹೋಮವನ್ನು ರಾತ್ರಿಯಲ್ಲಿಯೇ ಮಾಡಬೇಕು.

ದುಷ್ಟ ಕಾರ್ಯಗಳು ಎಂದರೆ ಕತ್ತಲಿಗೆ, ಶಿಷ್ಟ ಕಾರ್ಯಗಳು ಬೆಳಕಿಗೆ ಹೋಲಿಸಬಹುದು. ಮತ್ತೆ ಕೆಟ್ಟ ಕೆಲಸಗಳು ಬೆಳಕಿಗೆ ಬರಬಾರದು. ಅದರಿಂದ ತೊಂದರೆ ಮತ್ತು ಪ್ರಚಾರ ಜಾಸ್ತಿ. ಅದರಿಂದ ಕತ್ತಲಿನ ಪ್ರದೇಶ, ಅಮಾವಾಸ್ಯೆ ರಾತ್ರಿಗಳು ಬಹಳ ಪ್ರಶಸ್ತ, ವಾಮಾಚಾರಗಳು ಇದಕ್ಕೆ ಉದಾಹರಣೆ.

ಸಕಲ ರಾಕ್ಷಸರನ್ನು ಮತ್ತು ರಾಕ್ಷಸ ಗುಣಗಳ ಸಂಹಾರಕ್ಕೆ ಪರಮಾತ್ಮನು ಅತ್ಯುತ್ತಮ ಸಹಾಯಕನು. ಅದಕ್ಕೆ ಅವನಿಗೆ ರಕ್ಷೋಘ್ನಾಯ ನಮಃ ಎಂದು ನಮಸ್ಕರಿಸುತ್ತೇವೆ. ದಶಾವತಾರಗಳಲ್ಲಿ ಪರಮಾತ್ಮನು ದುಷ್ಟಗುಣಗಳುಳ್ಳ ವ್ಯಕ್ತಿಗಳನ್ನು ಸಂಹರಿಸಿದನು.

ರಾಕ್ಷಸಿಗುಣ ಸಂಪತ್ತು ನಾಶಕ್ಕೆ ಕಾರಣ. ಅದರಿಂದ ಸರ್ವಕಾಲದಲ್ಲಿಯೂ ಜಾಗೃತ ರಾಗಿರಬೇಕು.

**77. ಅಕೃತಘ್ನಾಯ ನಮಃ**

ಕೃತ - ಮಾಡಲ್ಪಟ್ಟ, ಅ - ಇಲ್ಲದ್ದು. ಇಂತಹ ಸ್ಥಿತಿಯನ್ನು ಘ್ನ - ನಾಶಮಾಡುವವನು. ಅಂದರೆ ಯಾವಾಗಲೂ ಕಾರ್ಯಪ್ರವೃತ್ತರನ್ನಾಗಿ ಮಾಡುವವನು. ಆಲಸ್ಯವನ್ನು ಹೋಗಲಾಡಿಸುವವನು. ಅಂದರೆ ಸ್ಫೂರ್ತಿಯನ್ನು ಕೊಟ್ಟು ಕಾರ್ಯ ಪ್ರವರ್ತಕರನ್ನಾಗಿ ಮಾಡುವವನು.

ಸತ್ಕಾರ್ಯದಲ್ಲಿ ಮನಸ್ಸು ಬರುವಂತೆ ಪ್ರಚೋದಿಸುವವನು ಅಂದರೆ ಪರಮಾತ್ಮನು ತನ್ನಡೆಗೆ ನಮ್ಮ ಮನಸ್ಸು ತಿರುಗವಂತೆ ಮಾಡುವವನು. ವಾಸ್ತವವಾಗಿ ಇದು ನಡೆಯಲೇ ಬೇಕು. ಯಾವಾಗ, ಎಲ್ಲಿ, ಯಾವ ಸನ್ನಿವೇಶದಲ್ಲಿ ಅಂದರೆ ಕಾಲ ದೇಶಗಳನ್ನು ಹೊಂದಿಸಿ ಮಾಡುವುದು ಭಗವಂತನ ಸಂಕಲ್ಪ.

ಸ್ವಾರ್ಥಕ್ಕಾಗಿ, ಪ್ರಾಪಂಚಿಕ ವಸ್ತುಗಳನ್ನು ಹೊಂದುವುದಕ್ಕಾಗಿ ಮಾಡುವ ಕೆಲಸ ''ಅಕೃತ'' ಎನ್ನಬಹುದು. ಏಕೆಂದರೆ ಇವು ಪಾರಮಾರ್ಥಿಕ ಉದ್ಧಾರಕ್ಕಾಗಿ ಅಲ್ಲ. ಅದಕ್ಕೆ ಉಪಯೋಗವಿಲ್ಲ ಅದರಿಂದ ಸಂಸಾರಿಕ ಮತ್ತು ಪ್ರಾಪಂಚಿಕ

ಕೆಲಸಗಳ ಕಡೆ ಮನಸ್ಸು ಹೋಗದೆ ಇರುವಂತೆ ಮಾಡುವುದು ಪರಮಾತ್ಮನ ಹತ್ತಿರ ಹೋಗಲು ಒಂದು ಮೆಟ್ಟಿಲು. ಆದರಿಂದ ಇವನಿಗೆ ಅಕೃತಘ್ನಾಯ ನಮಃ ಎಂದು ನಮಸ್ಕರಿಸುತ್ತೇವೆ.

ಪ್ರಾಪಂಚಿಕ ದೃಷ್ಟಿಯಿಂದ ನೋಡಿದರೆ ವ್ಯಕ್ತಿಯು ದುಷ್ಟ ಶಕ್ತಿಗೊಳಗಾಗಿ ಮಾಡುವುದು ಎಲ್ಲ ವ್ಯರ್ಥ ಮತ್ತು ಅವು ಅಕೃತ ಎಂದು ಈ ದೃಷ್ಟಿಯಲ್ಲಿ ಹೇಳಬಹುದು. ಇವುಗಳಿಂದ ದುಷ್ಟ ಶಕ್ತಿಗಳಿಂದ ಬಿಡಿಸಿಕೊಂಡು ಮಾಡುವ ಕೆಲಸ - ಮಾಡಿಸುವವನು, ಅಕೃತಘ್ನಾಯ ನಮಃ.

78. ಭೂತಜ್ಞಾಯ ನಮಃ

ಭೂತಗಳನ್ನು ತಿಳಿದವನು, ಪಂಚಭೂತಗಳನ್ನು ತಿಳಿದವನು, ಪರಮಾತ್ಮ. ಅಂದರೆ ಇವುಗಳನ್ನು ಸೃಷ್ಟಿಸಿದವನು. ಪಂಚಭೂತಗಳ ಮಿಲನದ ಪರಿಮಾಣಗಳನ್ನು ತಿಳಿದವನಾದ್ದರಿಂದ ಅನೇಕ ಅಗಣಿತ ಜೀವ ಕೋಟಿಗೆ ದೇಹಗಳನ್ನು ಸೃಷ್ಟಿಸುತ್ತಾ ಕಲ್ಪಾದಿಯಿಂದ ಕಲ್ಪಾಂತದವರೆಗೆ ಜೀವಿ ದೇಹಗಳ ಸಮೂಹವನ್ನು ನಿರಂತರ ನಡೆಸುವವನಾದ್ದರಿಂದ ಇವನನ್ನು ಭೂತಜ್ಞಾಯ ನಮಃ ಎಂದು ನಮಸ್ಕರಿಸುತ್ತೇವೆ.

ಭೂತಗಳು ಎಂದರೆ ದುಷ್ಟ ಶಕ್ತಿಗಳು ಎಂದೂ ಅರ್ಥಮಾಡಬಹುದು. ದುಷ್ಟ ಶಕ್ತಿಗಳ ಸ್ವರೂಪಗಳನ್ನು ತಿಳಿದವನು ಭೂತಜ್ಞ. ಅವನಿಗೆ ನಮಸ್ಕಾರಗಳು.

ಪರಮಾತ್ಮನಿಗೆ ತಿಳಿಯದ ವಸ್ತುವೇ ಇಲ್ಲ. ಅಂತಹ ಗುಂಪುಗಳಲ್ಲಿ ಭೂತಗಳೂ ಸಹ ಒಂದು. ಇವುಗಳ ಸ್ವರೂಪ, ಕಾರ್ಯಗಳು, ಅವುಗಳನ್ನು ಮತ್ತು ಅವುಗಳ ಶಕ್ತಿಯನ್ನು ಅಡಗಿಸುವವನು ಪರಮಾತ್ಮ. ಅವನಿಗೆ ನಮಸ್ಕಾರಗಳು.

*ನಮೋ ಜ್ಯೇಷ್ಠಾಯ ಶುಕ್ಲಾಯ ನೀಲವಸ್ತ್ರಧರಾಯ ಚ |*
*ರಕ್ತಮಾಲ್ಯವಿಭೂಷಾಯ ರಕ್ತಗಂಧಾನುಲೇಪಿನೇ ||45|| (279-283)*

79. ಜ್ಯೇಷ್ಠಾಯ ನಮಃ

ಜ್ಯೇಷ್ಠ - ಮೊದಲಿಗನು, ಎಲ್ಲರಿಗಿಂತಲೂ ಹಿರಿಯನು.

ಕಲ್ಪಾಂತ ಪ್ರಳಯ ಕಾಲದಲ್ಲಿ ಪರಮಾತ್ಮನು ವಟಪತ್ರ ಶಾಯಿಯಾಗಿ ಶಿಶು ರೂಪದಲ್ಲಿ ಮಲಗಿರುತ್ತಾನೆ. ಯೋಗ ನಿದ್ರೆಯಲ್ಲಿ ಪವಡಿಸಿರುತ್ತಾನೆ ಮತ್ತು ಪ್ರಳಯಾನಂತರ ಭಗವಂತನನ್ನು ಎಬ್ಬಿಸಲು ಕಾಲ ದೇವನಿಗೆ ಹೇಳಿರುತ್ತಾನೆ. ಸೃಷ್ಟಿಗೆ ಮೊದಲು ಇವನು ನಿರಂತರ ಯೋಗ ನಿದ್ರೆಯಲ್ಲಾಗಲಿ, ಸೃಷ್ಟಿ ಕಾರ್ಯದಲ್ಲಾಗಲಿ ಇರುವುದರಿಂದ ಮತ್ತು ಇವನೇ ಬ್ರಹ್ಮ ಸ್ವರೂಪದಲ್ಲಿ ಸೃಷ್ಟಿ ಮಾಡುವುದರಿಂದ ಇವನಿಗಿಂತ ಮೊದಲಿಗರಿಲ್ಲ. ಕಾಲ ದೇವನು ಸಹ

ಇವನನ್ನು ಎಚ್ಚರಿಸುವುದಕ್ಕೆ ಇರುತ್ತಾನೆ ಎಂದು ಹೇಳಿದರೆ ಕಾಲ ದೇವನ ಆವಿರ್ಭಾವವೂ ಸಹ ಇವನ ಇಚ್ಛೆಯಿಂದಲೇ ನಡೆಯುವುದರಿಂದ ಪರಮಾತ್ಮನೇ ಮೊದಲಿಗನೆಂದಾಯಿತು. ಅದರಿಂದ ಸರ್ವರ ಸೃಷ್ಟಿಗಿಂತಲೂ ಮೊದಲು ಸೃಷ್ಟಿಸುವವನು ಇರಲೇ ಬೇಕಾದ್ದರಿಂದ ಮತ್ತು ಸೃಷ್ಟಿ ಕಾರ್ಯವನ್ನು ಇವನೇ ಮಾಡುವುದರಿಂದ ಇವನು - ಇವನೊಬ್ಬನೇ ಏಕ ಮಾತ್ರ ಜ್ಯೇಷ್ಠನೆಂದು ತಿಳಿಯಬೇಕು.

ಇಂತಹ ಜ್ಯೇಷ್ಠನಿಗೆ ನಮಸ್ಕಾರಗಳು. ಪರಮಾತ್ಮ ಶ್ರೀಮನ್ಮಹಾವಿಷ್ಣುವೇ ಪರಮ ಜ್ಯೇಷ್ಠನು ಎಂದಾಯಿತು.

ಜ್ಯೇಷ್ಠರು ಎಂದರೆ ಹಿರಿಯರು. ಅವರು ಜ್ಞಾನದಲ್ಲಿಯಾದರೆ ಜ್ಞಾನವೃದ್ಧರು ಎಂದು ಹೇಳುತ್ತೇವೆ.

ವಯಸ್ಸಿನಲ್ಲಿ ಹಿರಿಯರಾದರೆ ವಯೋವೃದ್ಧರು ಎನ್ನುತ್ತಾರೆ.

ಸ್ಥಿತಿಗತಿಗಳಲ್ಲಿ ಎಂದರೆ ಶ್ರೀಮಂತಿಕೆಯಲ್ಲಾದರೆ ಶ್ರೀಮಂತಿಕೆ ವೃದ್ಧರು ಎಂದಾಗುತ್ತದೆ.

ಆದರೆ ಶ್ರೀಮಂತಿಕೆಯನ್ನು ಹಣದಿಂದ ಅಳೆಯುವುದೊಂದೇ ರೀತಿ ಇಲ್ಲ. ಹಣವನ್ನು ಕುರಿತಾದರೆ ಐಶ್ವರ್ಯದ ಜ್ಯೇಷ್ಠರು.

ವಿದ್ಯೆಯಲ್ಲಿ ಆದರೆ ವಿದ್ಯಾ ಜ್ಯೇಷ್ಠರು ಎನಿಸುತ್ತಾರೆ.

ಅದರಿಂದ ಸಹ ಬಲದಲ್ಲಾದರೆ ಬಲ ಜ್ಯೇಷ್ಠರು.

ಕಾಯಾ ವಾಚಾ ಮನಸಾ ರೀತಿಯಲ್ಲಿ ಜ್ಯೇಷ್ಠರನ್ನು ಗುರುತಿಸಬಹುದು.

ಆಯಾ ಮಾನದಂಡದ ರೀತ್ಯಾ ಆಯಾ ಶ್ರೇಣಿಯಲ್ಲಿ ಜ್ಯೇಷ್ಠರನ್ನು ಗುರುತಿಸಬಹುದು.

ಆದರೆ ಮೇಲಿನ ಎಲ್ಲ ಮಾನದಂಡದಲ್ಲಿಯೂ ಮತ್ತು ಗುರುತಿಸಲಾಗದ ಮಾನ ದಂಡದಲ್ಲಿಯೂ ಇಲ್ಲಿ ಹೇಳಿದ ಮತ್ತು ಹೇಳದಿರುವ ಎಲ್ಲಾ ಸರ್ವ ಮಾನದಂಡ ರೀತಿಯಲ್ಲಿಯೂ ಜ್ಯೇಷ್ಠನಾಗುವವನು ಪರಮಾತ್ಮನೊಬ್ಬನೇ. ಅವನೇ ಮೊದಲು ಹೇಳಿದ ರೀತಿಯಲ್ಲಿ ಸರ್ವಜ್ಯೇಷ್ಠನಾಗುತ್ತಾನೆ. ಅವನಿಗೆ "ನಮೋ ನ್ನಮಃ" ಎಂದರೆ ಎಲ್ಲ ದುಷ್ಟ ಮನೋ ವೃತ್ತಿಗಳು ನಾಶವಾಗುತ್ತವೆ.

ಜ್ಯೇಷ್ಠರನ್ನು ಕಾಯಾ, ವಾಚಾ, ಮನಸಾ ಅನನ್ಯ ಭಕ್ತಿ, ಶ್ರದ್ಧೆ, ಅವ್ಯಭಿಚಾರಿಣೀ ಶ್ರದ್ಧೆ, ಭಕ್ತಿಯಿಂದ ಗೌರವಿಸುವುದರಿಂದ ಇಹ, ಪರದಲ್ಲಿ ಶ್ರೇಯಸ್ಸು, ಪ್ರೇಯಸ್ಸು ನಿರಂತರ ಉಂಟಾಗಿ ಸರ್ವೋತ್ತಮವಾದ ಕೈವಲ್ಯ ಪದವಿಯನ್ನು, ವಿಷ್ಣುವಿನ ಸಾಯುಜ್ಯ, ಸಾಮಿಪ್ಯ, ಸಾರೂಪ್ಯ, ಸಾನ್ನಿಧ್ಯವನ್ನು ಪಡೆಯುವುದರಲ್ಲಿ ಅನುಮಾನವಿಲ್ಲ.

ನಮ್ಮ ಪ್ರಾಪಂಚಿಕ ಸಂಪರ್ಕದಲ್ಲಿ ಪ್ರತಿಯೊಂದು ರೀತಿಯಲ್ಲಿಯೂ ಸರ್ವ

ಸಮಯ, ಕಾಲ ದೇಶ ರೀತಿಯಾಗಿ ಜ್ಯೇಷ್ಠತ್ವವನ್ನು ಕಾಣುತ್ತಲೇ ಇರುತ್ತೇವೆ. ವಿಚಿತ್ರವೆಂದರೆ ಒಂದು ರೀತಿಯ ಜ್ಯೇಷ್ಠತ್ವವು ಮತ್ತೊಂದು ರೀತಿಯ ಜ್ಯೇಷ್ಠತ್ವದಿಂದ ಕೀಳಾಗುತ್ತದೆ. ಅಂದರೆ ಈ ರೀತಿಯ ಜ್ಯೇಷ್ಠತ್ವದ ಗೊಂದಲದಲ್ಲಿ ಸಿಕ್ಕಿ ಸಂಸಾರವು ಸಾಮರಸ್ಯವಿಲ್ಲದೆ ಮನೋಯುದ್ಧ, ಸಾಮಾಜಿಕ ಯುದ್ಧ ಕ್ಷೇತ್ರವಾಗಿ ಪರಿಣಮಿಸುತ್ತದೆ. ಅದಕ್ಕೆ ಪರಿಹಾರ ಸರ್ವ ಸಮಯದಲ್ಲಿಯೂ ಕಂಡ ಜ್ಯೇಷ್ಠತ್ವವನ್ನು ಪರಮಾತ್ಮನಿಗೆ ನಿರೂಪಿಸಿ ಸಮಾಧಾನ ಕಂಡು ಕೊಂಡರೆ ಸಂಸಾರ ಸಾಗರವು ಜೀವಿಗಳು ದಾಟುವುದಕ್ಕೆ ಸಹಾಯಕವಾಗುತ್ತದೆ.

"ಸರ್ವಸ್ತರತಿ ದುರ್ಗಾಣಿ" ಎಂಬುದು "ಸರ್ವಸ್ತರತಿ ಸಂಸಾರಂ" ಆಗಿ ಪರಿವರ್ತಿಸುತ್ತದೆ. ಆದರಿಂದ ಪರಮಾತ್ಮನೊಬ್ಬನೇ ಜ್ಯೇಷ್ಠ ಎಂದು ನಂಬಬೇಕು, ಒಪ್ಪಬೇಕು, ಶರಣಾಗತರಾಗಬೇಕು. ಜ್ಯೇಷ್ಠಾಯ ನಮಃನಿಗೆ ಜಯ ಜಯ ಜೈ!

ಪ್ರತಿಯೊಂದಕ್ಕೂ ಮೊದಲು ಇರುತ್ತದೆ. ಈ ಮೊದಲೆಂಬುದು ಹಾಗೇ ಉಳಿಯುವುದಿಲ್ಲ. ಇದು ಇನ್ನೊಂದು ರೂಪದ ಮೊದಲಿನಿಂದ ಪರಿವರ್ತನೆಯಾಗುತ್ತದೆ.

ಒಬ್ಬನು ವಿದ್ಯೆಯಲ್ಲಿ ಜ್ಯೇಷ್ಠನಿರಬಹುದು, ವಯಸ್ಸಿನಲ್ಲಿ ಕಿರಿಯನಾಗಿರಬಹುದು ಅಥವಾ ಶ್ರೀಮಂತಿಕೆಯಲ್ಲಿ ಜ್ಯೇಷ್ಠನಿರಬಹುದು. ಸಂತಾನದಲ್ಲಿ ಹಿರಿಯನಾಗದಿರಬಹುದು ಅದರಲ್ಲಿಯೂ ಎಲ್ಲ ಪುತ್ರ ಸಂತಾನವಾಗಿರಬಹುದು. ಅಥವ ಪುತ್ರ ಪುತ್ರಿಯರು ಇರಬಹುದು - ಅವರ ಬುದ್ಧಿ ವಿದ್ಯೆಯ ಮೇಲೆ ಸಮಾಜದಲ್ಲಿ ಜ್ಯೇಷ್ಠತೆಯನ್ನು ಕಂಡು ಹಿಡಿಯಬಹುದು. ಹೀಗೆಯೇ ಮುಂದುವರಿಸುತ್ತಾ ವಿಚಾರ ಲಹರಿಯಲ್ಲಿ ಹೋದರೆ ನಾವು ಮುಳುಗುವುದು ಖಂಡಿತ. ಜ್ಯೇಷ್ಠತೆಯನ್ನು ಅಳೆಯುವುದು ಒಂದು ಬಹಳ ಕಷ್ಟದ ವಿಚಾರವಾಗುತ್ತದೆ. ಆದರಿಂದ ನಾವು ಎಲ್ಲ ರೀತಿಯಲ್ಲಿಯೂ, ಎಲ್ಲ ವರ್ಗ ಮೊದಲಾದವುಗಳಲ್ಲಿಯೂ ಪರಮಾತ್ಮನೇ ಜ್ಯೇಷ್ಠ ಎಂದು ಅಗ್ರ ಪೂಜೆ ಮಾಡಿ ಅವನಡಿಯಲ್ಲಿ ನಾವು ಉದ್ಧಾರವಾಗುತ್ತೇವೆ ಎಂದು ಶರಣಾಗತವಾಗುವುದು ಸರ್ವ ರೀತಿಯಲ್ಲಿಯೂ ಮೇಲು. ಅದಕ್ಕೆ ಪರಮಾತ್ಮನೇ ಜ್ಯೇಷ್ಠನು. ಅವನಿಗೇನೆ ನಮ್ಮ ನಮಸ್ಕಾರಗಳು.

0. ಶುಕ್ಲಾಯ ನಮಃ

ಶುಕ್ಲ - ಶುಕ್ಲ ಪಕ್ಷ, ಬಿಳಿಯ ಬಣ್ಣ, ತೇಜಸ್ಸನ್ನು ನಿರೂಪಿಸುತ್ತದೆ, ನಿರ್ಮಲವಾದದ್ದು.

ಶುಕ್ಲ ಎಂದರೆ ಸ್ವಚ್ಛವಾದ, ಬಿಳಿಯ ಬಣ್ಣ, ತೇಜಸ್ಸುಉಳ್ಳವನು ಯಾರೋ ಅವನಿಗೆ ಶುಕ್ಲಾಯ ನಮಃ.

ಅಂತಹ ಶುಕ್ಲನಿಗೆ ನಮಸ್ಕಾರಗಳು ( ಸುಂದರವಾದದ್ದು ಎಂದು ಹೇಳಬಹುದು).

ಬಳಕೆಯಲ್ಲಿ ಶುಕ್ಲ ಪಕ್ಷ ಎಂದರೆ ಚಂದ್ರನು ತನ್ನ ಆಕಾರವನ್ನು ಹೆಚ್ಚಿಸಿಕೊಳ್ಳುವ ಪಕ್ಷ ಅಂದರೆ 15 ದಿನಗಳು. ಪೂರ್ಣವಾಗಿ ಆಕಾರವನ್ನು ಹೊಂದಿ ಪೂರ್ಣಚಂದ್ರನಾಗಿ ತೇಜಸ್ಸು, ಬೆಳಕನ್ನು ಹೊರ ಚೆಲ್ಲುವುದು ಪೂರ್ಣಿಮಿಯ ದಿನ. ಅಂದು ಚಂದ್ರನು ಪರಿಪೂರ್ಣನಾಗಿ ಪೂರ್ಣ ಬೆಳದಿಂಗಳನ್ನು ಕೊಡುತ್ತಾನೆ. ಸಕಲ ಜೀವಿಗಳಿಗೂ ಸಸ್ಯಗಳಿಗೂ, ಸರ್ವರಿಗೂ ಹಿತವಾದ ಬೆಳಕನ್ನು ಕೊಡುತ್ತಾನೆ. ಈ ಪಕ್ಷವು ಚಂದ್ರನ ಕಾರಣ ಮುಖ್ಯವಾಗುವುದರಿಂದ ಅಂತಹ ಕಾರಣ ಭೂತನಾದ ಪೂರ್ಣ ಶುಕ್ಲ ಪಕ್ಷದ ಚಂದ್ರನಿಗೆ ನಮಸ್ಕಾರಗಳು.

ಸೂರ್ಯ ಚಂದ್ರರು ಪರಮಾತ್ಮನ ನಯನಗಳು, ''ಚಂದ್ರಮಾ ಮನಸೋ ಜಾತಃ'' ಚಂದ್ರಮನು ಪರಮಾತ್ಮನ ಮನಸ್ಸಿನಿಂದ ಬಂದವನು. ಅದರಿಂದ ಮನಸ್ಸೇ ಪರಮೋಚ್ಚವಾದ್ದರಿಂದ ಪರಮಾತ್ಮನೇ ಚಂದ್ರನು. ಅದರಿಂದ ಅವನಿಗೆ ''ಶುಕ್ಲಾಯ ನಮಃ'' ಎನ್ನುತ್ತೇವೆ.

ಶುಕ್ಲಾಯ ನಮಃ ಪರಮಾತ್ಮ ಸ್ವರೂಪನಾದ ಗಣಪತಿಯು ಶುಕ್ಲಾಂಬರಧರನು. ನಿರ್ಮಲವಾದ, ಸ್ವಚ್ಛವಾದ, ಕಲೆಯಿಂದ ಅಂಬರವನ್ನು ಧರಿಸಿರುವ ಗಣಪತಿಯು ಪರಮಾರ್ಕವಾಗಿ ವಿರಾಜಿಸುತ್ತಾನೆ. ಇಂತಹ ಗಣಪತಿಯನ್ನು ಪ್ರಾರ್ಥಿಸುವಾಗ ಮನಸ್ಸು ಪರಮಾತ್ಮನ ಕಡೆಗೆ ಸುಸೂತ್ರವಾಗಿ ಹೋಗಿ ಅವನಲ್ಲಿ ನೆಲೆಯಾಗುತ್ತದೆ. ಈ ಕಾರಣದಿಂದ ಗಣಪತಿಯನ್ನು ಸಹ ಶುಕ್ಲಾಯ ನಮಃ ಎಂದು ಸಂಭೋದಿಸಿ ನಮಸ್ಕರಿಸಬಹುದು.

ಶುಕ್ಲ - ಬಿಳಿಯ ಬಣ್ಣ. ಬಿಳಿಯ ಬಣ್ಣವು ಸ್ವಚ್ಛತೆಯನ್ನು ತೋರಿಸುತ್ತದೆ. ಮನಸ್ಸಿಗೆ ಆಹ್ಲಾದಕರವಾಗಿ ಮಾಡುವುದರಿಂದ ಮನಶ್ಶಾಂತಿಯನ್ನು ಕೊಡುತ್ತದೆ. ಹಾಗೂ ನಾವು ಆ ಶುಕ್ಲವರ್ಣಕ್ಕೆ ಅದೇ ಪರಮಾತ್ಮನ ಸಂಕೇತವೆಂದು ನಮಸ್ಕರಿಸಿದರೆ ತಪ್ಪಲ್ಲ. ಶುಕ್ಲಾಯ ನಮಃ ಎಂದೇ ಹೇಳಿದರೆ ಅಲ್ಲಿಗೆ ಹೋಗುತ್ತದೆ. ಅವನನ್ನೇ ಸೇರುತ್ತದೆ.

ಶುಕ್ಲಯಜುರ್ವೇದ ಎಂದು ಒಂದು ಯಜುರ್ವೇದದ ಭಾಗ. ವೇದಗಳು ಪರಮಾತ್ಮನ ಮುಖಗಳು, ಅದರಿಂದ ಶುಕ್ಲಾಯ ನಮಃ ಎಂದರೆ ವೇದಕ್ಕೆ ವೇದಮಾತೆಗೆ ನಮಸ್ಕರಿದಂತಾಗುತ್ತದೆ. ಈ ವೇದಗಳನ್ನು ಬ್ರಹ್ಮನಿಂದ ಮಧುಕೈಟಭರು ಅಪಹರಿಸಿಕೊಂಡು ಹೋದಾಗ ಮಹಾವಿಷ್ಣುವೇ ಮತ್ಸ್ಯನಾಗಿ ಬ್ರಹ್ಮನ ಸೃಷ್ಟಿಯಲ್ಲಿ ಕಲ್ಪಾಂತದ ಸಮಯದಲ್ಲಿ ರಾಜರ್ಷಿಯೊಬ್ಬನಿಗೆ ಸಿಕ್ಕಿ ಅದು ಕ್ಷಣ ಕ್ಷಣಕ್ಕೆ ದೊಡ್ಡದಾಗಿ ಬೆಳೆಯುತ್ತದೆ. ಬೊಗಸೆ ನೀರಿನಲ್ಲಿ ತೇಲುತ್ತಿದ್ದ ಇದು ಮಹತ್ತಾಗಿ ಬೆಳೆದು ಮಹಾ ಸಾಗರದಲ್ಲಿ ತೇಲಿ ಮುಳುಗಿ ಕೊನೆಗ ರಾಕ್ಷಸನನ್ನು ಸಂಹರಿಸಿ ವೇದಗಳನ್ನು ತಂದು ಬ್ರಹ್ಮದೇವನಿಗೆ ಕೊಡುತ್ತದೆ.

ಅಂತಹ ಮಹಾವಿಷ್ಣುವು ಮತ್ಸನಾಗಿ ಸ್ವಯಂ ತಾನೇ ವೇದಗಳನ್ನು ತರುವುದು ವಿಸ್ಮಯವಾದುದ್ದು. ಪರಮಾತ್ಮನ ಸಂಕಲ್ಪಗಳೇ ವಿಚಿತ್ರ. ವೇದಗಳು ಪರಮಾತ್ಮನ ರೂಪಗಳೇ. ಅವುಗಳನ್ನು ರಕ್ಷಿಸಿದವನೂ ಪರಮಾತ್ಮನೇ ಸಕಲವೂ ಪರಮಾತ್ಮಮಯ. ಇಂತಹ ಪರಮಾತ್ಮನನ್ನು ವೇದನಾಮದಿಂದ ನಮಸ್ಕರಿಸುವುದು ಅತ್ಯಂತ ಶ್ರೇಷ್ಠವೇ ''ಶುಕ್ಲಾಯ ನಮಃ''.

ಯಜ್ಞ ಯಾಗಗಳಲ್ಲಿ ಅಗ್ನಿಯು ಪ್ರಜ್ವಲಿಸುವಾಗ ಶುಕ್ಲವರ್ಣದವನಾದರೆ ಅವನು ಸಂತೃಪ್ತಿ ಹೊಂದಿದ್ದಾನೆಂದು ಸಂಕೇತ. ಆದರಿಂದ ಈ ನಾಮವು ಅಗ್ನಿ ದೇವನಿಗೂ ಅನ್ವಯಿಸುತ್ತದೆ.

ಬಿಳಿಯ ಬಣ್ಣವು ಸರ್ವರಿಗೂ, ಸರ್ವ ಜೀವಿಗಳಿಗೂ ಶಾಂತಿಯನ್ನು ಕೊಡುತ್ತದೆ. ಕೆಂಪು ಬಣ್ಣವು ಹೇಗೆ ಮನಸ್ಸನ್ನು ದಿಗ್ಭ್ರಮೆಗೊಳಿಸುವುದೋ ಅದಕ್ಕೆ ತದ್ವಿರುದ್ಧವಾಗಿ ಬಿಳಿಯ ಬಣ್ಣವು ಶಾಂತಿಯನ್ನು ಕೊಡುತ್ತದೆ.

31. ನೀಲವಸ್ತ್ರಧರಾಯ ನಮಃ

ನೀಲಿಯ ವಸ್ತ್ರವನ್ನು ಧರಿಸಿದವನಿಗೆ ನಮಸ್ಕಾರಗಳು.

ದಿಕ್ಕನೇ ಅಂಬರವಾಗಿ ಇರುವ ಪರಮಾತ್ಮನಿಗೆ ಆಕಾಶವೇ ವಸ್ತ್ರವಾಗಿ ಪರಿಣಮಿಸಿದರೆ ನೀಲವಸ್ತ್ರಧರನಾಗುತ್ತಾನೆ.

ಆಕಾಶದಲ್ಲಿ ಅದಕ್ಕೆ ಬಣ್ಣವೇ ಇಲ್ಲ. ಆದರೆ ಆಕಾಶವು ಮೋಡಗಳಿಲ್ಲದೆ ನಿರ್ಮಲವಾದಾಗ ನೀಲಿಯ ಬಣ್ಣವನ್ನು ಹೊಂದಿರುವಂತೆ ಅನ್ನಿಸುತ್ತದೆ.

ರತ್ನಕ್ಕೆ ನೀಲ ಎನ್ನುತ್ತಾರೆ, ಸೃಷ್ಟಿಯಲ್ಲಿ ಮುತ್ತು, ರತ್ನ, ಪಚ್ಚೆ, ವಜ್ರ, ವೈಡೂರ್ಯಗಳು ಪರಮಾತ್ಮನ ಅಲಂಕಾರಕ್ಕೆ ಉಪಯೋಗಿಸುವ ವಸ್ತುಗಳು. ರತ್ನವೇ ಒಂದು ರೀತಿ ಶ್ರೇಷ್ಟತರವಾದದು. ನೀಲ ಮಣಿಯನ್ನು ಧರಿಸಿರುವವಗೆ ಈ ಹೆಸರಿನಿಂದ ನೀಲವಸ್ತ್ರಧರಾಯ ನಮಃ ಎಂದು ಹೇಳುತ್ತೇವೆ.

32. ರಕ್ತಮಾಲ್ಯವಿಭೂಷಾಯ ನಮಃ

ರಕ್ತವರ್ಣದ ಮಾಲೆಗಳಿಂದ ಅಲಂಕರಿಸಲ್ಪಟ್ಟು ಶೋಭಿಸುವವನು ಯಾರೋ ಅವನು ರಕ್ತಮಾಲ್ಯ ವಿಭೂಷಿತನು.

ನರಸಿಂಹ ಸ್ವಾಮಿಯು ಹಿರಣ್ಯಕಶಿಪುವನ್ನು ಸಂಹರಿಸಿದಾಗ ಅವನ ದೇಹದಿಂದ ಕರುಳಿನ ಮಾಲೆಗಳನ್ನು ತೆಗೆದು ಅದನ್ನೇ ತನ್ನ ಕೊರಳಿಗೆ ಹಾರವಾಗಿ ಹಾಕಿಕೊಂಡನು ಮತ್ತು ರಾಕ್ಷಸನ ರಕ್ತವನ್ನು ಪಾನ ಮಾಡಿದನು. ಇಂತಹ ಕರಾಳ ಕಾರ್ಯವು ಸಿಂಹದ ಮುಖದವನಾದ ನರಸಿಂಹಸ್ವಾಮಿಗೆ ಸಿಂಹದ ಸಹಜವಾದ ಗುಣವಾಗಿತ್ತು. ಆದರೆ ನರನ ದೇಹದವನಿಗೆ ವಿಕಾರವಾಗಿ ಕರಾಳವಾಗಿ ಕಾಣುತ್ತಿತ್ತು. ಆದರೆ ಬ್ರಹ್ಮನ ವರಕ್ಕೆ ಅನುಗುಣವಾಗಿ ರಕ್ಕಸನ ಸಂಹಾರವಾಗಬೇಕಾಗಿತ್ತು. ಅದರಿಂದ ಮಹಾವಿಷ್ಣುವು ಇಂತಹ ವಿಚಿತ್ರವಾದ

ನರಸಿಂಹನಾಗಿ ಅವತರಿಸಿದ್ದನು. ಆದರೆ ದೇವತೆಗಳಿಗೂ, ಮೂರು ಲೋಕದ ಸಮಸ್ತರಿಗೂ ಇದು ಬಹಳ ಭಯಂಕರವಾಗಿ ಕಾಣುತ್ತಿತ್ತು. ತಡೆಯಲಾಗಲಿಲ್ಲ. ಆದ ಕಾರಣ ಶಾಂತ ಮಾಡಲು ಬ್ರಹ್ಮನೇ ಎಲ್ಲರನ್ನು ಮುಂದು ಮಾಡಿಕೊಂಡು ಬಂದು ಸಹಸ್ರನಾಮವನ್ನು ಹೇಳಿ ಹೊಗಳಿದನು. ನರಸಿಂಹನು ಶಾಂತರೂಪವನ್ನು ಹೊಂದಿದನು, ಹೇಗೆ ಆಗಲೀ ನರಸಿಂಹನಿಗೆ ನಾನಾ ಹೆಸರುಗಳು ಉಳಿದುಕೊಂಡವು. ಹೇಗೆಂದರೆ ನರಸಿಂಹ, ಯೋಗಾನರಸಿಂಹ, ಭೋಗಾನರಸಿಂಹ, ಕಂಬದ ನರಸಿಂಹ, ಲಕ್ಷ್ಮೀ ನರಸಿಂಹ, ಲೋಕಾಂಬ ಸಮೇತ ಶ್ರೀ ಲಕ್ಷ್ಮೀ ನರಸಿಂಹ, ಉಗ್ರ ನರಸಿಂಹ ಮುಂತಾಗಿ, ಶಿಬಿಯ ಹೆಸರನ್ನು ಆಧರಿಸಿ ಶೀಬೀ ನರಸಿಂಹ, ಗುಂಜಾ ನರಸಿಂಹ, ಇತ್ಯಾದಿ.

ರಕ್ತಮಾಲ್ಯ ವಿಭೂಷಾಯ ನಮಃ ಎಂದರೆ ಇದು ಪರಮಾತ್ಮನ ಉಗ್ರರೂಪನ್ನು ತೋರಿಸುತ್ತದೆ. ಈ ರೀತಿ ಭಯಂಕರ ರೂಪವನ್ನು ತಾಳಿ ಕಂದ ಪ್ರಹ್ಲಾದನ ಮೊರೆಯನ್ನು ಕೇಳಿ ಮಹಾವಿಷ್ಣುವು ಭಕ್ತನನ್ನು ಪಾಲಿಸಿದನು.

83. ರಕ್ತಗಂಧಾನುಲೇಪಿನೇ ನಮಃ

ನರಸಿಂಹಸ್ವಾಮಿಯು ಹಿರಣ್ಯಕಶಿಪುವನ್ನು ಸಂಹರಿಸಿದ ನಂತರ ಸಿಂಹದ ಸ್ವಭಾವಕ್ಕನುಗುಣವಾಗಿ ರಕ್ತವನ್ನೇ ತನ್ನ ಮೈ ಮೇಲೆಲ್ಲ ಗಂಧದ ರೂಪದಲ್ಲಿ ಗಂಧವೆಂದು ತಿಳಿದು ಹಚ್ಚಿಕೊಂಡನು. ಎಂತಹ ವಿಕಾರ ರೂಪ, ಊಹಿಸಲು ಸಾಧ್ಯವೇ! ನೋಡಲು ಸಾಧ್ಯವೇ! ನೋಡಿದರೆ ತಳೆಯಲು ಸಾಧ್ಯವೇ! ಸಾಮಾನ್ಯವಾಗಿ ನರಸಿಂಹನನ್ನು ನೋಡಲು ಸಾಧ್ಯವಿಲ್ಲ. ಲಕ್ಷ್ಮಿಯೊಡನೆ ಇದ್ದರೆ ತನ್ನ ತೊಡೆಯ ಮೇಲೆ ಕೊಡಿಸಿಕೊಂಡರೆ ಅಂತಹ ಲಕ್ಷ್ಮೀ ನರಸಿಂಹನಾದವನನ್ನು ನೋಡಲು ಸಾಧ್ಯ. ಹಾಗೇನೆ ನರಸಿಂಹನೊಬ್ಬನನ್ನೇ ನೋಡಲು ಸಾಧ್ಯವಿಲ್ಲ. ಹಾಗೆಂದ ಮೇಲೆ ಉಗ್ರನರಸಿಂಹನನ್ನು ನೋಡಲು ಸಾಧ್ಯವಿಲ್ಲ. ಮತ್ತೇನು ರಕ್ತಮಾಲ್ಯ ವಿಭೂಷನಾದ ಕರುಳಿನ ಮಾಲೆಯನ್ನು ಧರಿಸಿ ರಕ್ತ ಪಾನ ಮಾಡುತ್ತ ಹಿರಣ್ಯಕಶಿಪುವಿನ ದೇಹವನ್ನು ತನ್ನ ತೊಡೆಯ ಮೇಲೆ ಇಟ್ಟುಕೊಂಡಿರುವ ನರಸಿಂಹನನ್ನು ನೋಡಲು ಸಾಧ್ಯವೇ ಇಲ್ಲ. ಸಾಕ್ಷಾತ್ತೇನು ಊಹಿಸಲೂ ಸಹ ಮನಸ್ಸು ಬುದ್ಧಿಗಳು ಭಯಪಡುತ್ತದೆ. ಇನ್ನು ಕಂಬದಿಂದ ಕಂಬವನ್ನು ಒಡೆದು ಬರುವ ಉಗ್ರ ನರಸಿಂಹನನ್ನು ಅಂದರೆ ಹಿರಣ್ಯಕಶಿಪುವಿನ ಸಂಹಾರ ಮಾಡುವ ಮೊದಲು ನೋಡಲು ಸಾಧ್ಯವೇ! ಇದನ್ನು ನೋಡಿದವರು ಪ್ರಹ್ಲಾದ. ಹಿರಣ್ಯಕಶಿಪು ಅವನ ಸಭಾ ಮಂಟಪದಲ್ಲಿ ಹತ್ತಿರದಿಂದ ನೋಡಿದವರು ಇವರಿಬ್ಬರೆ! ಒಬ್ಬ ರಾಕ್ಷಸ, ಸ್ವಭಾವಕ್ಕೆ ತಕ್ಕಂತೆ ಕ್ರೂರ್ರ್ಯನು, ಇನ್ನೊಬ್ಬ ಭಕ್ತ ಪ್ರಹ್ಲಾದ, ಮಗು ಪ್ರಹ್ಲಾದ, ಹಸು ಮಗು, ಅನೇಕ ಕಠಿಣ ಶಿಕ್ಷೆಗಳಿಂದ ನೊಂದ ಮಗು! ಹರಿಯನ್ನು ತೋರಿಸುವೆನೆಂದು ಪಣತೊಟ್ಟ ಮಗು! ಅದೂ

ಹರಿಯನ್ನು ಕಂಬದಲ್ಲಿ ಅದೂ ಹಿರಣ್ಯಕಶಿಪುವು ತೋರಿಸಿದ ಕಂಬದಲ್ಲಿಯೇ ತೋರಿಸುವೆನೆಂದು ಶಪಥ ಮಾಡಿದ ಮಗು! ಇನ್ನು ಹರಿ ತಯಾರಾಗಿದ್ದ. ಬ್ರಹ್ಮನು ಹಿರಣ್ಯಕಶಿಪುವಿಗೆ ಇತ್ತ ವರಕ್ಕೆ ತಕ್ಕಂತೆ ಬರಲು! ಆದರೆ ಯಾವ ಕಂಬವನ್ನು ತೋರಿಸುವನೋ! ಸಭಾ ಮಂಟಪದ ಯಾವ ಕಂಬವನ್ನು ತೋರಿಸಿ ಯಾವ ಕಂಬವನ್ನು ಒಡೆಯುವನೋ! ಏನೋ ಯಾರಿಗೆ ಗೊತ್ತು! ಹರಿಯು ಸಾಕ್ಷಾತ್ತಾಗಿ ಎಲ್ಲ ಕಂಬದಲ್ಲಿಯೂ ಏಕ ಕಾಲದಲ್ಲಿ ತಯಾರಾಗಿದ್ದಿರಬೇಕು! ಎಂತಹ ವಿಚಿತ್ರ. ತನ್ನ ಸಾಮಾನ್ಯ ಸೌಮ್ಯ ರೂಪದಿಂದ ವಿಕಾರ ರೂಪವನ್ನು ಧರಿಸಿ, ರಾಕ್ಷಸನೊಬ್ಬನ ಆದೇಶಕ್ಕಾಗಿ ಕಂಬಗಳಲ್ಲಿ ನಿಂತಿರುವ ನರಸಿಂಹ, ಅಹಾ! ಹರಿಯು ಭಕ್ತನ ಉದ್ಧಾರಕ್ಕಾಗಿ ಎಂತಹದನ್ನು ಮಾಡಬಲ್ಲ! ಏನು ಬೇಕಾದರೂ ಆಗಬಲ್ಲ! ಭಕ್ತನಿಗಾಗಿ ಅವನ ಕಿಂಕರನಾಗಿ ಅವನ ಸೇವಕನಾಗಿ ಶತ್ರುವಿನ ಆಕ್ರೋಶಕ್ಕೆ ಏನು ಬೇಕಾದರೂ ಮಾಡಬಲ್ಲ. ತನ್ನ ಅತ್ಯುತ್ತಮ ಸ್ಥಾನವಾದ ವೈಕುಂಠದಿಂದ ಇಳಿದು ಬಂದು ಏನು ಬೇಕಾದರೂ ಆಗಬಲ್ಲ! ಅವನ ಧ್ಯೇಯವೇ ಧ್ಯೇಯ! ಎಂತಹ ಭಕ್ತ ಪರಿಪಾಲಕ! ಹಿರಣ್ಯಕಶಿಪುವೂ ಸಹ ಬೇರೆಯಲ್ಲ! ಅವನೂ ತನ್ನ ಸೇವಕನಾದ ಜಯ ವಿಜಯರಲ್ಲೊಬ್ಬ! ಹಾಗೂ ಸೇವಕನ ಶಾಪವನ್ನು ಹೋಗಲಾಡಿಸಲು ಏನಷ್ಟು ಮಾಡಲು ತಯಾರಾದ! ಭಲೆ! ಹರಿಯೇ! ಇದು ನಿನ್ನ ಮಾಯೆ! ನಿನ್ನ ಮಾಯೆಯೊಳಗೆ ನೀನೇ ಸಿಕ್ಕಿಕೊಂಡೆಯಲ್ಲಾ! ನೀನೇ ಮಾಡಿಕೊಂಡ ಸ್ಥಿತಿ. ಸನಕಾದಿ ಋಷಿಗಳು ಶಾಪಕೊಟ್ಟವರು! ಅವರೂ ನಿನ್ನ ಭಕ್ತರೇ! ಬೇರೆಯವರಲ್ಲ, ಏತಕ್ಕಾಗಿ ಈ ಸನ್ನಿವೇಶ! ಹೇ ಹರಿ ನಿನ್ನ ಮಾಯೆಯನ್ನು ಅವರೇ ಅರಿಯಲಾರದೆ ಈ ನಿನ್ನ ಪ್ರಾಯಶಃ ನಿನ್ನ ಅವತಾರಗಳಿಗಾಗಿ ಮಾಡಿದರೋ ಏನೋ! ಶಾಪವನ್ನು ಜಯ ವಿಜಯರಿಗೆ ಕೊಟ್ಟರೋ ಏನೋ! ಹಾಗೇ ಇರಲಿ! ಆ ಜಯ ವಿಜಯರಿಗೇಕೆ ಹೊಳೆಯಲಿಲ್ಲ. ಅವರು ದ್ವಾರ ಪಾಲಕರಾಗಿ ತಡೆಯುತ್ತಿರುವುದು ಸಾಮಾನ್ಯರನ್ನಲ್ಲ, ದೊಡ್ಡ ಹರಿಯ ಸೃಷ್ಟಿಯ ಮೊದಲಿನ ಮಹರ್ಷಿಗಳನ್ನು, ಬಾಲ ಸನ್ಯಾಸಿಗಳಾದರೂ ಮಹಾ ಪ್ರಭಾವಿಗಳನ್ನು, ಮಹಾ ಕೋಪಿಷ್ಠರನ್ನು ಎಂತಹದೇ ಬಲಿಷ್ಠ ಶಾಪ ಕೊಡುವರೆಂದು ಏಕೆ ತಿಳಿಯಲಿಲ್ಲ! ಪ್ರಾಯಶಃ ಹರಿಯೇ ಇದಕ್ಕೆ ಕಾರಣವಿರಬಹುದು! ತಾನೇ ಅವತಾರಗಳನ್ನು ಎತ್ತಲು ಯೋಚಿಸಿ ಯೋಜನೆಗಳನ್ನು ಹಾಕಿಕೊಂಡು ಈ ಸನ್ನಿವೇಶವನ್ನು ಸೃಷ್ಟಿಸಿ ತನಗೆ ತಾನೇ ಲೀಲೆಯಾಡಬೇಕೆಂದಿರಬಹುದು!

ಹಾಗಾದರೆ ರಕ್ತದ ಕರುಳಿನ ಮಾಲೆಯನ್ನು ಹಾಕಿಕೊಂಡು ರಕ್ತಪಾನ ಮಾಡುತ್ತ ರಕ್ತವನ್ನೇ ಗಂಧವಾಗಿ ಮೈಗೆ ಬಳಿದುಕೊಂಡು, ತನಗೆ ತಾನೇ ಸಂತೋಷ ಪಡಲೆಂದು ಇರಬಹುದು!

ಹೇಗಾದರಾಗಲೀ ಹೊಸ ಹೊಸ ನಾಮಗಳನ್ನು ಬ್ರಹ್ಮನಿಂದ, ಸಾಕ್ಷತ್

ತನ್ನ ಮಗನಿಂದ ಪಡೆಯಬೇಕೆಂದು ಸಂಕಲ್ಪಿಸಿರಬಹುದೋ ಏನೋ! ಯಾರಿಗೆ ಗೊತ್ತು ಹರಿಯ ಸಂಕಲ್ಪ. ದೇವ ದೇವತೆಗಳಿಗೆ ತಿಳಿಯದ್ದು ಸಾಮಾನ್ಯರಾದ ನಮಗೇನು ಗೊತ್ತು! ಅಷ್ಟೆ! ನಾಮ ಸ್ಮರಣೆ ಮಾಡುವುದೊಂದೆ ಅದೂ ಅವನ ಕೃಪೆಯಿಂದಲೇನೆ! ಅಷ್ಟೆ! ಎಷ್ಟು ನೋಡಿದರೂ ಅವನ ರೂಪದಿಂದ ಸ್ಮರಣೆಯಿಂದ ತೃಪ್ತಿ ಬರುವುದಿಲ್ಲ! ಬಂತೆಂದು ಹೇಳಲೂ ಸಾಧ್ಯವಿಲ್ಲ! ಅಲ್ವ! ಕೊನೆ ಎಲ್ಲಿ! ಈ ನಾಮದ ಭಾವನೇ ನಿಲ್ಲಿಸಲು!!!

*ಧುರಂಧರಾಯ ಧೂರ್ತಾಯ ದುರ್ಧರ್ಶಾಯ ನಮೋ ನಮಃ ।*
*ಭೂತಪಾಲಾಧಿವಾಸಾಯ ಭೂತಾವಾಸಯ ತೇ ನಮಃ ॥46॥*
*(284-288)*

84. ಧುರಂಧರಾಯ ನಮಃ

ಧುರಂಧರ ಎಂದರೆ ಭಾರ ಹೊರುವ ಪ್ರಾಣಿ, ಮುಖಂಡ, ನಾಯಕ, ಶ್ರೇಷ್ಠ ಪುರುಷ.

ಇದೆಲ್ಲ ಅರ್ಥಗಳಿಗೂ ಪರಮಾತ್ಮನು ಅನ್ವಯಿಸುತ್ತಾನೆ ಮತ್ತು ಅವನನ್ನು ಈ ಕಾರಣಗಳಿಗಾಗಿ ನಮಸ್ಕರಿಸಬೇಕು.

ಭಾರ ಹೊರುವ ಪ್ರಾಣಿ ಎಂಬ ಅರ್ಥ ಮಾಡಿದರೆ ವರಾಹಾವತಾರದಲ್ಲಿ ವರಾಹ ಸ್ವಾಮಿಯು ಭೂಮಂಡಲವನ್ನು ಅಥವಾ ಮಹಾ ವಿಷ್ಣುವಿನ (ಅಂದರೆ ವರಾಹಾವತಾರ ತನ್ನದೇ ಆದ್ದರಿಂದ) ತನ್ನ ಪ್ರಿಯಳಾದ ಭೂದೇವಿಯನ್ನು ಪಾತಾಳ ಲೋಕದಿಂದ ಬಿಡಿಸಿಕೊಂಡು ತನ್ನ ಕೋರೆ ದಾಡೆಯ ಮೇಲೆ ಎತ್ತಿಕೊಂಡು ತನ್ನ ವೈಕುಂಠ ಲೋಕಕ್ಕೆ ಹೋಗುತ್ತಾನೆ. ಅಂದ ಮೇಲೆ ಈ ಅರ್ಥ ಸರಿ ಹೋಯಿತು. ಧುರಂಧರನಾದ ಅವನಿಗೆ ನಮಸ್ಕಾರಗಳು - ಧುರಂಧರಾಯ ನಮಃ.

ಮುಖಂಡ, ದೇವತೆಗಳಿಗೆಲ್ಲ ಪ್ರಭು, ಉದ್ಧಾರಕನು.

ನಾಯಕ, ದೇವತೆಗಳ ಸೇನೆಗಳ ನಾಯಕ, ದೇವಸೇನಾನಿ ಕುಮಾರ ಸ್ವಾಮಿ ಅಥವಾ ಸುಬ್ರಮಣ್ಯ, ಇವನು ಶಿವ ಪಾರ್ವತಿಯರ ಪುತ್ರ, ಅದರಿಂದ ದೇವ ಸೇನಾಪತಿಯಾದ್ದರಿಂದ ಧುರಂಧರಾಯ ನಮಃ.

ಶ್ರೇಷ್ಠ ಪುರುಷ, ಪರಮಾತ್ಮನು ಪುರುಷರಲ್ಲಿ ಉತ್ತಮನು - ಪುರುಷೋತ್ತಮ, ಎಲ್ಲ ಕಾರಣದಿಂದಲೂ ಎಲ್ಲಾ ತರಹದ ವಿವೇಚನೆಗಳಿಂದಲೂ ನಿರ್ಧರಿಸ ಹೊರಟರೆ ಎಲ್ಲವೂ ''ನೇತಿ, ನೇತಿ'' ಎಂದು ವರ್ಜಿಸಲ್ಪಡುತ್ತದೆ. ಕೊನೆಗೆ ಶ್ರೇಷ್ಠತೆಯಲ್ಲಿ ಉಳಿಯುವವನು ಪರಮಾತ್ಮನೇ. ಇವನೇ ಸರ್ವೋತ್ತಮ, ಪುರುಷೋತ್ತಮ, ಸಮ ಅಥವಾ ಉತ್ತಮರಿಲ್ಲದವನು ಎಂದು ಮುಂತಾಗಿ ಕರೆಯಲ್ಪಡುವವನು.

ಸಾಮಾನ್ಯವಾಗಿ ಇವನನ್ನು ಬಿಟ್ಟು ಬೇರೆಯ ದೇವರುಗಳಾಗಲಿ, ದೇವತೆಗಳಾಗಲಿ, ಮನುಷ್ಯರಾಗಲಿ, ಯಾವ ಯಾವ ಯೋನಿಗಳಲ್ಲಾಗಲಿ, ಅದದರಲ್ಲಿ ಧುರಂಧರರು ಇದ್ದೇ ಇರುತ್ತಾರೆ. ಆದರೆ ಅವುಗಳು, ಅವರುಗಳು ಇವನೊಡನೆ ಹೋಲಿಸಿದಾಗ ಕಡಿಮೆಯಾಗುತ್ತಾರೆ ಮತ್ತು ಅಣುಗಳಾಗಿ ಕಾಣುತ್ತಾರೆ. ಇವನಿಗೆ ಸಮರಾಗ ಬಲ್ಲವರಾರು! ಎಂತಹವರನ್ನು ಎಂತಹ ವರ್ಗಗಳಲ್ಲಿಯೂ ಎಲ್ಲ ರೀತಿಯಲ್ಲಿಯೂ ಶೋಭಿಸುವವನು ಇವನೊಬ್ಬನೇ! ಇಂತಿಂತಹದು ಎಂದು ತೋರಿಸಲು ನಮ್ಮ ಬುದ್ಧಿಯು ಕೆಲಸಕ್ಕೆ ಬಾರದಾಗುತ್ತದೆ. ಹೋಗಲಿ! ಇಲ್ಲಿಗೇ, ಇದು ಸಾಧ್ಯವಿಲ್ಲವೆಂದು ಶರಣಾಗಿ ಅವನೇ ಧುರಂಧರನು ಎಂದು ನಮಸ್ಕರಿಸೋಣ. ಇದೇ ಮೇಲು! ಅವನೇ ಧುರಂಧರಾಯ ನಮಃ ಎನ್ನಿಸಿಕೊಳ್ಳುವವನು, ಧುರಂಧರ ಶ್ರೇಷ್ಠನು ಅವನೇ.

ಪರಮಾತ್ಮನು ತನ್ನ ಲೀಲೆಗೋಸ್ಕರವಾಗಿ ಸೃಷ್ಟಿ, ಸ್ಥಿತಿ, ಲಯವನ್ನು ಬ್ರಹ್ಮಾಂಡಗಳನ್ನು ನಡೆಸುವ ಭಾರವನ್ನು ತನಗಾಗಿಯೇ ಹೊತ್ತಿರುವನು.

ತನ್ನ ಭಕ್ತರನ್ನು ಕಾಪಾಡುವ ಭಾರವನ್ನು ಹೊತ್ತಿರುವನು. ಬ್ರಹ್ಮಾಂಡವನ್ನು ನಡೆಸುವ ಭಾರ ಹೊತ್ತಿರುವ ವಿಚಾರ ಬೇರೆಯವರ ಅಂದರೆ ಜೀವಿಗಳ ಮನಸ್ಸಿಗೆ ಬರುವುದು ಅಪರೂಪ. ಅಂದರೆ ತಾನೇ ಅತ್ಯುತ್ತಮ ಧುರಂಧರನು. ಭಕ್ತೋದ್ಧಾರ ಮಾಡುವವನು ಅತ್ಯಂತ ಉನ್ನತವಾದ ಧುರಂಧರನು ಆಗಲೇ ಬೇಕು. ಪ್ರಚಂಡ ತಾಳ್ಮೆ, ಶಕ್ತಿ, ಬುದ್ಧಿ ಶಕ್ತಿ ಇರಬೇಕು. ಇದಕ್ಕೆ ಸಾಮಾನ್ಯ ವ್ಯಕ್ತಿ ಯಾರೂ ಆಗಲಾರರು. ಪರಮಾತ್ಮನೇ ಇರಬೇಕು. ಆದರಿಂದ ಪರಮ ಪುರುಷೋತ್ತಮನಾದ ಇವನಿಗೆ ಧುರಂಧರಾಯ ನಮಃ ಎಂದು ನಮಸ್ಕರಿಸುತ್ತೇವೆ.

### 35. ಧೂರ್ತಾಯ ನಮಃ

ಧೂರ್ತ ಎಂದರೆ ಮೋಸಗಾರ, ಪರಮಾತ್ಮನಿಗೆ ಧೂರ್ತನೆಂದು ಸಂಭೋಧಿಸಿ ನಮಃ ಎಂದು ಸಹಸ್ರ ನಾಮದಲ್ಲಿ ಧೂರ್ತಾಯ ನಮಃ ಬಂದಿದೆ. ಆದರೆ ಅನುಮಾನ ಬರುವುದು ಇದರಲ್ಲಿ ಹೀಗೆ. ಧೂರ್ತನು ಯಾರು? ಯಾರಿಂದ ಯಾರಿಗೆ ಧೂರ್ತತನವನ್ನು ತೋರಿಸಲ್ಪಟ್ಟಿತು? ಎಂತಹ ಸಂದರ್ಭದಲ್ಲಿ ಹೀಗೆ ಮುಂತಾಗಿ ಬರುತ್ತದೆ. ಈಗ ಭಾವನಾ ಮಾತ್ರದಲ್ಲಿ ಯೋಚಿಸಿದರೆ ಪರಮಾತ್ಮನು ಕರುಣಾಮಯಿ, ದಯಾ ಸಾಗರ, ಕರೆದರೆ ಓಡಿ ಬರುತ್ತಾನೆ. ಈಗಲೂ ಯಾರಿಗಾಗಿ ಅವನ ಈ ಗುಣಗಳು, ಯಾರಿಗಾಗಿ ಓಡಿ ಬರುತ್ತಾನೆ ಎಂದು ಪ್ರಶ್ನೆ ಬರುತ್ತದೆ.

ಈಗ ಈ ರೀತಿ ಪ್ರಶ್ನೆಗಳು ಈ ಎರಡು ವರ್ಗಗಳ ಗುಣಗಳು ಪರಸ್ಪರ ವಿರೋಧವಾಗಿವೆ. ಅಂದರೆ ಯಾರಿಗಾಗಿ ಈ ರೀತಿ ಅವನು ಮಾಡುತ್ತಾನೆಯೋ

ಅವರುಗಳು ವಿರೋಧ ರೀತಿಯಲ್ಲಿ ಅವನನ್ನು ತಿಳಿಯುತ್ತಾರೆ.

ಧೂರ್ತನೆಂದು ಹೇಳುವವರು ಅವನ ಭಕ್ತನ ಶತ್ರುಗಳು. ಅವರು ಎರಡು ವರ್ಗದವರು ಒಂದು ಪರಮಾತ್ಮನ ಭಕ್ತರು, ಅವನಿಗಾಗಿ ಸರ್ವಸ್ವವನ್ನು ತೊರೆದವರು. ಎರಡನೆಯ ವರ್ಗ ಅವನನ್ನು ಬಿಟ್ಟು ಎಲ್ಲವೂ ತಮಗಾಗಿ ಎಂದು ಸ್ವಾರ್ಥ ಭಾವನೆಯಿಂದ ಇರುವವರು.

ಒಂದು ವರ್ಗಕ್ಕೆ ಧೂರ್ತನಾದರೆ ಇನ್ನೊಂದು ವರ್ಗದವರಿಗೆ ಪರಿಪಾಲಕ, ಉದ್ಧಾರ ಮಾಡುವವನು, ಆದರಿಂದ ಪರಮಾತ್ಮನು ದುಷ್ಟರಿಗೆ ಧೂರ್ತನು. ಶಿಷ್ಟರಿಗೆ ಪರಿಪಾಲಕನು. ಇವರನ್ನು ಪರಿಪಾಲಿಸುವಾಗ ಇವರಿಗೆ ಕಷ್ಟ ಕೊಡುವವರ ದೃಷ್ಟಿಯನ್ನು ಪರಮಾತ್ಮನು ಧೂರ್ತನಾಗಿ ಕಾಣಿಸುತ್ತಾನೆ.

ಪರಮಾತ್ಮನು ಮೋಸಗಾರ ಎಂದರೆ ನಮಗೆ ಕಷ್ಟ ಬಂದಾಗ ಅದನ್ನು ನಿವಾರಿಸದಿರುವಾಗ ಅವನು ಧೂರ್ತ ಅನ್ನುತ್ತೇವೆ, ಮೋಸಗಾರ ಎನ್ನುತ್ತೇವೆ. ನಮಗೆ ತಿಳಿಯದೆಯೇ ಕಷ್ಟಗಳು ದುಃಖಗಳು ಬಂದು ಬಿಡುತ್ತವೆ. ನಮ್ಮ ಸ್ಥಿಮಿತತ್ವವನ್ನು ಕೆಡಿಸಿ ಬಿಡುತ್ತವೆ. ಅವನನ್ನು ಧೂರ್ತ, ಮೋಸಗಾರ ಎನ್ನುವ ಸ್ಥಿತಿಗೆ ಮನಸ್ಸು ಬಂದು ಬಿಡುತ್ತದೆ. ನಮಸ್ಕಾರ ಮಾಡದಿದ್ದರೂ ಆದರಿಸದಿದ್ದರೂ ಅವನನ್ನು ಸ್ಮರಿಸುತ್ತಲೇ ಇರುತ್ತೇವೆ. ಇದೂ ಒಂದು ತರಹದ ಧೂರ್ತತನ ಅಲ್ಲವೇ?

ಕೆಲವು ಸಲ ಧೂರ್ತತನವಾದರೂ ಕಾಲಾನುಕಾಲಕ್ಕೆ ನಮಗೆ ಒಳ್ಳೆಯದೇ ಆಗುತ್ತದೆ. ಹೇಗೆಂದರೆ ನಮಗೆ ತಿಳಿಯದೇನೇ ವಾತ್ಸಲ್ಯಮಯನಾದ ಪರಮಾತ್ಮನು ಅಲ್ಲಿ ಇಲ್ಲಿ ದಿಕ್ಕು ದಿವಾಣವಿಲ್ಲದೆ ತಿರುಗುತ್ತಿರುವ ಮನಸ್ಸನ್ನು ತನ್ನ ಎಡೆಗೆ ಎಳೆದುಕೊಳ್ಳುತ್ತಾನೆ. ಇದು ಚೋರತನ, ಧೂರ್ತತನ. ಆದರಿಂದ ಅದರಲ್ಲಿ ಇವನು ನಿಸ್ಸೀಮ, ಅಗ್ರಗಣ್ಯ, ಚೋರಾಗ್ರಗಣ್ಯ. ಆದರಿಂದ ಚೋರಾಗ್ರಗಣ್ಯಂ ಶಿರಸಾ ನಮಾಮಿ, ಧೂರ್ತಾಯ ನಮಃ ಎನ್ನುವುದು. ಇದು ಒಂದು ನಿಂದಾ ಸ್ತೋತ್ರದ ನಾಮವು.

36. ದುರ್ಧರ್ಶಾಯ ನಮಃ

ಧರ್ಶ ಎಂದರೆ ಧೈರ್ಯ, ಬಲಾತ್ಕಾರ, ಅಪಮಾನ, ಉದ್ಧಟತನ, ದುರ್ಧರ್ಶ ನೋಡಲಸಾಧ್ಯವಾದ್ದು.

ಅಥವಾ ಕೆಟ್ಟ ಅಪಮಾನ, ಕೆಟ್ಟ ಬಲಾತ್ಕಾರ, ಹೆಚ್ಚು ಉದ್ಧಟತವಿರುವುದು.

ಇದೂ ಸಹ ದುರ್ಜನರ ದುಷ್ಟರ ದೃಷ್ಟಿಯಲ್ಲಿ ದುಷ್ಟನು. ಪರಮಾತ್ಮನನ್ನು ಎದುರಿಸಲಾರದೆ ಹೇಳುವ ಮಾತು. ಎಂದ ಮೇಲೆ ಪರಮಾತ್ಮನನ್ನು ಅವರವರು ನೋಡುವವರ ತಿಳಿಯುವವರ ದೃಷ್ಟಿಯ ಮೇಲೆ ಈ ನಾಮವು ನಿಂತಿದೆ.

ಒಂದು ರೀತಿಯಲ್ಲಿ ಧರಿಸಲಸಾಧ್ಯವಾದವನೂ ಎಂದೂ ಹೇಳಬಹುದು.

ಅಷ್ಟು ತೇಜಸ್ವಿ, ಶಕ್ತಿ ಶಾಲಿ, ಚತುರನು. ಅದರ ಪ್ರಭಾವನನ್ನು ಸಾಮಾನ್ಯರು ತಡೆಯಲಾರರು. ಅದರಿಂದ ಇವನ ಗುಣಗಳನ್ನು ಸಾಮಾನ್ಯರು ತಡೆಯಲಾರರು. ಅದೇ ರೀತಿ ಇವನ ಅಪಾರ ಕರುಣೆ, ದಯೆ, ಕೃಪೆಯನ್ನು ಸಾಮಾನ್ಯರು ನಿರೀಕ್ಷಿಸಲು ಸಾಧ್ಯವಿಲ್ಲ. ಹಾಗೂ ಆ ರೀತಿಯಲ್ಲಿಯೂ ತಡೆಯಲು ಸಾಧ್ಯವಿಲ್ಲ. ಇವನ ಪ್ರಭಾವವನ್ನು ತಡೆಯಲು ಸಾಧ್ಯವಿಲ್ಲ. ಈ ರೀತಿಯಲ್ಲಿ ಇವನು ದುರ್ಧರ್ಶನು ಎಂದು ಅರ್ಥೈಸಬಹುದು. ಅದರಿಂದ ಇವನು ''ದುರ್ಧರ್ಶಾಯ ನಮಃ''. ಇದು ಒಂದು ನಿಂದಾ ನಾಮ.

87. ಭೂತಪಾಲಾಧಿವಾಸಾಯ ನಮಃ

ಭೂತ - ಪಾಲ - ಅಧಿವಾಸ,

ಅಧಿವಾಸ - ಎಂದರೆ ವಾಸ ಮಾಡುವ ಸ್ಥಳ.

ಭೂತಗಳನ್ನು ಪಾಲಿಸುವವನು ಅಥವಾ ಕಾಡುವವನು ಪರಮಾತ್ಮ. ಪರಮಾತ್ಮನು ಇರುವ ಸ್ಥಳ ಜೀವಿಗಳಲ್ಲಿಯೇ. ಅದರಿಂದ ಜೀವಿಗಳನ್ನು ಕಾಪಾಡುವವನು ಜೀವಿಗಳಲ್ಲಿಯೇ ಇರುವವನು. ಅಂದರೆ ಜೀವಿಗಳೆಲ್ಲರಿಗೂ ಪರಮಾತ್ಮನಿಗೂ ಭೇದವಿಲ್ಲ ಎಂದಾಯಿತು. ಅಂದರೆ ಆತ್ಮಗಳು ಪರಮಾತ್ಮನ ವಾಸಸ್ಥಾನವೆಂದಾಯಿತು.

ವಾಸ್ತವ ರೀತಿಯಲ್ಲಿ ಕಲ್ಪದ ಮೊದಲಿನಲ್ಲಿ ಎಲ್ಲ ಆತ್ಮಗಳು ಪರಮಾತ್ಮನಲ್ಲಿ ಲೀನವಾಗಿರುತ್ತದೆ. ಕಲ್ಪದ ಪ್ರಾರಂಭದಲ್ಲಿ ಆತ್ಮಗಳು ಹೊರ ಹೊಮ್ಮುತ್ತವೆ. ಮತ್ತೆ ಕಲ್ಪಾಂತದಲ್ಲಿ ಅವನಲ್ಲಿಯೇ ಲೀನವಾಗುತ್ತವೆ. ಇದು ಪರಮಾತ್ಮನ ಸೃಷ್ಟಿ ನಿಯಮವಷ್ಟೆ. ಈ ಮಧ್ಯದಲ್ಲಿ ಆತ್ಮಗಳು ತಮಗೆ ಅಂಟಿರುವ ಸಂಸ್ಕಾರಗಳನ್ನು ಪರಮಾತ್ಮನ ಕೃಪಾ ವಿಶೇಷದಿಂದ ಸಂಪೂರ್ಣವಾಗಿ ಕಳಚಿಕೊಳ್ಳುತ್ತವೆ ಮತ್ತು ಸಂಸಾರ ಸಾಗರದ ಅಂಟಿನಿಂದ ಬಿಡುಗಡೆಯಾಗುತ್ತವೆ. ಆಗ ಆತ್ಮನು ತನ್ನೊಡನಿರುವ ಇಂದ್ರಿಯ ದೇವತೆಗಳಿಂದ ಬಿಡಿಸಿಕೊಳ್ಳುತ್ತಾನೆ. ನಂತರ ಉಳಿದಿರುವ ಮನ, ಬುದ್ಧಿ, ಅಹಂಕಾರಗಳನ್ನು ಒಂದೊಂದಾಗಿ ಬಿಡಿಸಿಕೊಂಡು ಆತ್ಮ - ತಾನೇ ಪರಮಾತ್ಮನಲ್ಲಿ ಸೇರಿ ಹೋಗುತ್ತಾನೆ (ಇದು ಯೋಗಿಗಳು ಅನುಸರಿಸುವ ಒಂದು ಮಾರ್ಗ). ಯಾವ ದಾರಿಯಲ್ಲಿ ಹೋದರೂ ಆತ್ಮವು ಹೇಗೆ ಒಂದೊಂದನ್ನು ಅಂಟಿಸಿಕೊಂಡು ಈಗ ದೇಹಗಳಿಂದ ದೇಹಕ್ಕೆ ಹೇಗೆ ಬದಲಾಯಿಸುತ್ತಾ ಹೋಗುವುದೋ ಹಾಗೆಯೇ ಒಂದೊಂದನ್ನು ಬಿಡುತ್ತ ಬಿಡುತ್ತ ಪರಮಾತ್ಮನನ್ನು ಸೇರುತ್ತದೆ. ಪರಮಾತ್ಮನೂ ಆತ್ಮವೂ ಒಂದೇ ''ಸೋಽಹಂ'' ಎಂದಾಗುತ್ತದೆ. ಅದರಿಂದ ಭೂತಪಾಲನಾದ ಪರಮಾತ್ಮನು ಆತ್ಮದಲ್ಲಿ ಇರುತ್ತಾನೆಂದರೆ ಅವನು ಅವನೇ. ಆತ್ಮವು ಆತ್ಮವೇ ಎಲ್ಲಾ ಒಂದೇ ಆದ ಮೇಲೆ ಉಳಿಯುವುದು ಪರಮಾತ್ಮನ ಜೀವಿಗಳ ದೊಡ್ಡ

ಸಾಗರ, ಅದೂ ಇರುವುದಿಲ್ಲ ಪರಮಾತ್ಮನೇ ಆಗುತ್ತದೆ. ಅದಕ್ಕೆ ಭೂತಪಾಲಾಧಿವಾಸಾಯ ನಮಃ ಎಂದಾಗುತ್ತದೆ.

ಭೂತ ಎಂದರೆ ಕಾಲಮಾನದಲ್ಲಿ ''ಕಳೆದು ಹೋದದ್ದು''. ಕಳೆದು ಹೋದುದನ್ನು ಪಾಲ ಎಂದರೆ ಹೆಚ್ಚು ಕಡಿಮೆ ಮತ್ತು ವ್ಯತ್ಯಾಸವಾಗದ ರೀತಿಯಲ್ಲಿ ಜೋಪಾನವಾಗಿ ಇಡುವ ರೀತಿ ಮಾಡುವವನು, ಅಂದರೆ ಕಾಲ ಗರ್ಭದಲ್ಲಿ ಸೇರಿಸಿ ಜೋಪಾನವಾಗಿ ಇಡುವವನು ಪರಮಾತ್ಮನೇ ಹೊರತು ಬೇರೆಯವರಲ್ಲ. ನಡೆದು ಹೋದ ವಿಚಾರವನ್ನು ಅಥವಾ ಕಳೆದು ಹೋದದ್ದನ್ನು ಇಡುವ ಸ್ಥಳವು ''ಕಾಲವೇ'' ಹೊರತು ಬೇರೆಯಲ್ಲ. ಕಾಲಗರ್ಭವು ಎಲ್ಲವನ್ನು ಶೇಖರಿಸಿ ಇಡುತ್ತದೆ. ಈ ಕಾಲನಿಗೆ ಆದಿ, ಅಂತಗಳಿಲ್ಲ. ಯಾವಾಗಿ ಕಾಲವು ಪ್ರಾರಂಭವಾಯಿತೋ ಗೊತ್ತಿಲ್ಲ. ಅದು ಪರಮಾತ್ಮನು ಪ್ರಳಯ ಕಾಲದಲ್ಲಿ ಯೋಗ ನಿದ್ರೆಯಲ್ಲಿದ್ದಾಗಲೂ ಇದ್ದಿತು. ಮತ್ತೆ ಪ್ರಳಯದಿಂದ ಪ್ರಳಯದವರೆಗಿನ ಸಮಯದಲ್ಲಿಯೂ ಸಹ ಇದ್ದಿತ್ತು, ಇದೆ, ಇರುತ್ತದೆ. ಎಲ್ಲದರ ಮಾನದಂಡವೇ ಕಾಲ. ಕಾಲವೇ ಇರದಿದ್ದರೆ ಏನನ್ನೂ ನಿರ್ದೇಶಿಸಲು ಸಾಧ್ಯವಿಲ್ಲ. ಕಾಲ - ಇಂತಹ ವಿಚಿತ್ರವಾದ, ಪ್ರತಿಯೊಂದಕ್ಕೂ, ಪ್ರತಿ ಕ್ಷಣದಲ್ಲಿಯೂ ಪ್ರತಿಯಿಲ್ಲದೇ ಬೇಕೇ ಬೇಕಾದ ಕಾಲವೇ ''ಭೂತಪಾಲಾಧಿವಾಸ'' ಎಂದಾಯಿತು. ಅದರಿಂದ ಇದು ಪರಮಾತ್ಮನ ಹೊರತು ಬೇರೆಯಲ್ಲ. ಆದ್ದರಿಂದಲೇ ಇಂತಹವನಿಗೆ ಭೂತಪಾಲಾಧಿವಾಸಾಯ ನಮಃ ಎಂದು ನಮಸ್ಕಾರಗಳು ಹೇಳುತ್ತೇವೆ. ಸಹಸ್ರ ನಾಮವೇ ದೊಡ್ಡದು. ಸಹಸ್ರವೆಂದರೆ ಸಹಸ್ರವೆಂದಲ್ಲ. ಎಷ್ಟೋ ಇರುತ್ತವೆ. ಅವುಗಳಲ್ಲಿ ಇದು ಒಂದು ನಾಮಗಳ ಗುಂಪು. ಪರಮಾತ್ಮನಿಗೆ ಯಾವುದೂ ಇಷ್ಟೇ ಎಂದಲ್ಲ, ಪರಿಮಿತಿಯಿಲ್ಲ. ಅವನು ಅಪರಿಮಿತ. ಕಾಲನಿಗೆ ಹೇಗೆ ಪರಿಮಿತಿ ಇಲ್ಲವೋ ಹಾಗೇ ಅವನು ಅಪರಿಮಿತ. ಇಂತಹವನಿಗೆ ಭೂತಪಾಲಾಧಿವಾಸ ಎನ್ನುವುದು ಸಹಜವಾಗಿ ಹೊಂದುತ್ತದೆ.

ಭೂತ ಎಂದರೆ ಭೂತಗಳು, ಪಿಶಾಚಿಗಳು, ದೆವ್ವ ಎಂದು ಹೇಳುತ್ತೇವೆ. ಆಗ ಅವುಗಳನ್ನು ಕಾಪಾಡುವವನು ಎಂದು ಹೇಳಬೇಕು. ಅವನು ಪರಮಾತ್ಮನೇ, ಈ ಭೂತಗಳಲ್ಲಿಯೂ ಇರುವುದು ಆತ್ಮಗಳೇ, ಸಂಸ್ಕಾರ ಬಲದಿಂದ ಆತ್ಮವು ಈ ರೀತಿಯ ದೇಹಗಳನ್ನು ಪಡೆಯುತ್ತದೆ. ಕಲ್ಪಾದಿಯಿಂದ ಕಲ್ಪಾಂತದವರೆಗೆ ಪಡೆಯುವ ಚರಾಚರ ಸ್ಥಿತಿಯಲ್ಲಿ, ಯೋನಿಗಳಲ್ಲಿ ಈ ರೀತಿಯೂ ಒಂದು ತತ್ಕಾಲಿಕ ವಸ್ತು ಸ್ಥಿತಿ ಅಷ್ಟೆ. ಅದರಿಂದ ಜೀವಿಗಳನ್ನು ರಕ್ಷಿಸುವವನು ಅವುಗಳಲ್ಲಿಯೇ ಹೇಗೆ ವಾಸಿಸುವನೋ ಅದೇ ರೀತಿ ಇಂತಹ ''ಭೂತ''ಗಳಲ್ಲಿಯೂ ಇರುತ್ತಾನೆ. ಮತ್ತು ತನ್ನ ಸಂಕಲ್ಪಕ್ಕನುಗುಣವಾಗಿ ಇವುಗಳಿಂದ ಅಂದರೆ ಈ ವಿಚಿತ್ರ ಅಸಹ್ಯ ಸ್ಥಿತಿಯಿಂದ ಬಿಡುಗಡೆ ಮಾಡುತ್ತಾನೆ. ಇನ್ನೊಂದು ರೀತಿ ವಿವರಿಸುವುದಾದರೆ, ವಿಮರ್ಶಿಸುವುದಾದರೆ ಅವನು ಇರದ

ಸ್ಥಾನವೇ ಇಲ್ಲ ಎಲ್ಲೆಲ್ಲಿಯೂ ಒಳಗೂ ಹೊರಗೂ ಸರ್ವ ಕಾಲ ದೇಶದಲ್ಲಿಯೂ ವ್ಯಾಪಿಸಿಕೊಂಡಿರುತ್ತಾನೆ. ಅದಕ್ಕೇನೆ ಈ ನಾಮ ಭೂತಪಾಲಾಧಿವಾಸಾಯ ನಮಃ ಎನ್ನುವುದು. ''ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣ ಸ್ಥಿತಃ'' ಎನ್ನುವುದು.

ಭೂತಗಳು ಎಂದರೆ ಪಂಚಮಹಾಭೂತಗಳು, ಪೃಥಿವೀ, ಆಪಃ, ತೇಜಸ್ಸು, ವಾಯು, ಆಕಾಶ. ಆತ್ಮವು ದೇಹವನ್ನು ಹೊಂದಬೇಕಾದರೆ ಈ ಪಂಚ ಭೂತಗಳು ಬೇಕೇ ಬೇಕು. ಸೃಷ್ಟಿಯ ಸಕಲ ಚರಾಚರ ವಸ್ತುಗಳು ಈ ಐದರಿಂದ ಅಥವಾ ಒಂದಲ್ಲ ಒಂದರಿಂದ ಆಗಿರುತ್ತವೆ. ಇವುಗಳ ಪ್ರಮಾಣ ವ್ಯತ್ಯಾಸದಿಂದ ದೇಹಗಳು ಆಗಿ ಅವುಗಳಲ್ಲಿ ಆತ್ಮವು ವಾಸಿಸುತ್ತದೆ. ದೇಹಗಳು ಬೇಡವಾದಾಗ ಆತ್ಮವು ತ್ಯಜಿಸಿ ಬೇರೊಂದು ದೇಹವನ್ನು ಪಡೆಯುತ್ತದೆ. ಈ ರೀತಿಯಲ್ಲಿ ಆತ್ಮವು ತನ್ನ ಸಂಸ್ಕಾರಗಳಿಂದ ಮನೋ ಬುದ್ಧಿ ಅಹಂಕಾರ ಚಿತ್ತ ಇಂದ್ರಿಯಗಳಿಂದ ಒಡಗೂಡಿ ಇರಲು ದೇಹವು ಬೇಕೇ ಬೇಕು. ನಿರ್ದೇಹದಿಂದ ಆತ್ಮವು ಉದ್ಧಾರವಾಗಲು ಸಾಧ್ಯವೇ ಇಲ್ಲ. ಸಂಸ್ಕಾರದಿಂದ ಕೂಡಿರುವ ಆತ್ಮವು ಅವುಗಳಿಂದ ಬಿಡಿಸಿಕೊಳ್ಳಲು ದೇಹವು ಬೇಕೇ ಬೇಕು. ಈ ಪಂಚ ಮಹಾಭೂತಗಳಿಂದ ಕೂಡಿದ ದೇಹದ ಒಳಗೆ ವಾಸಿಸುವವನು ಆತ್ಮನೇ. ದೇಹೋ ದೇವಾಲಯಃ ಪ್ರೋಕ್ತಾ ಜೀವೋ ದೇವಃ ಸನಾತನಃ ಆತ್ಮನು ಶುದ್ಧನು ಪರಮಾತ್ಮನ ಅಂಶ, ಅವನೇ ದೇವರು, ದೇಹದಲ್ಲಿ ವಾಸಿಸುವವನು. ಅದರಿಂದ ಅವನೇ ಭೂತಪಾಲಾಧಿವಾಸನು - ಆತ್ಮನು. ಅದರಂದ ಸರ್ವಕ್ಕೂ ಸಾಕ್ಷೀ ಭೂತನಾದ ಆತ್ಮನೇ ದೇವರು. ನಿತ್ಯ ಶುದ್ಧನು, ನಿತ್ಯ ಬುದ್ಧನು, ನಿತ್ಯನು. ಈ ಕಾರಣದಿಂದ ಆತ್ಮನಿಗೆ ಭೂತಪಾಲಾಧಿವಾಸ ಎಂದು ಕರೆಯುವುದು ಸರ್ವ ಪ್ರಕಾರದಿಂದಲೂ ಸಮರ್ಥವಾಗಿದೆ. ಅವನಿಗೆ ನಮಸ್ಕಾರ, ನಮಸ್ಕರಿಸುವವರು ಯಾರು? ಯಾರಿಗೆ? ಯಾವಾಗ? ಎಲ್ಲಿ? ...? ಅಂದರೆ ಆತ್ಮನೇ ಆತ್ಮಕ್ಕೆ ಸರ್ವಕಾಲ ದೇಶದಲ್ಲಿ ನಮಸ್ಕರಿಸುವುದು ಇದೇ ಸರಿ. ಬೇರೆ ಇಲ್ಲ ಆಗುವುದಿಲ್ಲ. ಹೋಗಲಿ! ವಿಮರ್ಶೆಯನ್ನು ನಿಲ್ಲಿಸುವುದು ಯಾವಾಗ - ಎಲ್ಲಿ - ಎಷ್ಟಕ್ಕೆ .......!

38. ಭೂತಾವಾಸಾಯ ನಮಃ

ಭೂತ ಎಂದರೆ ಭೂತಗಳು, ಆವಾಸ ಎಂದರೆ ಮನೆ, ಆಶ್ರಮ ಸ್ಥಾನ, ಆಶ್ರಯಸ್ಥಾನ, ವಾಸಸ್ಥಾನ.

ಭೂತಗಳು ಎಂದರೆ ಪಂಚ ಮಹಾಭೂತಗಳು - ಪೃಥವೀ, ಆಪ, ತೇಜ, ವಾಯು, ಆಕಾಶ (5).

ಪಂಚಮಹಾಭೂತಗಳು ಪರಮಾತ್ಮನಿಂದ ಅವನ ಮನಸ್ಸಿನ ಇಚ್ಛೆಯಿಂದ

ಬಂದವು. ''ಸೋಽಕಾಮಯತ'' ಅವುಗಳ ವಾಸಸ್ಥಾನ ಪರಮಾತ್ಮನೇ.

ಭೂತ ಎಂದರೆ ಆತ್ಮನೆಂದು ಅರ್ಥ ಮಾಡಿದರೆ, ಆತ್ಮಗಳ ವಾಸಸ್ಥಾನವೂ ಪರಮಾತ್ಮನೇ, ಆತ್ಮಗಳು ದೇಹಗಳಲ್ಲಿದ್ದರೂ ಪರಮ ಗುರಿ ಪರಮಾತ್ಮನನ್ನು ಸೇರುವುದು. ಆದರಿಂದ ಅವನೇ ಆತ್ಮಕ್ಕೆ ವಾಸಸ್ಥಾನವಾಗುತ್ತಾನೆ. ಆದರಿಂದ ಆ ಅರ್ಥದಲ್ಲಿಯೂ ಅವನೇ ಭೂತಾವಾಸನು.

ಪ್ರಪಂಚದ / ಸೃಷ್ಟಿಯ ಸಕಲ ಚರಾಚರ ವಸ್ತುಗಳಿಗೂ ಅವುಗಳ ಮನಸ್ಸಿನಲ್ಲಿ ಬರುವ ಆಲೋಚನೆಗಳು ಒಂದೇ - ಹೇಗೆ ಈ ಝಂಜಾಟದಿಂದ ಪಾರಾಗಿ ಪರಮಾತ್ಮನನ್ನು ಸೇರುವುದು. ತಮ್ಮ ಅಂತಿಮ ನೆಲೆ ಪರಮಾತ್ಮನಲ್ಲಿಯೇ ಇದೆ ಎಂದು ಎಲ್ಲ ಜೀವ ಕೋಟಿಯು ತಿಳಿದಿದೆ. ಅವನೇ ಭೂತಾವಾಸನು ಬೇರೊಬ್ಬರಿಲ್ಲ.

*ಭೂತಭೇತಾಲಘಾತಾಯ ಭೂತಾಧಿಪತಯೇ ನಮಃ ।*
*ಭೂತಗ್ರಹವಿನಾಶಾಯ ಭೂತಿಸಂಯಮಿನೇ ನಮಃ ॥47॥ (289-292)*

289. ಭೂತಭೇತಾಲಘಾತಾಯ ನಮಃ

ಭೂತ ಎಂದರೆ ದುಷ್ಟ ಶಕ್ತಿಗಳು ಎಂದು ಇಲ್ಲಿ ಅರ್ಥ ಮಾಡಬೇಕು.

ಭೇತಾಲವೂ ಒಂದು ರೀತಿಯ ದುಷ್ಟ ಶಕ್ತಿ. ಇವುಗಳನ್ನು ನಾಶಮಾಡುವುದಕ್ಕೆ ಘಾತ ಎಂದು ಹೇಳುತ್ತೇವೆ. ಅಥವಾ ಘಾತ - ಎಂದರೆ ಹೊಡೆಯುವುದು - ಅಂದರೆ ದುಷ್ಟ ಶಕ್ತಿಗಳನ್ನು ನಾಶಮಾಡುವವನು ಯಾರೋ ಅವನು ಭೂತ ಭೇತಾಲಘಾತನು, ಅವನು ಪರಮಾತ್ಮನು. ಈ ಶಕ್ತಿಗಳಿಗಿಂತ ಶಕ್ತಿವಂತನು ಅವನು.

ಪರಮಾತ್ಮನ ಬದಲು ಪ್ರತಿಯೊಂದು ಯೋನಿಯಲ್ಲಿಯೂ ಒಬ್ಬರಿಗಿಂತ ಮತ್ತೊಬ್ಬರು ಶಕ್ತಿವಂತರಿರುತ್ತಾರೆ.

ಪ್ರತಿಯೊಂದು ದುಷ್ಟ ಶಕ್ತಿಗೂ ಅದನ್ನು ನಿಗ್ರಹಿಸುವ ಮತ್ತೊಂದು ಶಕ್ತಿಯು ಇರುತ್ತದೆ. ಇದು ಯಾವ ರೀತಿಯದಾದರೂ ಆಗಬಹುದು. ಇದನ್ನು ಸಹ ಭೂತ ಭೇತಾಲ ಘಾತಾಯ ನಮಃ ಎಂದು ಸಂಭೋಧಿಸಬಹುದು.

ದುಷ್ಟ ಶಕ್ತಿಯೆಂದು ಕರೆಯಲ್ಪಡುವ ಎಲ್ಲ ಶಕ್ತಿಗಳನ್ನು ದುಷ್ಟ ಚೇಷ್ಟೆಗಳನ್ನು ನಿಗ್ರಹಿಸುವ ಶಕ್ತಿಗೆ ಭೂತ ಭೇತಾಲ ಘಾತ ಶಕ್ತಿ ಎಂದು ಹೇಳಬಹುದು. ಹಿಂದೆ ಹೇಳಿದಂತೇ ಪರಮಾತ್ಮನೇ ಅತ್ಯುತ್ತಮ ಭೂತಭೇತಾಲ ಘಾತ ಶಕ್ತಿ. ಇದಕ್ಕೆ ಸರ್ವಕಾಲದಲ್ಲಿಯೂ ಸರ್ವ ರೀತಿಯಲ್ಲಿಯೂ ನಮಸ್ಕಾರಗಳು.

290. ಭೂತಾಧಿಪತಯೇ ನಮಃ

ಭೂತಗಳಿಗೆ ಅಧಿಪತಿ, ಅಂದರೆ ಒಡೆಯನು, ಇಲ್ಲಿಯೂ ಸಹ ಪರಮಾತ್ಮನೇ ಸರ್ವೋತ್ತಮ ಭೂತಾಧಿಪತಿ. ಪಂಚಭೂತಗಳಿಗೆ ಅಧಿಪತಿಯು ಪರಮಾತ್ಮನು

ಏಕೆಂದರೆ ಅವನ ಇಚ್ಛೆಯಂತೆಯೇ ಪಂಚ ಮಹಾಭೂತಗಳಾದ ಪೃಥವಿ, ಆಪಃ, ತೇಜಸ್ಸು, ವಾಯು, ಆಕಾಶಗಳು ಸೃಷ್ಟಿಯಾದವು. ಆಕಾಶವು ಮೊದಲು ಸೃಷ್ಟಿಯಾಗಿ ನಂತರ ಇತರ ಮಹಾಭೂತಗಳು ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ನೀರು, ನೀರಿನಿಂದ ಭೂಮಿಗಳು ಬಂದವು. ಇವುಗಳಿಗೆ ಪರಮಾತ್ಮನೇ ಕಾರಣ. ಅವನ ಮನಸ್ಸೇ ಕಾರಣ. ಅದರಲ್ಲಿಯೇ ಇವುಗಳು ಲೀನವಾಗುತ್ತವೆ. ಅದರಿಂದ ಅವನೇ ಅಧಿಪತಿ.

ದುಷ್ಟ ಶಕ್ತಿಗಳನ್ನು ಭೂತಗಳೆಂದು ತಿಳಿದರೆ ಆಗಲೂ ಅವುಗಳನ್ನು ನಿಗ್ರಹಿಸುವವನೂ, ಅವುಗಳನ್ನು ಪ್ರೋತ್ಸಾಹಿಸುವವನೂ ಪರಮಾತ್ಮನೇ, ಅವನೇ ಅಧಿಪತಿ.

ಭೂತ ಎಂದರೆ ಆತ್ಮ ಎಂದು ಅರ್ಥ ಮಾಡಿದಾಗ ಎಲ್ಲ ಆತ್ಮಗಳಿಗೂ ಉತ್ತಮನಾದವನು, ಒಡೆಯನು ಪರಮಾತ್ಮನೇ ಆಗುತ್ತಾನೆ. ಏಕೆಂದರೆ ಅವುಗಳು ಜಗತ್ತಿಗೆ ಬರುವುದಕ್ಕೂ, ಇಲ್ಲಿ ಇರುವುದಕ್ಕೂ ಮತ್ತು ಪರಮಾತ್ಮನಲ್ಲಿ ಲೀನವಾಗುವುದಕ್ಕೂ ಅವನೇ ಕಾರಣ. ಎಲ್ಲವನ್ನು ಅಂದರೆ ಆತ್ಮಗಳ ಆಗು ಹೋಗುಗಳನ್ನು ನಿರ್ಧರಿಸುವ ಶಕ್ತನು ಪರಮಾತ್ಮನೊಬ್ಬನೆ. ಅದರಿಂದ ಅವನೇ ಎಲ್ಲಕ್ಕೂ ಅಧಿಪತಿ. ಅಂದರೆ ಭೂತಾಧಿಪತಿಯು.

1. ಭೂತಗ್ರಹವಿನಾಶಾಯ ನಮಃ

ಭೂತಗ್ರಹ ಎಂದರೆ ಭೂತಗಳ ಗುಂಪು, ದುಷ್ಟ ಶಕ್ತಿಗಳು ಒಂದೊಂದಾಗಿ ಇದ್ದರೆ ಅವುಗಳ ಶಕ್ತಿ ಅಷ್ಟು ಬಲಿಸುವುದಿಲ್ಲ. ಆದರೆ ಗುಂಪು ಗುಂಪಾಗಿ ಬಂದಾಗ ಅಪಾರ ಶಕ್ತಿಯುಕ್ತವಾಗಿರುತ್ತವೆ. ಸಾಮಾನ್ಯವಾಗಿ ಇಂತಹದನ್ನು ನಾಶಪಡಿಸಲು ಬಲವಾದ ಶಕ್ತಿಯೇ ಬೇಕು.

ನಾಶ - ಎಂದರೆ ತಾತ್ಕಾಲಿಕ ನಾಶ, ವಿನಾಶ - ಎಂದರೆ ಸಂಪೂರ್ಣವಾಗಿ ಸದಾ ಕಾಲಕ್ಕೂ ನಾಶ ಪಡಿಸುವುದು.

ಇದಕ್ಕೆ ಪರಮಾತ್ಮನೇ ಸರ್ವಶಕ್ತನು. ಅವನು ಇಂತಹ ದುಷ್ಟ ಶಕ್ತಿಗಳನ್ನು ವಿನಾಶ ಪಡಿಸಿದನೆಂದರೆ ಅವುಗಳು ಮತ್ತೆ ತಲೆ ಎತ್ತುವುದೇ ಇಲ್ಲ. ಹಾಗೆ ಮತ್ತೆ ತಲೆ ಎತ್ತಲು ಸಾಧ್ಯವಿಲ್ಲ, ಹಾಗೆ ಇವನನ್ನು ಭೂತಗ್ರಹ ವಿನಾಶಾಯ ನಮಃ ಎನ್ನುತ್ತೇವೆ.

ಭೂತಗಳು, ನವಗ್ರಹಗಳು, ಶಕ್ತಿ ದೇವತೆಗಳು ಮುಂತಾಪವುಗಳೆಲ್ಲವನ್ನು ಕಾಯುವವನು ಅಥವಾ ಅವುಗಳಿಗೆ ಬರುವ ತೊಂದರೆಗಳನ್ನು ನಿವಾರಿಸುವವನು - ಪರಮಾತ್ಮ.

ಅವುಗಳ ದೃಷ್ಟಿಯಿಂದ ಅವುಗಳಿಗೆ ಬರುವ ತೊಂದರೆಗಳನ್ನು ನಾಶಪಡಿಸುವವನು. ಎಂದೂ ಸಹ ಅರ್ಥ ಮಾಡಬಹುದು.

292. ಭೂತಿಸಂಯಮಿನೇ ನಮಃ

ಭೂತಿ ಎಂದರೆ ಜನ್ಮ, ವಿ - ಭೂತಿ, ಭಸ್ಮ.

ಭೂತಿ - ಸಿದ್ಧಿ, ಯಶಸ್ಸು, ಮಹಿಮೆ, ಮುಂತಾದವು.

ಭೂತಿಯನ್ನು ತನ್ನ ಆಜ್ಞೆಗೆ ಒಳಪಡಿಸುವವನು.

ಎಲ್ಲವನ್ನು ಸೃಷ್ಟಿಯ ಸಕಲವನ್ನು ತನ್ನ ಇಷ್ಟದಂತೆ ನಡೆಯುವಂತೆ ಮಾಡುವವನು ಯಾರೋ ಅವನು, ಎಂದರೆ ಪರಮಾತ್ಮನೇ ಆಗಬೇಕು.

ಮೇಲಿನಂತೆ ಯಾವ ಅರ್ಥದಲ್ಲಿ ತೆಗೆದುಕೊಂಡರೂ ಅವುಗಳನ್ನು ಒಂದು ಎಲ್ಲೆಯಲ್ಲಿ ಇಡುವವನು ಪರಮಾತ್ಮನ ಹೊರತು ಬೇರೆಯವರು ಇಲ್ಲ.

*ಮಹಾಭೂತಾಯ ಭ್ಯಗವೇ ಸರ್ವಭೂತಾತ್ಮನೇ ನಮಃ ।*
*ಸರ್ವಾರಿಷ್ಟವಿನಾಶಾಯ ಸರ್ವಸಂಪತ್ಕರಾಯ ಚ ॥48॥*
*(293-297)*

93. ಮಹಾಭೂತಾಯ ನಮಃ

ಮಹಾ ಎಂದರೆ ಅತಿ ಶಕ್ತಿಯುತವಾದ್ದು, ಮಹತ್, ಪರಿಮಾಣದಲ್ಲಿ, ಗುಣದಲ್ಲಿ ಅತ್ಯುನ್ನತವಾದ್ದು, ಇದಕ್ಕಿಂತ ಬೇರೆ ಯಾವುದೂ ಉನ್ನತವಾದುದು, ಉತ್ತಮವಾದದು ಇಲ್ಲ.

ಅತಿ ಚತುರತೆಯಲ್ಲಿಯೂ ಪರಮಾತ್ಮನನ್ನು ಬಿಟ್ಟು ಬೇರೆ ಯಾವುದೂ ಇಲ್ಲ.

ಸೃಷ್ಟಿ, ಸ್ಥಿತಿ ಮತ್ತು ಲಯಗಳಲ್ಲಿ ಪಂಚ ಮಹಾಭೂತಗಳ ಪಾತ್ರ ಬಹು ಮುಖ್ಯವಾದುದು. ಈ ಐದು ಅಂದರೆ ಪೃಥಿವಿ, ಆಪಃ, ತೇಜಸ್ಸು, ವಾಯು, ಆಕಾಶಗಳಿಲ್ಲದೆ ಯಾವ ಜೀವಿಯೂ ದೇಹವನ್ನು ಪಡೆದು ಕರ್ಮಗಳನ್ನು ಮಾಡಲು ಸಾಧ್ಯವಿಲ್ಲ. ದೇಹವಿದ್ದರೆ ಜಗತ್ತಿನಲ್ಲಿ ಆತ್ಮವು ಜಗತ್ತಿನ ಸಂಪರ್ಕವನ್ನು ಇಟ್ಟುಕೊಂಡು ತನ್ನ ಪರಮ ಗುರಿಯಾದ ಪರಮಾತ್ಮನನ್ನು ಸೇರುವುದು ಸಾಧ್ಯ.

ಅದರಿಂದ ಮಹಾಭೂತಗಳ ಪಾತ್ರ ಬಹಳ ವಿಚಿತ್ರವಾದುದು. ಮಹಾಭೂತಗಳಲ್ಲಿ ಪರಮಾತ್ಮನು ಒಳಗೂ ಹೊರಗೂ ಇರುವುದರಿಂದ ಅನ್ವರ್ಥವಾಗಿ ಅವನನ್ನು ಮಹಾಭೂತಾಯ ನಮಃ ಎಂದು ನಮಸ್ಕರಿಸುವುದು ಸಮಂಜಸ. ಈ ಪಂಚಭೂತಗಳಿಗೆ ಕಾರಣನಾದ ಅವನನ್ನು ಮಹಾಭೂತನೆಂದೇ ಕರೆಯುವುದು ಉಚಿತವೇ ಸರಿ.

ಆತ್ಮಗಳನ್ನು ಕೇಂದ್ರ ಬಿಂದುವಾಗಿ ದೇಹ, ಆತ್ಮಗಳನ್ನು ಅವಲೋಕಿಸಿದರೆ ಆತ್ಮವು ಮಹತ್ತರವಾದ್ದು. ಅವಿನಾಶಿ, ನಿತ್ಯ, ಇತ್ಯಾದಿ. ಇವುಗಳಿಗಿಂತಲೂ

ಶ್ರೇಷ್ಠವಾದವನು ಪರಮಾತ್ಮ. ಈ ಕಾರಣದಿಂದಲೂ ಅವನನ್ನು ಮಹಾಭೂತನೆಂದೇ ಕರೆಯಬೇಕು.

94. ಭೃಗವೇ ನಮಃ

ಭೃಗು ಮಹರ್ಷಿಗಳು ವೈಕುಂಠ, ಕೈಲಾಸ, ಬ್ರಹ್ಮ ಲೋಕದಲ್ಲಿ ಹೋಗಿ ತ್ರಿಮೂರ್ತಿಗಳಲ್ಲಿ ಯಾರು ಶ್ರೇಷ್ಠರು ಎಂದು ಕಂಡು ಹಿಡಿಯಲು ಋಷಿಗಳ ಸಮೂಹ ಒಂದು ಸನ್ನಿವೇಶದಲ್ಲಿ ನಿರ್ಧರಿಸಿದರು. ಆಗ ಅವರು ಕ್ರಮವಾಗಿ ಬ್ರಹ್ಮ ಲೋಕ, ಕೈಲಾಸ ಮತ್ತು ವೈಕುಂಠಕ್ಕೆ ಹೋಗಿ ಬ್ರಹ್ಮ ಸರಸ್ವತಿಯರನ್ನು, ಶಿವ ಪಾರ್ವತಿಯರನ್ನು ಮತ್ತು ಶ್ರೀಮನ್ನಾರಾಯಣ ಲಕ್ಷ್ಮಿಯರನ್ನು ದರ್ಶನ ಮಾಡಿದರು. ಇದು ಪುರಾಣ ಕಥೆ, ಇದು ಈ ರೀತಿ ಇದೆ - (ಸಂಕ್ಷಿಪ್ತ ವಿವರಣೆ ಅಗತ್ಯ)

ಬ್ರಹ್ಮ ಲೋಕದಲ್ಲಿ ಭೃಗು ಮುನಿಗಳು ಹೋದಾಗ ಬ್ರಹ್ಮನು ತಮೋಗುಣ ಪ್ರಧಾನದಲ್ಲಿ ಆವರಿಸಲ್ಪಟ್ಟಿದ್ದನು. ಮುನಿಗಳನ್ನು ಸೂಕ್ತವಾಗಿ ಸನ್ಮಾನಿಸಲಿಲ್ಲ ಮತ್ತು ನೋಡಲೇ ಇಲ್ಲ. ಇದರಿಂದ ಕೋಪಗೊಂಡು ಮುನಿಗಳು "ಬ್ರಹ್ಮದೇವನಿಗೆ ಪೂಜೆಯೇ ಇರದಿರಲಿ" ಎಂದು ಶಾಪವನ್ನು ಕೊಟ್ಟು ಕೈಲಾಸಕ್ಕೆ ಹೋದರು.

ಕೈಲಾಸದಲ್ಲಿ ಪರಶಿವ ಮತ್ತು ಪಾರ್ವತಿಯರು ಒಟ್ಟಿಗೆ ಇದ್ದುದರಿಂದ ಅವನು ಸರಿಯಾಗಿ ಸತ್ಕಾರ ಮಾಡಲಿಲ್ಲವೆಂಬ ಕಾರಣದಿಂದ ಶಿವನಿಗೂ ಸೂಕ್ತ ಶಾಪವನ್ನು ಕೊಟ್ಟು ವೈಕುಂಠಕ್ಕೆ ಬಂದರು.

ವೈಕುಂಠದಲ್ಲಿ ಬಂದಾಗ ಶ್ರೀಹರಿಯೂ ಶೇಷಶಯನನಾಗಿ ಲಕ್ಷ್ಮಿಯಿಂದ ಸೇವೆಯನ್ನು ಪಡೆಯುತ್ತಿದ್ದನು. ಆದರೆ ಕೋಪಗೊಂಡ ಮುನಿಗಳು ಶ್ರೀಹರಿಯ ವಕ್ಷಸ್ಥಳಕ್ಕೆ ತಮ್ಮ ಪಾದದಿಂದ ತಾಡನ ಮಾಡಿದರು. ತಕ್ಷಣ ಅವರು ದೂರ ಬಿದ್ದರು. ಶ್ರೀಹರಿಯು ಹತ್ತಿರ ಬಂದ ಭೃಗು ಮುನಿಯ ಪಾದವನ್ನು ಹಿಡಿದು, ಒತ್ತಿ, ಪಾದಕ್ಕೆ ತನ್ನ ವಕ್ಷದಿಂದ ನೋವಾಯಿತೆಂದು ಸಂಕಟ ಪಟ್ಟು ಸೇವಿಸಿದನು. ಅಷ್ಟೆ ಅಲ್ಲದೆ ಮುನಿಗಳ ಪಾದ ಮುಟ್ಟಿದ ವಕ್ಷ ಸ್ಥಳದಲ್ಲಿ "ಭೃಗಲಾಂಛನ" ಎಂದು ಮಾಡಿ ಸ್ಥಳವನ್ನು ಅವರ ಹೆಸರಿನಲ್ಲಿ ಅಲಂಕರಿಸಿ ಆಭರಣವಾಗಿ ಸ್ವೀಕರಿಸಿದನು. ಈ ಕಡೆ ಹರಿಯ ವರ್ತನೆಯನ್ನು ನೋಡಿ ಭೃಗು ಮುನಿಗಳು ಶ್ರೀಹರಿಯೇ ಸರ್ವಶ್ರೇಷ್ಠ ಮತ್ತು ಮೊದಲ ಪೂಜೆಗೆ ಯೋಗ್ಯ ಎಂದು ನಿರ್ಧರಿಸಿ ಋಷಿ ಸಮೂಹಕ್ಕೆ ತಿಳಿಸಿದರು. ಭೃಗುವೇ ಪರಮಾತ್ಮನ ಸ್ವರೂಪ. ಹರಿ ಬೇರೆ ಅಲ್ಲ ಭೃಗು ಬೇರೆ ಅಲ್ಲ. ಹರಿಯ ಲೀಲಾ ವಿನೋದ ಅಷ್ಟೆ: ಅದರಿಂದಲೇ ಹರಿಯನ್ನು ಭೃಗುವೆಂದು ನಮಸ್ಕರಿಸುತ್ತೇವೆ.

ಶುಕ್ರವಾರವನ್ನು ಭೃಗುವಾಸರ ಎಂದು ಕರೆಯುತ್ತೇವೆ. ಅಂದರೆ ಭೃಗು

ಎಂದರೆ ಶುಕ್ರ, ಅಂದರೆ ಶುಕ್ರಗ್ರಹ. ಎಲ್ಲ ಗ್ರಹಗಳೂ ಭಗವಂತನ ರೂಪಗಳೇ, ಪರಮಾತ್ಮನೇ. ಈ ರೀತಿಯಲ್ಲಿಯೂ ''ಭೃಗುವೇ ನಮಃ'' ಎಂದರೆ ಮಹಾವಿಷ್ಣುವಿಗೇನೆ ಸಲ್ಲುತ್ತದೆ.

95. ಸರ್ವಭೂತಾತ್ಮನೇ ನಮಃ

ಸರ್ವ ಭೂತ - ಆತ್ಮ.

ಭೂತ - ಕಳೆದು ಹೋದ ಘಟನೆ, ಕಾಲ ಎಂದಾಗ ಕಾಲಗರ್ಭವೇ ಕಳೆದು ಹೋದ ಪ್ರತಿ ಘಟನೆಗಳನ್ನು, ಆ ಕಾಲದಲ್ಲಿ ನಡೆದ ಎಲ್ಲ ಆಗು ಹೋಗುಗಳನ್ನು ಮತ್ತು ಪ್ರತಿಯೊಂದು ಸಂಯೋಗ, ವಿಯೋಗ, ಋಣ - ಅನುಬಂಧ (ಜೀವಿಗಳಿಗೆ ಸಂಬಂಧ ಪಟ್ಟ ವಿಚಾರಗಳನ್ನು) ಗಳನ್ನು ತನ್ನ ಗರ್ಭದಲ್ಲಿ ಇಟ್ಟುಕೊಳ್ಳುತ್ತದೆ. ಎಂದ ಮೇಲೆ ಕಾಲಗರ್ಭವು ಎಂತಹ ಪ್ರಚಂಡ ಶಕ್ತಿಯದಿರಬೇಕು, ಎಂತಹ ಎಷ್ಟು ಪ್ರಮಾಣದ್ದಾಗಿರಬೇಕು ಮತ್ತು ಅದರಲ್ಲಿ ಶೇಖರಿಸುವ ವಿಚಾರಗಳ ಅಣು ರೂಪ ಎಷ್ಟು ಚಿಕ್ಕ ಪ್ರಮಾಣದ್ದಾಗಿರಬೇಕು ಎಂದು ಸಾಮಾನ್ಯರಾದ ನಮ್ಮ ಮನಸ್ಸಿನಲ್ಲಿ ಪ್ರಶ್ನೆ ಹೊರಡುತ್ತದೆ ಮತ್ತೂ ಹೆಚ್ಚಿನ ವಿಚಾರವೆಂದರೆ ಕ್ಷಣ ಮಾತ್ರದಲ್ಲಿ ಹೇಗೆ ನಮ್ಮ ಮನಸ್ಸು ಬುದ್ಧಿ ಅಹಂಕಾರ ಚಿತ್ತಗಳ ಆಕಾಶದಲ್ಲಿ ಪ್ರಕಟವಾಗುತ್ತದೆ. ಎಷ್ಟೆ ಹಿಂದಿನದು ಹಾಗೆ ಕ್ಷಣಮಾತ್ರದಲ್ಲಿ ಬರುತ್ತದೆ ಎಂಬುದು ಆಶ್ಚರ್ಯ ಹುಟ್ಟಿಸುತ್ತದೆ. ಇನ್ನೂ ಹೆಚ್ಚೆಂದರೆ ಅನೇಕ ಜನ್ಮದ ಅನೇಕ ಜೀವಿಗಳ ಹಿಂದಿನದನ್ನು (ಎಷ್ಟೇ ಹಿಂದಿನದಾದರೂ ಸಹ) ಯೋಗಿಗಳ, ತಪಸ್ವಿಗಳ, ಋಷಿಗಳ ಮನೋ ಆಕಾಶದಲ್ಲಿ ಕ್ಷಣದಲ್ಲಿ ದಿವ್ಯ ದೃಷ್ಟಿಯ ಒಳಗಾಗುತ್ತದೆ ಎಂಬುದಕ್ಕೆ ಸಾಮಾನ್ಯರಾದ ನಮ್ಮ ''ಆಶ್ಚರ್ಯ'' ಎಂಬ ಶಬ್ಧ ಮಾತ್ರದ ಅರ್ಥಕ್ಕೆ ಒಳಪಡುವುದಿಲ್ಲ. ಇದು ಇದರಲ್ಲಿರುವ ಶಕ್ತಿಯ ಮೇಲೆ ಆಧರಿಸುತ್ತದೆ, ಅಂದರೆ ಈ ಆಧಾರ ಶಕ್ತಿಯೇ ಪರಮಾತ್ಮ - ಅವನೇ ಅಥವಾ ಅವನ ಅಂಶವೇ ಅಂತಹ ಆತ್ಮದಲ್ಲಿ ಒಳಗೆ ಇರುತ್ತದೆ. ಅದರಿಂದ ಭೂತಾತ್ಮನು ಎಂದರೆ ಅವನೇ, ಬೇರೆಯವರಲ್ಲ. ಇವನ ಶಕ್ತಿಯು ಎಲ್ಲ ಆತ್ಮಗಳಲ್ಲಿಯೂ ಇದ್ದೆ ಇದ್ದು, ಆ ಆತ್ಮದ ಸಾಧನೆಯ ಪ್ರಮಾಣ ಪರಿಪೂರ್ಣವಾದಾಗ ಪ್ರಕಟವಾಗುತ್ತದೆ. ಅದರಿಂದ ಸರ್ವಭೂತಾತ್ಮನೇ ನಮಃ ಎಂಬುದು ಅತ್ಯಂತ ಉಚಿತವಾಗಿರುತ್ತದೆ.

ಮತ್ತೆ ಹೆಚ್ಚೆಂದರೆ ಭೂತ ಎಂಬ ಶಬ್ದಕ್ಕೆ ಎಂತಹದೇ, ಏನೇ ಅರ್ಥಮಾಡಿಕೊಂಡರೂ ಪರಮ ಶಕ್ತಿಯು ಪರಮಾತ್ಮನದೇ, ಅವನಿಲ್ಲದ ಸ್ಥಳವಿಲ್ಲ, ಅವನು ವಾಸಿಸದ ಆತ್ಮವಿಲ್ಲ, ಅವನು ವಾಸಿಸದ ಚರಾಚರ ವಸ್ತುವಿಲ್ಲ. ಎಲ್ಲೆಲ್ಲಿ ನೋಡಿದರೂ ಏನೇನು ಈ ಸೃಷ್ಟಿ ಬ್ರಹ್ಮಾಂಡದಲ್ಲಿ

ಇರುವುದೋ ಇಲ್ಲದಿರುವುದೋ ಅಲ್ಲೆಲ್ಲಾ ಪರಮಾತ್ಮನು ಇದ್ದೇ ಇರುವನು. ಇದರಲ್ಲಿ ಲೇಶ ಮಾತ್ರವೂ ಸಂಶಯ ಬರಲು ಸಾಧ್ಯವೇ ಇಲ್ಲ.

96. ಸರ್ವಾರಿಷ್ಟವಿನಾಶಾಯ ನಮಃ

ಅರಿಷ್ಟ - ಎಂದರೆ (1) ಕಷ್ಟಗಳು, ಇಷ್ಟವಿಲ್ಲದ ಸಮಸ್ಯೆಗಳು, ಸಂಕಟ, ದುರ್ದೈವ.

(2) ಪೂರ್ಣ, ಅವಿನಾಶ.

(1) ರಲ್ಲಿಯಂತೆ ಎಲ್ಲ ಅಂದರೆ ಒಂದನ್ನೂ ಸಹ ಲವಲೇಶ ಬಿಡದೆ ನಿರ್ಮೂಲವಾಗಿ ನಾಶಪಡಿಸುವವನು ಯಾರೋ ಅವನು ಸರ್ವಾರಿಷ್ಟನು. ಅವನಿಗೆ ಕೃತಜ್ಞತಾ ಪೂರ್ವಕವಾಗಿ ನಮಸ್ಕಾರಗಳು ಎಂದು ಹೇಳುವುದಕ್ಕೆ ಸರ್ವಾರಿಷ್ಟ ವಿನಾಶಾಯ ನಮಃ.

ಕಷ್ಟಗಳನ್ನು ಸಂಕಟಗಳನ್ನು ದುರ್ದೈವಗಳನ್ನು ತತ್ಕಾಲಿಕವಾಗಿ ನಾಶಮಾಡಲು ಯಾವುದಾದರೂ ದಾರಿ ಇರುತ್ತದೆ. ಇದರಿಂದ ಬರುವ ಮನಶ್ಶಾಂತಿ ಕೇವಲ ಕೆಲವು ಸ್ವಲ್ಪ ಕಾಲದ್ದು, ಆದರೆ ಆ ಸಮಸ್ಯೆಯ ಬೇರನ್ನು ಹುಡುಕಿ, ಕಾರಣವನ್ನು ಬಿಡ, ಬೇರು ಸಹಿತ ಕಿತ್ತು ಹಾಕಿ ಮತ್ತೆ ಅದು ಹುಟ್ಟಿಕೊಳ್ಳದಂತೆ ಮಾಡಬೇಕಾದರೆ ಬಲವಾದ ಶಕ್ತಿ, ಚತುರತೆ, ಚಾಕಚಕ್ಯತೆ ಬೇಕು. ಸಾಮಾನ್ಯರಾದವರಿಗೆ ಇದು ಸಾಧ್ಯವೇ ಇಲ್ಲ. ಸ್ವಲ್ಪ ವಯೋವೃದ್ಧರಿಗೆ ಜ್ಞಾನವೃದ್ಧರಿಗೆ ಇದು ಸಾಧ್ಯ. ಆದರೆ ಮೇಲೆ ಹೇಳಿದಂತೆ ನಿರ್ಮೂಲ ಮಾಡುವುದು ಆ ಪರಮೇಶ್ವರನೊಬ್ಬನಿಗಲ್ಲದೆ ಬೇರಾರಿಗೂ ಸಾಧ್ಯವಿಲ್ಲ.

ಅರಿಷ್ಟಗಳಲ್ಲೆಲ್ಲಾ ದೊಡ್ಡ ಅರಿಷ್ಟವೆಂದರೆ ಈ ಸಂಸಾರ ಸಾಗರದಲ್ಲಿ ಬಿದ್ದು, ಪದೇ ಪದೇ ಜನ್ಮವೆತ್ತಿ ''ಪುನರಪಿ ಜನನಂ ಪುನರಪಿ ಮರಣಂ ಪುನರಪಿ ಜನನೀ ಜಠರೇ ಶಯನಂ ಇಹ ಸಂಸಾರೇ ಬಹುದುಸ್ತಾರೇ'' ಎಂದು ಬಳಲಿ ಬಳಲಿ ''ಕೃಪಯಾ ಪಾರೇ ಪಾಹಿ ಮುರಾರೇ'' ಎಂದು ಪರಿತಪಿಸುವುದು ಯಾವ ಎಂತಹ ಜೀವಿಯನ್ನು ಬಿಟ್ಟಿದ್ದಲ್ಲ. ಆದರೆ ಆ ಪರಮೋತ್ತಮ ದಯಾಮಯನಿಂದ ಮಾತ್ರ ಕ್ಷಣ ಮಾತ್ರದಲ್ಲಿ ಸಾಧ್ಯ. ಇಂತಹ ಸರ್ವಾರಿಷ್ಟ ವಿನಾಶಾಯ ನಮಃ ಎಂದರೆ ಬಂದು ಸಲಹುವುದು ಸುನಿಶ್ಚಿತ. ಅವನನ್ನು ಯಾವ ರೀತಿಯಲ್ಲಿ ಕರೆದರೂ ಅವನು ಬರಲು ಸಿದ್ಧ. ಅರಿಷ್ಟಗಳ ಸ್ವಭಾವವನ್ನರಿತು ಅವನೇ ''ಭವ ರೋಗ ವೈದ್ಯ'' ನೆಂದು ತಿಳಿದು ಆ ವೈದ್ಯನಾಥ ಸ್ವಾಮಿಯನ್ನು ಕರೆಯಲು ಅವನ ಅಪಾರ ದಯಾಸಾಗರದ ಒಂದು ಬಿಂದುವಾದರೂ ಸಾಕು.

ಆತ್ಮನ ಗುರಿಯಾದ ''ಪರಮಾತ್ಮನನ್ನು ಸೇರುವುದು'' ಎಂಬುದನ್ನು ಸಾಧಿಸಲು ಆತ್ಮನಿಗೆ ದೇಹ, ಅದರದೇ ಆದ ಕರ್ಮ ಫಲಗಳಿಂದ ಗಳಿಸಲ್ಪಟ್ಟ

ಸುಸಂಸ್ಕಾರ, ಗುರು, ಪರಮಾತ್ಮನ ಕೃಪೆ ಮತ್ತು ಈ ಸಂಸಾರ ಸಾಗರವೇ ಬೇಕೇ ಬೇಕು. ಆದರೆ ತನ್ನ ಅನುಕೂಲಕ್ಕೆ ತಕ್ಕಂತೆ ಜಗತ್ತನ್ನು ಅಪರ ಪರಿಸರವನ್ನು ಕಾಮ, ಕ್ರೋಧ, ಮೋಹ, ಮದ, ಮಾತ್ಸರ್ಯ, ಲೋಭಗಳನ್ನು ಅಂತರ್ಮುಖ ಮಾಡಿ (ಅಂದರೆ ಪರಮಾತ್ಮನ ಕೃಪೆಗಳಿಸುವುದಕ್ಕೆ ತಿರುಗಿಸಿ) ಕೊಳ್ಳುವುದು ಆತ್ಮನಿಗೆ ಬಿಟ್ಟಿದ್ದೆ. ಆದರೆ ಅಧೋಗತಿಗೆ ಹೋಗುವುದಕ್ಕೂ, ಊರ್ಧ್ವಗತಿಗೆ ಏರುವುದಕ್ಕೂ ಸಾಧ್ಯವಿದೆ. ವಿವೇಕದಿಂದ ಒಡಗೂಡಿದ ಬುದ್ಧಿ ಮನಸ್ಸುಗಳಿಂದ ಆತ್ಮೋದ್ಧಾರ ಅಂದರೆ ಆತ್ಮದ ನಿಜತ್ವ ತಿಳಿಯಲು ಸಾಧ್ಯ. ಇದರಿಂದ ಆತ್ಮವು ವಿವೇಕದ ಚೂಡಾಮಣಿಯೆಂಬ ಪರಮಾತ್ಮನ ಸಾನ್ನಿಧ್ಯ, ಸಾಯುಜ್ಯ, ಸಾಲೋಕ್ಯ, ಸಾಮಿಪ್ಯವನ್ನು ಸೇರುತ್ತದೆ. ಅದಕ್ಕೆ ''ಸರ್ವಾರಿಷ್ಟವಿನಾಶಾಯ ನಮಃ'' ಎನ್ನುವುದು.

97. ಸರ್ವಸಂಪತ್‌ಕರಾಯ ನಮಃ

ಪರಮಾತ್ಮನು ಎಲ್ಲ ವಿಧವಾದ ಸಂಪತ್ತುಗಳನ್ನು ಕೊಡುವವನು.

ಪ್ರತಿಯೊಂದು ಜೀವಿಯೂ ತನ್ನ ಸಂಗವನ್ನು ಪಡೆದ ಇತರ ಪ್ರತಿಯೊಂದು ಜೀವಿಗೂ ಒಂದಲ್ಲ ಒಂದು ರೀತಿಯಲ್ಲಿ ಸಂಪತ್ತನ್ನು ತಿಳಿದೋ ತಿಳಿಯದೆಯೋ ಕೊಡುತ್ತಲೇ ಇರುತ್ತದೆ. ಈ ''ಸಂಪತ್ತನ್ನು'' ಕೊಡುವಿಕೆಯು ಕೊಡುವ ಜೀವಿಗೂ ಪಡೆಯುವ ಜೀವಿಗೂ ಅರಿವೇ ಇರುವುದಿಲ್ಲ. ಸಂಪತ್ತೆಂದರೆ ಯಾವ ರೀತಿಯಾದರೂ ಆಗಬಹುದು. ಧನ, ಧಾನ್ಯ, ವಿದ್ಯೆ, ಜೀವನಕ್ಕೆ ಧನಗಳಿಸಲು ಬೇಕಾಗುವಷ್ಟೇ ವಿದ್ಯೆ (ಹೆಚ್ಚಾದ್ದು...), ಜೀವನಕ್ಕೆ ಬೇಕಾಗುವ ಸ್ಥಿರ, ಚರ ಸ್ವತ್ತುಗಳು, ಹೆಂಡತಿ, ಮಕ್ಕಳು (ಯೋಗ್ಯರು, ಹೊಗಳಿಕೊಳ್ಳುವಂತಹವರು) ತನಗೆ ಅವರಿಂದ ಮನಸ್ಸಮಾಧಾನ ಸಂತೋಷ ಕೊಡುವವರು ಇಹ ಪರದಲ್ಲಿ ತನ್ನ ಆತ್ಮೋದ್ಧಾರಕ್ಕೆ ಸಹಾಯಕರಾದವರು, ವಯಸ್ಸಿನಲ್ಲಿ ಕಿರಿಯರಾದರೂ ಜ್ಞಾನದಲ್ಲಿ ವೃದ್ಧ ಮತ್ತು ಪೂಜ್ಯ ಸ್ಥಾನ ಗಳಿಸಿ ಸಂತೋಷ ಪಡಿಸುವವರು..., ಇತ್ಯಾದಿ... ಪಟ್ಟಿ ಆದದರ ಆತ್ಮದ ದೃಷ್ಟಿಯಿಂದ ಬೆಳೆಯುತ್ತ ಹೋಗುತ್ತದೆ.

ಆದರೆ ಈ ಪಟ್ಟಿಯನ್ನು ಕ್ಷಣಮಾತ್ರದಲ್ಲಿ ಸಂಕ್ಷೇಪ ಮಾಡಬಹುದು, ಹೇಗೆಂದರೆ ಪರಮಾತ್ಮನ ಕಡೆಗೆ ಮನಸ್ಸನ್ನು ತಿರುಗಿಸಿ ಅವನ ಧ್ಯಾನ, ಪೂಜೆ, ಭಜನೆ ಜಪ ಮಾಡುವವನ ಸಂಪತ್ತಿಗೆ ಲೋಕದಲ್ಲಿನ ಅಥವಾ ಮೇಲಿನ ಲೋಕದ ಯಾವ ಸಂಪತ್ತೂ ಸಹ ಸಮವಾಗುವುದಿಲ್ಲ. ಹೆಚ್ಚೇಕೆ ಪರಮಾತ್ಮನ ಕೃಪೆ ಎಂಬ ಒಂದು ಸಂಪತ್ತಿಗೆ ಏನೂ ಸಹ ಸ್ಪರ್ಧಿಸಲಾರದು. ಸ್ಪರ್ಧಿಸಲು ಸಾಧ್ಯವಿಲ್ಲ. ಇಂತಹ ಕೃಪೆಯಿಂದ ಲಭಿಸುವ ಸಂಪತ್ತು ಎಷ್ಟೆ ಕೋಟಿ ಕೆಲಸ ಮಾಡಿದರೂ ಬರುವುದಿಲ್ಲ. ಕೇವಲ ಶ್ರದ್ಧೆ ಭಕ್ತಿಯಿಂದ ನಡೆಸಿದ ಅಲ್ಪ ಸೇವೆಯೂ ಅನಂತ ಶಾಂತಿ, ಕೈವಲ್ಯವನ್ನು ಕೊಡುತ್ತದೆ.

ಅದರಿಂದ ಪರಮಾತ್ಮನಿಗೆ ಸರ್ವಸಂಪತ್ಕರಾಯ ನಮಃ ಎನ್ನುವುದು ಯಾವ ರೀತಿಯಿಂದ ವಿಮರ್ಶಿಸಿದರೂ ಉತ್ತಮವೂ ಉನ್ನತವೂ ಆಗಿ ಕಾಣುತ್ತದೆ. ಈ ವಿಮರ್ಶೆಯಿಂದಲೇ ಅಪಾರ ಜ್ಞಾನ ಅದರಿಂದ ತ್ಯಾಗ, ಸಮಾಧಾನ, ಶಾಂತಿ ಲಭಿಸುತ್ತದೆ. ಎಷ್ಟೇ ಆದರೂ ಅವನು ದಯಾಮಯನಲ್ಲವೇ? ತನ್ನ ಭಕ್ತರನ್ನು ಸೇವಿಸಿ ಸಂತೋಷ ಪಡಿಸುವುದೇ ಅವನ ಧ್ಯೇಯ. ಅವನು ಭಕ್ತರ ಭಕ್ತಿಯ ಕಟ್ಟಿಗೆ ಬಂದು ಏನನ್ನಾದರೂ ಯಾವುದೇ ರೀತಿಯಲ್ಲಾದರೂ ಸೇವಿಸಲು ಸದಾ ಸಿದ್ಧನಿದ್ದಾನೆ. ನಾವು ಸುಮ್ಮನೆ ಆಸೆ ಪಡದೆ ಆತನ ಭಕ್ತರಾಗಲು ಶ್ರಮಿಸಬೇಕು. ನಿಷ್ಕಾಮದಿಂದ ಅವನನ್ನು ಸೇವಿಸಬೇಕು. ಇದೇ ಪರಮಾತ್ಮನ ಮತ್ತು ಭಕ್ತನ ಪೂರಕ ಧ್ಯೇಯಗಳು... ಎಂತಹ ಉದಾತ್ತವಾದ್ದು! ಅಲ್ಲವೇ!

*ಸರ್ವಾಧಾರಾಯ ಸರ್ವಾಯ ಸರ್ವಾದಿಹರಯೇ ನಮಃ ।*
*ಸರ್ವದುಃಖಪ್ರಶಾಂತಾಯ ಸರ್ವಸೌಭಾಗ್ಯದಾಯಿನೇ ।।49।। (298-302)*

98. **ಸರ್ವಾಧಾರಾಯ ನಮಃ**

ಆಧಾರ - ಎಂದರೆ ಆಶ್ರಯ, ಸಹಾಯ, ಅಡಿಪಾಯ, ಸಂಬಂಧ.

ಜಗತ್ತಿನ ಪ್ರತಿಯೊಂದು ವಸ್ತುವೂ (ಚರಾಚರ ವಸ್ತು ಅಥವಾ ಜೀವಿಗಳು) ಪರಮಾತ್ಮನನ್ನೇ ತಮ್ಮ ಅಳಿವು, ಉಳಿವಿಗಾಗಿ ಅವಲಂಬಿಸಿರುತ್ತವೆ. ಇದಕ್ಕೆ ''ಆಧಾರ'' ಎನ್ನಬಹುದು. ಪರಮಾತ್ಮನನ್ನು ಬಿಟ್ಟು ಅಥವಾ ಅವನ ಸಹಾಯವನ್ನು ಬಿಟ್ಟು ಯಾವುದೂ ಇರಲಾರವು ಮತ್ತು ''ಇಲ್ಲ'' ದಿರಲಾರವು. ಇರುವಿಕೆ ಮತ್ತು / ಅಥವಾ ಇಲ್ಲದಿರುವಿಕೆಗೂ ಸಹ ಇವು ಪರಮಾತ್ಮನನ್ನೇ ಅವಲಂಬಿಸಿರುತ್ತದೆ. ಎಂತೆಂತಹ ರೀತಿಯ ಇರುವಿಕೆ ಮತ್ತು ಇಲ್ಲದಿರುವಿಕೆ ಎಂದು ನಮ್ಮ ಅರಿವಿಗೆ ಬರುವುದೋ ಅವೆಲ್ಲಕ್ಕೂ ಪರಮಾತ್ಮನೇ, ಏಕೆ ಅವನೊಬ್ಬನೇ ಕಾರಣ. ಅವನನ್ನು ಬಿಟ್ಟು ಬೇರೆ ಯಾರೂ ಇಲ್ಲ. ಇದೇ ''ಆಧಾರ'' ಸ್ಥಿತಿಯ ಜ್ಞಾನ, ಇದನ್ನು ಪ್ರತಿ ಪಾದಿಸುವುದಕ್ಕೆ ''ಸರ್ವಾಧಾರಾಯ ನಮಃ'' ಎಂದು ಕೃತಜ್ಞತೆಯನ್ನು ಅವನಿಗೆ ಸಲ್ಲಿಸುತ್ತೇವೆ.

ಉದಾಹರಣೆಗೆ - ನದಿ - ನದಿಯಲ್ಲಿ ಹರಿಯುವ ನೀರಿಗೆ ಅಥವಾ ನದಿ ಕರೆಯಲ್ಪಡುವುದಕ್ಕೆ ನದಿಯ ಪಾತ್ರವೇ ''ಆಧಾರ''. ನದಿಗೆ ಅದರ ಪಾತ್ರವೇ ''ಆಧಾರ'', ಸಸ್ಯಗಳಿಗೆ ಭೂಮಿಯೇ ಆಧಾರ, ದೇಹಕ್ಕೆ ದೇಹದ ಉಳಿವಿಗೆ ಜೀವವೇ ಆಧಾರ, ಬಟ್ಟೆಗೆ ನೂಲೇ ಆಧಾರ. ಮುಂತಾದವು ಪ್ರತಿಯೊಂದಕ್ಕೂ ಒಂದು ಆಧಾರವಿದ್ದೇ ಇರುತ್ತದೆ. ಇನ್ನು ಸುಲಭವಾದದ್ದು ಬರೆವಣಿಗೆಗೆ ಲೇಖನಿ ಮತ್ತು ಕಾಗದದ ಹಾಳೆಯೇ ಆಧಾರ, ಹೀಗೆ ಪ್ರತಿಯೊಂದಕ್ಕೂ ಯಾವುದಾದರೂ ರೀತಿಯಲ್ಲಿ ಏನಾದರೊಂದು ಆಧಾರವಾಗಿರುತ್ತದೆ. ಆ ಎಲ್ಲದಕ್ಕೂ ಪಂಚ ಮಹಾಭೂತಗಳು - ಪೃಥಿವೀ, ಅಪಃ, ತೇಜಸ್ಸು, ವಾಯು,

ಆಕಾಶಗಳು ಒಂದಾಗಲೀ ಎಲ್ಲವಾಗಲೀ ಆಧಾರವಾಗಿರುತ್ತದೆ. ಇವುಗಳಿಗೆ ಪರಮಾತ್ಮನ ಸಂಕಲ್ಪವೇ ಆಧಾರ, ಸಂಕಲ್ಪಕ್ಕೆ ಪರಮಾತ್ಮನ ಇಚ್ಛೆಯೇ ಆಧಾರ, ಇಚ್ಛೆಗೆ ಪರಮಾತ್ಮನೇ ಆಧಾರ. ಪರಮಾತ್ಮನಿಗೆ ಅವನೇ ಆಧಾರ. ಅವನು ಆಧಾರಗಳಿಗೆ ಆಧಾರನೇ ಹೊರತು ತನಗೆ ತಾನೇ ಸ್ವತಂತ್ರನು. ಅವನು ಯಾವುದನ್ನೂ ಅವಲಂಬಿಸಿಲ್ಲ, ಆಧಾರ ರಹಿತನು. ಆದರೆ ಅವನೇ ಸರ್ವಾಧಾರನು.

99. ಸರ್ವಾಯ ನಮಃ

ಪರಮಾತ್ಮನೇ ಎಲ್ಲ ಜೀವಿಗಳಿಗೂ ಸಕಲ ಚರಾಚರ ವಸ್ತುಗಳಿಗೂ ಎಲ್ಲವು, ಜೀವಿಗಳು, ಚರಾಚರ ವಸ್ತುಗಳಿಗೆ ಏನೇನು ಜೀವಿತಕ್ಕೆ, ಅಳಿವಿಗೆ ಉಳಿವಿಗೆ ಬೇಕಾಗುವುದೋ ಎಲ್ಲವೂ ಪರಮಾತ್ಮನೇ. ಅವನಿಂದಲೇ ಏನೆಲ್ಲವನ್ನೂ ಪಡೆಯಬಹುದು. ಸರ್ವವೂ ಅವನಲ್ಲಿ ಅಡಗಿದೆ. ಅವನಿಂದ ಸರ್ವವನ್ನು ಪಡೆಯಬಹುದು. ಅವನಿಂದ ಪಡೆಯಲಸಾಧ್ಯವಾದುದು ಯಾವುದೂ ಇಲ್ಲ. ಅವನೇ ಸರ್ವಸ್ವ, ಸರ್ವನು, ಸರ್ವಾಯನಮಃ.

ಸರ್ವವೂ ಅವನಲ್ಲಿದೆ, ಎಲ್ಲವೂ ಅವನೇ, ಅವನಲ್ಲಿಯೇ ಸರ್ವವಿದೆ. ಸರ್ವದಲ್ಲಿಯೂ ಅವನೇ ಅವನಾಗಿ ಬಹುವಾಗಿರುತ್ತಾನೆ. ಏಕವೂ ಅವನೇ, ಬಹುವೂ ಅವನೇ, ಅವನಿಲ್ಲದೆ ಏಕವಿಲ್ಲ, ಬಹುವೂ ಇಲ್ಲ.

00. ಸರ್ವಾದಿಹರಯೇ ನಮಃ

ಎಲ್ಲಕ್ಕೂ ಮೊದಲನ್ನು ಹರಿಸಿ ಮೊದಲೇ ಇಲ್ಲವೆನ್ನಿಸುವವನು. ಎಲ್ಲಿ ಯಾವುದಕ್ಕೂ ''ಪ್ರಾರಂಭ'' ಎಂಬುದು ಇರುವುದೊ, ಆ ಪ್ರಾರಂಭಕ್ಕೂ ಹಿಂದೆಯೇ ಇವನಿದ್ದು ಅಂತಹ ಪ್ರಾರಂಭವನ್ನು ಪ್ರಾರಂಭವಾಗಿ ಇರದಂತೆ ಮಾಡುವವನು. ಉದಾಹರಣೆ, ಬೆಣ್ಣೆಗೆ ಮೊದಲಿನದು ಮೊಸರು - ಮೊಸರಿಗೆ ಮೊದಲಿನದು ಹಾಲು - ಹಾಲಿಗೆ ಮೊದಲಿನದು ಅದನ್ನು ತಯಾರಿಸುವ ಹಸು - ಹಸುವಿಗೆ ಬೇಕಾದ್ದು ಅದರ ಆಹಾರ. ಅದರ ದೇಹದಲ್ಲಿ ಪ್ರಕೃತ ಕ್ರಿಯೆಗಳು - ಆಹಾರಕ್ಕೆ ಮೊದಲಿನದು ಬೆಳೆಯುವ ಭೂಮಿ - ಭೂಮಿಗೆ ಬೇಕಾದ್ದು ಮಳೆ, ಬೀಜಾದಿಗಳು, ಇವುಗಳಿಗೆ ಮೊದಲು ಮೋಡ - ಮೋಡಕ್ಕೆ ಸೂರ್ಯನ ಕಿರಣ - ಸೂರ್ಯನಿಗೆ ಹಿಂದಿನವನು ಬ್ರಹ್ಮಾಂಡ - ಬ್ರಹ್ಮಾಂಡಕ್ಕೆ ಹಿಂದಿನದು ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕ - ಅವನಿಗೆ ಮೊದಲಿನದು ವಟಪತ್ರಶಾಯಿ ಕಲ್ಪಾಂತದಲ್ಲಿ - ಇವನಿಗೆ ಹಿಂದಿನದು ಅಂದರೆ ಇವನೇ ಪರಮಾತ್ಮ - ಇವನಿಗೆ ಮೊದಲಿಗನು - ಗೊತ್ತಿಲ್ಲ. ಆ ಗೊತ್ತಿಲ್ಲದ್ದೇ ನೇತಿ ನೇತಿ ಎಂಬ ಎಲ್ಲವನ್ನು ಅರಿವಿಗೆ ಬರುವ ಎಲ್ಲವನ್ನು ತ್ಯಜಿಸಿದ ಮೇಲೆ ಉಳಿಯುವುದು - ಆದಿ, ಅವನೇ - ಹೀಗೆ ಪ್ರತಿಯೊಂದು ಆದಿಯನ್ನು

ಆದಿಯನ್ನಿಲ್ಲವಾಗಿ ಮಾಡಿ ಕೊನೆಯಲ್ಲಿ ನಿಲ್ಲುವವನು ಸರ್ವಾದಿಹರನು. ಅವನೇ ಪರಮಾತ್ಮ. ಅವನಿಗಿಂತ ಹಿಂದಿನದು ಇಲ್ಲ - ಇಲ್ಲವೇ ಇಲ್ಲ ನೇತಿ ನೇತಿ.!

01. ಸರ್ವದುಃಖಪ್ರಶಾಂತಾಯ ನಮಃ

ಎಲ್ಲ ದುಃಖಗಳನ್ನು ಸಂಪೂರ್ಣವಾಗಿ ನಶಿಸಿ ಲವಲೇಶವೂ ಉಳಿಯದಂತೆ ಮಾಡುವವನು ಯಾರೋ ಅವನು - ಪರಮಾತ್ಮನು.

ದುಃಖಗಳು, ಅಸಮಾಧಾನಗಳು, ನೋವುಗಳು ಯಾವ ದೇಹಕ್ಕೂ ತಪ್ಪಿದ್ದಲ್ಲ. ನಾನು ಎಂಬುದು ಆತ್ಮ, ದೇಹ ಮತ್ತು ನಾನು ಎಂಬುದು ಎಷ್ಟು ಒಂದಾಗಿವೆಯೆಂದರೆ ಆತ್ಮವೇ ದೇಹ, ನಾನು ಎಂಬುದೇ ದೇಹ, ದೇಹವೇ ಆತ್ಮ, ದೇಹವೇ ನಾನು ಎಂದು ಒಂದಾಗಿ ಅವುಗಳ ಪರಸ್ಪರ ಭೇದಗಳು ತಿಳಿಯುವುದೇ ಇಲ್ಲ. ಹೀಗಾಗಿ ಈ ದುಃಖಗಳು ಎಂದಿಗೆ ಹೋದಾವೋ ಎಂದು ''ನಾನು'' ಎಂಬುದು ಪರಿತಪಿಸುತ್ತಿರುತ್ತದೆ. ಕಂಡ ಕಂಡ ವಸ್ತು ಜೀವಿಗಳನ್ನು ಬೇಡುತ್ತಿರುತ್ತದೆ. ಆದರೆ ಎಲ್ಲಿಯೂ ನಿವಾರಣೆಯಾಗದೇ ಆ ಪರಮಾತ್ಮನನ್ನು ಕೊನೆಯಲ್ಲಿ ಮೊರೆ ಹೋಗುತ್ತದೆ. ಅವನು ಪ್ರಾರ್ಥನೆಯನ್ನು ಸಕಾಲದಲ್ಲಿ (ಅಂದರೆ ಪ್ರಾರ್ಥನೆಯ ಶ್ರದ್ಧೆ, ಭಕ್ತಿ, ಅವ್ಯಭಿಚಾರಿಣೀ ಭಕ್ತಿ, ನಿಷ್ಕಲ್ಮಶ ಶ್ರದ್ಧೆ ಇದ್ದು ಪ್ರಾರ್ಥಿಸಿದಾಗ ಅನ್ಯಥಾ ಶರಣಂ ನಾಸ್ತಿ ಎಂದಾಗ ಮಾತ್ರ) ಕ್ಷಣ ಮಾತ್ರದಲ್ಲಿ ದುಃಖಗಳನ್ನು ಬುಡ ಸಹಿತವಾಗಿ ಶಾಂತಮಾಡುತ್ತಾನೆ. ಎಂದರೆ ತೆಗೆದು ಹಾಕುತ್ತಾನೆ.

ಈ ಕಾರಣಕ್ಕಾಗಿ ಸರ್ವ ದುಃಖ ಪ್ರಶಾಂತಾಯ ನಮಃ ಎಂದು ನಮಸ್ಕರಿಸುತ್ತೇವೆ. ಪರಮಾತ್ಮನನ್ನು ಬಿಟ್ಟು ಬೇರೆ ಯಾರಿಂದಲೇ ದುಃಖವು ಉಪಶಮನವಾದರೂ ಅದು ತಾತ್ಕಾಲಿಕ ಮತ್ತು ಶಮನ ಮಾಡುವವರ ಸ್ವಾರ್ಥತೆಯನ್ನು ಅವಲಂಬಿಸುತ್ತದೆ. ಆದರೆ ಪರಮಾತ್ಮನು ಯಾವ ತರಹದ ಆಸೆ, ಸ್ವಾರ್ಥತೆ ಇಲ್ಲದೆ ದುಃಖವನ್ನು ಪೂರ್ಣವಾಗಿ ಹೋಗಲಾಡಿಸುತ್ತಾನೆ. ಅದರಿಂದ ಅವನನ್ನು ನಂಬಿದರೆ ಯಾರಿಗೂ ಯಾವಾಗಲೂ ಮೋಸವಾಗುವುದಿಲ್ಲ ಇದು ನಿಶ್ಚಿತ.

ಎಲ್ಲಾ ದುಃಖಗಳನ್ನು ನಾಶಪಡಿಸುವುದು ಎಂದರೆ ಎಲ್ಲ ಜೀವಿಗಳಿಗೂ ಅತ್ಯಂತ ಗಹನವಾದ ದುಃಖವೆಂದರೆ ಸಂಸಾರ ಸಾಗರದಲ್ಲಿದ್ದು ಅನೇಕ ಯೋನಿಗಳಲ್ಲಿ ಪುನಃ ಜನ್ಮವೆತ್ತಿ ಜೀವನ ಅನುಭವಿಸುವುದು. ಇದನ್ನು ಅನುಭವಿಸುವುದು ಬಹಳ ಕಷ್ಟ. ದುಃಖಕರವಾದದ್ದು ಇದರಿಂದ ಪಾರಾಗುವುದಕ್ಕೆ ಸಹಾಯ ಮಾಡುವವನು ಪರಮಾತ್ಮನೊಬ್ಬನೆ. ಅವನ ದಯೆಯಿಂದ, ಕೃಪೆಯಿಂದ ಕರುಣೆ ಬಂದಾಗ ಅವನು ಒಂದು ಸಲ ಈ ಭವಸಾಗರದಿಂದ ಪಾರುಮಾಡಿದನೆಂದರೆ ಅದರಲ್ಲೂ ಸಾಯುಜ್ಯ, ಸಾಮಿಪ್ಯ, ಸಾರೂಪ್ಯ,

ಸಾಲೋಕ್ಯ ಪದವಿಯನ್ನು ದಯಪಾಲಿಸಿದರೆ ಅದಕ್ಕಿಂತ ಉತ್ತಮವಾದುದು ಬೇರೆ ಇಲ್ಲ. ಅವನಿಗಿಂತ ಸರ್ವದುಃಖ ಪ್ರಶಮನು ಯಾರೂ ಇಲ್ಲ. ಹೀಗಾಗಿ ಅವನನ್ನು ಕೃತಾರ್ಥತೆಯಿಂದ ಆತ್ಮವು ಸರ್ವ ದುಃಖಪ್ರಶಮನಾಯ ನಮಃ ಎಂದು ಮೊರೆ ಹೋಗುವುದು ಬಹಳ ಪ್ರಶಸ್ತವಾದುದು.

ಆದರೂ ಒಂದು ಜೀವಿಗೆ ಇನ್ನೊಂದು ಜೀವಿಯು ದುಃಖವನ್ನು ಹೋಗಲಾಡಿಸಿದರೂ ಪರಮಾತ್ಮನಿಗೆ ಸಲ್ಲುವಷ್ಟು ಕೃತಜ್ಞತೆಯನ್ನು ನಾವು ತೋರಿಸುತ್ತೇವೆ. ''ಸರ್ವದುಃಖ ಪ್ರಶಮನಾಯ ನಮಃ'' ಎಂದು.

02. ಸರ್ವಸೌಭಾಗ್ಯದಾಯಿನೇ ನಮಃ

ಭಾಗ್ಯ - ವೈಭವ, ಕಲ್ಯಾಣ, ದೈವ, ಸುದೈವ, ಇತ್ಯಾದಿ.

ಭಗ - ವೈಭವ, ಕೀರ್ತಿ, ದೇವರಿಗೆ ಸಂಬಂಧ ಪಟ್ಟ ಐಶ್ವರ್ಯ.

ಸೌಭಾಗ್ಯ - ಧನ್ಯತೆ, ಭವ್ಯತೆ, ಮಂಗಳಕರತ್ವ.

ಸುಭಗ - ಸುಂದರಕರವಾದ್ದು.

ಭಗದ ಭಾವ - ಭಾಗ್ಯ, ಸುಭಗವಾದ್ದು - ಸೌಭಾಗ್ಯ.

ಸರ್ವ - ಸೌಭಾಗ್ಯ - ದಾಯಿನೇ - ನಮಃ.

ಎಲ್ಲ ರೀತಿಯಲ್ಲಿಯೂ ಮತ್ತು ಸಕಲವಾದ ಧನ್ಯತೆ ಮತ್ತು ಮಂಗಳಕರಭಾವವನ್ನು ಕೊಡತಕ್ಕವನು ಯಾರೋ ಅವನೇ ಪರಮ ಪುರುಷೋತ್ತಮನಾದ ನಾರಾಯಣನು. ಅವನೇ ಭಗದ ಭಾಗ್ಯವನ್ನು ಹೊಂದಿ ಶ್ರೀಮಂತವಾಗಿರುವ ಭಗವಂತನು. ಇದಕ್ಕೆ ವಿರುದ್ಧವಾದ ಅಮಂಗಳಕರವಾದ ಏನನ್ನೂ ಒಳಗೊಂಡಿರದನವನು.

ಸಾಮಾನ್ಯವಾಗಿ ಎಲ್ಲರೂ ಕಡಿಮೆಯೆಂದರೆ ಯಾವುದಾದರೂ ಒಂದು ಕಾಲದಲ್ಲಿಯಾದರೂ ಇತರರಿಗೆ ಒಳ್ಳೆಯದನ್ನೇ ಬಯಸಿ, ಮಂಗಳಕರವಾಗುವಂತೆ ಭಗವಂತನನ್ನು ಪ್ರಾರ್ಥಿಸುತ್ತಾರೆ. ಈ ಪ್ರಾರ್ಥನೆಯಿಂದ ಅಪಾರ ಮಂಗಳವಾಗುತ್ತದೆ. ಇತರರ ಪ್ರಾರ್ಥನೆಯೇ ಇಷ್ಟು ಮಂಗಳವನ್ನು ಪ್ರಾಪ್ತಿ ಮಾಡಿಸುವುದುದಾರೆ ತನ್ನದೇ ಪ್ರಾರ್ಥನೆಯಿಂದ ಎಷ್ಟು ಬರಬಹುದು ಅಲ್ಲವೇ! ಆಗ ಪರಮಾತ್ಮನಿಗೆ ತಾವೇ ಸ್ವಂತವಾಗಿ ಆತ್ಮೋದ್ಧಾರಕ್ಕಾಗಿ ಅನನ್ಯ (ಭಕ್ತಿಯಿಂದ) ಶ್ರದ್ಧೆಯಿಂದ ಅವ್ಯಭಿಚಾರಿಣೀ ಭಕ್ತಿಯಿಂದ ಮಾಡಿದ ಪ್ರಾರ್ಥನೆಯಿಂದ ಭಗವಂತನು ನಮಗೆ ಶ್ರೇಯಸ್ಸಾಗುವ ಸ್ಥಿರವಾದ ಸ್ಥಾನವನ್ನು ತನ್ನಲ್ಲಿ ಕರುಣಿಸುತ್ತಾನೆ. ಅದರಿಂದಲೇ ಅವನನ್ನು ಸರ್ವ ಸೌಭಾಗ್ಯದಾಯಿನೇ ನಮಃ ಎಂದು ನಮಸ್ಕರಿಸುತ್ತೇವೆ.

ಆಗ ಪ್ರಾರ್ಥಿಸುವವನು ಪರಮಾತ್ಮ ಅಂಶವೆಂಬುದೊಂದೇ ಅಲ್ಲದೇ ಅವನೇ ಆಗುತ್ತಾನೆ. ಲೋಕಕ್ಕೆ ಕಲ್ಯಾಣ ಕೋರುವ ರೀತಿ ಎಲ್ಲರನ್ನು ತನ್ನ ಸಿದ್ಧಿಯಿಂದ

ಉದ್ಧರಿಸುತ್ತಾನೆ. ಇವರೇ ಸಜ್ಜನರು, ಸಾಧುಗಳು, ಸಂತರು, ಪಂಕ್ತಿ ಪಾವನರು. ಸರ್ವ ರೀತಿಯ ಉತ್ತಮ ಸೌಭಾಗ್ಯವೇ - ಪುನರಾವೃತ್ತಿ ರಹಿತ ಸ್ಥಾನವನ್ನು ಪರಮಾತ್ಮನಲ್ಲಿ ಸೇರಿ ಐಕ್ಯವಾಗುವುದು. ಇದನ್ನು ಕರುಣಿಸುವವನೇ ಸರಿ ಸಮನಿಲ್ಲದ ಸರ್ವ ಶಕ್ತನಾದ ಸರ್ವರಿಗೂ ಬೇಕಾದ ಪರಮಾತ್ಮನು. ಲೋಕ ಸಂರಕ್ಷಕನು, ಲೋಕನಾಯಕನು, ಲೋಕ ಪಾಲಕನು, ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನಾದ ಭಗವಂತನು, ತನ್ನ ಭಕ್ತರಿಗೆ ಸರ್ವ ಸೌಭಾಗ್ಯದಾಯಕನು, ಸರ್ವರಿಂದ ನಮಸ್ಕೃತನು. ಏನೇ ಎಷ್ಟೇ ಕಡಿಮೆ ದಯಾಬಿಂದುವನ್ನು ಕೊಟ್ಟರೂ ಭಕ್ತರು ಸ್ವೀಕರಿಸಿ ಕೃತಜ್ಞತೆಯನ್ನು ಪರಮಾತ್ಮನಿಗೆ ತೋರಿಸುತ್ತಾರೆ.

*ಸರ್ವಜ್ಞಾಯಾಪ್ಯನಂತಾಯ ಸರ್ವಶಕ್ತಿಧರಾಯ ಚ ।*
*ಸರ್ವೈಶ್ವರ್ಯಪ್ರದಾತ್ರೇ ಚ ಸರ್ವಕಾರ್ಯವಿಧಾಯಿನೇ ।।50।।*
*(303-307)*

03. ಸರ್ವಜ್ಞಾಯ ನಮಃ

ಸರ್ವ - ಎಲ್ಲವನ್ನು, ಜ್ಞ - ತಿಳಿದವನು.

ಪರಮಾತ್ಮನು ಎಲ್ಲವನ್ನೂ ತಿಳಿದವನು, ಎಲ್ಲಾ ತಿಳಿದಿರುವುದು. ತಿಳಿಯದೆ ಇರುವುದು ಯಾವುದೂ ಇಲ್ಲ. ಕಲ್ಪಾದಿಯಿಂದ ಕಲ್ಪಾಂತ ಮತ್ತೇ ಪ್ರಳಯ ಕಲ್ಪಾದಿ, ಈ ಸರಣಿ ಕೊನೆಯಿಲ್ಲದ್ದು ಮೊದಲಿಲ್ಲದು. ಇಂತಹ ಕಾಲ - ಪರಿಮಿತಿಯಿಲ್ಲದ ಕಾಲದಲ್ಲಿ ಸಕಲ ಜೀವಿಗಳ, ಚರಾಚರ ವಸ್ತುಗಳ ಜೀವನದಲ್ಲಿ ನಡೆದು ಹೋದ, ನಡೆಯುವ ಮತ್ತು ನಡೆಯುತ್ತಿರುವ ಎಲ್ಲಾ ಆಗು ಹೋಗುಗಳನ್ನು ಕ್ಷಣ ಮಾತ್ರದಲ್ಲಿ ತಿಳಿಯುವ ಶಕ್ತಿ ಆ ಪರಮೇಶ್ವರನಿಗೆ ಇದೆ. ಇದರಲ್ಲಿ ಸಂಶಯವಿಲ್ಲ. ಎಂತಹ ಸಮಯದಲ್ಲಿ ಯಾವುದೇ ಜೀವಿಯ ಆಗು ಹೋಗುಗಳು ಅವನಿಗೆ ತಿಳಿದಿರುತ್ತದೆ. ಅವನೇ ಸೂತ್ರಧಾರ, ಅವನ ಸಂಕಲ್ಪವಿಲ್ಲದೆ ಏನೂ ನಡೆಯುವುದಿಲ್ಲ. ಜೀವಿಗಳನ್ನು ಸಂಸಾರ ಸಾಗರಕ್ಕೆ ಅಟ್ಟಿ, ತನ್ನ ಲೀಲೆಗಾಗಿ ಅವುಗಳನ್ನು ಅನೇಕ ಕರ್ಮ ಬಂಧನದಲ್ಲಿ ಸಿಕ್ಕಿಸಿ ನಡೆಸುತ್ತಿರುವ ಅವನು ಇದರಲ್ಲಿ ಇದ್ದರೂ ಇಲ್ಲದಂತೆ ಇರುತ್ತಾನೆ. ಹಾಗೆಯೇ ಆತ್ಮಗಳು ತಮ್ಮ ಸೂಕ್ಷ್ಮ ಶರೀರಕ್ಕೆ ಅಂಟಿಕೊಂಡಿರುವ ಕರ್ಮ ಬಂಧನವನ್ನು ಬಿಡಿಸಿಕೊಳ್ಳಲು ಪರಮಾತ್ಮನ ಕೃಪೆಗಾಗಿ ತೊಳಲುತ್ತಿರುತ್ತವೆ. ಕರ್ಮ ಬಂಧನವು ಪ್ರಾರಂಭಿಸಿದರೆ ನಿಲ್ಲುವ ಸೂಚನೆಯೇ ಇಲ್ಲ.

ಜೀವಿಗಳು ತಮ್ಮ ದೇಹದಲ್ಲಿರುವಾಗ ತಿಳಿದಿರುವ ಜ್ಞಾನದ ಪ್ರಮಾಣವನ್ನು ಮಾಯೆಯ ಪ್ರಭಾವದಿಂದ ತಾವೇ ಸರ್ವವಿದಿತರು, ಸರ್ವಜ್ಞರು ಎಂದು ಭಾವಿಸುತ್ತಾರೆ. ಸರ್ವಜ್ಞರಾಗಲು ಪರಿತಪಿಸುತ್ತಿದ್ದಾರೆ. ಎಷ್ಟೇ ತಿಳಿದರೂ,

ಎಷ್ಟೇ ಪಂಡಿತರಾದರೂ ಸರ್ವ ವಿದ್ಯಾಪಾರಂಗತರಾದರೂ ಅವರು ತಿಳಿಯುವುದು ಇನ್ನು ಇದ್ದೇ ಇರುತ್ತದೆ. ಆದರಿಂದ ಪರಮಾತ್ಮನೊಬ್ಬನೇ ಸರ್ವ ವಿಧದಲ್ಲಿಯೂ ಸರ್ವಜ್ಞನು. ಆದರಿಂದ ಅವನೊಬ್ಬನಿಗೇನೇ ಸರ್ವಜ್ಞನೆಂದು ನಮಿಸುವುದು ಸರಿ. ಎಂದರೆ ಈ ವಿಚಾರದಲ್ಲಿ ನಾವು ಸಂಪೂರ್ಣ ಶರಣಾಗತರಾಗಿ ಅವನಲ್ಲಿ ಕೃತಜ್ಞತೆ ಮತ್ತು ಗೌರವನ್ನು ಸಲ್ಲಿಸಬೇಕು, ಅವನನ್ನು ಬಿಟ್ಟರೆ ಬೇರೆ ಇಲ್ಲ ಇಲ್ಲವೇ ಇಲ್ಲ, ಇದು ನಿಶ್ಚಿತ.

04. ಅನಂತಾಯ ನಮಃ

ಪರಮಾತ್ಮನು ಕೊನೆ ಇಲ್ಲದವನು, ಮೊದಲಿಲ್ಲದವನು ಹೇಗೋ ಹಾಗೆಯೇ ಅಂತವಿಲ್ಲದವನು. ಅವನ ಆದಿಯನ್ನಾಗಲಿ, ಅಂತವನ್ನಾಗಲಿ ಈ ಸೃಷ್ಟಿಯಲ್ಲಿ ತಿಳಿದವರು ಯಾರೂ ಇಲ್ಲ. ಅವನೊಬ್ಬನೇ ಎಲ್ಲವನ್ನು ತಿಳಿದವನು. ಆದರಿಂದ ಈ ಮಹಾನುಭಾವನಿಗೆ ಅನಂತನೆಂದು ನಮಸ್ಕರಿಸುತ್ತೇವೆ.

ಅನಂತ ಎಂದರೆ ಶೇಷನಾಗನು, ಪರಮಾತ್ಮನು ಇವನನ್ನು ತನ್ನ ಹಾಸಿಗೆಯನ್ನಾಗಿ ಮಾಡಿಕೊಂಡು ಯೋಗ ನಿದ್ರೆಯಲ್ಲಿರುತ್ತಾನೆ. ಆದಕ್ಕೆ ಅವನು ಅನಂತಶಯನನು. ಅನಂತ ಪದ್ಮನಾಭ ಸ್ವಾಮಿಯು. ಅನಂತನು ತನ್ನ ಸಾವಿರ ಫಣೆಗಳಿಂದ ಮಣಿಗಳಿಂದ ಬೆಳಕನ್ನು ಚೆಲ್ಲುತ್ತಾ ನಾರಾಯಣನಿಗೆ ಅವನ ನಾಮಗಳನ್ನು ಹೇಳುತ್ತಾ ಸೇವಿಸುತ್ತಿರುತ್ತಾನೆ. ಮಹಾವಿಷ್ಣುವನ್ನು ಸೇವಿಸುತ್ತಾ ಹೊಗಳುತ್ತಾ ಇರುವ ಶೇಷನಾಗನಿಗೆ ಅಥವಾ ಆದಿಶೇಷನಿಗೆ ವಿಷ್ಣುವಿನ ವಿಚಾರಗಳು ತಿಳಿದಿರುವಷ್ಟು ಮಹಾಲಕ್ಷ್ಮಿಗೂ ಸಹ ತಿಳಿದಿಲ್ಲವೆಂದು ಹೇಳುತ್ತಾರೆ. ಆದಿಶೇಷನ ಹಾಗೆ ವಿಷ್ಣುವನ್ನು ಸೇವಿಸುವವರು ಯಾರೂ ಇಲ್ಲ.

ಸಕಲ ಬ್ರಹ್ಮಾಂಡಗಳನ್ನು ತನ್ನಲ್ಲಿ ಅಡಗಿಸಿಕೊಂಡಿರುವ ಮಹಾವಿಷ್ಣುವಿನ ಭಾರಗಳನ್ನು ಪಲ್ಲಂಕವಾಗಿರುವ ಆದಿಶೇಷನೇ ಹೊತ್ತಿರಬೇಕಾದರೆ ಅವನ ಶಕ್ತಿ ಎಷ್ಟಿರಬಹುದು, ಊಹಿಸಲು ಸಾಧ್ಯವೇ?

ಆದಿಶೇಷನು ಸಕಲ ಭೂಮಂಡಲವನ್ನು ಹೊತ್ತಿರುತ್ತಾನೆ. ಅವನೇ ಮಹಾವಿಷ್ಣುವಿನ ಅಂಶ, ಅವನಿಗೆ ನಮಸ್ಕಾರಗಳು.

ಅನಂತ ಎಂದರೆ ವಿಷ್ಣು, ವಾಸುಕಿ ಎಂದು ಅರ್ಥ. ವಾಸುಕಿಯ ರೂಪದಲ್ಲಿ ಕ್ಷೀರ ಸಾಗರದಲ್ಲಿ ಮೇರು ಪರ್ವತವನ್ನು ಕಡೆಗೋಲಾಗಿ ದೇವತೆಗಳು, ರಾಕ್ಷಸರು ಕಡೆದಾಗ ವಾಸುಕಿಯು ಹಗ್ಗವಾಗಿ ಸಹಾಯ ಮಾಡುತ್ತಾನೆ. ವಾಸುಕಿಯು ಪರಮಾತ್ಮನೇ. ಪರಮಾತ್ಮನೇ ಮೇರು ಪರ್ವತವಾಗಿ, ಪರಮಾತ್ಮನೇ ಕೂರ್ಮನಾಗಿ ಮೇರು ಪರ್ವತವನ್ನು ತನ್ನ ಬೆನ್ನು ಮೇಲೆ ಇಟ್ಟುಕೊಂಡು ತಾನೇ ಹಗ್ಗವಾಗಿ ವಾಸುಕಿಯ ರೂಪದಲ್ಲಿ ಕಡೆಯಲು ಸಂಕಲ್ಪಿಸುತ್ತಾನೆ. ಹೀಗೆ ಅವನು ಸರ್ವವ್ಯಾಪಿಯಾಗಿ ತನ್ನ ಸಂಕಲ್ಪವನ್ನು ನೆರವೇರಿಸಿಕೊಳ್ಳುತ್ತಾನೆ.

ಅವನು ತೆಗೆದುಕೊಳ್ಳುವ ರೂಪಗಳು ಅನಂತ. ಹಾಗಾಗಿ ಅವನ ವಿಭೂತಿಗಳಿಗೆ ಆದಿಯಾಗಲೀ ಅಂತವಾಗಲೀ ಇಲ್ಲದಿರುವುದರಿಂದ ಪರಮಾತ್ಮನಿಗೆ ಅನಾದಿ, ಅನಂತ ಎಂದು ಹೇಳಿ ನಮಸ್ಕರಿಸುತ್ತೇವೆ.

05. ಸರ್ವಶಕ್ತಿಧರಾಯ ನಮಃ

ಎಲ್ಲ ಶಕ್ತಿಗಳನ್ನು ಧರಿಸಿರುವವನು, ಸಮಯ ಬಂದಾಗ ಎಲ್ಲ ಶಕ್ತಿಗಳನ್ನು ಅಥವಾ ಕೆಲವು ಶಕ್ತಿಗಳನ್ನು ದುಷ್ಟರನ್ನು ಶಿಕ್ಷಿಸುವುದಕ್ಕೂ, ಶಿಷ್ಟರನ್ನು ಮತ್ತು ಭಕ್ತರನ್ನು ರಕ್ಷಿಸುವುದಕ್ಕೂ ಆಯಾ ಸಮಯದಲ್ಲಿ ಹೆಚ್ಚೂ ಇಲ್ಲದೆ ಕಡಿಮೆಯೂ ಇಲ್ಲದೆ ಹಿತಮಿತವಾಗಿ ಉಪಯೋಗಿಸುವವನು ಪರಮಾತ್ಮನೇ. ಈ ಸಮಯದಲ್ಲಿ ಕ್ಲುಪ್ತವಾಗಿ ಉಪಯೋಗಿಸುವವನು ಪರಮಾತ್ಮನೊಬ್ಬನಲ್ಲದೆ ಬೇರೆ ಯಾರೂ ಇಲ್ಲ. ಅವನ ಚತುರತೆಯನ್ನಾಗಲೀ, ಶಕ್ತಿಯನ್ನಾಗಲೀ, ಯುಕ್ತ ಸಮಯವನ್ನಾಗಲೀ ಊಹಿಸುವವರು ಯಾರೂ ಇಲ್ಲ. ಇದು ಕೇವಲ ಅವನ ಸಂಕಲ್ಪ ಮಾತ್ರದಿಂದ ನಡೆಯುತ್ತದೆ. ಆದರಿಂದ ಸರ್ವಶಕ್ತಿಧರಾಯ ನಮಃ ಎನ್ನುತ್ತೇವೆ.

ಶಕ್ತಿಗಳೂ ಸಹ ಪರಮಾತ್ಮನ ವಿಭೂತಿಗಳೇ, ಆದರಿಂದ ಅವುಗಳನ್ನು ನಿರ್ಮಿಸುವವನೂ ಅವನೇ, ಧರಿಸುವವನೂ ಅವನೇ. ಅವುಗಳನ್ನು ಉಪಯೋಗಿಸುವನೂ ಅವನೇ, ಎಲ್ಲ ಶಕ್ತಿಗಳನ್ನು ಮಂತ್ರ ರೂಪದಲ್ಲಿ ಬಂಧಿಸಿ ಬೇಕಾದಾಗ ಕರೆದು ಉಪಯೋಗಿಸುತ್ತಾನೆ.

ಶಕ್ತಿಯನ್ನು ದೇವತೆಯೆಂದು ತಿಳಿಯುತ್ತೇವೆ. ಶಕ್ತಿಯನ್ನು ದುರ್ಗಾದೇವಿ, ಪಾರ್ವತಿ, ಚಾಮುಂಡೇಶ್ವರಿ, ನಿಮಿಷಾಂಬಾ, ಕಾಳಿ, ಮುಂತಾಗಿ ಕರೆಯುತ್ತೇವೆ. ಎಲ್ಲ ದೇವಿಯರು ಶಿವನಿಂದ ಬೇರೆಯಲ್ಲ. ಶಕ್ತಿಯಿಂದ ಶಿವನು ಬೇರೆಯಲ್ಲ. ಇವೆಲ್ಲವನ್ನು ಧರಿಸಿರುವ ಪರಮಾತ್ಮನನ್ನೇ ಎಲ್ಲ ರೂಪಗಳಲ್ಲಿಯೂ ಕಾಣುತ್ತೇವೆ ಮತ್ತು ಪೂಜಿಸುತ್ತೇವೆ. ಯಾವಾಗ ದೇವರನ್ನು ಪೂಜಿಸುತ್ತೇವೆಯೋ ಆಗ ಇತರ ಸಕಲ ದೇವ ದೇವಿಯರೂ ಆ ಪೂಜಿಸುವ ದೇವ / ದೇವಿಯಲ್ಲಿ ಐಕ್ಯವಾಗುತ್ತಾರೆ. ಇದು ಎಲ್ಲ ದೇವ ದೇವಿಯರ ವೈಶಿಷ್ಟ್ಯ. ಇದನ್ನು ಸರ್ವ ದೇವ ದೇವಿಯರ ಸಹಸ್ರನಾಮಗಳಲ್ಲಿ ಕಾಣುತ್ತೇವೆ. ಒಟ್ಟಿನಲ್ಲಿ ಪರಮಾತ್ಮನು ಒಬ್ಬನೇ. ವಿಭೂತಿಗಳು ಹಲವು. ಪ್ರತಿ ವಿಭೂತಿಗೆ ಹಲವು ನಾಮಗಳು, ನಾಮಗಳು ಎಷ್ಟಾದರೂ ಆಗಬಹುದು, ಸಹಸ್ರ ನಾಮಗಳು ಮಾಲೆಗಳ ರೂಪ, ಆದರೆ ಸರ್ವಶಕ್ತಿಗಳನ್ನು ಧರಿಸಿರುವ ಆ ಪರಮಾತ್ಮನು ಒಬ್ಬನೇ - ''ಏಕ ಮೇವಾದ್ವಿತೀಯಂ'' - ''ಏಕಂ ವಿಪ್ರಂ ಬಹುಧಾ ವದಂತಿ'' - ''ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ತವಾರ್ಜುನ'' ಎಂದು ಗೀತೆಯಲ್ಲಿ ಕೃಷ್ಣನು ಅರ್ಜುನನಿಗೆ ಹೇಳಿದ್ದಾನೆ. ಈ ಎಲ್ಲ ವಿಚಾರಗಳೂ ವಿಮರ್ಶಿಸಿದರೆ ಆಗುವುದು

ಅನಂತ - ಶಕ್ತಿಗಳಿಗೆ ಕೊನೆಯಿಲ್ಲ. ಆದರೆ ಅವನು ಸರ್ವ ಶಕ್ತಿಧರನು. ಅವನಿಗೆ ಅನಂತಾನಂತ ನಮಸ್ಕಾರಗಳು.

ಶಕ್ತಿ ಎಂದರೆ ಆಯುಧ ಎಂದಾಗುತ್ತದೆ. ಆಯುಧಗಳಲ್ಲಿ ಇಂದ್ರನ ವಜ್ರಾಯುಧವೇ ಪರಮಾತ್ಮನು. ಎಂದರೆ ಅವನು ಆಯುಧಗಳ ರೂಪದಲ್ಲಿಯೂ ಪ್ರಕಟವಾಗುತ್ತಾನೆ. ಆ ಆಯುಧಗಳನ್ನು ಧರಿಸಿದ ಇಂದ್ರನೂ ಸಹ ಪರಮಾತ್ಮನೇ. ಅವನು ಸರ್ವಶಕ್ತಿಧರನು.

**06. ಸರ್ವೈಶ್ವರ್ಯಪ್ರದಾತ್ರೇಯ ನಮಃ**

ಐಶ್ವರ್ಯ ಎಂದರೆ ಸಂಪತ್ತು, ದೈವೀ ಸಂಪತ್ತು, ಅಷ್ಟ ಸಿದ್ಧಿ, ಅಧಿಕಾರ, ಪ್ರಭುತ್ವ (ಈಶ್ವರನ ಭಾವ ಐಶ್ವರ್ಯ - ಒಡೆತನದ ಭಾವ - ಪ್ರಭುತ್ವ).

ಎಲ್ಲ ರೀತಿಯ ಐಶ್ವರ್ಯವನ್ನು ಕೊಡುವವನು (ಹಿಂದು ಮುಂದು ಯೋಚಿಸದೆ ಸಂಪೂರ್ಣವಾಗಿ ಕೊಡುವವನು).

ಸಾಮಾನ್ಯವಾಗಿ ಯಾವುದಾದರೂ ಬೇಕಾದರೆ ಅದು ಇರುವವರಲ್ಲಿ ಯಾಚಿಸುತ್ತೇವೆ ಅಥವಾ ಬೇಡುತ್ತೇವೆ. ಇರುವವರು ಕೊಡುವಂತೆ ಅವರ ಮನಸ್ಸನ್ನು ಕರುಗುವಂತೆ ಮತ್ತು ಯಾಚಿಸುವ ವಸ್ತುವಿಗೆ ತಕ್ಕಂತೆ ಯಾಚನೆಯ ರೀತಿ, ಆಳ ಇರಬೇಕಾಗುತ್ತದೆ. ಇದು ಬಂದೇ ಬರುತ್ತದೆ ಮತ್ತು ಯಾಚನೆಯು ಸಂಪೂರ್ಣವಾಗಿ ನೆರವೇರುತ್ತೆ ಎಂದು ಖಂಡಿತವಾದಾಗ ಶ್ರದ್ಧೆ ಮತ್ತು ಭಕ್ತಿ, ಗೌರವ ಹೆಚ್ಚುತ್ತದೆ. ಇದು ಮನುಷ್ಯ ಮಾತ್ರದಲ್ಲಿ ಮಾತ್ರವೇ ಅಲ್ಲ, ಎಲ್ಲ ಜೀವಿಗಳಿಗೂ ಸಹಜವಾದ ಗುಣ.

ಆದರೆ ಪರಮಾತ್ಮನನ್ನು ಪ್ರಾರ್ಥಿಸುವಾಗ ನಮ್ಮ ಅತೀವ ಶ್ರದ್ಧೆ, ಅನನ್ಯ ಭಕ್ತಿ ಉತ್ಕಟವಾಗುತ್ತದೆ. ಮತ್ತು ದಯಾಮಯನಾದ ಪರಮಾತ್ಮನು ಮೆಚ್ಚಿ ಬೇಡುವ ವಸ್ತುವನ್ನು ವರವಾಗಿ ದಯಪಾಲಿಸುತ್ತಾನೆ. ವಸ್ತುವಿನ ಯೋಗ್ಯತೆ ಹೆಚ್ಚಿದಷ್ಟು ಅದರ ಸಂಪತ್ತಿನ ಗುಣ, ಐಶ್ವರ್ಯ ಉತ್ತಮವಾಗಿರುತ್ತದೆ. ಅತ್ಯುತ್ತಮವಾದ ಐಶ್ವರ್ಯ ಎಂದರೆ, ಅಂದರೆ ಭಗವಂತನಿಂದ ಪಡೆಯಬೇಕಾದ ವಸ್ತು - ಸಮಸ್ತ ಭಕ್ತರಿಗೂ ಇಷ್ಟವಾದುದೆಂದರೆ ಪುನರಾವೃತ್ತಿ ರಹಿತ ಸ್ಥಾನ - ಪರಮಾತ್ಮನಲ್ಲಿ ಐಕ್ಯವಾಗುವುದು - ಈ ಒಂದು ಸ್ಥಿತಿ ಸಮಸ್ತರಿಗೂ ಬೇಕಾಗುವ ಇಚ್ಛೆ - ಇದೇ ಉದಾತ್ತವಾದ ಐಶ್ವರ್ಯ. ಐಶ್ವರ್ಯಗಳಲ್ಲೆಲ್ಲಾ ಉತ್ತಮವಾದುದು ಇದನ್ನು ಮೀರಿಸಿ ಪಡೆಯುವಂತಹದು ಬೇರೆ ಇನ್ನೊಂದಿಲ್ಲ. ಎಲ್ಲಾ ಐಶ್ವರ್ಯಗಳನ್ನು ಹಿಂದು ಮುಂದು ನೋಡದೆ ಕೊಟ್ಟರೂ, ಪರಮಾತ್ಮನಿಂದ ನಾವು ಅಪೇಕ್ಷಿಸಬೇಕಾದ್ದು ಇದನ್ನೇ.

ಈ ಸ್ಥಿತಿಯನ್ನು ಪಡೆಯಲು ಸಮಸ್ತ ಜೀವಿಗಳೂ ಎಂತಹ ಯೋನಿಯಲ್ಲಿಯೇ ಜನ್ಮಿಸಿದ್ದರೂ - ಅಪೇಕ್ಷಿಸುತ್ತವೆ. ಭಗವಂತನು ಇದನ್ನು ಕರುಣಿಸಲು

ಸಿದ್ಧನಾಗಿರುತ್ತಾನೆ. ಅವನು ಭಕ್ತರ ಪ್ರೇಮದ ಆಳವನ್ನೇ ಎದುರು ನೋಡುತ್ತಿರುತ್ತಾನೆ.

ನಮ್ಮ ಮತ್ತು ಭಗವಂತನ ಸಂಬಂಧ ಹೇಗೆಂದರೆ ತಾಯಿಯು ಮಗುವನ್ನು ಪ್ರೀತಿಸುವ ರೀತಿ, ಜಿಪುಣನು ಹಣದ ಮೇಲೆ (ಕಿಲುಬು ಕಾಸಿನ ಮೇಲೆ) ಪ್ರೀತಿಸುವ ರೀತಿ, ತಂದೆಯು ಮಗನನ್ನು ಪ್ರೀತಿಸುವ ರೀತಿ, ಸತಿಯು ಪತಿಯನ್ನು ಪ್ರೀತಿಸುವ ರೀತಿ, ನಾವು ಭಗವಂತನನ್ನು ನನ್ನ ತಂದೆಯೆಂದೇ ತಿಳಿದು ಪ್ರೀತಿಸುವುದು, ಭಗವಂತನು ನನ್ನ ಪತಿಯೆಂದೇ ನೋಡುವುದು, ಭಗವಂತನಿಗೆ ನಾನು ತಾಯಿಯೆಂತೆ ತಿಳಿದು ವಾತ್ಸಾಲ್ಯದಿಂದ ನೋಡುವುದು, ನಾನು ಅವನ ಬೃಂದಾವನದ ಗೋಪಿಯೆಂದು ತಿಳಿದು ವಿರಹ ತಾಪಪಡುವುದು, ರಾಧಾ ಪ್ರೇಮದಂತೆ ಅವನನ್ನು ಪ್ರೇಮಿಸುವುದು. ನನ್ನನ್ನೇ ನಾನು ಸಂಪೂರ್ಣವಾಗಿ ಅರ್ಪಿಸಿಕೊಳ್ಳುವುದು, ನನಗೆ ಸಂಬಂಧ ಪಟ್ಟ ಸರ್ವಸ್ವವನ್ನು, ಇಹಲೋಕ ಪರಲೋಕದ ಎಲ್ಲಿ ಏನು ನನ್ನ ಸಂಪರ್ಕ ಹೊಂದಿದೆಯೋ ಆ ಎಲ್ಲವನ್ನು ಕಿಂಚಿತ್ತೂ ಮರೆ ಮಾಚದೆ ಅರ್ಪಿಸಿ ತ್ಯಾಗಮಾಡುವುದು - ಇತ್ಯಾದಿಯಿಂದ ಭಗವಂತನು ದಯಾಮಯತೆಯಿಂದ ತನ್ನ ಸರ್ವ ರೀತಿಯ ಉತ್ತಮನಾದ ಐಶ್ವರ್ಯವನ್ನು ಕೊಡುತ್ತಾನೆ. ಆತ್ಮವನ್ನು ತನ್ನಲ್ಲಿ ಅಡಗಿಸಿಕೊಳ್ಳುತ್ತಾನೆ ಮತ್ತು ಇಹದಲ್ಲಿ ಇರುವಷ್ಟು ಕಾಲ ಪರರ ಉದ್ಧಾರಕ್ಕಾಗಿ ಶ್ರಮಿಸಲು ಅವಕಾಶವನ್ನು ಕೊಡುತ್ತಾನೆ. ಇದಕ್ಕೇ ಸರ್ವೈಶ್ವರ್ಯಪ್ರದಾತಾಯ ನಮಃ ಎಂದು ಅತೀವ ಭಾವದಿಂದ ಬೇಡುತ್ತೇವೆ.

97. ಸರ್ವಕಾರ್ಯವಿಧಾಯಿನೇ ನಮಃ

ಪರಮಾತ್ಮನು ಎಲ್ಲ ಕೆಲಸಗಳನ್ನು ಹೀಗೆಯೇ ನಡೆಯಬೇಕೆಂದು ನಿಯಮಿಸುವವನು.

ಪ್ರತಿಯೊಂದು ಜೀವಿಯ ಆಗು ಹೋಗುಗಳನ್ನು ಹೀಗೆಯೇ ಇಂತಿಂಥ ಸಮಯದಲ್ಲಿ ಈ ರೀತಿ ನಡೆಯಬೇಕೆಂದು ನಿಯೋಜಿಸುತ್ತಾನೆ. ಅವನ ಸಂಕಲ್ಪದಂತೆಯೇ ಎಲ್ಲವೂ ಪೂರ್ವನಿಯೋಜಿತದಂತೆ ನಡೆಯುತ್ತದೆ. ಇದರಲ್ಲಿ ಬೇರೆ ಯಾರೂ ನಿಯೋಜಿಸುವ ಪ್ರಶ್ನೆಯೇ ಇಲ್ಲ. ಏಕೆಂದರೆ ಸೃಷ್ಟಿಯ ಪ್ರತಿಯೊಂದು ಕಾರ್ಯವೂ ಪರಮಾತ್ಮನ ಸಂಕಲ್ಪದಂತೆ ಅವನ ಇಚ್ಛೆಯಂತೆಯೇ ಅವನ ಲೀಲೆಗಾಗಿ ಆಟ ಪಾಟಕ್ಕಾಗಿ ನಡೆಯುತ್ತದೆ. ಎಲ್ಲ ಜೀವಿಗಳು ಆಬ್ರಹ್ಮಸ್ತಂಭಪರ್ಯಂತ ಸಕಲ ಚರಾಚರ ವಸ್ತುಗಳು, ಆತ್ಮಗಳೂ ಅವನ ಸೂತ್ರದಂತೆ ನಡೆಯುತ್ತವೆ. ಯಾರೂ ಯಾವ ದೇವ ದೇವತೆಗಳು, ಅಷ್ಟ ದಿಕ್ಪಾಲಕರು, ಸೂರ್ಯ ಚಂದ್ರರು, ಬ್ರಹ್ಮಾಂಡಗಳು ಕೊನೆಗೆ ಒಂದು ಅಣುವೂ ಸಹ ಸ್ವತಂತ್ರವಲ್ಲ. ಸ್ವತಂತ್ರವಾಗಿ ಒಂದು ಕ್ಷಣವೂ ನಡೆಯುವುದಿಲ್ಲ. "ತೇನ

ವಿನಾ ತೃಣಮಪಿ ನ ಚಲತಿ" ಎಂದ ಮೇಲೆ ಅವನು ಸರ್ವ ಕಾರ್ಯ ವಿಧಾಯಕನು.

ಇದರಲ್ಲಿ ಲವಲೇಶವೂ ಸಂಶಯವಿಲ್ಲ. ಆದರಿಂದಲೇ ಸರ್ವಕಾರ್ಯವಿಧಾಯಿನೇ ನಮಃ ಎನ್ನುತ್ತೇವೆ.

ಜೀವಿ ಜೀವಿಗಳ ಸಂಪರ್ಕ, ಬೇರ್ಪಡೆ, ಅವುಗಳು ಕರ್ಮ ಮಾಡುವುದರಲ್ಲಿ ಪ್ರಚೋದನೆ, ಯೋಗ ಮಾಯೆಯ ಪ್ರಭಾವ, ಪ್ರಾಪಂಚಿಕ ವಿಷಯಾಸಕ್ತಿ, ಸಂಸಾರ ಸಾಗರದಲ್ಲಿ ಬಂಧನ, ಭವಸಾಗರದಿಂದ ವಿಮುಕ್ತಿ, ಕೈವಲ್ಯ ಪ್ರಾಪ್ತಿ ಮುಂತಾದ ಸಕಲ ವಿಚಾರಗಳಲ್ಲಿಯೂ ಪರಮಾತ್ಮನ ಸಂಕಲ್ಪವೇ ಕಾರಣವಾಗುತ್ತದೆ. ಅವನು ಎಲ್ಲ ಸಮಸ್ತ ಜೀವ ಕೋಟಿ ಸಚರಾಚರಗಳ ಸಂರಕ್ಷಣೆ, ಪಾಲನೆ, ಇರುವುದಕ್ಕೆ, ಮುಂದುವರಿಯುವುದಕ್ಕೆ ಬೇಕಾದ ಪ್ರಾಕೃತಿಕ ಸನ್ನಿವೇಶಗಳು, ಪರಿಸರಗಳು ಎಲ್ಲವನ್ನು ಸೃಷ್ಟಿಸಿ ಸರ್ವ ಕಾರ್ಯಗಳನ್ನು ವಿಧಾಯಿಸುತ್ತಾನೆ. ಇಂತಹ ಕಾರ್ಯದಲ್ಲಿ ಅವನನ್ನು ಬಿಟ್ಟರೆ ಬೇರೆ ಯಾರಿಂದಲೂ ಸಾಧ್ಯವಾಗುವುದಿಲ್ಲ. ಅವನೇ ಏಕೈಕ ಸರ್ವಕಾರ್ಯ ವಿಧಾಯಕ, ಅಗ್ರಗಣ್ಯ, ಇವನಿಗೆ ಶಿರಸಾ ನಾಮಾಮಿ ಎಂದು ಪ್ರತಿ ಜೀವಿಯೂ ಕ್ಷಣ ಕ್ಷಣಕ್ಕೂ ನಮಸ್ಕರಿಸುತ್ತದೆ.

*ಸರ್ವಜ್ವರವಿನಾಶಾಯ ಸರ್ವರೋಗಾಪಹಾರಿಣೇ ।*
*ಸರ್ವಖೇಚರಹಂತ್ರೇ ಚ ಸರ್ವೋತ್ಪಾತನಿಘಾತಿನೇ ॥51॥ (308-311)*

08. **ಸರ್ವಜ್ವರವಿನಾಶಾಯ ನಮಃ**

ಎಲ್ಲ ಜ್ವರಗಳನ್ನೂ ಸಂಪೂರ್ಣವಾಗಿ ನಾಶಮಾಡುವವನು ಯಾರೋ ಅವನೇ ಪರಮಾತ್ಮನು.

ಜ್ವರ ಅಂದರೆ ಸಂತಾಪ, ಬಿಸಿ, ದುಃಖ.

ಕಾಯ, ವಾಚಾ ಮನಸಾಗಳಿಗೆ ಬರುವ ಜ್ವರಗಳನ್ನು ಪರಮಾತ್ಮನು ನಿಶ್ಶೇಷವಾಗಿ ಪರಿಹರಿಸುತ್ತಾನೆ.

ಜ್ವರಗಳು ಅನೇಕ ರೀತಿಯವು, ಕೆಲವು, ತಾತ್ಕಾಲಿಕ ಮತ್ತೆ ಕೆಲವು ನಿಧಾನವಾಗಿ ಬಹಳ ಕಾಲ ಇರುವಂತಹವು. ಮತ್ತೆ ಕೆಲವು ಹೋಗದೆ ಇರುವ ಜ್ವರಗಳು.

ಕೆಲವು ದೇಹಕ್ಕೆ ಮಾತ್ರ ಸೀಮಿತವಾದದ್ದು. ಕೆಲವು ವಾಕ್ ಸಂಬಂಧದ ಜ್ವರಗಳು. ಕೆಲವು ಮಾನಸಿಕವಾದವುಗಳು. ಹಲವು ರೀತಿಯ ಜ್ವರಗಳಿಗೆ ಹಲವು ರೀತಿಯ ಚಿಕಿತ್ಸೆಗಳು ಸಾಕಾಗುತ್ತವೆ. ಮತ್ತೆ ಕೆಲವಕ್ಕೆ ಉತ್ತಮ ರೀತಿಯವು ಬೇಕು. ಮತ್ತೆ ಕೆಲವಕ್ಕೆ ದೈವದ ಅತ್ಯುತ್ತಮವಾದ ಅನಿರೀಕ್ಷಿತವಾದ ಕೃಪೆ ಬೇಕು. ವೈದ್ಯರು ಚಿಕಿತ್ಸೆಗೆ ಬೇಕೇ ಬೇಕು. ಸಾಮಾನ್ಯವಾಗಿ ಬಹಳ

ಜ್ವರಗಳು (ಎಂದರೆ ಜ್ವರವೆಂದೇ ಅಲ್ಲ - ಎಂತಹ ಕಾಯಿಲೆಯೂ ಪರಿಣಾಮದಲ್ಲಿ ಜ್ವರದ ಪರಿಣಾಮವೇ ಆಗುತ್ತದೆ) ವೈದ್ಯರಿಂದ ಗುಣವಾಗುತ್ತವೆ.

ಆದರೆ ಅತೀವ ರೀತಿಯ ಜ್ವರ ಎಂದರೆ ಪರಮಾತ್ಮನ ಸಾನ್ನಿಧ್ಯವನ್ನು ಸೇರ ಬೇಕೆನ್ನುವ ಜ್ವರ - ಆಕಾಂಕ್ಷೆ. ಇದು ಪ್ರತಿಯೊಂದು ಜೀವಿಯನ್ನು ಕಾಡುತ್ತದೆ. ಇದರ ನಿವಾರಣೆಗೆ ಜೀವಿಯ ಶ್ರದ್ಧಾ ಭಕ್ತಿಯ ಪ್ರಾರ್ಥನೆ, ಪರಮಾತ್ಮನ ಕೃಪೆ, ಪೂರ್ವ ಜನ್ಮ ಸಂಸ್ಕಾರ, ದೈವ ಸಂಕಲ್ಪಗಳು ಬೇಕೇ ಬೇಕು. ಅದಿಲ್ಲದೆ ಭವತಾರಣೆಯು ಸಾಧ್ಯವಿಲ್ಲ. ಇವನನ್ನು ಭವರೋಗ ಭೇಷಜನೆನ್ನುತ್ತೇವೆ. ಸಕಲ ಜೀವಿಗಳಿಗೂ ಒಂದಲ್ಲ ಒಂದು ರೀತಿಯ ತಾತ್ಕಾಲಿಕ, ಕೇವಲ ಕೆಲವು ಕಾಲ ದುಃಖ ಕೊಟ್ಟು ಹೋಗುವ ಜ್ವರಗಳು ಬರುತ್ತವೆ. ಆದರೆ ಈ ಜ್ವರಗಳ ಚಿಕಿತ್ಸೆಯ ಕಾಲ ಅದರಿಂದ ಬರುವ ನಿವಾರಣೆಯಿಂದ ಅನುಭವಿಸುವ ಕಾಲ ಬಹಳ ಕಾಲವಲ್ಲ. ಜೀವನದಲ್ಲಿ ಇಂತಹ ಅಂತರಗಳು ಬಹಳ. ಆದರೆ ಪರಮೋತ್ಕೃಷ್ಟವಾದ ಜ್ವರ ನಿವಾರಣೆ ಎಂದರೆ ಪುನರಾವೃತ್ತಿ ರಹಿತ ಸಾನ್ನಿಧ್ಯ. ಜನನ ಮರಣಗಳ ಕೊಂಡಿಯಿಂದ ಬಿಡುಗಡೆ. ಸ್ವರ್ಗ ನರಕಗಳ ವಾಸದಿಂದ ಬಿಡುಗಡೆ. ಇದು ಅವನ ಕೃಪೆಯಿಂದ ದೊರಕಿಸಿ ಕೊಳ್ಳುವುದು - ಇದೇ ಧ್ಯೇಯ.

09. ಸರ್ವರೋಗಾಪಹಾರಿಣೇ ನಮಃ

ಎಲ್ಲ ರೀತಿಯ ರೋಗಗಳನ್ನು ಅದಿರುವ ಸ್ಥಾನದಿಂದ ಎಳೆದು ಬೇರೆ ಕಡೆಗೆ ಒಯ್ಯುವವನು - ಪರಮಾತ್ಮ.

ಲೋಕದಲ್ಲಿ ದೊರಕುವ ಔಷಧಿಗಳು ಕೇವಲ ರೋಗಗಳು ಬರದಿರುವಂತೆ ಅಥವಾ ಅವುಗಳ ಪರಿಣಾಮವನ್ನು ಮಾತ್ರ ನಿವಾರಿಸುತ್ತವೆ.

ರೋಗಗಳನ್ನು ಮತ್ತೆ ಬರದ ಹಾಗೆ ಬುಡ ಸಮೇತ ತೆಗೆಯುವ ಔಷಧಿಗಳು ಮತ್ತೆ ಕೆಲವು ಇವೆ.

ಆದರೆ ಮತ್ತೆ ಮತ್ತೆ ಬರದ ಹಾಗೆ ಮಾಡುವ ಔಷಧಿಗಳೇ ಬೇರೆ. ಒಂದು ಬರದ ಹಾಗೆ ಮಾಡಿದರೆ ಮತ್ತೊಂದು ಬರುತ್ತದೆ. ಅದನ್ನು ಗುಣ ಪಡಿಸಿದರೆ ಇನ್ನೊಂದು, ಬೇರೊಂದು ಬರುತ್ತದೆ. ಹೀಗೆ ರೋಗಗಳ ಸರಣಿಗಳನ್ನು ನಿರ್ಮೂಲವಾಗಿ ತೆಗೆಯುವ ಭೇಷಜನು ಪರಮಾತ್ಮನೊಬ್ಬನೇ.

ಅವನೂ ಸಹ ಆಯಾ ದೈಹಿಕ, ಮಾನಸಿಕ, ವಾಚಿಕ ರೋಗಗಳನ್ನು ಮಾತ್ರ ತತ್ ಕಾಲಕ್ಕೆ ತೆಗೆಯುತ್ತಾನೆ. ಆದರೆ ನಮ್ಮ ಗುರಿ ಮೇಲೆ ಪ್ರಾರ್ಥನೆ ಅವಲಂಬಿಸಿರುತ್ತದೆ. ಅವನು ಮಾಡುವ ಗುಣ ನಮ್ಮ ಪ್ರಾರ್ಥನೆಯನ್ನು ಮತ್ತು ಶ್ರದ್ಧೆ ಭಕ್ತಿಯನ್ನು ಅವಲಂಬಿಸಿರುತ್ತದೆ. ನಾವು ಮಾಡುವ ಪ್ರಾರ್ಥನೆ ನಮ್ಮ ಬುದ್ಧಿ ಶಕ್ತಿ, ಮನಸ್ಸಿನ ಬಲದ ಮೇಲೆ ಇದೆ. ಬುದ್ಧಿ ಶಕ್ತಿ ಕೇಳುವ

ಪ್ರಾರ್ಥನೆ ಸಂಸ್ಕಾರದ ಮೇಲಿದೆ. ಹೀಗೆ ಒಂದರ ಮೇಲೊಂದು ಇರುವಾಗ ಉತ್ತಮೋತ್ತಮ ಮೋಕ್ಷವನ್ನು ಆವನಿಂದ ಪಡೆಯಬೇಕಾದರೆ ಅವನ ಕೃಪೆಯ ಮೇಲೆ ನಿಂತಿದೆ. ಇದನ್ನು ಪ್ರಾರ್ಥಿಸುವುದಕ್ಕೆ ಅವನನ್ನೇ ಅವನ ದೆಯೆಯನ್ನೇ ಅವಲಂಬಿಸಿದೆ. ಅವನ ಕೃಪೆ ನಮ್ಮ ಸಂಸ್ಕಾರಗಳೇ ಪರಮ ಕಾರಣ. ಅದರಿಂದಲೇ ಸರ್ವ ರೋಗಾವಪಹಾರಿಣೇ ನಮಃ ಎಂದು ನಮಸ್ಕರಿಸುತ್ತೇವೆ.

310. ಸರ್ವಖೇಚರಹಂತ್ರೇ ನಮಃ

ಖ - ಆಕಾಶ, ಚರ - ಓಡಾಡುವ ಜೀವಿಗಳು, ಹಂತ್ರೇ - ಕೊಲ್ಲುವವನು.

ಆಕಾಶದಲ್ಲಿ ಚಲಿಸುವ ಎಲ್ಲಾ ಜೀವಿಗಳನ್ನು ಕೊಲ್ಲುವವನು. ಸಾಮಾನ್ಯ ಅರ್ಥದಲ್ಲಿ ಆಕಾಶದಲ್ಲಿ ಓಡಾಡುವ ಪ್ರಾಣಿಗಳು ಹಕ್ಕಿಗಳು, ಮುಂತಾದವುಗಳು.

ಖೇಚರ - ಆಕಾಶದಲ್ಲಿ ಚಲಿಸುವುವು - ಅಂದರೆ ಮೋಡ, ಪಕ್ಷಿ, ಸೂರ್ಯ, ಗಾಳಿ, ಗ್ರಹ, ದೇವತೆಗಳು.

ಹಂತ್ರೇ - ಎಂದರೆ ಕೊಲ್ಲುವವನು, ತನ್ನ ನಿರ್ಣಯದಂತೆ ನಡೆಸುವವನು, ಅಧೀನದಲ್ಲಿಟ್ಟುಕೊಳ್ಳುವವನು.

ಆಕಾಶವು ಪಂಚಭೂತಗಳಲ್ಲೊಂದು. ಅದರಲ್ಲಿ ತೇಲುವ ವಸ್ತುಗಳಲ್ಲಿ ಭೂಮಂಡಲವೂ ಒಂದು. ಆಕಾಶಕ್ಕೂ ಭೂಮಿಗೂ ಮಧ್ಯದಲ್ಲಿ ವಾಯುಮಂಡಲವಿದೆ. ದೇವತೆಗಳು ಯಾವಾಗಲೂ ಭೂಮಿಗೂ ಇತರ ಲೋಕಗಳಿಗೂ ಮಧ್ಯದಲ್ಲಿ ಓಡಾಡುತ್ತಿರುತ್ತಾರೆ.

ಸೂರ್ಯನ ಸುತ್ತಲೂ ತಿರುಗುತ್ತಿರುವ ಗ್ರಹಗಳು, ಭೂಮಂಡಲಗಳು ಆಕಾಶದಲ್ಲಿ (ಶೂನ್ಯದಲ್ಲಿ) ತಿರುಗುತ್ತಿರುತ್ತವೆ. ಅಂದ ಮೇಲೆ ಎಲ್ಲ ಸೃಷ್ಟಿಯ ಸಕಲ ವಸ್ತುವನ್ನು ಚರಾಚರ ವಸ್ತುಗಳನ್ನು, ಗ್ರಹ, ಪಂಚಭೂತಗಳು ಮತ್ತೆಲ್ಲವನ್ನು ಪರಮಾತ್ಮನು ತನ್ನ ಅಧೀನದಲ್ಲಿಟ್ಟುಕೊಂಡು ತನ್ನ ಇಚ್ಛೆ, ಸಂಕಲ್ಪದಂತೆ ನಡೆಸುತ್ತಿದ್ದಾನೆ ಎಂದಾಯಿತು. ಈ ಸಕಲಖೇಚರಹಂತ್ರೇ ನಮಃ ಎಂಬುದು ಆಗಾಧವಾದ ವೈಶಾಲ್ಯತೆಯನ್ನು ಅಪ್ಪಿಕೊಂಡಿದೆ. ಪರಮಾತ್ಮನ ನಾಮಗಳೇ ಹೀಗೆ. ನಾಮವು ಒಂದು. ಅದು ಪ್ರಸರಿಸುವ ಭಾವ, ಭಾವನೆ, ವಿಸ್ತೀರ್ಣ ಮುಂತಾದವು ಅನಂತ, ಅನಾದಿ. ಅಹಾ! ಸರ್ವಖೇಚರಹಂತ್ರೇ ನಮಃ ನಮೋನ್ನಮಃ.

311. ಸರ್ವೋತ್ಪಾತನಿಘಾತಿನೇ ನಮಃ

ಉತ್ಪಾತ - ಮೇಲಿಂದ ಬೀಳುವ ಅನಿರೀಕ್ಷಿತ ದುಷ್ಟ ಪರಿಣಾಮ ಬೀರುವ ಶಕ್ತಿ, ಮೇಲಿಂದ ಮೇಲೆ ಬೀಳುವ ಅನಿಷ್ಟಗಳು.

ಎಂತಹದೇ ಆದ ದುಷ್ಟ ಶಕ್ತಿಗಳ ಅನಿರೀಕ್ಷಿತ ಪ್ರಬಲ ಪರಿಣಾಮಗಳನ್ನು

ಒಂದನ್ನೂ ಬಿಡದೆ ಹೊಡೆದು ಓಡಿಸುವವನು. ಇದು ಪರಮಾತ್ಮನಿಂದಲೇ ಸಾಧ್ಯ.

ತಮ್ಮ ಪಾಡಿಗೆ ತಾವು ಸತ್ಸಂಗ ಮುಂತಾದ ಸನ್ನಿವೇಶಗಳಲ್ಲಿ ಸಮಯ ಕಳೆಯುತ್ತಿರುವಾಗ ಪ್ರಾಕೃತಿಕ ವಿಕೋಪಗಳಾದ ಭೂಕಂಪ, ಪ್ರವಾಹ, ಜರ್ಜರಿತ ಮಳೆ ಮುಂತಾದವು ಬಂದು ಶಾಂತಿಯನ್ನು ನಿರ್ಮೂಲ ಮಾಡುತ್ತವೆ. ಆದರಿಂದ ಇಂತಹ ಪ್ರಾಕೃತಿಕ ವಿಕೋಪಗಳನ್ನು ಹೋಗಲಾಡಿಸುವವನು ಪರಮಾತ್ಮನೇ.

ಈ ಪ್ರಕೃತಿಯ ವಿಕೋಪಕ್ಕೆ ಜೀವಿಗಳ ತಾರತಮ್ಯವಿಲ್ಲ. ಇವುಗಳಿಗೆ ಸೂತ್ರಧಾರ ಪರಮಾತ್ಮನೇ. ಮಾಡುವವನೂ ಅವನೇ, ಮಾಡದೆ ನಿಲ್ಲಿಸುವವನೂ ಅವನೇ. ಇದಕ್ಕೆ ಕಾರಣವನ್ನು ಸಾಮಾನ್ಯರಾದ ನಾವುಗಳು ಹುಡುಕುತ್ತೇವೆ. ನಮ್ಮ ಸಮಾಧಾನಕ್ಕೆ ಕಾರಣಗಳನ್ನು ನಿರ್ಮಿಸುತ್ತೇವೆ. ನಮ್ಮ ನಮ್ಮಲ್ಲಿ ಜಿಜ್ಞಾಸೆ ಹುಟ್ಟಿ ಕೊನೆಗೆ ''ಪರಮಾತ್ಮನ ಸಂಕಲ್ಪ'' ಎಂದು ನಿಲ್ಲುತ್ತೇವೆ. ಪ್ರಪಂಚದ ಅನೇಕ ಕಡೆಗಳಲ್ಲಿ ಈ ವಿಕೋಪಗಳು ನಡೆಯುತ್ತಲೇ ಇರುತ್ತವೆ.

ಒಟ್ಟಿನಲ್ಲಿ ಎಲ್ಲ ರೀತಿಯ ''ಉತ್ಪಾತ'' ಗಳನ್ನು ಅವನೇ ಹೋಗಲಾಡಿಸುತ್ತಾನೆ. ಇದಕ್ಕೆ ಉತ್ಪಾತಗಳು ಎಷ್ಟು ಶಕ್ತಿಯುತವೋ, ಪರಿಹಾರ ಮಾಡುವವನ ಶಕ್ತಿಯೂ ಇನ್ನೂ ಬಲಯುತವಾಗಿ ಇರಬೇಕು.

ದುಷ್ಪರಿಣಾಮಗಳಿಗೂ ಅವುಗಳ ನಿವಾರಣೆಗೂ ಅವನೇ ಕಾರಣ, ಸರ್ವ ಶಕ್ತ, ಸರ್ವೇಶ್ವರ, ಯಾರಿಗೆ ಈ ದುಷ್ಪರಿಣಾಮಗಳು ಉಂಟಾಗಬೇಕು ಎಂಬುದನ್ನು ಅವರವರ ಕರ್ಮ ವಿಶೇಷಕ್ಕೆ ತಕ್ಕಂತೆ ಸಂಕಲ್ಪಗಳನ್ನು ಮಾಡುವವನೂ ಅವನೇ. ''ಸರ್ವೋತ್ಪಾತನಿಘಾತಿನೇ ನಮಃ'' ಎನ್ನಿಸಿಕೊಳ್ಳುವವನೂ ಆ ಪರಮಾತ್ಮನೇ.

*ಪಿಂಗಾಕ್ಷಾಯೈಕಶೃಂಗಾಯ ದ್ವಿಶೃಂಗಾಯ ಮರೀಚಯೇ ।*
*ಬಹುಶೃಂಗಾಯ ಶೃಂಗಾಯ ಮಹಾಶೃಂಗಾಯ ತೇ ನಮಃ ॥52॥*
*(312-318)*

312. ಪಿಂಗಾಕ್ಷಾಯ ನಮಃ

ಪಿಂಗಾಕ್ಷ - ಶಿವ, ವಾನರ

ಪಿಂಗ - ಕಂದು ಬಣ್ಣ, ಅಕ್ಷ - ಕಣ್ಣು, ರುದ್ರಾಕ್ಷಿ,

ಪಿಂಗಾಕ್ಷ - ಶಿವ ಎಂದು ಅರ್ಥ ಮಾಡಿಸಿದರೆ ಶಿವರೂಪನಾದ ಪರಮಾತ್ಮನಿಗೆ ನಮಸ್ಕಾರಗಳು, ಕಂದು ಬಣ್ಣದ ಕಣ್ಣುಳ್ಳವನು.

ರುದ್ರಾಕ್ಷಿಯು ಕಂದು ಬಣ್ಣದಾಗಿರುತ್ತದೆ. ರುದ್ರಾಕ್ಷಿಯನ್ನು ಜಪಕ್ಕಾಗಿ ಮಾಲೆಮಾಡಿ ಉಪಯೋಗಿಸುತ್ತೇವೆ. ರುದ್ರಾಕ್ಷಿಮಾಲೆಯೇ ಜಪಕ್ಕೆ ಬಹಳ ಶ್ರೇಷ್ಠ. ಪರಮಾತ್ಮನ ನಾಮಸ್ಮರಣೆಗೆ ಈ ರುದ್ರಾಕ್ಷಿಯನ್ನು ಅನವರತ

ಉಪಯೋಗಿಸುವುದರಿಂದ ಪರಮಾತ್ಮನು, ಅವನ ನಾಮ, ಜಪಿಸುವ ಮಾಧ್ಯಮ, ಜಪಿಸುವವನು ಎಲ್ಲವೂ ಒಂದೇ - ಏಕ ರೂಪವಾಗಿ ಬಿಡುತ್ತದೆ. ಅದರಿಂದ ಪರಮಾತ್ಮನನ್ನು ರುದ್ರಾಕ್ಷಿಯಲ್ಲಿರುವವನು ಎಂದು ಭಾವಿಸಿ ಈ ನಾಮದಿಂದ ನಮಸ್ಕರಿಸುತ್ತೇವೆ.

ವಾನರ ಎಂದು ಅರ್ಥ ಮಾಡಿದಾಗ ಹನುಮಂತನು ರಾಮನ ಮಹಾಭಕ್ತನಾಗಿ ಸಂಕಟ ಮೋಚನ ಹನುಮಂತನಾಗಿ ಕರೆಯಲ್ಪಟ್ಟು ರಾಮನ ಪ್ರಭಾವದಿಂದ ಒಂದಾಗುತ್ತಾನೆ. ರಾಮ ಲಕ್ಷ್ಮಣ ಸೀತೆಯರನ್ನು ತನ್ನ ಹೃದಯದಲ್ಲಿರಿಸಿ, ಸದಾ ರಾಮಧ್ಯಾನ ಮಾಡುತ್ತಿರುತ್ತಾನೆ. ಅದರಿಂದ ಹನುಮಂತನು ಪರಮಾತ್ಮನೇ, ಅವನಿಗೆ ನಮಸ್ಕಾರಗಳು.

**13.** ಏಕಶೃಂಗಾಯ ನಮಃ

ಶೃಂಗ - ಕೊಂಬು, ಶಿಖರ, ಕಮಲ.

ಭಗವಂತನು ಏಕಶೃಂಗನು - ಮತ್ಸ್ಯಾವತಾರದಲ್ಲಿ ಭಗವಂತನು ಮತ್ಸ್ಯ ರೂಪದಲ್ಲಿ ಅವತರಿಸಿ, ತನ್ನ ಒಂದೇ ಒಂದು ಬಲವಾದ ಕೊಂಬಿಗೆ ನಾವೆಯನ್ನು ಸಿಕ್ಕಿಸಿಕೊಂಡು ಎಳೆದು ಋಷಿಗಳನ್ನು, ಔಷಧಿಲತೆಗಳನ್ನು, ಮುಂದೆ ಮನುನಾಗುವ ರಾಜರ್ಷಿಯನ್ನು ಕಾಪಾಡುತ್ತಾನೆ.

ಇದು ಬಹಳ ಮುಖ್ಯವಾದ ಸಮಯ. ಒಬ್ಬ ಮನುವಿನ ಕಾಲ ಮುಗಿದು ಮಹಾ ಪ್ರಳಯವಾಗಿ ಇನ್ನೊಂದು ಕಲ್ಪಾದಿಯವರೆಗಿನ ಅಂತರದ ಕಾಲದಲ್ಲಿ ಮಹಾವಿಷ್ಣುವು ಮತ್ಸ್ಯರೂಪ ಧರಿಸುತ್ತಾನೆ. ತನಗೆ ತಾನೇ ಮಹತ್ತಾಗಿ ಬೆಳೆದು ಮಹಾಸಾಗರದಲ್ಲಿ ಅಂಧಕಾರದಲ್ಲಿ ನಾವೆಯನ್ನು ಸೃಷ್ಟಿಸುತ್ತಾನೆ. ಆ ನಾವೆಯನ್ನು ತನ್ನ ಏಕಶೃಂಗದಿಂದ ಎಳೆದು ಪಾರು ಮಾಡುತ್ತಾನೆ. ಅದರಿಂದ ಏಕಶೃಂಗನಿಗೆ ನಮಸ್ಕಾರಗಳು.

ಭಕ್ತರನ್ನು ಕಾಪಾಡುವ ದೇವ ದೇವತೆಗಳಲ್ಲಿ ಸರ್ವೋತ್ತಮನಾದ ಪರಮಾತ್ಮನೇ ತನ್ನದೇ ಆದ ಶಕ್ತಿ, ಯುಕ್ತಿ, ಚತುರತೆ ಇತ್ಯಾದಿ ಗುಣಗಳಿಂದ ಎಲ್ಲರಿಗಿಂತ ತುಟ್ಟ ತುದಿಯಲ್ಲಿ ಮೇರುವಿಂತೆ ರಾರಾಜಿಸುತ್ತಾನೆ, ಅದರಿಂದ ತಾನೇ ಏಕೈಕ ಉತ್ತಮೋತ್ತಮ ಶೃಂಗನಾಗಿ - ಏಕಶೃಂಗನಾಗಿದ್ದಾನೆ. ಅದರಿಂದ ಏಕೈಕ ''ಏಕಶೃಂಗಾಯ ನಮಃ'' ಎಂದೇ ಹೇಳುವುದು.

ಕಮಲ ಎಂಬ ಅರ್ಥಮಾಡಿದಾಗ ಪರಮಾತ್ಮನಾದ ಮಹಾವಿಷ್ಣುವಿನ ನಾಭೀ ಕಮಲದ ಸಮನಾದ ಬೇರೆ ಕಮಲವಿಲ್ಲ. ಸರ್ವ ಪ್ರಪಂಚವನ್ನು ಸೃಷ್ಟಿಸುವ, ಸೃಷ್ಟಿಕರ್ತನಾದ ಬ್ರಹ್ಮ ದೇವರ ಜನನ ಸ್ಥಾನವೇ ಮಹಾವಿಷ್ಣುವಿನ ನಾಭೀ ಕಮಲ. ಇದು ಪರಮೋಚ್ಚವಾದ ಏಕೈಕ - ಏಕ ಶೃಂಗ. ಇಂತಹ ಏಕಶೃಂಗಕ್ಕೆ ಬ್ರಹ್ಮನ ಜನ್ಯಸ್ಥಾನವಾದ ''ನಾಭೀ ಕಮಲಕ್ಕೆ'' ನಮಸ್ಕಾರಗಳು.

ಕಮಲವೆಂಬ ಅರ್ಥದಲ್ಲಿ ಪರಮಾತ್ಮನ ಅವಯವಗಳಿಗೆ. ಕಮಲದ ಸ್ವರೂಪದಲ್ಲಿ ಸ್ತೋತ್ರ ಮಾಡುತ್ತೇವೆ, ಕಮಲಾಕ್ಷ, ಕಮಲಲೋಚನ, ಇತ್ಯಾದಿ.

ಲಕ್ಷ್ಮೀ ದೇವಿಯ ರೂಪವನ್ನು ಕಮಲಕ್ಕೆ ಹೋಲಿಸುತ್ತೇವೆ, ಕಮಲೆ, ಕಮಲಲೋಚನೆ, ಕಮಲಸಂಭವೆ, ಇತ್ಯಾದಿ.

ಬ್ರಹ್ಮನು ಕಮಲ ಸಂಭವ ಇತ್ಯಾದಿ.

ಕಮಲವು ಶೃಂಗಾರ ರಸವನ್ನು ಹೊರ ಹೊಮ್ಮುತ್ತದೆ.

ಕಮಲವು ಪರಮಾತ್ಮನ ಹಸ್ತವನ್ನು ಅಲಂಕರಿಸುತ್ತದೆ, ಶುಭವನ್ನು ತೋರಿಸುತ್ತದೆ (ಇತ್ಯಾದಿ), ಅದರಿಂದ ''ಏಕಶೃಂಗಾಯ ನಮಃ''.

ಮಂತ್ರಗಳಲ್ಲೆಲ್ಲಾ ಅತ್ಯಂತ ಉನ್ನತವಾದುದು ''ಓಂ'' ಕಾರ. ಇದನ್ನು ದೇವರ ನಾಮಗಳೊಡನೆ ಸೇರಿಸಿ ನಮಃ ಎಂದು ಪರಮಾತ್ಮನನ್ನು ಕರೆದರೆ ಅವನು ಸುಪ್ರೀತನಾಗಿ ಬರುತ್ತಾನೆ. ಈ ''ಓಂ'' ಕಾರವೇ ನಾಮಗಳಲ್ಲಿ ಏಕಶೃಂಗ, ಓಂಕಾರವೆಂಬ ಏಕಾಕ್ಷರವೇ ಬ್ರಹ್ಮ - ಪರಬ್ರಹ್ಮ - ''ಓಂ ಇತ್ಯೇಕಾಕ್ಷರಂ ಬ್ರಹ್ಮ'' ಇದು ಮಂತ್ರಗಳಲ್ಲಿ ಶೃಂಗಪ್ರಾಯವಾದುದು. ಇದನ್ನು ಹೊಂದಿ ನಿರ್ದೇಶಿಸಲ್ಪಡುವ ಪರಬ್ರಹ್ಮನೇ ಏಕಶೃಂಗ, ಅವನನ್ನೇ ಎಲ್ಲ ಸಕಲ ಜೀವಿಗಳೂ ಏಕಶೃಂಗನೆಂದು ನಮಿಸುವುದು. ಎಲ್ಲ ಜೀವಿಗಳ ರಕ್ಷಕ, ಮೋಕ್ಷದಾಯಕ, ನಿಸ್ಸಂಶಯನಾಗಿ ಎಲ್ಲರೂ ಶರಣು ಹೊಂದುವ ಸ್ಥಳ, ಎಲ್ಲರೂ ಇಷ್ಟ ಪಡುವ ಪರಮೋತ್ತಮ ನಿಧಿ - ಶ್ರೀಮನ್ನಾರಾಯಣ - ಏಕಶೃಂಗ.

ಭವಸಾಗರ ತಾರಕನಾದ ದೇವ ದೇವತೆಗಳ ಅವತಾರದ ಸೂತ್ರಧಾರ - ತನ್ನ ಲೀಲೆಯಿಂದ ತಾನೇ ನಡೆಸುವ ಏಕಶೃಂಗ - ಪರಬ್ರಹ್ಮ - ಏಕಶೃಂಗ.

ಎಲ್ಲ ನಾಮಗಳಿಂದ ನಮಸ್ಕರಿಸಿದರೂ ಅವು ಸೇರುವುದು ಅವನನ್ನೇ - ಸರ್ವ ದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ - ಅವನೇ ಏಕಶೃಂಗ.

### .4. ದ್ವಿಶೃಂಗಾಯ ನಮಃ

ಯಾವ ದೇವನನ್ನು ಪ್ರಾರ್ಥಿಸಿದರೂ ಅವನ ಜೊತೆ ಇರುವ ದೇವಿಯನ್ನು ಪ್ರಾರ್ಥಿಸಲೇ ಬೇಕು. ದೇವಿಯಿಲ್ಲದೆ ದೇವನಿಲ್ಲ. ದೇವನಿಲ್ಲದೆ ದೇವಿಯಿಲ್ಲ. ಜೊತೆ ಜೊತೆಯಾಗಿ ಪ್ರಾರ್ಥಿಸಬೇಕು. ಉದಾ. ಶಿವಶಕ್ತಿಯರು, ಶಿವ ಪಾರ್ವತಿ, ಪಾರ್ವತಿ ಪರಮೇಶ್ವರ, ಲಕ್ಷ್ಮೀನಾರಾಯಣ, ಲಕ್ಷ್ಮೀ ನರಸಿಂಹ, ಸೀತಾರಾಮರು, ಸರಸ್ವತೀಬ್ರಹ್ಮ, ರಾಧಾಕೃಷ್ಣ, ರಾಧಮಾಧವ... ಇತ್ಯಾದಿ. ಸಕಲ ದೇವ ದೇವತೆಯರಲ್ಲಿ ''ಎರಡೆರಡನ್ನು ನಿರ್ದೇಶಿಸುವ ಈ ನಾಮಗಳಲ್ಲಿ ನಾವು ಪ್ರಕೃತ ಪ್ರಾರ್ಥಿಸುವ ದೇವ ದೇವರು ಅವರೇ ಬೇರೆಯವರಿಗಿಂತ ಉತ್ತಮೋತ್ತಮರೆಂದು ತಿಳಿಯುತ್ತೇವೆ. ಅದರಿಂದ ಅವರೇ ''ದ್ವಿಶೃಂಗರು''.

ಎರಡು ಕೊಂಬುಗಳುಳ್ಳವನು, ಪರಮಾತ್ಮನು ಕಲ್ಪತರು ಕಾಮಧೇನುವಾಗಿ ಈ ಹೆಸರನ್ನು ಪಡೆದಿದ್ದಾನೆ. ಕಾಮಧೇನು ಎಂದರೆ ಗೋವು (ಹಸು). ಗೋವಿನ ಪಂಚಗವ್ಯ, ಹಾಲು, ಬಾಲ ಎಲ್ಲವೂ ಅತ್ಯಂತ ಶ್ರೇಷ್ಠ. ಪಂಚಗವ್ಯ ಎಲ್ಲ ಅಪವಿತ್ರಗಳನ್ನು ಪವಿತ್ರವಾಗಿಸುತ್ತದೆ. ಗೋವಿನ ಹಾಲು ಅತ್ಯಂತ ಪವಿತ್ರವಾದ್ದು. ಗೋಮಾತೆಯು ಧರ್ಮಸ್ವರೂಪಳು. ಧರ್ಮವು ಕ್ಷೀಣವಾದಾಗ ಬ್ರಹ್ಮನ ಹತ್ತಿರ ಹೋಗಿ ದುಃಖವನ್ನು ಹೇಳಿ ನಂತರ ಮಹಾವಿಷ್ಣುವಿನಿಂದ ಅಭಯ ಪ್ರದಾನವನ್ನು ಪಡೆಯುತ್ತಾಳೆ. ಪರಮಾತ್ಮನು ದ್ವಿಶೃಂಗವುಳ್ಳ ಗೋವಿನ ರೂಪವೇ ಆದ್ದರಿಂದ ಅವನನ್ನು ದ್ವಿಶೃಂಗನೆಂದು ನಮಸ್ಕರಿಸುತ್ತೇವೆ.

15. ಮರೀಚಯೇ ನಮಃ

ಮರೀಚಿ - ಕಿರಣ, ಬ್ರಹ್ಮನಿಂದ ನಿರ್ಮಾಣ ಹೊಂದಿದ ಪ್ರಜಾಪತಿ.

ಪರಮಾತ್ಮನ ಕೃಪಾ ಕಿರಣ, ಕೃಪಾ ದೃಷ್ಟಿ ಪೂರ್ತಿಯಾಗಲೀ, ಅಂಶವಾಗಲೀ ಬಿದ್ದರೆ ಅವರು ಪಾವನ ಹೊಂದುತ್ತಾರೆ. ಅಪಾರ ಶಾಂತಿಯನ್ನು ಪಡೆಯುತ್ತಾರೆ. ಆತ್ಮರು ಕೇಳುವುದು ಇದನ್ನೇ.

ಆಶಾಕಿರಣವನ್ನು ಕೊಟ್ಟು ಸಮಾಧಾನ ಕೊಡುವವರು ನಮ್ಮವರೇ ಇರುತ್ತಾರೆ. ಆದರೆ ಇವರು ಕೊಡುವ ಶಾಂತಿ, ಸಮಾಧಾನ ಕ್ಷಣಿಕ. ಭಗವಂತನದು ಶಾಶ್ವತವಾದ್ದು, ಅದರಿಂದ ಮರೀಚಯೇ ನಮಃ ಎನ್ನುತ್ತೇವೆ.

ಪ್ರಜಾಪತಿ ಮರೀಚಿಯು ಸೃಷ್ಟಿಗೆ ಸಹಾಯಕನಾದ್ದರಿಂದ ನಮಸ್ಕಾರ ಯೋಗ್ಯನು, ಪ್ರಜಾಪತಿಗಳೆಲ್ಲರೂ ಭಗವಂತನ ಅಂಶಮಾತ್ರರು, ಅದರಿಂದ ಮರೀಚಯೇ ನಮಃ ಎನ್ನುತ್ತೇವೆ.

16. ಬಹುಶೃಂಗಾಯ ನಮಃ

ಪರಮಾತ್ಮನು ಏಕಶೃಂಗನು, ದ್ವಿಶೃಂಗನು, ಶೃಂಗನು, ಬಹು ಶೃಂಗನು, ನಾನಾ ಶೃಂಗನು.

ನಾನಾ ಯೋನಿಗಳಲ್ಲಿ ಚರಾಚರ ವರ್ಗಗಳಲ್ಲಿ ಅವನು ಶಿಖರ ಮಟ್ಟವನ್ನು ಏರಿ ಪ್ರಕಾಶಿಸುತ್ತಾನೆ. ಅದರಿಂದ ಬಹುಶೃಂಗಾಯ ನಮಃ ಎನ್ನುತ್ತೇವೆ. ಪ್ರತಿ ವಿಭೂತಿಯಲ್ಲಿ ಒಂದೊಂದು ಉನ್ನತ ಭಾವ, ರೂಪವನ್ನು ಪಡೆದು ಪ್ರಕಾಶಿಸುತ್ತಾನೆ. ಈ ಒಂದೊಂದು ಉತ್ತಮ ಭಾವವೂ ಒಂದೊಂದು ಶೃಂಗ.

ಶ್ರೀ ಕೃಷ್ಣ ಪರಮಾತ್ಮನು ಅರ್ಜುನನಿಗೆ ಗೀತೋಪದೇಶವನ್ನು ಮಾಡುವಾಗ ತಾನು ಯಾವ ಯಾವುದರಲ್ಲಿ ಹೇಗೆ ಹೇಗೆ ಆಯಾ ಸೃಷ್ಟಿವರ್ಗದಲ್ಲಿ ಉತ್ತಮೋತ್ತಮನಾಗಿ ವಿಭೂತಿಯಾಗಿ ಇರುತ್ತೇನೆಂದು ಹೇಳುತ್ತಾನೆ. ಒಂದೊಂದು ವರ್ಗದಲ್ಲಿ ಹೇಗೆ ವಿಜೃಂಭಿಸುತ್ತಾನೆ ಎನ್ನುವುದನ್ನು ಕೇಳುವುದಕ್ಕೂ, ಸ್ವತಃ ನೋಡುವುದಕ್ಕೂ ಅರ್ಜುನನಿಗೆ ಅವಕಾಶ ಸಿಕ್ಕುತ್ತದೆ. ಇದಕ್ಕೆ ಕಾರಣ

ಅವನು ಶ್ರೀಕೃಷ್ಣನ ಪರಮ ಮಿತ್ರ, ಭಕ್ತ. ಅವನನ್ನು ಬಿಡದೆ ನರನಾರಾಯಣ ರೂಪದಲ್ಲಿ ತಪಸ್ಸು ಮಾಡಿದವನು. ಈ ರೂಪಗಳನ್ನು ಅಂದರೆ ಬಹುಶೃಂಗ ರೂಪಗಳನ್ನು ತಿಳಿಯುವುದಕ್ಕೂ, ಕೇಳುವುದಕ್ಕೂ, ನೋಡುವುದಕ್ಕೂ, ಅದರಲ್ಲಿಯೇ ಮನಸ್ಸನ್ನು ಇಡುವುದಕ್ಕೂ ಅವನ ಕೃಪೆಯೇ ಬೇಕು. ಇವು ದೊರಕುವುದಕ್ಕೆ ದಾರಿ ಅನನ್ಯ ಶ್ರದ್ಧೆ, ಅವ್ಯಭಿಚಾರಿಣೀ ಭಕ್ತಿ, ಅವನನ್ನು ಸೇರಬೇಕೆನ್ನುವ ಅತೀವ ವಿರಹ ತಾಪ ಮತ್ತು ಇಂತಹ ಪರಮಾತ್ಮನ ಮನ ಕರಗಿಸುವ ಶಕ್ತಿಗಳು. ಇವೆಲ್ಲಕ್ಕಿಂತ ಪರಮಾತ್ಮನ ಸಂಕಲ್ಪ ಮತ್ತು ನಮ್ಮ ಸಂಸ್ಕಾರ ಬಲಗಳು.

ಇಂತಹ ಬಹುಶೃಂಗನನ್ನು ತಿಳಿಯುವುದಕ್ಕೆ, ಮನನ ಮಾಡುವುದಕ್ಕೆ ಅವನು ಅವಕಾಶ ಕಲ್ಪಿಸಿದ್ದಕ್ಕೆ, ಅವನಿಗೆ ಅನೇಕಾನೇಕ ಸಾಷ್ಟಾಂಗ ಪ್ರಣಾಮಗಳು. ಹೀಗೆಯೇ ಅವಕಾಶ ಸಿಕ್ಕಲಿ ಎಂದು ಅವನನ್ನು "ಬಹುಶೃಂಗಾಯ ನಮಃ" ಎನ್ನೋಣವೇ?

## .7. ಶೃಂಗಾಯ ನಮಃ

ಇದುವರೆಗೂ ಹೊಗಳಿದ್ದು ಏಕಶೃಂಗ, ದ್ವಿಶೃಂಗ, ಬಹುಶೃಂಗನನ್ನು. ಈಗ ಶೃಂಗನನ್ನು ನಮಸ್ಕರಿಸುತ್ತೇವೆ. ಈ ಎಲ್ಲವೂ ಪರಮಾತ್ಮನು ಬಹುರೂಪನು ಅಥವಾ ಏಕನಾದವನು ಬಹು ರೂಪನಾಗುತ್ತಾನೆ ಮತ್ತು ಸಮಸ್ತ ಭಕ್ತರಿಗೂ ಅವರವರ ಪ್ರಿಯ ರೂಪದಲ್ಲಿ ಅವರ ಮನೋಗತಕ್ಕೆ ತಕ್ಕಂತೆ ಆಗುತ್ತಾನೆ ಎಂಬ ಅವನ ಸರಳ ಸ್ವಭಾವವನ್ನು ಪ್ರಕಾಶಿಸುತ್ತವೆ ಎಂದರೆ ಅವನಿಗೆ ಸ್ವಭಾವ ಪರಭಾವವಿದೆಯೆ ಎಂದು ತತ್ಕ್ಷಣ ಪ್ರಶ್ನೆ ಏಳುತ್ತದೆ. ಇದಕ್ಕೆ ಉತ್ತರ - ಎಷ್ಟು ಯೋನಿಗಳಲ್ಲಿ ಚರಾಚರ ವಸ್ತು ಪ್ರಾಣಿಗಳಲ್ಲಿ ಕೋಟ್ಯಾನುಕೋಟಿ ಜೀವಿಗಳಲ್ಲಿ ಅವರವರಿಗೆ ಅವರವರ ಭಕ್ತಿಗೆ, ಕೂಗಿಗೆ, ಭಾವನೆಗೆ ತಕ್ಕಂತೆ ಅವರವರು ಅಪೇಕ್ಷಿಸಿದ ರೂಪದಲ್ಲಿ ಅವರು ಭಾವಿಸುವಂತೆ ತನ್ನನ್ನು ತಾನು ಅಳವಡಿಸಿಕೊಳ್ಳುವುದೇ ಅವನ ವಿಶೇಷ ಶಕ್ತಿ, ಯುಕ್ತಿ ಮತ್ತು ಚತುರತೆ. ಜೀವ ಕೋಟಿಯ ಎಲ್ಲ, ಪ್ರತಿಯೊಂದು ಜೀವಿಯನ್ನು ಉದ್ಧಾರ ಮಾಡುವುದೇ ಅವನ ಪರಮ ಸಂಕಲ್ಪ. ಇಂತಹ ಸಂಕಲ್ಪವನ್ನು ಸಾಧಿಸಲು ಅವನು ಏನೇ ಬೇಕಾದರೂ ಆಗಲು ಸಿದ್ಧನು - ಅವನೇ ಪರಬ್ರಹ್ಮ - ಸ್ವಯಂಭೂಗೆ ತನ್ನ ನಾಭಿಯಲ್ಲಿ ಜನ್ಮವಿತ್ತವನು - ಆದರೆ ಅವನಿಗೆ ನಾರಾಯಣನಿಗೆ, ಪರಬ್ರಹ್ಮನಿಗೆ ಇಂತಹವರೇ ತಂದೆ ತಾಯಿಗಳು, ಜನ್ಮದಾತರು, ಸೃಷ್ಟಿಸಿದವರು ಎಂದು ಹೇಳಲು ಯಾವ ವೇದ ಪುರಾಣ ಇತಿಹಾಸಗಳೂ ಇಲ್ಲ. ಅವನು ಎಲ್ಲಕ್ಕೂ ಮೊದಲಿದ್ದವನು, ಎಲ್ಲವೂ ಸರ್ವನಾಶವಾದ ಮೇಲೂ ಇರುವವನು. ಆದರಿಂದ ಅವನೇ ಶೃಂಗನು. ಇವನಿಗೆ ಸಮರು ಯಾರೂ ಇಲ್ಲ.

ಭಕ್ತನೊಬ್ಬನು ಹೇಳುತ್ತಾನೆ - "ನನಗೆ ತಂದೆ ತಾಯಿಯರು ಇದ್ದಾರೆ, ಆದರೆ ನಿನಗೆ ತಂದೆಯೂ ಇಲ್ಲ, ತಾಯಿಯೂ ಇಲ್ಲ" ಹಾಗಲ್ಲ. ಅವನಿಗೆ ಅವನೇ ತಂದೆ, ಅವನೇ ತಾಯಿ, ಅವನಿಗೆ ಅವನೇ ಸರ್ವ ರೀತಿಯ ಬಂಧು ಬಳಗ. ಅವನು ವಿಶ್ವಕುಟುಂಬಿ, ವಿಶ್ವಯೋನಿ, ವಿಶ್ವೇಶ್ವರ, ವಿಶ್ವನಾಥ, ಅಖಿಲಾಂಡ ಕೋಟಿ ಬ್ರಹ್ಮಾಂಡನಾಯಕ, ಏಕಶೃಂಗ, ದ್ವಿಶೃಂಗ, ಬಹುಶೃಂಗ, ಕಡೆಗೆ ಶೃಂಗಗಳಿಗೇ ಶೃಂಗನಾಗಿರುವ ಅತ್ಯುತ್ತಮ ಅಸಮನಾದ ಶೃಂಗ. ಶೃಂಗಾಯ ನಮಃ.

18. ಮಹಾಶೃಂಗಾಯ ನಮಃ

ಪರಮಾತ್ಮನು ಶಿಖರಗಳಿಗೆಲ್ಲ ಶಿಖರಪ್ರಾಯನು, ಮಹತ್ತಾದ ರೂಪ ಶಕ್ತಿಯುಳ್ಳವನು, ಮಹದ್ರೂಪಿ, ಊಹಿಸಲಸಾಧ್ಯವಾದ ಮಹಾ ಶೃಂಗನು, ಇಂತಹ ಅಖಿಲಾಂಡ ಕೋಟಿ ಬ್ರಹ್ಮಾಂಡಗಳನ್ನು ಅಗಣಿತವಾಗಿ ಸೃಷ್ಟಿಸಿ ತನ್ನಷ್ಟಕ್ಕೆ ತಾನೇ ಲೀಲಾಮಾತ್ರನಾಗಿ ಸಂತೋಷ ಪಡುವ ಮಹಾಶೃಂಗನು ಅವನೇ. ಎಷ್ಟೇ ರೀತಿಯಲ್ಲಿ ಭಾವಿಸಿದರೂ ಅವನು ಅವನೇ.

*ಯಥಾ ತಥಾ ಯಥಾ ತಥಾ ತಥೈವ ಕೃಷ್ಣ ಸತ್ವದಾ /*
*ಮಯಾ ಸ ದೈವ ಗೀಯತಾಂ ತಥಾ ಕೃಪಾವಿಧೇ ಮತಾಮ್ //*

ಅವನನ್ನು ಹೀಗೇ ಎಂದು ತಿಳಿಯಲು, ಬಣ್ಣಿಸಲು, ಭಾವಿಸಲು ಸಾಧ್ಯವಿಲ್ಲ. ಹೇಗೆ ಭಾವಿಸಿದರೂ ಅವನನ್ನು ಈ ರೀತಿಯೇ ಇದ್ದಾನೆಂದು ತಿಳಿಯಲು ಸಾಧ್ಯವಿಲ್ಲ. ನಾವು ಹೇಗೇ ತಿಳಿದರೂ ಅವನು ಇರುವುದು ಅವನ ಹಾಗೆಯೇ, ವೇದ, ಉಪನಿಷತ್ತು ಋಷಿ ಮುನಿಗಳಿಂದಲೂ ತಿಳಿಯಲು ಸಾಧ್ಯವಾಗಲಿಲ್ಲ ಎಂದರೆ ನಮ್ಮಂತಹವರ ಪಾಡೇನು! ಎಷ್ಟು ಹೇಳಿದರೂ ಇನ್ನೂ ಅವನ ನಾಮಗಳು ಇದ್ದೇ ಇರುತ್ತವೆ. ಸಹಸ್ರನಾಮಗಳೆಂದು ಕೇವಲ ಭಾವುಕ, ಎಂದ ಮೇಲೆ ಎಷ್ಟು ರೀತಿಯ ಶೃಂಗಗಳ ನಾಮ ಹೇಳಿದರೂ ಇನ್ನು ಒಂದು ಶೃಂಗದ ನಾಮ ಇದ್ದೇ ಇರುತ್ತದೆ. ಇದೇ ಅನಂತ ನಾಮಗಳು. ಅವನ ನಾಮಗಳ ಸರಣಿ ಅನಾದಿ, ಅನಂತ. ಅವನ ಭಾವವೇ ಹಾಗೆ! ಇನ್ನೂ ಒಂದು - ಮಹಾಶೃಂಗಾಯ ನಮಃ !! ಅಲ್ಲವೇ!!

*ಮಾಂಗಲ್ಯಾಯ ಮನೋಜ್ಞಾಯ ಮಂತವ್ಯಾಯ ಮಹಾತ್ಮನೇ /*
*ಮಹಾದೇವಾಯ ದೇವಾಯ ಮಾತುಲುಂಗಧರಾಯ ಚ //53//*
*(319-325)*

19. ಮಾಂಗಲ್ಯಾಯ ನಮಃ

ಮಂಗಲದ ಭಾವ - ಮಾಂಗಲ್ಯ, ಮಂಗಲ - ಶುಭ, ಸುದೈವವುಳ್ಳದ್ದು, ಮಾಂಗಲ್ಯ - ಶುಭತನ, ಸ್ತ್ರೀಯರು ಧರಿಸುವ ಮಾಂಗಲ್ಯ - ಮದುವೆಯಾದ

ಸ್ತ್ರೀಯರು ಧರಿಸುವ ಮದುವೆಯ ಸಂಕೇತದ ಆಭರಣ, ಪಾತಿವ್ರತ್ಯದ ಆಭರಣ - ಮಂಗಳ ಸೂತ್ರ.

ಪರಮಾತ್ಮನು ಸಕಲರಿಗೂ ಮಂಗಳ ಸ್ವರೂಪನೇ, ದುಷ್ಟರಿಗೂ ಸಹ ಅವರ ದುಷ್ಟ ಇಷ್ಟಾರ್ಥಗಳನ್ನು ನೆರವೇರಿಸಲು ಅವರೂ ಅವನನ್ನೇ ಪ್ರಾರ್ಥಿಸುತ್ತಾರೆ, ಆದರಿಂದ ಅವರ ದೃಷ್ಟಿಯಲ್ಲಿ ಅವರಿಗೆ ಆ ಕೆಲಸಕ್ಕೂ ಅವನು ಮಂಗಳ ಸ್ವರೂಪನು.

ಭಕ್ತರಿಗಂತೂ ಸರ್ವ ಮಂಗಲ ಸ್ವರೂಪನು, ಪರಮಾತ್ಮನಿಗಿಂತ ಮಂಗಲ ಸ್ವರೂಪನು ಯಾರೂ ಇಲ್ಲ.

ಪರಮಾತ್ಮನ ಅಲಂಕಾರ ವಸ್ತುಗಳೂ ಸಹ ಶಾಂತಿ, ಸಹನೆ, ಮಂಗಲ ಸ್ವರೂಪವನ್ನು ಸೂಚಿಸುತ್ತವೆ, ಸದಾ ಅಭಯ ಮತ್ತು ವರದ ಹಸ್ತವನ್ನು ಸೂಚಿಸುತ್ತಾನೆ.

ಶಂಖದಿಂದ ಮೇರೆ ತಪ್ಪಿದವರನ್ನು ಎಚ್ಚರಿಸುತ್ತಾನೆ. ಚಕ್ರದಿಂದ ಮಿತಿ ಮೀರಿದವರನ್ನು ಶಾಸಿಸುತ್ತಾನೆ. ಗಧೆಯಿಂದ ತಟ್ಟಿ ಎಬ್ಬಿಸುತ್ತಾನೆ ಮತ್ತು ಎಚ್ಚರಿಸುತ್ತಾನೆ. ಕಮಲದಿಂದ ಶಾಂತಿಯನ್ನು ತೋರಿಸುತ್ತಾನೆ.

ಮನಮೋಹದ ಮುಖದಿಂದ ಸಂತಸವನ್ನು ವಿಸ್ಮಯವನ್ನು ತೋರಿಸುತ್ತಾನೆ. ಪೂರ್ಣ ದೇಹದಿಂದ ಮಂಗಳ ಸ್ವರೂಪನಾಗಿ ಎಲ್ಲೆಲ್ಲೂ ಶಾಂತಿ, ಮಂಗಳ ಭಾವಗಳು ಪ್ರಸರಿಸಲು ಪ್ರೇರಿಸುತ್ತಾನೆ. ಸರ್ವ ಮಂಗಳ ಸ್ವರೂಪಿಯಾದ ಪರಮಾತ್ಮನಿಗೆ ಮಾಂಗಲ್ಯಾಯ ನಮಃ ಎನ್ನುತ್ತೇವೆ. ಜೀವನದಲ್ಲಿ ಅನೇಕರು ಮಂಗಲರಾದರೂ ಪರಮಾತ್ಮನ ಮಟ್ಟಕ್ಕೆ ಬರುವವರು ಯಾರೂ ಇಲ್ಲ. ಏಕೆಂದರೆ ಜೀವನದಲ್ಲಿ ನಮಗೆ ಶುಭ ಕೋರುವವರು ಆಯಾ ಸನ್ನಿವೇಶದಲ್ಲಿ ಮಾತ್ರ ಆಗುತ್ತಾರೆ. ನಂತರ ಅವರು ಮನ ಬದಲಾಯಿಸುತ್ತಾರೆ. ಸದಾ ಶುಭವನ್ನೇ ಕೋರುವ ಪರಮಾತ್ಮನಿಗೆ ಸಮಾನರಾಗಿ ಯಾರೂ ಆಗಲಾರರು, ಎಂತಹ ಸತ್ಪುರುಷರೇ ಆದರೂ ಅವರೂ ಸಹ ಮನ ಬದಲಿಸುವರೆಂಬ ಅಂಜಿಕೆ, ಭಯ, ಸಾಧ್ಯತೆ ಇದ್ದೇ ಇರುತ್ತದೆ. ಆದರೆ ಪರಮಾತ್ಮನ ವಿಚಾರದಲ್ಲಿ ಈ ರೀತಿ ಅಂಜಿಕೆ, ಭಯ, ಸಾಧ್ಯತೆ ನಮಗೆ ಇರುವುದಿಲ್ಲ.

20. ಮನೋಜ್ಞಾಯ ನಮಃ

ಮನ - ಮನಸ್ಸನ್ನು, ಮನಸ್ಸಿನ ಸ್ವರೂಪವನ್ನು, ಜ್ಞ - ತಿಳಿದರುವವನು, ಇದನ್ನು ತಿಳಿದಿರುವವನು ಪರಮಾತ್ಮನೇ, ಅವನೊಬ್ಬನೇ.

ನಮ್ಮ ಮನಸ್ಸನ್ನು ನಾವೇ ತಿಳಿಯಲು ಸಾಧ್ಯವಿಲ್ಲ. ''ಮನೋ ವೈ ಗಗನಾಕಾರಃ'' - ಮನಸ್ಸು ಆಕಾಶ ಸ್ವರೂಪದ್ದು ಅಂದರೆ ಅಷ್ಟು ವಿಶಾಲವಾದುದು ಮತ್ತು ಆಕಾಶದಲ್ಲಿ ಆಕಾಶ ಪರಿಧಿಯಲ್ಲಿ ತುಂಬಿರುವ

ನಕ್ಷತ್ರ, ಸೂರ್ಯ, ಚಂದ್ರರು, ಮೋಡಗಳು, ವಾಯು, ಜೀವಿಗಳು, ಹಾರಾಡುವ ವಸ್ತುಗಳು, ಚರಾಚರ ವಸ್ತುಗಳು - ಇವುಗಳ ರೀತಿಯಲ್ಲಿ ನಮ್ಮ ಮನಸ್ಸೆಂಬ ಆಕಾಶದಲ್ಲಿ ಅನೇಕ ವಸ್ತುಗಳು, ಯೋಚನಾ ತರಂಗಗಳು, ಹೊಸದು, ಹಳೆಯದು, ಘಟನೆಗಳ ಅರಿವುಗಳು, ಹಾಗೆಯೇ ಮರೆವುಗಳು, ಅವುಗಳ ಮೂಲಗಳು, ಜನ್ಮದಿಂದ ಕೊನೆಯವರೆಗೂ ನಡೆದ ಘಟನೆಗಳ ತರಂಗಗಳು, ಸಂಸ್ಕಾರಗಳು, ಇತ್ಯಾದಿ, ಇತ್ಯಾದಿಗಳು ಅಲೆ ಅಲೆಯಾಗಿ ತರಂಗ ತರಂಗವಾಗಿ ಅಡಗಿಸಲ್ಪಟ್ಟಿರುತ್ತವೆ. ಮತ್ತು ಕ್ಷಣ ಮಾತ್ರದಲ್ಲಿ ಜ್ಞಾಪಕ ಶಕ್ತಿಯ ಸಹಾಯದಿಂದ ಮನಸ್ಸೆಂಬ ಪಟದಲ್ಲಿ ಪ್ರಕಟವಾಗುತ್ತವೆ. ಮತ್ತು ಕ್ಷಣದಲ್ಲಿ ಅವು ನಡೆದ ಕಾಲ ದೂರ ದೇಶವನ್ನು ಮೀರಿ ಸರಣಿ ಸರಣಿಯಾಗಿ ಹೊರಬೀಳುತ್ತವೆ. ಅವುಗಳು ಬರುವ ರೀತಿಯೇ ವಿಚಿತ್ರ. ಹೋಗುವ ರೀತಿಯೂ ವಿಚಿತ್ರ, ಯಾವುದೋ ಒಂದು ಕ್ಷಣದಲ್ಲಿ ಇಷ್ಟು ದೊಡ್ಡ ಸರಣಿ ಹೇಗೆ ಮನಸ್ಸಿನಲ್ಲಿ ಪ್ರಕಟವಾಯಿತೆಂದು ಅನುಮಾನ ಬಂದು ಮೂಲ ಕಂಡು ಹಿಡಿಯಹೋದರೆ ಬರುವ ಉತ್ತರ - ಗಾಢನಿದ್ರೆಯಿಂದ ಎದ್ದ ತಕ್ಷಣ ಬರುವ ಅಲೆಯಂತೆ ಪೂರ್ಣ ವಿರಾಮವಾಗಿ ಮನಸ್ಸು ಯೋಚನಾ ರಹಿತವಾಗುತ್ತದೆ. ಎಂತಹ ವಿಚಿತ್ರ.

ಇದೇ ಹೀಗಿರುವಾಗ,

ಪರಮಾತ್ಮನು ಸೃಷ್ಟಿಸಿದ ಮನಸ್ತತ್ವವು ಹೇಗಿರಬೇಕು.

ಸರ್ವರ ಮನಸ್ಸನ್ನು ತಿಳಿದವನು, ಅವನ ಮನಸ್ಸು ಬಹಳ ಮಹತ್ತಾಗಿಯೇ ಇರಬೇಕು. ನಮ್ಮ ಆಲೋಚನೆಗೆ ಗೋಚರವಾಗುವುದಿಲ್ಲ. ಅವನು ನಿಜಕ್ಕೂ ಮಹಾನ್‌ನೇ.

ಅವನ ಮನಸ್ಸು ಮಹತ್ತಾದ್ದು ನಿಸ್ಸಂಶಯವಾಗಿಯೂ ಹಿಂದು ಮುಂದಿನದನ್ನು ತಿಳಿಯುವವನು, ನಿರೂಪಿಸುವವನು, ಅದೂ ಸರ್ವ ಯೋಗಿಗಳ ಕೋಟ್ಯಾನು ಕೋಟಿ ಜೀವಿಗಳ ಆಗು ಹೋಗುಗಳನ್ನು ನಿರಂತರ ನಡೆಸುವವನು. ಇವನಷ್ಟು ಮನೋಜ್ಞರು ಯಾರೂ ಇಲ್ಲ. ಇದ್ದರೆ ಇವನೇ, ಇವನೊಬ್ಬನೇ - ಅತ್ಯುತ್ತಮ ಮನೋಜ್ಞನು, ಪರಮಾತ್ಮನು - ಅವನೇ ಪರಬ್ರಹ್ಮ, ಸರ್ವ ಮನೋನ್ಮಯನು. ಮನಸ್ಸುಗಳಲ್ಲೆಲ್ಲಾ ಶ್ರೇಷ್ಠನು ಇವನೇ! ಇವನೊಬ್ಬನೇ!! ಬೇರೆಯಲ್ಲ.

21. ಮಂತವ್ಯಾಯ ನಮಃ

ಮನ್ - ವಿಚಾರ ಮಾಡುವುದು, ಮನ್ನಿಸುವುದು, ಮರ್ಯಾದೆ ಮಾಡುವುದು.

ಮನ್ - ತ, ವಿಚಾರ ಮಾಡುವವನು, ಮನ್ನಿಸುವವನು, ಮರ್ಯಾದೆ ಮಾಡುವವನು.

ಮನ್ - ತ - ವ್ಯ, ಇದರ ಭಾವ,

ಭಗವಂತನು ಎಲ್ಲವನ್ನು ವಿಚಾರಮಾಡಿ ತನ್ನ ಸಂಕಲ್ಪದಂತೆ ಸಕಲವನ್ನು ನಡೆಸುತ್ತಾನೆ.

ಎಂತಹ ತಪ್ಪನ್ನೇ ಆದರೂ ಭಗವಂತನು ಮನ್ನಿಸುತ್ತಾನೆ. ಭಕ್ತರ ವಿಚಾರದಲ್ಲಿ ಪರಮಾತ್ಮನಿಗೆ ಎಷ್ಟು ಆಸಕ್ತಿ ಇರುತ್ತೆಂದರೆ ಅವನು ಭಕ್ತರಿಗಾಗಿ ಯಾವ ಭಾವವನ್ನಾದರೂ, ಏನನ್ನು ಬೇಕಾದರೂ ಹಿಂದು ಮುಂದು ಇಲ್ಲದೇ ಆಗುತ್ತಾನೆ. ಅವನು ಭಕ್ತನ ವಿಚಾರದಲ್ಲಿ ಅವರನ್ನು ತೃಪ್ತಿ ಪಡಿಸುವುದೊಂದೇ ಅವನ ಧ್ಯೇಯ.

ಸಕಲರು ಮಾಡುವ ಕ್ರಿಯೆಗಳು ಎಲ್ಲಾ ತಾತ್ಕಾಲಿಕ, ಆದರೆ ಪರಮಾತ್ಮನ ವಿಚಾರದಲ್ಲಿ ಅವು ಶಾಶ್ವತವಾದುದು. ಈ ರೀತಿ ವಿಚಾರ ಮಾಡಿದರೆ ಅವನ ಸಮರು ಯಾರೂ ಇಲ್ಲ. ಜಗತ್ತಿನಲ್ಲಿರುವ ಎಲ್ಲಾ ಪ್ರಾಣಿಗಳು ಮಾಡುವ "ವಿಚಾರ ಶೀಲತೆ, ಮರ್ಯಾದೆ, ಮನ್ನಿಸುವುದು" ಗಳಲ್ಲಿ ಪರಮಾತ್ಮನೇ ಅತ್ಯುತ್ತಮನು, ಅತ್ಯುತ್ತಮ ಮಂತವ್ಯನು.

### 22. ಮಹಾತ್ಮನೇ ನಮಃ

ಆತ್ಮಗಳು ದಿವ್ಯ ಶಕ್ತಿಯುಳ್ಳವುಗಳು, ಪರಮಾತ್ಮನಿಂದಲೇ ಹೊರ ಬಂದ ಆತ್ಮಗಳು ಅವನ ಭಾವವನ್ನೇ ಹೊಂದಿರುತ್ತವೆ. ಸೃಷ್ಟಿಯಲ್ಲಿರುವ ಸಕಲ ಆತ್ಮಗಳೂ ಒಂದೇ ಭಾವವನ್ನು ಹೊಂದಿರುತ್ತವೆ ಎಂದ ಮೇಲೆ ಆತ್ಮಗಳು ಧರಿಸಿರುವ ದೇಹದಲ್ಲಿ ಈ ದೇಹಧಾರಿಗಳಲ್ಲಿ ಏಕೆ ವ್ಯತ್ಯಾಸ - ಯೋನಿಗಳಲ್ಲಿ, ಚರಾಚರ ಭಾವಗಳಲ್ಲಿ - ಸ್ವಭಾವದಲ್ಲಿ - ಮುಂತಾದವುಗಳಲ್ಲಿ. ಏಕೆಂದರೆ ದೇಹ ಮತ್ತು ಮಾಯಾ ಪ್ರಪಂಚದ ಸಂಪರ್ಕದಿಂದ ಬೇರೆ ಬೇರೆ ಕ್ರಿಯೆಗಳು ನಡೆಯುತ್ತವೆ. ಈ ಕ್ರಿಯೆಗಳೆಲ್ಲದರ ಜ್ಞಾಪಕಗಳು ಸಂಸ್ಕಾರಗಳಾಗಿ ಆತ್ಮನ ಮನೋ ಬುದ್ಧಿಗಳಿಗೆ ಅಂಟಿಕೊಳ್ಳುತ್ತವೆ. ಮತ್ತೆ ಮತ್ತೆ ಸಂಸ್ಕಾರಗಳು ಬೆಳೆಯುತ್ತವೆ, ಆದರಿಂದ ಸಾಮಾನ್ಯ ರೀತಿ ನೋಡುವಾಗ ಆತ್ಮವನ್ನು ಮರೆತು ದೇಹಗಳೇ "ನಾನು" ಎಂದಾಗ ವಿವಿಧ ರೀತಿಯಲ್ಲಿ ಸಂಯೋಗ ವಿಯೋಗಗಳು ಸಂಭವಿಸುತ್ತವೆ.

ಹೀಗಿರುವಾಗ, ಆತ್ಮಗಳನ್ನು ಪ್ರಚೋದಿಸುವವನು, ನಡೆಸುವವನು, ಸೂತ್ರಧಾರನು ಬೇರೆ ಇರಲೇ ಬೇಕು. ಅವನೇ ಪರಮಾತ್ಮ, ಈ ಆತ್ಮವೇ ಮಹಾನ್ ಆತ್ಮ, ಮಹಾತ್ಮ, ಯಾವ ರೀತಿಯಲ್ಲಿ ಅವನನ್ನು ತಿಳಿಯಲು ಅಪೇಕ್ಷಿಸಿದರೂ ಅದು ಅದೇ ರೀತಿಯಲ್ಲಿ ಮಹತ್ತಾಗಿರುತ್ತದೆ. ಆದರೆ ತಿಳಿಯುವ ಶಕ್ತಿಯು ಮಿತಿಯುಳ್ಳದು. ಅವನನ್ನು ತಿಳಿಯುವವರೇ ಇಲ್ಲ. ಏನೇ ಎಷ್ಟೇ ತಿಳಿದರೂ ಕಡಿಮೆಯೇ. ಗೊತ್ತಾಗದ ಮೇಲೆ ಎಲ್ಲೆಗೆ ಮುಟ್ಟಿದಾಗ "ಮಹಾನ್" ಎಂದು ಬಿಟ್ಟು ಬಿಡುತ್ತೇವೆ.

ಅದಕ್ಕೆ "ಮಹಾತ್ಮನೇ ನಮಃ" ಎಂದು ನಾವು ಶರಣಾಗತರಾಗುತ್ತೇವೆ.

ಮತ್ತು ಅವನು ''ಮಹಾತ್ಮ'' ಎಂದು ಸಂಪೂರ್ಣ ಮನಸ್ಸಿನಿಂದ ಬುದ್ಧಿಯಿಂದ ಒಪ್ಪಿ ಬಿಡುವ ಸ್ಥಿತಿಯೇ ಅವನ ಕೃಪೆಯನ್ನು ಪಡೆಯುವ ರೀತಿ.

23. ಮಹಾದೇವಾಯ ನಮಃ

ಮಹಾದೇವ ಎಂದರೆ ಮಹಿಮೆಯುಳ್ಳ, ಮಹಾಶಕ್ತಿವಂತ ಚತುರನಾದ ಸರ್ವ ರೀತಿಯಲ್ಲಿಯೂ ಸಮರಿಲ್ಲದ ದೇವನು. ದೇವನೆಂದರೇನೇ ಮಹಾಮಹಿಮನೆನ್ನಬೇಕು, ಏಕೆಂದರೆ ಸಕಲ ಜೀವ ರಾಶಿಗಳಿಗೂ ಚರಾಚರ ವಸ್ತುಗಳಲ್ಲಿಯೂ ಇವನು ಮಹನೀಯನು ಉತ್ತಮನು, ಅಮರನು. ಅಮರತ್ವವಿರುವ ಕಾರಣ ದೇವತೆಗಳು ಜೀವಿಗಳಂತೆ ಇಹ ಪರಲೋಕಗಳ ಬವಣೆಗಾಗಿ ನರಳಬೇಕಾಗಿಲ್ಲ. ಆದರೆ ದೇವತೆಗಳಲ್ಲಿ ತಮ ತಮಗೆ ಹೋರಾಟವಿರುತ್ತದೆ. ತಮ್ಮ ತಮ್ಮ ಶಕ್ತಿಗಳನ್ನು ಪ್ರದರ್ಶಿಸಿ ಒಬ್ಬನು ತಮ್ಮನ್ನು ಆಳುವಂತೆ ಮಾಡಲು ಪರಬ್ರಹ್ಮನ ಸಂದೇಶದಂತೆ ತಮ್ಮ ತಮ್ಮ ಕೆಲಸ, ಕೃಪೆ ಮಾಡುವ ವರಗಳು ಮುಂತಾದವುಗಳನ್ನು ವಿಂಗಡಿಸಿಕೊಂಡು ತಮ್ಮನ್ನು ಇತಿ ಮಿತಿಗಳಲ್ಲಿರಿಸಲು ಒಬ್ಬ ದೇವೇಂದ್ರನನ್ನು ಮಾಡಿದರು. ಇದರಿಂದ ದೇವತೆಗಳಲ್ಲಿ ಶಾಂತಿ, ಶಿಸ್ತು ನೆಲಸಿತು. ಇವನನ್ನು ಮಹೇಂದ್ರನೆಂದು ಕರೆದರು. ಮಹಾದೇವನೆಂದೂ ಇವನಿಗೆ ಹೇಳಬಹುದು.

ಆದರೆ ಮಹಾದೇವ ಎಂದರೆ ಶಿವ, ಶಿವನು ಹಾಲಾಹಲವನ್ನು ಕುಡಿದು ಸಮಸ್ತ ಜಗತ್ತನ್ನು ಕಾಪಾಡಿದ ಕಾರಣ ಮಹಾದೇವ ಎಂದರು.

ಸಕಲ ಸೃಷ್ಟಿ ಸ್ಥಿತಿ ಲಯಗಳಲ್ಲಿಯೂ ನಡೆಸುವ ಸೂತ್ರಧಾರನು ಪರಮಾತ್ಮ, ಪರಬ್ರಹ್ಮ, ಇವನೂ ಮಹಾದೇವನೇ.

ನಮ್ಮ ದೇಹದಲ್ಲಿರುವ ಇಂದ್ರಿಯಗಳಿಗೂ, ಮನಸ್ಸಿಗೂ, ಬುದ್ಧಿಗೂ, ಮೀರಿದವನು ಆತ್ಮ. ಈ ಆತ್ಮವನ್ನು ನಡೆಸುವವನು ಜಗನ್ನಾಟಕ ಸೂತ್ರಧಾರಿಯಾದ ಪುರುಷೋತ್ತಮನು - ಪರಮಾತ್ಮ - ಅವನೇ ಮಹಾದೇವನು.

ಮಹಾದೇವಾಯ ನಮಃ - ಇಂದ್ರಿಯಗಳ ಅಧಿದೇವತೆಗಳಿಗೂ ಮನೋಭಿಮಾನಿ ದೇವತೆಗೂ ಬುದ್ಧಿ ದೇವತೆಯಾದ ಸರಸ್ವತಿಗೂ ಮೀರಿದ ದೇವನೇ ''ಸಃ'' ಅವನು - ಮಹಾದೇವನು - ಅವನಿಗೆ ನಮಸ್ಕಾರಗಳು.

24. ದೇವಾಯ ನಮಃ -

ಪರಮಾತ್ಮನು ಯಾವ ರೂಪದಲ್ಲಿಯಾದರೂ ಅವನು ದೇವತಾ ಸ್ವರೂಪನು. ಯಾವಾಗ ಯಾರು ಒಬ್ಬರಿಗಿಂತ ವಿದ್ಯೆಯಲ್ಲಿ, ಬುದ್ಧಿಯಲ್ಲಿ, ಸಂಪತ್ತಿನಲ್ಲಿ, ಗುರುತ್ವದಲ್ಲಿ ಉತ್ತಮರಾಗಿದ್ದಾರೋ ಅವರನ್ನು ಗೌರವದಿಂದ ಕಾಣಬೇಕು. ಅವರನ್ನು ದೇವರೆಂದು ಪೂಜಿಸಬೇಕು, ಅವರೇ ''ದೇವರುಗಳು'', ಅದರಿಂದ ''ದೇವಾಯ ನಮಃ'' ಎನ್ನುವುದು.

ಗುಣಗಳಲ್ಲಿ ದೈವೀ ಗುಣಗಳನ್ನು ದೈವೀ ಸಂಪತ್ತೆಂದು, ದುರ್ಗುಣಗಳನ್ನು ರಾಕ್ಷಸಿ ಗುಣಗಳೆಂದು ಗೀತೆಯಲ್ಲಿ ''ದೈವಾಸುರ ಸಂಪದ್ವಿಭಾಗ ಯೋಗ''ದಲ್ಲಿ ಹೇಳಿದೆ.

ದೇವತೆಗಳನ್ನು ಮನುಷ್ಯರನ್ನು ಸೃಷ್ಟಿಸಿ ಮನುಷ್ಯರು ಯಜ್ಞ ಮಾಡಬೇಕೆಂದೂ ಅದರಿಂದ ತೃಪ್ತರಾಗಿ ದೇವತೆಗಳು ಅವರಿಗೆ ಆಹಾರ ಮುಂತಾದವುಗಳನ್ನು ಬೆಳೆಯಲು, ಜೀವಿಸಲು ಸಹಾಯ ಮಾಡಬೇಕೆಂದು ಬ್ರಹ್ಮನು ಆಜ್ಞಾಪಿಸಿದನು. ಅದರಿಂದ ಇಬ್ಬರಿಗೂ ತೃಪ್ತಿಯಾಗುವುದು.

*''ದೇವಾನ್ಭಾಯತಾನೇನ ತೇ ದೇವಾ ಭಾವಯನ್ತು ವಃ ।*
*ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥*
*(ಗೀತಾ ಅಧ್ಯಾಯ 3 ಶ್ಲೋಕ 11)*

ಅದರಿಂದ ದೇವಾಯ ನಮಃ ಎಂದು ಯಜ್ಞಮಾಡಿ ಕೃತಕೃತ್ಯರಾಗುತ್ತೇವೆ.

25. ಮಾತುಲುಂಗಧರಾಯ ನಮಃ

ಮಾತುಲ - ಸೋದರ ಮಾವ, ಮಾವ, ಅಂಗ - ಅವಯವಗಳು, ಧರ - ಅದನ್ನ ಧರಿಸಿರುವವನು.

ದೇವ ದೇವತೆಯರ ಸಂಸಾರದಲ್ಲಿ ತ್ರಿಮೂರ್ತಿಗಳ ಸಂಸಾರದ ರೂಪದಲ್ಲಿ ಒಬ್ಬ ಭಗವಂತನೇ ಅನೇಕ ರೂಪಗಳನ್ನು (ತಾಳಿ) ಧರಿಸಿ ಭಕ್ತರ ಮನಸ್ಸನ್ನು ಸೂರೆ ಮಾಡುತ್ತಾನೆ. ಯಾವ ರೀತಿಯ ಸಂಬಂಧದಿಂದ ಅವನನ್ನು ಕಂಡರೆ, ಕರೆದರೆ, ಭಕ್ತಿಯಿಂದ, ವೈರದಿಂದ, ಪ್ರೀತಿಯಿಂದ ಕರೆದರೆ ಬೇಗ ಬರುತ್ತಾನೆ ಎಂದು ಭಕ್ತರಿಗೆ ಜಿಜ್ಞಾಸೆಯುಂಟಾಗುತ್ತದೆ. ಇದಕ್ಕೆ ಕಾರಣ ನಾವು ನಮ್ಮ ಸಂಸಾರಿಕ ಪ್ರಪಂಚದಲ್ಲಿ ಇಟ್ಟುಕೊಂಡಿರುವ ಭಾವನಾ ಪೂರ್ವಕ ಸಂಬಂಧಗಳು. ನಮ್ಮ ಇಲ್ಲಿನ ಸಂಬಂಧಗಳನ್ನೇ ದೇವತಾ ಸಾಮ್ರಾಜ್ಯದಲ್ಲಿ ಕಲ್ಪಿಸಿ ಕರೆಯುತ್ತೇವೆ. ಇದು ಒಂದು ರೀತಿಯಲ್ಲಿ ಅಂದರೆ ಸಾಕಾರ ಭಾವನೆಯ ವಿಮರ್ಶೆಯಾಗುತ್ತದೆ.

ಇನ್ನೊಂದು ರೀತಿಯಲ್ಲಿ,

ಆತ್ಮಗಳು ಪ್ರತಿಯೊಂದೂ ಪರಮಾತ್ಮನಿಂದ ಹೊರ ಬಂದವುಗಳು, ಅವುಗಳಿಗೆ ಯಾವ ರೀತಿಯ ಭಾವನಾರೂಪದ ಸಂಬಂಧಗಳೇ ಇಲ್ಲ. ಕಾರಣ ರೂಪದಿಂದ ಕೆಲ ಕಾಲ ಮಾತ್ರ ದೇಹ ಸಂಬಂಧ ಕಲ್ಪನೆಯಾಗುತ್ತದೆ. ನಂತರ ಇವೆಲ್ಲ ಸಂಬಂಧ ನಾಶವಾಗುತ್ತದೆ. ಕೇವಲ ಕಾಲ ದೇಶ ರೂಪ ಸಂಬಂಧಗಳು ಕಾಲ್ಪನಿಕ. ವಾಸ್ತವವಾಗಿ ಆತ್ಮಗಳ ಗುರಿ ಪರಮಾತ್ಮನನ್ನು ಸೇರುವುದು- ಅದೂ ದೇಹ ಧಾರಣೆಯ ಸಹಾಯದಿಂದ, ಎಲ್ಲವೂ ಪರಮಾತ್ಮನೇ. ಉದಾಹರಣೆಗಾಗಿ ಮಾತುಲುಂಗಧರಾಯ ನಮಃ ಎಂದು ಒಂದು

ಸಂಬಂಧದಿಂದ ಅವನನ್ನು ನೆಪ ಮಾತ್ರಕ್ಕೆ ಕರೆಯುತ್ತೇವೆ. ಇದು ನಾನಾ ಸಂಬಂಧಗಳನ್ನು ಹೇಳುತ್ತದೆ, ಅಷ್ಟೆ.

*ಮಹಾಮಾಯಾಪ್ರಸೂತಾಯ ಮಾಲಿನೇ ಜಲಶಾಯನೇ ।*
*ಮಹೋದರಾಯ ಮಂದಾಯ ಮದಾಯ ಮದನಾಯ ಚ ॥54॥*
*(326-332)*

326. ಮಹಾಮಾಯಾಪ್ರಸೂತಾಯ ನಮಃ

ಪ್ರಸೂತಾಯ - ಜನ್ಮವಿತ್ತವನು, ಸೃಷ್ಟಿಸಿದವನು,

ಮಾಯಾಪ್ರಸೂತಃ - ಮಾಯೆಗೆ ಜನ್ಮವಿತ್ತವನು, ಮಾಯೆಯಿಂದ ಜನ್ಮವಿತ್ತವನು.

ಮಹಾ - ಮಾಯಾ - ಪ್ರಸೂತಃ - ಮಾಯೆಯು ಮಹತ್ತಾದ್ದು, ಬಣ್ಣಿಸಲಾಗದುದು.

ಈ ನಾಮವು ಬಹಳ ವಿಚಿತ್ರವಾದುದು, ಪರಮಾತ್ಮನು ತನ್ನ ಲೀಲೆಗಾಗಿ, ಸಂತೋಷಕ್ಕಾಗಿ ಪ್ರಕೃತಿ, ಪುರುಷ, ಮಾಯೆಯನ್ನು ತನ್ನಿಂದಲೇ ವಿಭಾಗಿಸಿಕೊಂಡನು. ಇದು ತನಗಾಗಿ ತನ್ನ ಮನೋಕಾಮನೆಗಾಗಿ ಮಾತ್ರ. ತಾನು ಸೂತ್ರಧಾರನಾಗಿ ನಿಂತು ಪ್ರಕೃತಿ, ಪುರುಷ, ಮಾಯೆಗಳನ್ನು ಸಂಸಾರ ಸಾಗರದಲ್ಲಿ ಅಂಟಿಸಿ ಜೀವ ಕೋಟಿಯನ್ನು ಇವುಗಳಲ್ಲಿ ತಳ್ಳಿ, ಮುಳುಗಿಸಿ ಜೀವಿಗಳ (ಆತ್ಮನು ದೇಹಧಾರಿಯಾಗಿ ಪಡುವ) ಬವಣೆಗಳನ್ನು ನೋಡುತ್ತಾ ತನ್ನ ಸಂಕಲ್ಪ ಮಾತ್ರದಿಂದ ತೇಲಿಸಿ ಮುಳುಗಿಸುತ್ತಿದ್ದಾನೆ ಈ ಸಂಸಾರ ಸಾಗರದಲ್ಲಿ. ಇದು ಜೀವಿಗಳ ಸುಖ ದುಃಖಗಳಿಗೋ, ಪ್ರಕೃತಿ ಪುರುಷರ ಕಾರಣಕ್ಕೋ, ಮಾಯೆಯ ಕಾರಣಕ್ಕೋ ಗೊತ್ತಿಲ್ಲ. ತಿಳಿದಿರುವವನು ಅವನೇ. ಇದೇ ಅವನ ಮಾಯೆ!

ಪ್ರಕೃತಿ, ಪುರುಷ, ಮಾಯೆ, ಪ್ರಪಂಚ, ಇವು ಒಂದೊಂದೇ ಏನೂ ಮಾಡಲಾರವು. ಆದರೆ ಪರಸ್ಪರ ಸಂಯೋಗದಿಂದ ಅನೇಕ ಊಹಿಸಲಸಾಧ್ಯವಾದ ಕರ್ಮಗಳನ್ನು ಮಾಡುತ್ತವೆ. ಅವುಗಳು ಉನ್ನತಿಗಾದರೂ ಆಗಬಹುದು, ಅವನತಿಗಾದರೂ ಆಗಬಹುದು. ಎಲ್ಲವೂ ಪರಮಾತ್ಮನ ಸಂಕಲ್ಪಕ್ಕನುಸಾರವಾಗಿ ನಡೆಯುತ್ತದೆ.

ಇದೇ ರೀತಿ ಆತ್ಮ, ದೇಹ, ಇಂದ್ರಿಯಗಳು, ಬುದ್ಧಿ, ಮನಸ್ಸು, ಅಹಂಕಾರ, ಚಿತ್ತ, ಸತ್ವರಜಸ್ತಮೋ ಗುಣಗಳು ಒಂದೊಂದೇ ಏನೂ ಮಾಡಲಾರವು. ಆದರೆ ಪರಸ್ಪರ ಸಂಯೋಗದಿಂದ ಈ ಮಾಯೆಯಿಂದ ಒಡಗೂಡಿ ಪ್ರಪಂಚದಲ್ಲಿ ವಿಶಯಗಳಲ್ಲಿ ಬೆರೆತು, ಸಂಸಾರದಲ್ಲಿ ಬಂಧನದಲ್ಲಿ ಮುಳುಗುತ್ತವೆ. ಆಗಲೇ ಕರ್ಮಗಳು ನಡೆಯುವುದು.

ಉತ್ತಮ ಪರಿಸರದಲ್ಲಿ ಬುದ್ಧಿಯು ವಿವೇಕವನ್ನು ಅನುಸರಿಸಿ ಮನಸ್ಸನ್ನು ನಿಗ್ರಹಿಸಿ, ಇಂದ್ರಿಯಗಳನ್ನು ಸ್ವತಂತ್ರವಾಗಿ ಹಾರಾಡಲು ಬಿಡದೆ ಸತ್ವಗುಣವನ್ನು ಆಶ್ರಯಿಸುವಂತೆ ಮಾಡಿ ಆತ್ಮಕ್ಕೆ ಸಂಸಾರ ಬಂಧನದಿಂದ ಬಿಡುಗಡೆ ಹೊಂದಲು ಸಹಾಯಕವಾಗುತ್ತದೆ. ಇದೇ ಮಾಯೆ.

ಭಗವಂತನ ಸಂಕಲ್ಪದಂತೆ ಪ್ರತಿ ಕ್ಷಣದಲ್ಲಿಯೂ ಮಾಯೆಯ ಕಾರಣದಿಂದ ಅನೇಕ ಕಾರಣಗಳು ಹುಟ್ಟುತ್ತಿರುತ್ತವೆ ಮತ್ತು ಅದೇ ಮಾಯೆಯ ಕಾರಣ ಆ ವಿಶಯಗಳು ನಾಶವಾಗುತ್ತಿರುತ್ತವೆ. ಇದೇ ಮಹಾ ಮಾಯ ಪ್ರಸೂತನಾದ ಪರಮಾತ್ಮನ ನಿರಂತರ ಕಾರ್ಯಕ್ರಮ. ಇದು ಬಹಳ ವಿಶೇಷವಾಗಿ ನಡೆಯುತ್ತದೆ.

ಈ ಮಾಯೆಯೇ ಭಗವಂತನ ಹತ್ತಿರ ಆತ್ಮಗಳನ್ನು ಒಯ್ಯುವುದು. ಇದಕ್ಕೆ ಪರಮಾತ್ಮನ ಕೃಪೆ ಅಗತ್ಯ.

ಅಂತೂ ಪರಮಾತ್ಮನು ಮಹಾಮಾಯಾ ಪ್ರಸೂತನು ಎಂದರೆ ಅಪ್ರತಿಮ, ಅಸಮನು, ಎಲ್ಲಕ್ಕೂ ಕಿರೀಟಪ್ರಾಯನು.

27. ಮಾಲಿನೇ ನಮಃ

ಪರಮಾತ್ಮನು ತನ್ನಷ್ಟಕ್ಕೆ ತಾನಿರದೆ ಸೃಷ್ಟಿಗೆ ಪ್ರಾರಂಭಿಸಿ ಮಾಯೆಯೆಂಬ ಮಾಲೆಯನ್ನು ತಾನೇ ಹಾಕಿಕೊಂಡಿದ್ದಾನೆ.

ಪ್ರಕೃತಿ, ಪುರುಷ, ಮಾಯೆಯನ್ನು ವಿಭಾಗಿಸಿ ಅವನು ಮಾಲೆ ಮಾಲೆಯೊಳಗೆ ಸಿಕ್ಕಿ ಹಾಕಿಕೊಂಡಿರುವನೋ ಏನು ಎನ್ನಿಸುವಂತೆ ಆಗಿರುತ್ತಾನೆ.

ಭಕ್ತರುಗಳು ಸಹ ಈ ಸಂಸಾರವೆಂಬ ಮಾಯೆಯೊಳಗೆ ಸಿಕ್ಕಿಕೊಂಡಿರುವ ಜೀವಿಗಳನ್ನು ಉದ್ಧಾರ ಮಾಡಲು ಅವನನ್ನೇ ಆಶ್ರಯಿಸುತ್ತಾರೆ. ಅನೇಕ ವೇಳೆ, ಏಕೆ ಪ್ರತಿ ಕ್ಷಣದಲ್ಲಿಯೂ ನಾವೂ ಸಹ ಸಂಸಾರದ ಗೋಜಿನಲ್ಲಿ ಸಿಲುಕಿ, ಹೊರಬರದೇ ಪರಿತಪಿಸುತ್ತೇವೆ. ಅವನನ್ನು ಆಶ್ರಯಿಸಿದರೆ ಈ ಭವಮಾಲೆಯನ್ನು ತೆಗಧು ಆ ಪರಮಾತ್ಮನಲ್ಲಿ ಆಶ್ರಯಿಸುವ ದಾರಿಯನ್ನು ಅವನೇ ಕೊಡುತ್ತಾನೆ. ಸಂಪೂರ್ಣ ಶರಣಾಗತರಾದರೆ ಅವನು ಎಂತಹ ಗೋಜುಗಳುಳ್ಳ ಮಾಲೆಯನ್ನಾದರೂ ತೆಗೆದು ತನ್ನ ಕಡೆಗೆ ಬರಮಾಡಿಕೊಳ್ಳುತ್ತಾನೆ.

ಈ ಮಾಯಾಸಾಗರದ ಪ್ರಪಂಚದಿಂದ ಬಿಡಿಸಿ ತನ್ನಲ್ಲಿ ಐಕ್ಯಮಾಡಿಕೊಳ್ಳುತ್ತಾನೆ.

ಆದರಿಂದ ನಾವು ಎಲ್ಲಾ ಮಾಲೆಗಳಿಂದ ಮುಕ್ತರಾಗುವುದಕ್ಕೆ ದಾರಿ - ಅವನ ಪೂಜೆ, ಭಜನೆ, ಧ್ಯಾನ, ಜಪ, ಇದರಲ್ಲಿ ಒಂದೊಂದೂ ಉತ್ತಮ. ಒಂದು ಆದ ಮೇಲೆ ಇನ್ನೊಂದನ್ನು ಅವನೇ ಆವಿರ್ಭವಿಸುತ್ತಾನೆ ಮತ್ತು ಹಿಂದಿನದರಲ್ಲಿ ಆಸಕ್ತಿ ಕಡಿಮೆ ಮಾಡಿಸಿ ಮುಂದಿನದಲ್ಲಿ ಹೆಚ್ಚಿಸಿ ತನ್ನೆಡೆಗೆ

ಬರಮಾಡಿಕೊಳ್ಳುತ್ತಾನೆ. ಕಡೆಗೆ ಜಪ ಒಂದರಲ್ಲಿಯೇ ಮನಸ್ಸನ್ನು ಲೀನಗೊಳಿಸಿ ಕೈವಲ್ಯ ಪ್ರಾಪ್ತಯಾಗುವಂತೆ ಮಾಡುತ್ತಾನೆ. ಇದೇ ಪರಮಾತ್ಮನ ಮಹಿಮೆ.

ಮಾಲೆಯು ಯಾವುದಾದರೂ ಆಗಬಹುದು. ಆದರೆ ಈ ಜಪಮಾಲೆಗೆ ಸಮನಾದ್ದು ಯಾವುದೂ ಇಲ್ಲ. ಮಾಲೆಯ ಮಹಿಮೆಯೂ ಮಾಲಾಕಾರವಾಗಿ ಬೆಳೆದು ಆತ್ಮಕ್ಕೆ ಸಾಕ್ಷಾತ್ಕಾರವನ್ನು ಕೊಡುತ್ತದೆ. ಆದರಿಂದ ಮಾಲಿನೇ ನಮಃ ಎಂದರೆ ಅದು ಅವನಿಗೇ ಮುಟ್ಟುತ್ತದೆ.

28. ಜಲಶಾಯಿನೇ ನಮಃ

ಜಲಶಾಯಿನೇ ನಮಃ ಎಂದರೆ ಜಲದಲ್ಲಿ ಮಲಗಿರುವವನಿಗೆ ನಮಸ್ಕಾರಗಳು.

ಪರಮಾತ್ಮನು ಸರ್ವಾಂತರ್ಯಾಮಿ. ಎಲ್ಲೆಲ್ಲಿಯೂ ಇರುವವನು. ಅವನು ಇಲ್ಲದ ಸ್ಥಳವಿಲ್ಲ. ಪಂಚಭೂತಗಳೂ ಅವನೇ. ಅವುಗಳಲ್ಲಿರುವವನಾದ್ದರಿಂದ, ಬಿಂದು ಬಿಂದುಗಳಲ್ಲಿಯೂ ಅವನೇ ಪ್ರಸರಿಸಿರುತ್ತಾನೆ. ಜಲದಲ್ಲಿ ಅವನು ಇರುತ್ತಾನೆ. ಇರುವ ಸ್ಥಿತಿಯನ್ನೂ ಸಹ ಈ ನಾಮವು ಹೇಳುತ್ತದೆ. ''ಶಾಯಿನೇ ನಮಃ'' - ಮಲಗಿರುವವನು. ಪರಮಾತ್ಮನು ಮಲಗಿರುತ್ತಾನೆಯೇ ಎಂದರೆ ಅವನು ನಿದ್ರಿಸಿದರೆ ಪ್ರಪಂಚವನ್ನು ನಡೆಸುವವರು ಯಾರು? ಅವನು ಮಲಗಿರುವ ಭಾವದಲ್ಲಿದ್ದರೂ ಎಚ್ಚರವಾಗೇ ಇರುತ್ತಾನೆ. ಯೋಗನಿದ್ರೆಯಲ್ಲಿರುತ್ತಾನೆ.

ವಟಪತ್ರಶಾಯಿಯಾಗಿ ಜಲದಲ್ಲಿ ಪ್ರಳಯಾನಂತರ ತಾನೊಬ್ಬನೇ ಮಗುವಿನ ರೂಪದಲ್ಲಿ ಆಟವಾಡುತ್ತಿರುತ್ತಾನೆ. ಈ ರೂಪದಲ್ಲಿ ಬ್ರಹ್ಮದೇವರಿಗೆ ಅವರು ಪರಮಾತ್ಮನನ್ನು ನೋಡುವುದಕ್ಕಾಗಿ ತಪಸ್ಸು ಮಾಡಿದಾಗ ಪರಮಾತ್ಮನು ದರ್ಶನವಿತ್ತನು. ಪರಮಾತ್ಮನು ಯಾರ ರೂಪವನ್ನು ಬೇಕಾದರೂ ಧರಿಸುತ್ತಾನೆ. ಜಲಶಾಯಿಯಾಗಿ, ಶೇಷಶಾಯಿಯಾಗಿ, ವಟಪತ್ರಶಾಯಿಯಾಗಿ ಅನೇಕ ರೂಪಗಳನ್ನು ಧರಿಸುತ್ತಾನೆ.

ಜಲದಲ್ಲಿ ಮಲಗಿರುವಾಗ ಸೃಷ್ಟಿ ಎಲ್ಲವೂ ಲಯವಾಗಿ ಎಲ್ಲೆಲ್ಲಿಯೂ ಅಂಧಕಾರವಾಗಿ, ಜಲವೇ ಜಲವಾಗಿ ಉಳಿದೆಲ್ಲವೂ ಲಯವಾಗಿ, ಪರಮಾತ್ಮನೊಬ್ಬನೇ ಬೆಳಕನ್ನು ಚೆಲ್ಲುತ್ತಾನೆ. ಇದೇ ಬ್ರಹ್ಮದೇವರು ನೋಡಿದ ರೂಪ, ಅದೂ ಮೊಟ್ಟ ಮೊದಲಲ್ಲಿ ದೇವರು ಕರುಣಿಸಿದ ರೂಪ. ಅದಕ್ಕೆ ಜಲಶಾಯಿನೇ ನಮಃ ಎಂದು ನಮಸ್ಕಾರ ಮಾಡುವುದು.

29. ಮಹೋದರಾಯ ನಮಃ

ಅತಿ ಮಹತ್ತಾದ (ರೂಪದಲ್ಲಿ, ಶಕ್ತಿಯಲ್ಲಿ, ಸರ್ವರೀತಿಯಲ್ಲಿ).

ಉದರ - ಹೊಟ್ಟೆಯುಳ್ಳವನಿಗೆ ನಮಸ್ಕಾರಗಳು.

ಬ್ರಹ್ಮಾಂಡಗಳನ್ನೇ ತನ್ನ ಉದರಗಳಲ್ಲಿ ಅಡಗಿಸಿಕೊಂಡಿರುವ ಪರಮಾತ್ಮನ

ಉದರದ ಘನವೆಷ್ಟು? ಆಶ್ಚರ್ಯವಲ್ಲವೇ? ಆದರೂ ಪರಮಾತ್ಮನು ಕೇವಲ ಸಾಮಾನ್ಯ ರೂಪದವನೇ ಆಗಿ ಕಾಣುತ್ತಾನೆ. ಅಂದರೆ ಉದರದಲ್ಲಿರುವ ಬ್ರಹ್ಮಾಂಡವನ್ನು ಅತಿ ಚಿಕ್ಕದಾಗಿ ಮಾಡಿ ಅದರಲ್ಲಿ ಇಟ್ಟುಕೊಳ್ಳಬೇಕಾದರೆ ಪರಮಾತ್ಮನ ಮಹಿಮೆ ಎಷ್ಟಿರಬೇಕು. ಅಂತೂ ಬಹಳ ವಿಶೇಷವಾದ್ದು ಅವನ ಉದರವೇ ಅತಿ ಮಹಿಮೆಯುಳ್ಳದ್ದು ಅಂದರೆ ಪರಮಾತ್ಮ, ಅವನ ಉದರ, ಅದರಲ್ಲಿ ಅಡಗಿರುವ ಬ್ರಹ್ಮಾಂಡ ಮುಂತಾದವು - ಈ ಮೂರೂ ಜೊತೆಯಾಗಿ ಅಥವಾ ಒಂದೊಂದಾಗಿ ಅತಿ ಮಹತ್ವವುಳ್ಳದ್ದಾಗಿರಬೇಕು. ಒಟ್ಟಿನಲ್ಲಿ ನಮ್ಮ ಬುದ್ಧಿ ಶಕ್ತಿ, ಮನಸ್ಸಿನ ಶಕ್ತಿಗೆ ಇದು ನಿಲುಕುವುದಿಲ್ಲ. ಇದೇ ಪರಮಾತ್ಮನ ನಿಗೂಢ ಶಕ್ತಿ. ತನ್ನ ಸೃಷ್ಟಿಯಲ್ಲಿ ಯಾರಿಗೂ ಅಂದರೆ ದೇವ ದೇವತೆಗಳಿಗೂ ಸೃಷ್ಟಿಯ ಸಕಲ ಚರಾಚರಗಳಿಗೂ ತಿಳಿಯಲಸಾಧ್ಯವಾದ ಶಕ್ತಿ, ಚತುರತೆ ಮೊದಲಾದ ಗುಣಗಳುಳ್ಳವನು. ಆದರೆ ಅವನು ಗುಣಾತೀತ, ರೂಪಾತೀತ, ಊಹಾತೀತ, ಅಂದರೆ ಎಲ್ಲವೂ ವಿಶೇಷ. ಜಲಶಾಯಿಯಾಗಿರುವುದೂ ಸಹ ಊಹಾತೀತ. ಆದರೆ ಸತ್ಯ, ಮಹೋದರನಾಗಿರುವುದು ಇನ್ನೂ ಊಹಾತೀತ.

0. ಮಂದಾಯ ನಮಃ

ಮಂದ ಎಂದರೆ ಸಾವಕಾಶವಾದುದು, ವೇಗವಿಲ್ಲದ್ದು ಅಥವಾ ಶಕ್ತಿಯಿಲ್ಲದ್ದು, ದುರ್ಬಲವಾದ್ದು, ಮಂದಬುದ್ಧಿ.

ಪರಮಾತ್ಮನನ್ನು ''ಮಂದ''ನು ಎಂದು ನಮಸ್ಕರಿಸುತ್ತೇವೆ.

ಗ್ರಹಗಳಲ್ಲಿ ಶನಿಗ್ರಹವನ್ನು ''ಮಂದ'' ಎನ್ನುತ್ತಾರೆ. ಈ ಗ್ರಹದ ಸಂಚಾರ ಬಹಳ ನಿದಾನ.

ಯಾವಾಗ ನಮಗೆ ಬೇಕಾದ ಕೆಲಸಗಳು ವೇಗವಾಗಿ ನಡೆಯಬೇಕೆನ್ನಿಸಿದಾಗ, ಅವು ಪರಮಾತ್ಮನ ಸಂಕಲ್ಪದಂತೆ ನಡೆಯುವುದರಿಂದಲೂ ಮತ್ತು ನಮ್ಮ ಇಚ್ಛೆ ಬೇಗ ಬೇಗ ಆಗಬೇಕೆಂದು ಇರುವುದರಿಂದ ''ಮಂದ''ವಾಗಿ ನಡೆಯುವಂತೆ ಅನ್ನಿಸುತ್ತದೆ. ಅವನು ಮಂದವಲ್ಲದಿದ್ದರೂ ಆ ರೀತಿ ನಮಗೆ ಅನ್ನಿಸುತ್ತದೆ.

ಅದರಿಂದಲೇ ಮಂದಾಯ ನಮಃ.

1. ಮದಾಯ ನಮಃ

ಅರಿಷಡ್ವರ್ಗಗಳು - ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳಲ್ಲಿ ಮದವೂ ಒಂದು.

ಇವುಗಳನ್ನೂ ಪ್ರಾಪಂಚಿಕ ವಿಷಯಗಳಿಗೆ ತಿರುಗಿಸಿದರೆ ನಾವು ಸಂಸಾರದಲ್ಲಿ ತೇಲುತ್ತೇವೆ. ಅತಿಯಾಗಿ ಆದರೆ ಮುಳುಗಿ ಹೋಗುತ್ತೇವೆ.

ಅದೇ ಭಗವಂತನ ಕಡೆಗೆ ಅಥವಾ ನಮ್ಮ ಹೃದಯಾಂತರಾಳದಲ್ಲಿ ಹಾಕಿದರೆ ನಮಗೆ ಆತ್ಮಬೋಧೆ, ಆತ್ಮದ ಪ್ರಾಪಂಚಿಕ ಬಿಡುಗಡೆ ಸಾಧ್ಯವಾಗುತ್ತದೆ.

ಮದ ಎಂದರೆ ಹೆಮ್ಮೆ, ಭಗವಂತನ ಕೃಪೆಯಿಂದ ನಾವು ಅವನ ಹತ್ತಿರಕ್ಕೆ ನಮ್ಮ ಮನಸ್ಸನ್ನು ತಿರುಗಿಸುತ್ತೇವೆ ಎಂದರೆ ನಮಗೆ ಒಂದು ರೀತಿಯ ಅಹಂಭಾವ ಬರುತ್ತದೆ. ನಮಗೆ ಭಗವಂತನ ಕೃಪೆ ಇದೆಯಲ್ಲಾ ಎಂಬುದೇ ಮನಸ್ಸಿಗೆ ಬರುವ ''ಹೆಮ್ಮೆ'' - ''ಮದ''.

ಇದೇ ರೀತಿ ನಾವು ಪರಮಾತ್ಮನಿಗೆ ''ಮದಾಯ'' ಎಂದರೆ ಅವನಿಗೆ ಮದವಿದೆ ಎಂದ ಹಾಗಾಯಿತು. ನಮ್ಮ ಭಾವನೆಯಲ್ಲಿ, ಅವನಿಗೆ ತನ್ನ ವಿಚಾರವನ್ನು ಯಾರೂ ತಿಳಿಯಲಸಾಧ್ಯ ಎಂದು ಮದವಿದೆ ಎಂದಾಯಿತು. ಇದೆಲ್ಲಾ ನಮ್ಮ ಭಾವನೆ. ಪರಮಾತ್ಮನು ಎಲ್ಲ ಭಾವನೆಗಳಿಗೂ ಮೀರಿದವನು. ಅವನಿಗೆ ''ಮದ''ವೆಲ್ಲಿದೆ. ಭಕ್ತರ ಭಾವನೆ ಈ ರೀತಿ ಅಷ್ಟೆ.

ಅರಿಷಡ್ವರ್ಗಗಳೂ ಸಹ ಭಗವಂತನ ಮಾಯೆಯ ಭಾವಗಳು. ಅವುಗಳಲ್ಲಿ ಅವನೇ ಇದ್ದಾನೆ. ಅವನು ಸರ್ವಾಂತರ್ಯಾಮಿ. ಆದರಿಂದ ಮದಾಯ ನಮಃ ಎನ್ನುವುದು ಉಚಿತವಾದ್ದೇ!

32. ಮದನಾಯ ನಮಃ

ಮದನ - ಎಂದರೆ ಕಾಮದೇವ. ಕಾಮದೇವನು ಪರಮಾತ್ಮನ ರೂಪ, ''ಕಾಮದೇವ ಮತ್ತು ಮಾಯೆ'' - ಈ ಎರಡು ಸೃಷ್ಟಿಯಲ್ಲಿ ಇಲ್ಲದಿದ್ದರೆ ಸೃಷ್ಟಿಯೇ ನಡೆಯುತ್ತಿರಲಿಲ್ಲ. ಕಾಮ ಮತ್ತು ಮಾಯೆಯು ಪ್ರತಿಯೊಂದು ಜೀವಿಯನ್ನು ತನ್ನ ಒಳಗೆ ಹಾಕಿಕೊಂಡುಬಿಡುತ್ತದೆ. ಈ ಎರಡು ಆತ್ಮದ ಬಿಡುಗಡೆಗಾಗಿ ಆದರೆ ಉತ್ತಮ. ಸಂಸಾರದಲ್ಲಿ ಇರಲು ಮತ್ತು ಬಂಧನವನ್ನು ಬಲಪಡಿಸಲು ಆದರೆ ಒಳ್ಳೆಯದಲ್ಲ ಅಂದರೆ ಕಾಮವೂ ಬೇಕು, ಮಾಯೆಯೂ ಬೇಕು, ಆದರೆ ಬೇಡವೂ ಬೇಡ ಎಂದೂ ಸಹ ಅನ್ನಿಸುತ್ತದೆ.

ಪರಮಾತ್ಮನು ಕಾಮದೇವನೆ.

ಸೃಷ್ಟಿಯಲ್ಲಿ ಈ ಕಾಮವು ದೇವ ದೇವತೆಗಳನ್ನೂ ಬಿಟ್ಟಿದ್ದಲ್ಲ. ಎಲ್ಲರೂ ಇದರ ದಾಸರು, ಮದನನೂ ಪರಮಾತ್ಮನೇ.

*ಮಧುಕೈಟಭಹಂತ್ರೇ ಚ ಮಾಧವಾಯ ಮುರಾರಯೇ ।*
*ಮಹಾವೀರ್ಯಾಯ ಧೀರಾಯ ಚಿತ್ರವೀರ್ಯಾಯ ತೇ ನಮಃ ॥55॥*
*(333-338)*

33. ಮಧುಕೈಟಭಹಂತ್ರೇ ನಮಃ

ಮಧು ಮತ್ತ ಕೈಟಭರು ದೈತ್ಯರು. ಪ್ರಪ್ರಥಮವಾಗಿ ಬಂದವರು. ಬ್ರಹ್ಮದೇವರು ಮಹಾವಿಷ್ಣುವಿನ ನಾಭಿಕಮಲದಲ್ಲಿ ಉದ್ಭವವಾದಾಗ, ಅವರು ತಪಸ್ಸು ಮಾಡಿದರು. ತಮ್ಮ ಜನ್ಮಸ್ಥಾನವನ್ನು ಹುಡುಕಿ ಹುಡುಕಿ ಸಾಕಾದರು, ಆಗ 'ತಪ' ಎಂಬ ವಾಣಿ ಮಾತ್ರ ಕೇಳಿಸಿತು. ತಪಸ್ಸನಾಚರಿಸಿ ನಂತರ

ಬ್ರಹ್ಮದೇವರು ಮೊದಲು ವೇದಗಳನ್ನು ರಚಿಸಲು ಆರಂಭಿಸಿದರು. ವೇದಗಳನ್ನು ರಚಿಸುತ್ತಿರುವಾಗ ಅವು ರಾಶಿ ರಾಶಿಯಾಗಿ ಬರುತ್ತಿರಲು, ತಮಸ್ಸಿನ ಭಾಗದಿಂದ ಬಂದು ಮಧುಕೈಟಭಟರು ಬ್ರಹ್ಮದೇವರ ಕಾರ್ಯಗಳಿಗೆ ಅಡ್ಡಿ ಬಂದರು. ಇದರಿಂದ ವೇದರಚನೆಗೆ ಅಡ್ಡಿಯಾಯಿತೇ ವಿನಹ ಮುಂದುವರಿಯಲು ಸಾಧ್ಯವಾಗಲಿಲ್ಲ. ಆಗ ಏನೂ ಪರಿಹಾರ ತೋರದೆ ಬ್ರಹ್ಮ ದೇವರು ತಮ್ಮ ಜನ್ಮದಾತನಾದ ಪದ್ಮನಾಭನನ್ನು ಪ್ರಾರ್ಥಿಸಿದರು. ಈ ಪ್ರಾರ್ಥನೆಯನ್ನು ಲಾಲಿಸಿ ಪರಮಾತ್ಮನು ಮಧುಕೈಟಭಟರನ್ನು ಸಂಹರಿಸಿದನು. ಅದರಿಂದ ಅವನಿಗೆ ಮಧುಕೈಟಭಹಂತ್ರೇ ನಮಃ ಎಂಬ ನಮಸ್ಕಾರದ ನಾಮವು ಬಂದಿತು.

ಇದರ ತತ್ವವೇನೆಂದರೆ 'ವೇದರಚನೆ' ಬಹಳ ಮಹತ್ತಾದ, ಪವಿತ್ರವಾದ ಲೋಕಕಲ್ಯಾಣಕ್ಕಾಗಿ ಮಾಡಿದ ಬ್ರಹ್ಮದೇವರ ಕಾರ್ಯ. ಅಂತಹ ಮಹಾ ಮಹಿಮ, ಶಕ್ತಿವಂತರು ಯುಕ್ತಿವಂತರು ಪ್ರಪಂಚವನ್ನೇ ಸೃಷ್ಟಿಸಿದವರು, ಸಕಲ ಜೀವಿಗಳ ಆಗು ಹೋಗುಗಳನ್ನು ಬರೆದ / ಬರೆಯುವ ವಿಧಾತೃ - ಇಂತಹವರಿಗೇನೆ ಅಡ್ಡಿಪಡಿಸಿದ ಮಧುಕೈಟಭರು ಎಂತಹ ಶಕ್ತಿ ಯುಕ್ತಿವಂತರಾಗಿರಬೇಕು! ಇಂತಹವರನ್ನು ನಿಗ್ರಹಿಸಿದ ಪರಮಾತ್ಮನ ಶಕ್ತಿ ಹೇಗಿರಬೇಕು ಹಾಗೂ ಇಂತಹ ಮಧುಕೈಟಭರು ಹೇಗೆ ಸೃಷ್ಟಿಯಾದರು - ಯಾರ ಸಂಕಲ್ಪದಿಂದ?

ಪರಮಾತ್ಮನ ಸಂಕಲ್ಪವೇ ಹೀಗೆ! ಅದನ್ನು ತಿಳಿದವನು ಅವನೊಬ್ಬನೇ.

ಸತ್ಕಾರ್ಯ ಮಾಡುವಾಗ ಅಡ್ಡಿಗಳು ಬರುವುದು ಸಾಮಾನ್ಯ. ನಮ್ಮ ಜೀವನದಲ್ಲಿ ಇದನ್ನು ಪ್ರತಿಕ್ಷಣದಲ್ಲಿ ಅಡ್ಡಿಗಳನ್ನು ನೋಡುತ್ತಿದ್ದೇವೆ. ಇವು ತಮಸ ಪ್ರಧಾನವಾದ ವೃತ್ತಿಗಳು ನಮ್ಮ ಮನಸ್ಸಲ್ಲಿ ಜನಿಸುತ್ತವೆ. ಅವುಗಳನ್ನು ವಿವೇಕ ಬುದ್ಧಿಯು ನೀಗಿಸಬೇಕು ಮಧಕೈಟಭರು ಆಗ ಮಾತ್ರ ಇರಲಿಲ್ಲ. ಈಗಲೂ ಪ್ರತಿ ಜೀವಿಯ ದೇಹದಲ್ಲಿಯೇ ಅಡಗಿಕೊಂಡು ತಾಮಸ, ರಾಜಸ ಕಾರ್ಯಗಳನ್ನು ಮಾಡುತ್ತಿದ್ದಾರೆ ಸಾತ್ವಿಕ ಗುಣ ಮೇಲೇಳಲು ಪ್ರಯತ್ನಿಸಿದಾಗಲೆಲ್ಲ ಉಳಿದೆರಡು ಈ ಗುಣಗಳು ಕ್ಷಣಮಾತ್ರದಲ್ಲಿ ಪ್ರಕಟವಾಗಿ ಸಾತ್ವಿಕ ಗುಣ / ಕ್ರಿಯೆಗಳನ್ನು ತಡೆಯುತ್ತವೆ. ಈ ಸಮಯದಲ್ಲಿ ಪರಮಾತ್ಮನನ್ನು ಮೊರೆ ಹೋದರೆ ಬುದ್ಧಿ ಮನಸ್ಸಿಗೆ ವಿವೇಕವನ್ನು ನೀಡಿ ಅವನು ಕಾಪಾಡುತ್ತಾನೆ. ಆಗ ಅವನೇ ನಮಗೆ ಮಧುಕೈಟಭಹಂತನಾಗುತ್ತಾನೆ. ಸಹಾಯ ಮಾಡುತ್ತಾನೆ. ಅವನು ಪ್ರಕಟವಾಗಬೇಕಾದರೆ ಅವನ ಸಂಕಲ್ಪವೇ ಕಾರಣ. ನಮ್ಮ ಆತ್ಮದ ಆಳದಲ್ಲಿ ಬರುವ ಆರ್ತನಾದವೇ ಕಾರಣ.

34. ಮಾಧವಾಯ ನಮಃ

ಮಾಧವ ಎಂದರೆ,

1. ರಮಾದೇವಿಯನ್ನು ಧರಿಸಿರುವವನು, ರಮೆಯನ್ನು ತನ್ನ ವಕ್ಷಸ್ಥಳದಲ್ಲಿ ಧರಿಸಿರುವವನು - ಶ್ರೀಮನ್ನಾರಾಯಣ (ಶ್ರೀಕೃಷ್ಣ).
2. ವಸಂತಋತು - ರಮಿಸಲು ಸಂವತ್ಸರದಲ್ಲಿ ಅತ್ಯುತ್ತಮ ಕಾಲ - ವಸಂತಋತು (ಚೈತ್ರ, ವೈಶಾಖ ಮಾಸಗಳು).
3. ಮನಸಿಜನಾದ ಕಾಮದೇವನು ತನ್ನ ಮದನಾಸ್ತ್ರಗಳನ್ನು ಬಿಡುವ ಕಾಲ - ವಸಂತ ಮಾಸ.
4. ಕಾರಣಾಂತರದಿಂದ ಬೇರ್ಪಟ್ಟ ಪ್ರಿಯತಮ, ಪ್ರಿಯತಮೆಯರು ಅತೀವ ವಿರಹತಾಪದಿಂದ ಸಂಕಟ ಪಡುವ ಕಾಲ - ವಸಂತ ಮಾಸ.
5. ಎಲ್ಲೆಲ್ಲೂ ತರುಲತೆಗಳು ಪುಷ್ಪಗಳು ತಮ್ಮ ಸೌಂದರ್ಯವನ್ನು ನಯನ ಮನೋಹರವಾಗಿ ಪ್ರಕಟಿಸುವು ಕಾಲ - ವಸಂತ ಮಾಸ.

ಸಾಮಾನ್ಯ ಅರ್ಥದಲ್ಲಿ ಮಾಧವ ಎಂದರೆ ಶ್ರೀಮನ್ನಾರಾಯಣ. ಕೇಶವಾದಿ 24 ನಾಮಗಳಲ್ಲಿ 3ನೆಯದು ಪವಿತ್ರಮಾಡುವ ನಾಮ - ಮಾಧವ.

ಮಾ - ರಮೆ, ಧವ - ಪುರುಷ, - ಪುರುಷ ಪ್ರಕೃತಿಗಳಿಂದ ಕೂಡಿದ ಪರಮಾತ್ಮ. - ಸ್ತ್ರೀ ಪುರುಷರ ಸಂಯೋಗದ ಆಕರ್ಷಣೆಯೂ ಪರಮಾತ್ಮನ ಸಂಕಲ್ಪ. ಪುರುಷ ಪ್ರಕೃತಿ ಸೇರಿ ಪರಮಾತ್ಮನಾಗುತ್ತಾನೆ. ಆತ್ಮಕ್ಕೆ ನೆಲೆ.

ಮಾಧವಾಯ ನಮಃ ಎಂದರೆ ರಮಾ ಸಹಿತನಾದ ನಾರಾಯಣನಿಗೆ ನಮಸ್ಕಾರಗಳು ಎಂದು ಅರ್ಥ.

ಸಂಸಾರದಲ್ಲಿ ಗೆದ್ದು ಬರಬೇಕಾದರೆ ಸ್ತ್ರೀ ಪುರುಷರು ರಮಾ ಮತ್ತು ನಾರಾಯಣನ ರೀತಿಯಲ್ಲಿ ಏಕಗುರಿಯವರಾಗಿರಬೇಕು. ಆಗಲೇ ಎರಡೂ ಆತ್ಮಗಳಿಗೆ ಪರಮಾತ್ಮನನ್ನು ಸೇರಲು ಹುಡುಕುವ ದಾರಿಗೆ ಪರಸ್ಪರ ಸಹಾಯಕರಾಗುತ್ತಾರೆ.

### 35. ಮುರಾರಯೇ ನಮಃ

ಮುರನೆಂಬ ರಾಕ್ಷಸನಿಗೆ ಶತ್ರುವಾದವನು - ಮುರಾರಿ, ದುಷ್ಟ ಶಕ್ತಿಗಳಿಗೆ ಪರಮಾತ್ಮನು ಯಾವಾಗಲೂ ಸಹಾಯ ಮಾಡುವುದಿಲ್ಲ. ಆ ಶಕ್ತಿಗಳನ್ನು ದಮನಮಾಡುತ್ತಾನೆ. ಹಾಗೆಯೇ ನಮ್ಮಲ್ಲಿರುವ ದುಷ್ಟ ಶಕ್ತಿಗಳಿಗೂ ಒಳ್ಳೆಯವಕ್ಕೂ ಜನ್ಮಸ್ಥಾನ - ಅದೇ ಮನಸ್ಸು. ವಿವೇಚನೆ ಕೊಡುವುದು ಅದೇ ಬುದ್ಧಿ. ಬುದ್ಧಿಯಲ್ಲಿ ವಿವೇಕವೆಂಬ ಶಕ್ತಿಯಿರುತ್ತೆ. ಅದನ್ನು ಉಪಯೋಗಿಸಿ ಮನಸ್ಸನ್ನು ನಿಗ್ರಹಿಸಿದರೆ ಆತ್ಮವು ಪರಮಾತ್ಮನನ್ನು ಸೇರಲು ಸಾಧ್ಯವಾಗುತ್ತದೆ. ಹಾಗೆ ವಿವೇಕವನ್ನೇ ಮುರಾರಿ ಎಂದು ಹೇಳಬಹುದು.

36. ಮಹಾವೀರ್ಯಾಯ ನಮಃ

ವೀರ್ಯ - ಎಂದರೆ ಶಕ್ತಿ, ತೇಜಸ್ಸು, ಇಂದ್ರಿಯ ಶಕ್ತಿ, ಬಲ, ಪ್ರಜಾಭಿವೃದ್ಧಿಗೆ ಫಲಕಾರಿಯಾಗುವ ಶಕ್ತಿ.

ಇವೆಲ್ಲವೂ ಪರಮಾತ್ಮನಿಂದ ಸೃಷ್ಟಿಸಲ್ಪಟ್ಟ ಸಕಲ ಜೀವಿಗಳಲ್ಲಿಯೂ ಇರುತ್ತವೆ. ಅವನ ಸಂಕಲ್ಪವೇ ಸಂಸಾರ ಸಾಗರದಲ್ಲಿ ಜೀವಿಗಳನ್ನು ಮುನ್ನಡೆಸುವುದು. ಜೀವಿಗಳು ದೇಹಗಳನ್ನು ಪಡೆಯುವುದಕ್ಕೆ ಪರಮಾತ್ಮನೇ ತನ್ನ ಕೃಪೆಯಿಂದ ಈ ಶಕ್ತಿಯನ್ನು ದೇಹಗಳಲ್ಲಿ ತುಂಬುತ್ತಾನೆ. ಸಕಲ ಯೋನಿಗಳಲ್ಲಿಯೂ ಅವನ ಸಂಕಲ್ಪಮಾತ್ರದಿಂದ ಆತ್ಮಗಳು ತಮ್ಮ ಸೂಕ್ಷ್ಮ ಶರೀರಗಳನ್ನು ಪುರುಷ, ಪ್ರಕೃತಿ ಶರೀರಗಳಲ್ಲಿ ಪ್ರವೇಶಿಸುತ್ತವೆ.

ದೇಹಗಳಲ್ಲಿರುವ ಆತ್ಮಗಳು ದೇಹವು ಬೇಡವಾದಾಗ ಅವುಗಳನ್ನು ತ್ಯಜಿಸುತ್ತವೆ. ದೇಹವು ಸ್ಥೂಲ ಶರೀರ. ಆತ್ಮಕ್ಕೆ ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಪಂಚೇಂದ್ರಿಯಗಳು - ಪಂಚಕರ್ಮೇಂದ್ರಿಯಗಳು, ಪಂಚಜ್ಞಾನೇಂದ್ರಿಯಗಳು, ಸತ್ವರಜಸ್ತಮೋಗುಣಗಳು, ಕರ್ಮಫಲಗಳು ಇವುಗಳನ್ನೊಡಗೂಡಿದ ಸೂಕ್ಷ್ಮ (ಕಾರಣ) ಶರೀರವು ಮಾತ್ರ ದೇಹದಿಂದ ಹೋಗುತ್ತದೆ. ತನ್ನ ಕರ್ಮಾನುಸಾರವಾಗಿ ಸ್ವರ್ಗ, ನರಕಗಳನ್ನು ಅನುಭವಿಸಿ, ಸಮಯವು ಕಳೆದ ನಂತರ ಶೇಷ ಕರ್ಮ - ಪ್ರಾರಬ್ಧ, ಸಂಚಿತ ಆಗಮ ಕರ್ಮಗಳನ್ನು ಅನುಭವಿಸಲು ಸೂಕ್ಷ್ಮ ಶರೀರವು ಸ್ಥೂಲ ದೇಹಕ್ಕಾಗಿ ಪುರುಷ ಪ್ರಕೃತಿ ಶರೀರಗಳನ್ನು ಸೇರಲು ಹುಡುಕುತ್ತಿರುತ್ತದೆ. ಅದರಂತೆ ಪರಮಾತ್ಮನ ಸಂಕಲ್ಪದಂತೆ ಈ ಸೂಕ್ಮ (ಕಾರಣ) ಶರೀರ, ಪುರುಷನ ವೀರ್ಯದಲ್ಲಿ ಸೇರಿ ತಂದೆ ತಾಯಿಗಳ ಸಂಯೋಗದಿಂದ ಸ್ತ್ರೀಯ ಗರ್ಭದಲ್ಲಿ ಸೇರಿ ಗರ್ಭವಾಸವನ್ನು ಅನುಭವಿಸಿ ಕಾಲನಿಯಮದಂತೆ ಭೂಸ್ಪರ್ಶವನ್ನು ಪಡೆಯುತ್ತದೆ. ಈ ನೂತನ ದೇಹದಲ್ಲಿ ಮತ್ತೆ ಬೆಳೆಯುತ್ತದೆ. ಹೀಗೆ ಯೋನಿ ಯೋನಿಗಳಲ್ಲಿ ಕೋಟ್ಯಾಂತರ ದೇಹಗಳನ್ನು ಪಡೆದು ಕಳೆದುಕೊಂಡು ಭಗವತ್ಕೃಪೆಯಿಂದ ಕಾಲಾನುಕಾಲಕ್ಕೆ ಸಂಸಾರದಿಂದ ಬಿಡುಗಡೆ ಹೊಂದುತ್ತದೆ. ಹೀಗೆ ಅನೇಕ ದೇಹಗಳನ್ನು ವೀರ್ಯವನ್ನು ಪಡೆಯುತ್ತ ಭವಸಾಗರದಲ್ಲಿ ತೇಲುತ್ತ ಮುಳುಗುತ್ತಲೇ ಇರುತ್ತದೆ. ಇದಕ್ಕೆ ವೀರ್ಯವೇ ಪ್ರಾಧಾನ್ಯ.

ಪರಮಾತ್ಮನೇ ಅಪ್ರತಿಮ ವೀರ್ಯವುಳ್ಳವನು. ಅವನೇ ಅಪ್ರತಿಮ ವೀರ್ಯನು. ಆದರಿಂದಲೇ ಅವನು ಮಹಾವೀರ್ಯನು.

''ಮಮಯೋನಿರ್ಮಹದ್ಬ್ರಹ್ಮ'' ಎಂದು ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ್ದಾನೆ.

ಸೃಷ್ಟಿಯಲ್ಲಿರುವ ಜೀವ ಕೋಟಿಯನ್ನು ನಡೆಸುವವನ ವೀರ್ಯವು ಬಹಳ ಮಹತ್ತಾದ್ದು ಇದಕ್ಕೇನೆ ಅವನನ್ನು ಮಹಾವೀರ್ಯಾಯ ನಮಃ ಎನ್ನುವುದು.

ವೀರ್ಯ ಎಂಬುದರ ಪ್ರತಿ ಅರ್ಥದಲ್ಲಿ - ತೇಜಸ್ಸಿನಲ್ಲಿ, ಶಕ್ತಿಯಲ್ಲಿ, ಪ್ರಜಾಭಿವೃದ್ಧಿಯಲ್ಲಿ ಅವನು ಅಪ್ರತಿಮನು ಅಸಮನು. ಹೀಗಾದರೂ ಗುಣಾತೀತನು. ಊಹಾತೀತನು. ಪರಮಾತ್ಮನಿಗೆ ಏನೆಂದು ಕರೆದರೂ ಭಾವಿಸಿದರೂ ಅದು ಕಡಿಮೆಯೆ. ಅವನನ್ನು ಪೂರ್ಣವಾಗಿ ತಿಳಿದವರು ಯಾರೂ ಇಲ್ಲ. ತಿಳಿದವರು ಅವನೊಬ್ಬನೇ! ಅವನ ವೀರ್ಯಕ್ಕೆ ಏನೆಂದು ಭಾವಿಸಲೂ ಸಾಧ್ಯವಿಲ್ಲ. ಎಲ್ಲ ಭಾವನೆಯೂ ಅತಿ ಸೂಕ್ಷ್ಮವೇ! ಅದು ಅಗಣಿತ, ಅಣುರೂಪಕ್ಕೆ ಅಣೋರಣೀಯಾನ್!.

337. ಧೀರಾಯ ನಮಃ

ಧೀರ - ಧೈರ್ಯವುಳ್ಳವನು, ಶಕ್ತಿವಂತ, ಶೂರನು, ಧೃಡವಾಗಿ ನಿಶ್ಚಯಿಸತಕ್ಕವನು, ಬುದ್ಧಿವಂತನು, ಇತ್ಯಾದಿ ಇವುಗಳ ಸಮಾನ ಅರ್ಥವುಳ್ಳವನು.

ಈ ಎಲ್ಲ ಗುಣಗಳನ್ನು ಪರಮಾತ್ಮನು ಅತ್ಯುತ್ತಮ ರೀತಿಯಲ್ಲಿ ಮತ್ತು ಅಸಮಾನ ರೀತಿಯಲ್ಲಿ ಪಡೆದಿರುತ್ತಾನೇ. ಪಡೆಯುವುದು ಏನೂ ಇಲ್ಲ ಯಾವುದೂ ಇಲ್ಲ ಎಲ್ಲಿಂದಲೂ ಇಲ್ಲ. ಎಲ್ಲ ಗುಣಗಳು ಅವನಲ್ಲಿಯೇ ಅಡಗಿವೆ. ಅವನಿಂದಲೇ ಅವನ ಸಂಕಲ್ಪ ಮಾತ್ರದಿಂದ ಹೊರ ಹೊಮ್ಮುತ್ತವೆ. ಹಾಗಾದರೂ ಈ ಗುಣಗಳ ಜೀವಿಗಳು ಯಾವ ಯೋನಿಯಲ್ಲಿಯೆ ಜನಿಸಿದ್ದರೂ, ಎಂತಹ ಸಚರಾಚರ ಸ್ಥಿತಿಯಲ್ಲಿದ್ದರೂ ಧೀರತ್ವವು ಸ್ವಭಾವ ರೂಪದಲ್ಲಿ ಆವಿರ್ಭವಿಸಿರುತ್ತದೆ. ಅವು ಆಯಾ ಸನ್ನಿವೇಶದಲ್ಲಿ ಹೊರಗೆ ಸೂಕ್ತ ರೀತಿಯಲ್ಲಿ ವ್ಯಕ್ತವಾಗಿ ಜೀವಿಗಳ ಉದ್ದೇಶಿತ ಆಲೋಚನೆಗಳನ್ನು ನೆರವೇರಿಸುತ್ತವೆ. ಇದು ಪೂರ್ವ ಜನ್ಮ ಸಂಸ್ಕಾರ, ಜೀವಿಯು ಮನೋಬುದ್ಧಿಯ ಸಂಕಲ್ಪ, ಮೇಲಾಗಿ ಪ್ರಕೃತಿಯ ಸಂಪರ್ಕ ಇದಕ್ಕೂ ಮೇಲಾಗಿ ಭಗವತ್‌ಕೃಪೆ ಮತ್ತು ಸಂಕಲ್ಪದಿಂದ ಧೀರತ್ವವು ವಿರಾಜಿಸುತ್ತದೆ. ಧೀರತ್ವವೇ ಪರಮಾತ್ಮನ ಭಾವ. ಆದರಿಂದ ''ಧೀರಾಯ ನಮಃ'' ಎಂದು ಅವನನ್ನು ನಮಸ್ಕರಿಸುವುದು ಸೂಕ್ತ.

ಅನೇಕ ವೇಳೆ ನಮಗೆ ಗೋಚರವಾಗದೇನೆ ಅವನ ಧೀರತ್ವ ಪ್ರಕಟವಾಗಿ ಆಶ್ಚರ್ಯಗೊಳಿಸುತ್ತದೆ.

ಭಕ್ತ ಪರಿಪಾಲನ, ದುಷ್ಟ ಶಿಕ್ಷಣದ ವಿಚಾರದಲ್ಲಿ ಅವನ ಧೀರತನವು ಬಹಳ ವಿಶೇಷ ರೀತಿಯಲ್ಲಿ ಸನ್ನಿವೇಶಕ್ಕೆ ತಕ್ಕಂತೆ ಕಾರ್ಯರೂಪಕ್ಕೆ ಬರುತ್ತದೆ. ಇದೇ ಪರಮಾತ್ಮನ ಧೀರತನ.

38. ಚಿತ್ರವೀರ್ಯಾಯ ನಮಃ

ವೀರ್ಯವೆಂದರೆ ವೀರತನವುಳ್ಳವನು ಅಥವಾ ತೇಜಸ್ಸುಳ್ಳವನು, ಪ್ರಜಾಭಿವೃದ್ಧಿಗೆ ಕಾರಣರೂಪವಾದ ವೀರ್ಯವುಳ್ಳನು ಅಥವಾ ವೀರ್ಯನು.

ಚಿತ್ರವೀರ್ಯನೆಂದರೆ ಅನೇಕ ಯೋನಿಗಳಲ್ಲಿ ಚರಾಚರ ಜೀವಿಗಳಲ್ಲಿ ಆತ್ಮವು ಏಕರೂಪವೇ ಆದರೂ ನಾನಾ ರೀತಿಯ ದೇಹ ಧಾರಣೆ ಮಾಡಬೇಕಾದಾಗ ಆಯಾ ಯೋನಿಗಳಲ್ಲಿ ಆಯಾ ವೀರ್ಯದೊಡನೆ ಆತ್ಮಗಳನ್ನು ಸೂಕ್ಷ್ಮ ಶರೀರವನ್ನು ಸೇರಿಸಿ ಜನ್ಮತಾಳುವಂತೆ ಮಾಡುತ್ತಾನೆ. ಚಿತ್ರ ಚಿತ್ರವಾದ ವಿವಿಧ ಯೋನಿಗಳಲ್ಲಿ ಜನ್ಮತಾಳುವಂತೆ ಮಾಡುವುದು ಆಯಾ ಆತ್ಮಗಳೊಡನೆ ಇರುವ ಸೂಕ್ಷ್ಮ ಶರೀರ - ಅಂದರೆ ಮನೋಬುದ್ಧಿ, ಅಹಂಕಾರ ಚಿತ್ತಗಳು, ಹತ್ತು ಇಂದ್ರಿಯಗಳು, ಪಂಚಪ್ರಾಣಗಳು, ಸತ್ವರಜಸ್ತಮೋಗುಣಗಳು, ಕರ್ಮಫಲಗಳ (ಪ್ರಾರಬ್ಧ, ಸಂಚಿತ ಮತ್ತು ಆಗಮ ಫಲಗಳ) ವ್ಯೂಹ, ಜೀವಾತ್ಮವನ್ನು ಸೂಕ್ತವಾದ ಪುರುಷ ಮತ್ತು ಪ್ರಕೃತಿಯ ಋಣಾನುಬಂಧ ರೂಪದೊಡನೆ ಬೆರಸಿ ದೇಹವನ್ನು ಸೃಷ್ಟಿಸುವುದು ಪುರುಷೋತ್ತಮನಾದ ಚಿತ್ರವೀರ್ಯನಾದ ಪರಮಾತ್ಮನೊಬ್ಬನೀಗೆ ಸಾಧ್ಯ. ಇಂತಹ ಕೋಟ್ಯಾಂತರ ಜೀವ ಕೋಟಿ, ಸಚರಾಚರ ವಸ್ತುಗಳುಳ್ಳ ಬ್ರಹ್ಮಾಂಡಗಳನ್ನು ನಡೆಸಬೇಕಾದರೆ ಅಖಿಲಾಂಡಕೋಟಿ ಬ್ರಹ್ಮಾಂಡ ನಾಯಕನೊಬ್ಬನಿಗೇ ಸಾಧ್ಯ. ಅವನು ಅಸಮಭವನು, ಊಹಾತೀತ, ಗುಣಾತೀತ, ಸರ್ವಾತೀತನು, ಚಿತ್ರವೀರ್ಯನು. ''ಚಿತ್ರವೀರ್ಯಾಯ ನಮಃ'' ಎಂದರೆ ಸಾಮಾನ್ಯವೇ!!

*ಚಿತ್ರಕೃತ್ಯಾಯ ಚಿತ್ರಾಯ ನಮಸ್ತೇ ಚಿತ್ರಭಾನವೇ ।*
*ಮಾಯಾತೀತಾಯ ಮೇಶಾಯ ಮಹಾವೀರ್ಯಾಯ ತೇ ನಮಃ ।।56।।*
*(339-344)*

**339. ಚಿತ್ರಕೃತ್ಯಾಯ ನಮಃ**

ಕೃತ್ಯ - ಮಾಡಲ್ಪಟ್ಟ ಕೆಲಸದ ಭಾವ, (ಕೃತ - ಮಾಡಲ್ಪಟ್ಟದ್ದು, ಕೃತ್ಯ - ಅದರ ಭಾವ). ಚಿತ್ರ - ತರಹ ತರಹವಾದ್ದು. ಈ ರೀತಿ ಇರುವವನು ಯಾರೋ ಅವನು - ಪರಮೇಶ್ವರ.

ಸೃಷ್ಟಿಯ ರಚನೆ, ರಚಿಸುವ ಸಾಮರ್ಥ್ಯ, ರಚಿಸುವ ಕಲ್ಪನೆ, ರಚಿಸುವ ಸಂಕಲ್ಪ, ಮಾಡಿದ ಸಂಕಲ್ಪವನ್ನು ನಡೆಸುವ ಸಾಮರ್ಥ್ಯ, ನಡೆಸಿದ ಮೇಲೆ ಅವುಗಳನ್ನು ನೋಡಿ ಆನಂದಿಸುವುದು ನಿರಂತರ ಸೃಷ್ಟಿ ಸ್ಥಿತಿ ಲಯಗಳನ್ನು ಪ್ರಳಯ - ಕಲ್ಪಾದಿ - ಕಲ್ಪಾಂತಗಳನ್ನು ಒಂದೇ ಸರಣಿಯಲ್ಲಿ ಆದಿ, ಮಧ್ಯ, ಅಂತಗಳಿಲ್ಲದೆ ನಡೆಸುವುದು, ಕೊನೆ ಮೊದಲಿಲ್ಲದೆ ನಿರಂತರ ಇರುವ ಕಾಲವನ್ನು ಸೃಷ್ಟಿಸಿ ನಡೆಸುವುದು - ಇವೆಲ್ಲ ಚಿತ್ರ ಕೃತ್ಯಗಳೇ. ಇಂತಹ ವಿಶೇಷವಾದ ಚಿತ್ರಕೃತ್ಯಗಳನ್ನು ''ಸೋಽಕಾಮಯತ - ಪ್ರಜಾಃ ಸೃಜೇಯೇತಿ'' ಎಂಬಂತೆ ಕಾಮಿಸಿ. ಕಾಮನೆಯನ್ನು ಇಡೇರಿಸಿಕೊಳ್ಳುವವನು ಅವನೊಬ್ಬನೇ. ವಿಚಿತ್ರ ಕೃತ್ಯಗಳ ಮೇಲೆ ಸ್ಮರಿಸುವಂತೆ ಮಾಡುವ, ಪ್ರಚೋದಿಸುವ ನಾಮಗಳುಳ್ಳವನು

ಅವನೊಬ್ಬನೇ - ಸಾಕಾರನೆಂದು ತಿಳಿಯೋಣವೆಂದರೆ ಎಲ್ಲ ಆಕಾರದಲ್ಲಿಯೂ ನಿಲ್ಲುವವನು, ನಿಲ್ಲದಿರುವವನು, ನಿರಾಕಾರನೆಂದರೆ ಅದರಲ್ಲಿಯೂ ಇರುವವನು. ಇಲ್ಲದಿರುವವನು - ನೇತಿ, ನೇತಿ ಎಂದು ತ್ಯಜಿಸುತ್ತಾ ಹೋದಾಗ ಉಳಿಯುವವನು ಮತ್ತು ಉಳಿಯದಿರುವವನು ಅವನೊಬ್ಬನೇ. ವಿಚಿತ್ರ ಚಿತ್ರಕೃತ್ಯನು - ಅವನು ಅವನೇ - ಅವನೊಬ್ಬನೇ!! ಅಹಾ ಹೇಗೆ ತಿಳಿಯುವುದು! ಇಂತಹ ಅಸಮ್ಭವ ಸೃಷ್ಟಿಕರ್ತ ಇತ್ಯಾದಿಯವನನ್ನು ಚಿತ್ರಕೃತ್ಯನೆಂದೇ ಕರೆಯಬೇಕು. ಆ ನಾಮದಿಂದ ಕರೆದರೆ ಕರೆಯುವವರ ಮನಸ್ಸು ಬುದ್ಧಿಗಳು ಉನ್ನತ ಭಾವಕ್ಕೆ ತಲಪಲು ಸಾಧ್ಯ. ಈ ಸಾಧ್ಯತೆ ಅವನ ಕೃಪೆಯೇ! ಅವನ ಸಂಕಲ್ಪವೇ! ಹೇ ಪರಮಾತ್ಮನೆ ಇಂತಹ ಭಾವಗಳನ್ನು ಯಥೇಚ್ಛವಾಗಿ ದಯಪಾಲಿಸು!!

40. ಚಿತ್ರಾಯ ನಮಃ

ಚಿತ್ರ - ಆಶ್ಚರ್ಯ, ವಸ್ತುವು ಹೇಗಿರುವುದೋ ಹಾಗೆಯೇ ಪ್ರದರ್ಶಿಸುವುದು, ಬಣ್ಣ ಬಣ್ಣದ ವಿನ್ಯಾಸ, ಬಹಳ ಮೂಲವಿರುವ ರೀತಿಯನ್ನೇ ತೋರಿಸುವ ಪಟ. ಬಹಳ ದೊಡ್ಡದಾದ ಅಥವಾ ಯಾವ ರೀತಿಯೇ ಇರುವುದನ್ನು ಹಾಗೆಯೇ ನಮ್ಮ ಕಣ್ಣಿನ ನೋಟದಲ್ಲಿ ಮತ್ತೆ ಒಂದು ಪಟದಲ್ಲಿ ಕಾಣುವ ಹಾಗೆ ಪ್ರಕಟಿಸುವ ರೀತಿ.

ಮನಸ್ಸಿನಲ್ಲಿ ಬಂದ ಮೂಲ ಭಾವನೆಗಳನ್ನು ನಾವೇ ಪುನಃ ನೋಡುವ ಹಾಗೆ ಮಾಡುವ ರೀತಿ ಅಥವಾ ಇತರರಿಗೆ ತಿಳಿಯುವ ಹಾಗೆ ಪ್ರದರ್ಶಿಸುವ ರೀತಿ.

ಪರಮಾತ್ಮನು ಮೊದಲು ''ಸೋಽಕಾಮಯತ - ಪ್ರಜಾಃ ಸೃಜೇಯೇತಿ'' ಎಂದ ಹಾಗೆ ತನ್ನ ಸಂಕಲ್ಪ ಮಾತ್ರದಲ್ಲಿ ಬಂದದ್ದನ್ನು, ಬರುತ್ತಿರುವುದನ್ನು ಮತ್ತು ಬರುವುದನ್ನು ಈ ಸೃಷ್ಟಿ ಬ್ರಹ್ಮಾಂಡದಲ್ಲಿ ಸಕಲ ಚರಾಚರ ವಸ್ತುಗಳಲ್ಲಿ ಅನವರತನಾಗಿ ಪ್ರಕಟ ಮಾಡುತ್ತಿದ್ದಾನೆ. ಅಷ್ಟೇ ಅಲ್ಲ ಅವನ ಮನೋ ಮಂಡಲದಲ್ಲಿ ಯಾವ ರೀತಿ ಸಂಕಲ್ಪಗಳು ಬರುವುವೋ ಹಾಗೆ ಹಾಗೆಯೇ ಬರುವಂತೆ ಮಾಡುತ್ತಾನೆ. ಇದು ಬಹಳ ಕಷ್ಟ. ಅವನಿಗೆ ಹೇಗೆ ಮತ್ತು ಯಾವ ಶಕ್ತಿ ಇದೆ ಎಂದು ಕಲ್ಪಿಸಿಕೊಳ್ಳುವುದು ಕಷ್ಟ.

ಹೆಚ್ಚೇಕೆ ನಮ್ಮ ಮನಸ್ಸಿನಲ್ಲಿ ಹೇಗೆ ಮತ್ತು ಯಾವ ರೀತಿ ನಡೆಯುತ್ತಿವೆ, ನಡೆಯುತ್ತವೆ, ನಡೆದಿವೆ ಎಂಬುದನ್ನು ತಿಳಿಯುವುದೂ ಸಹ ಕಷ್ಟ. ಆದರೆ ಬುದ್ಧಿಯ ಸಹಾಯದಿಂದ ಮತ್ತು ಜ್ಞಾಪಕ ಶಕ್ತಿಯ ಸಹಾಯದಿಂದ ಇದು ಸಾಧ್ಯ. ಅದು ಹೀಗೆ - ನಮ್ಮ ಮನಸ್ಸೆಂಬ ವಿಶಾಲವಾದ ಆಕಾಶದಲ್ಲಿ ಎಲ್ಲವೂ ಬಂದು ಕೆಲ ಕಾಲ ಇದ್ದು ಹೊರಟು ಹೋಗುತ್ತವೆ. ಬೇರೆಯವು ಬರುತ್ತವೆ. ಆದರೆ ಯಾವ ಕ್ಷಣ ಮಾತ್ರದಲ್ಲಿಯೂ ಈ ಮನಸ್ಸೆಂಬ ವಿಚಿತ್ರ ಆಕಾಶವು

ಶೂನ್ಯ (ಖಾಲಿ)ವಾಗಿ ಇರುವುದಿಲ್ಲ. ಇದೇ ಪರಮಾತ್ಮನು ಚಿತ್ರಪಟವನ್ನು ರಚಿಸುವ ''ಚಿತ್ರವಿಚಿತ್ರ'' ರೀತಿ.

ನಮ್ಮ ಮನಸ್ಸಿನಲ್ಲಿ ನಡೆಯುವುದೇ ನಮ್ಮ ಬುದ್ಧಿ ಶಕ್ತಿಗೆ ತಿಳಿಯಲಸಾಧ್ಯವಾದ್ದರಿಂದ (ಅಂದರೆ ಯಾವ ಯಾವ ಯೋಚನೆಗಳು, ಜ್ಞಾಪಕ ವಸ್ತುಗಳು ಯಾವಾಗ ಹೇಗೆ ಯಾವುದಾದ ನಂತರ ಯಾವುದು ಬರುವುದೆಂದು ತಿಳಿಲಸಾಧ್ಯವಾಗಿರುವಾಗ) ಬೇರೆಯವರ ಮನಸ್ಸಿನದನ್ನು ತಿಳಿಯುವುದು ಸಾಧ್ಯವೇ ಇಲ್ಲ! ಅಂದರೆ, ಪರಮಾತ್ಮನದನ್ನು ಅವನ ಸಂಕಲ್ಪಗಳನ್ನು ತಿಳಿಯವುದಂತೂ ನಮ್ಮ ಈ ಬುದ್ಧಿಯ ಎಲ್ಲಾ ವಿವೇಕಗಳನ್ನು ಉಪಯೋಗಿಸಿದರೂ ನಿಲುಕುವುದು ಸಾಧ್ಯವೇ ಇಲ್ಲ, ಅಸಾಧ್ಯ. ಇದೇ ಪರಮಾತ್ಮನ ಅಪರಿಮಿತ ಮಹಾನ್ ಶಕ್ತಿ - ''ಚಿತ್ರ''ವನ್ನು ನಡೆಸುವಿಕೆ. ಅವನು ಮಹಾ ಮಹಿಮ ಚಿತ್ರಕಾರ - ಅಂತಹ ಚಿತ್ರನಾದವನಿಗೆ ನಮಸ್ಕಾರಗಳು.

ಈ ಸಂಸಾರ ಸಾಗರದಲ್ಲಿ ತೇಲುವಾಗ, ಮುಳುಗುವಾಗ ನಾವು ಅನೇಕ ಯೋನಿಗಳಲ್ಲಿ ಹುಟ್ಟಿ, ನಾಶವಾಗಿ ಮತ್ತೆ ಮತ್ತೆ ದೇಹಗಳನ್ನು ಧರಿಸುತ್ತಾ ಇರಲೇ ಬೇಕಾಗುತ್ತದೆ. ಮತ್ತು ಜೀವನದಲ್ಲಿ ಉದ್ದಕ್ಕೂ ಅನೇಕ ಕೋಟ್ಯಾಂತರ ಜೀವಿಗಳನ್ನು ಚರಾಚರ ವಸ್ತುಗಳನ್ನು ಸಮೂಹಗಳನ್ನು ಅವನು ಸಂಕಲ್ಪಿಸಿದ ರೀತಿಯಲ್ಲಿಯೇ ಸಂಪರ್ಕಿಸುತ್ತೇವೆ. ಜೊತೆಯಲ್ಲಿ ನಮ್ಮದೇ ಎಂಬ ಭಾವನೆಯಲ್ಲಿರುತ್ತೇವೆ. ಅಕಸ್ಮಾತ್ತಾಗಿ, ಅನಿರೀಕ್ಷಿತವಾಗಿ ಸಂಪರ್ಕವನ್ನು ತತ್ಕಾಲಿಕವಾಗಯೋ, ಮತ್ತೆ ಹೊಂದದ ರೀತಿಯಲ್ಲಿಯೋ ಕಡಿದುಕೊಳ್ಳುತ್ತೇವೆ. ಇದೆಲ್ಲ ಅವನ ಸಂಕಲ್ಪ ಮಾತ್ರದಂತೆಯೇ ನಡೆಯುತ್ತದೆ. ಇದನ್ನು ಚಿತ್ರಿಸುವವನು ಅವನೇ, ಅವನೊಬ್ಬನೇ ಹೊರತು ಬೇರೆಯವರಲ್ಲ.

ಇಂತಹ ರೀತಿಯಲ್ಲಿ ಒಂದು ಜೀವಕ್ಕೆ ಮಾತ್ರವಲ್ಲ ಸಕಲ ಜೀವಕೋಟಿಗೂ ಸಚರಾಚರ ವಸ್ತುಗಳಿಗೂ ಒಂದನ್ನೂ ಬಿಡದೆ ಚಿತ್ರಿಸುವವನು ಅವನೊಬ್ಬನೇ ಹೊರತು ಬೇರೆಯವರಲ್ಲ.

ಎಂದಮೇಲೆ ಆ ಪರಮಾತ್ಮನನ್ನು ಯಾವ ಯಾವ ರೀತಿಯಲ್ಲಿ ''ಕೇಷು ಕೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ಮಯಾ'' (ಶ್ಲೋಕ 17 - ಅ.10 - ಗೀತಾ) ಎಂದು ಅರ್ಜುನನು ವಿಭೂತಿಗಳನ್ನು ನೋಡುವ ಸನ್ನಿವೇಶದಲ್ಲಿ ಶ್ರೀಕೃಷ್ಣನನ್ನು ಪ್ರಶ್ನಿಸುತ್ತಾನೆ ಮತ್ತು ವಿಭೂತಿಗಳನ್ನು ತಿಳಿಯುವ ಅವಕಾಶವನ್ನು ಪಡೆಯುತ್ತಾನೆ.

ಪರಮಾತ್ಮನು ಪರಮಾತ್ಮನೆ, ಮಹಾನ್ ''ಚಿತ್ರನು'', ಚಿತ್ರಕಾರನು. ನಿರಂತರ ಚಿತ್ರಿಸುತ್ತಿರುವವನು ಎಂದ ಮೇಲೆ ಅವನಿಗೆ ಬಿಡುವೇ ಇಲ್ಲ. ಬಿಡುವಿಲ್ಲದೆ ಕರ್ತವ್ಯವನ್ನು ನಡೆಸುವವನು ಅವನೊಬ್ಬನೇ! ಅವನು ನಿಂತರೆ ಇಡಿ ಸೃಷ್ಟಿಯೇ ನಿಲ್ಲುತ್ತದೆ. ಉದಾಹರಣೆಗೆ ವಾಯು ಒಂದು ಕ್ಷಣ ಚಲನವಲನಗಳನ್ನು

ನಿಲ್ಲಿಸಿದರೆ.... ಆಗುವ ಹಗರಣ..... ಊಹಿಸಲಸಾಧ್ಯ - ಏನಾಗಬಹುದು.....! ಅದೇ ಈ "ಚಿತ್ರಾಯ ನಮಃ" ಎಂಬ ಶಕ್ತಿ, ಎಂಬುವನ ಶಕ್ತಿ!!.....

**41. ಚಿತ್ರಭಾನುವೇ ನಮಃ**

ಚಿತ್ರಭಾನು ಎಂದರೆ ಸೂರ್ಯ, ಶಿವ, ಶಂಕರ, ಅಗ್ನಿ (ಬೆಂಕಿ), ಚಿತ್ರದಲ್ಲಿ ಭಾಸವಾಗುವ ಸೂರ್ಯ ಅಥವಾ ಚಿತ್ರ - ರೀತಿ, ರೀತಿಗಳಲ್ಲಿ ಪ್ರಕಾಶಿಸುವ ಸೂರ್ಯ; ಸೂರ್ಯ ರೀತಿ ಪ್ರಕಾಶವಿರುವವನು ಅಗ್ನಿ. ಚಿತ್ರಭಾನುವೆಂದರೆ ಸೂರ್ಯ, ಅಗ್ನಿ ಎಂದು ಅರ್ಥವಾಗುತ್ತದೆ. ಪ್ರಕಾಶವಿರುವಡೆಯಲ್ಲೆಲ್ಲ ಪರಮಾತ್ಮನು ಇರುತ್ತಾನೆ. ಪ್ರಕಾಶವೇ ಸೂರ್ಯನ, ಅಗ್ನಿಯ ಲಕ್ಷಣ, ಸ್ವಭಾವ, ತೇಜಸ್ಸು; ಪ್ರಕಾಶವೇ ಪರಮಾತ್ಮ.

ಅಗ್ನಿಯು ಪಂಚಮಹಾಭೂತಗಳಲ್ಲಿ ಒಂದು. ಸಕಲ ಜೀವರಾಶಿಗಳು ಜೀವಿಸಬೇಕಾದರೆ ಪ್ರಕಾಶವು ಬೇಕೇ ಬೇಕು. ಇದು ಪರಮಾತ್ಮನ ಅಂಶವೇ ಆದ್ದರಿಂದ ಅವನಿಗೆ ಚಿತ್ರಭಾನು ಎಂದು ಹೇಳುತ್ತೇವೆ. ಹಾಗೆಯೇ ಸೂರ್ಯನು ಅಗ್ನಿಯ ಸ್ವಭಾವಗಳನ್ನು ಹೊಂದಿರುವುದರಿಂದಲೂ, ಇವನೂ ಸಹ ನಾರಾಯಣ ಸ್ವರೂಪನೇ ಆಗಿದ್ದಾನೆ. ಸೂರ್ಯನು ಪರಮಾತ್ಮನ ಚಕ್ಷುವಿಂದ ಬಂದಿರುತ್ತಾನೆ. ಪುರುಷ ಸೂಕ್ತದಲ್ಲಿ ಹೇಳಿದೆ - ಚಕ್ಷೋಃ ಸೂರ್ಯೋ ಅಜಾಯತ.

ಇವರಿಬ್ಬರೂ ತಮ್ಮ ಪ್ರಕಾಶವನ್ನು, ಸುಡುವಿಕೆಯನ್ನು ಯಾವ ತಾರತಮ್ಯವೂ ಭೇದ ಭಾವವೂ ಇಲ್ಲದೆ ಸಕಲ ಸ್ಥಳಗಳಲ್ಲಿಯೂ, ಸದಾಕಾಲವೂ ತೋರಿಸುತ್ತಾರೆ. ಇವರ ಕೆಲಸ ತಮಸ್ಸನ್ನು ಕತ್ತಲನ್ನು ಓಡಿಸುವುದು. ಇವರಿರುವೆಡಯಲ್ಲಿ ತಮಸ್ಸು ಇರಲು ಸಾಧ್ಯವಿಲ್ಲ.

ಜ್ಯೋತಿ ಸ್ವರೂಪರಾದ ಇವರು ಬೆಳಕನ್ನು ಕೊಡುತ್ತಾರೆ. ಜ್ಞಾನವನ್ನು ದಯಪಾಲಿಸುತ್ತಾರೆ. ಅಜ್ಞಾನವನ್ನು ಹೊಡೆದೋಡಿಸುತ್ತಾರೆ.

ಇಹ ಲೋಕದಲ್ಲಿ ಲೋಕ ವ್ಯವಹಾರಕ್ಕೆ ಬೇಕಾಗುವ ಜ್ಞಾನವನ್ನು ಕೊಡುತ್ತಾರೆ. ಇವರು ಪರಮಾತ್ಮನೇ!

ಪರಲೋಕ ಜ್ಞಾನವನ್ನು ಪಾರಮಾರ್ಥಿಕ ಜ್ಞಾನವನ್ನು ಇವರೇ ಕೊಡುತ್ತಾರೆ. ಇದರಿಂದ ಪರಮಾತ್ಮನ ಸಾನ್ನಿಧ್ಯವನ್ನು ಪಡೆಯಲು ಸಾಧ್ಯವಾಗುತ್ತದೆ.

ಚಿತ್ರಭಾನು - 60 ಸಂವತ್ಸರಗಳಲ್ಲಿ ಒಂದು. ಸಂವತ್ಸರ ಎಂದರೆ ಗಣನೆಯ ಒಂದು ರೀತಿ. ಕಾಲಮಾನವನ್ನು ಕಲಾ, ಕಾಷ್ಠಾ, ನಿಮಿಷ, ಗಂಟೆ, ದಿನ, ರಾತ್ರಿ, ಪಕ್ಷ, ಮಾಸ, ಋತು, ಸಂವತ್ಸರ ಎಂದು ವಿಂಗಡಿಸುತ್ತಾರೆ (ಸಂವತ್ಸರ ನಂತರ ಯುಗಗಳು ಇತ್ಯಾದಿ).

ಸಂವತ್ಸರವನ್ನು ಸೌರಮಾನದ ರೀತಿ, ಚಾಂದ್ರಮಾನದ ರೀತಿ ಗಣನೆ ಮಾಡುತ್ತಾರೆ.

ಚಿತ್ರಭಾನುವೂ ಒಂದು ಸಂವತ್ಸರದ ಹೆಸರು. ಕಾಲವೇ ಪರಮಾತ್ಮ. ಅವನೇ ಕಾಲದೇವ - ಕಾಲದ ಗಣನೆಯ ಹೆಸರುಗಳು ಸಹ ಅವನ ಹೆಸರುಗಳೇ! ಅವನೇ ಅವು!!

42. ಮಾಯಾತೀತಾಯ ನಮಃ

ಅತೀತ ಎಂದರೆ ಮೀರಿದವನು, ಆ ಎಲ್ಲೆಯನ್ನು ದಾಟಿದವನು. ಮಾಯಾ - ಪರಮಾತ್ಮನಿಂದಲೇ ಸೃಷ್ಟಿಸಲ್ಪಟ್ಟದ್ದು. ಮಾಯೆ ಎಂದರೆ ನಿಜವನ್ನು ಮುಚ್ಚಿಡುವುದು, ಇರುವುದನ್ನು ಇಲ್ಲದ ಹಾಗೆ ಭಾವನೆ ಹುಟ್ಟುವ ರೀತಿ ಅಥವಾ ಇಲ್ಲದ್ದನ್ನು ಇದೆ ಎಂಬ ಭಾವನೆ ಬರುವಂತೆ ಮಾಡುವ ರೀತಿ - ಇದೇ ಮಾಯೆ. ಅತೀತ ಎಂದರೆ ಇದನ್ನು ಮೀರಿದವನು ಮತ್ತು ಇದರ ಪ್ರಭಾವದೊಳಗೆ ಮೋಹಿತನಾಗದವನು.

ಪರಮಾತ್ಮನು ಮಾಯೆಯಿಂದ ವಿಚಲಿತನಾಗುವುದಿಲ್ಲ.

ನಾವು ನಮ್ಮ ಜೀವನದಲ್ಲಿ ವಿವೇಕವನ್ನು ಕಳೆದುಕೊಂಡು ನಮ್ಮ ಶ್ರೇಯಸ್ಸಿಗೆ ಬೇಕಾದ್ದನ್ನು ಕಂಡುಕೊಳ್ಳದವರಾಗಿದ್ದೇವೆ. ಇದಕ್ಕೆ ಕಾರಣ ಮಾಯೆ! ಈ ಮಾಯೆ ಎಂಬುದನ್ನು ತಿಳಿದು ಇದರ ಬಂಧನದಿಂದ ಮತ್ತು ಇದರ ಪ್ರಭಾವದಿಂದ ಬಿಡಿಸಿಕೊಂಡಾಗ ವೀವೇಕ ಬುದ್ಧಿಯು ಕೆಲಸಮಾಡುತ್ತದೆ.

ಪ್ರಪಂಚದಲ್ಲಿ, ಸಂಸಾರ ಸಾಗರದಲ್ಲಿಯೇ ಇದ್ದು ಸುಖಪಡುವಂತೆ ಮಾಡುವುದು ಮಾಯೆ. ಎಲ್ಲವನ್ನೂ ಆಸೆ ಪಡುವಂತೆ, ಅವನ್ನು ತನ್ನದಾಗಿ ಮಾಡಿಕೊಳ್ಳುವಂತೆ ಭೋಗಿಸುವಂತೆ ಮಾಡುವುದು ಮಾಯೆ. ಇದು ಜೀವಿಗಳ ಕಥೆ. ಆದರೆ ಪರಮಾತ್ಮನೂ ಹೀಗೆಯೇ ಆಗುವುದಿಲ್ಲವೇ? ಎಂದರೆ ಅವನು ಎಲ್ಲವನ್ನು ನಡೆಸುತ್ತಿದ್ದರೂ ಅವುಗಳಲ್ಲಿ ತಾನು ಒಳಹೋಗುವುದಿಲ್ಲ. ಹೊರಗೆ ನಿಂತು ಸೂತ್ರಗಳನ್ನು ಆಡಿಸಿ ಪ್ರಪಂಚವನ್ನು ನಡೆಸುತ್ತಾನೆ. ಅದರಿಂದ ಅವನು ಮಾಯೆಗೆ ಒಳಗಾಗುವುದಿಲ್ಲ. ಅದರಿಂದಲೇ ಅವನು ''ಮಾಯಾತೀತನು'' - ಮಾಯಾತೀತಾಯ ನಮಃ.

ಜ್ಞಾನವನ್ನು ನಮಗೆ ಬರುವಂತೆ ಮಾಡಿ, ನಮ್ಮನ್ನು ಸಂಸಾರ ಬಂಧನದಿಂದ ಬಿಡಿಸಿ ಪರಮಾತ್ಮನ ಎಡೆಗೆ ಕೊಂಡೊಯ್ಯುವ ಶಕ್ತಿಯೂ ಒಂದು ರೀತಿಯ ಮಾಯೇ. ಆದರೆ ಅದಕ್ಕೆ ಎದುರಾಗಿ ಇನ್ನೊಂದು ಮಾಯೆ ಸಂಸಾರ ಬಂಧನ ಕಡೆ ಎಳೆಯುತ್ತಿರುತ್ತದೆ.

ಭಗವತ್ಸಂಕಲ್ಪದಿಂದ ಪರಮಾತ್ಮನಡೆಗೆ ಎಳೆಯುವ ಶಕ್ತಿಯೇ ಬಲಯುತವಾಗಿ ಪರಮಾತ್ಮನಲ್ಲಿ ನಮ್ಮನ್ನು ಸೇರಿಸುತ್ತದೆ.ಅಂದ ಮೇಲೆ ''ಮಾಯೆ''ಯೂ ಅವಶ್ಯಕ.

ಪರಮಾತ್ಮನ ವಿಚಾರದಲ್ಲಿ ಎಲ್ಲವೂ ಅವನೇ ಆಗಿರುವುದರಿಂದ ಈ

ಮಾಯಾ ಶಕ್ತಿಯೂ ಅವನ ರೂಪವೇ ಆದ್ದರಿಂದ ಅವನನ್ನು ಅದು ವಿಚಲಿತ ಮಾಡಲು ಶಕ್ತವಲ್ಲ. ಅದರಿಂದ ಅವನು ಮಾಯಾತೀತನು - ''ಮಾಯಾತೀತಾಯ ನಮಃ''.

43. ಮೇಶಾಯ ನಮಃ

(ಮೇಶ - ಎಂಬುದನ್ನು ಮೇಷ ಎಂದೇ ಅರ್ಥೈಸಲಾಗಿದೆ. ಇದು ಸೂಕ್ತ.)

ಮೇಷಾ ಟಗರು, ಮೇಷ - ಟಗರು - ದ್ವಾದಶ ರಾಶಿಗಳಲ್ಲಿ ಮೊದಲನೆಯದು - ಮೇಷರಾಶಿ - ಇಂದ್ರನಿಗೆ ಮೇಷ ವೃಷಣ ಎಂದು ಹೆಸರು.

ದೇವೇಂದ್ರನಿಗೆ ಒಂದು ಸಲ ಶತಯಾಗ ಮಾಡುವ ಸಂದರ್ಭದಲ್ಲಿ ಒಬ್ಬರು ''ನಿನ್ನ ವೃಷಣಗಳು ಬಿದ್ದು ಹೋಗಲಿ'' ಎಂದು ಶಾಪ ಕೊಟ್ಟರು. ಆಕ್ಷಣ ದೇವೇಂದ್ರನ ವೃಷಣಗಳು ಬಿದ್ದು ಹೋಗಲಾಗಿ ಅವನು ಪುರುಷತ್ವಹೀನನಾದನು. ದೇವಲೋಕವೇ ದುಃಖದಲ್ಲಿ ಮುಳುಗಿತು. ಋಷಿ ಮುನಿಗಳು, ದೇವತೆಗಳು, ಸಕಲ ದೇವಲೋಕವೇ ದೇವೇಂದ್ರನ ದುಃಖದ ಪರಿಸ್ಥಿತಿಯನ್ನು ನೋಡಿ ಬಹಳವಾಗಿ ಮರುಗಿದರು. ಆಗ ಪರಿಹಾರ ಕಂಡು ಹಿಡಿಯುತ್ತಿರುವಲ್ಲಿ ಒಂದು ಸೂಚನೆಯು ಬಂದಿತು. ಮೇಷದ ವೃಷಣವನ್ನು ತಂದು ಅಂಟಿಸಿದರೆ ದೇವೇಂದ್ರನು ಮೊದಲಿನ ಹಾಗಾಗುವನು ಎಂದು ಪರಿಹಾರ ಕಂಡುಹಿಡಿದರು. ಋಷಿಗಳು ಹಾಗೆಯೇ ಆಗಲಿ ಎಂದು ಯಾಗಮಾಡಿ ಸಕಲ ಸೂಕ್ತರೀತಿಯಲ್ಲಿ ಪರಮಾತ್ಮನ ಅನುಗ್ರಹವನ್ನು ಬೇಡಿ ಯಜ್ಞಪಶುವಾದ ಮೇಷದ ವೃಷಣವನ್ನು ತೆಗೆದು ಅದನ್ನು ವಿಧಿವತ್ತಾಗಿ ದೇವೇಂದ್ರನಿಗೆ ಅಂಟಿಸಿದರು. ಆಗ ಅವನು ಮೊದಲಿನಂತೆ ''ಪುರುಷತ್ವ'' ಪಡೆದನು. ಹೀಗಾಗಿ ಅವನಿಗೆ ''ಮೇಷ ವೃಷಣ''ನೆಂದೇ ಹೆಸರಿಸಿ ಅದೇ ಹೆಸರಿನಿಂದ ದೇವೇಂದ್ರನನ್ನು ಪೂಜಿಸಿದರು. ಹೀಗೆ ಪೂಜಾ ಯೋಗ್ಯವಾದ ಮೇಷವೇ ಪರಮಾತ್ಮನ ರೂಪವೆಂದು ಪೂಜಿಸಿದರು. ಅದರಿಂದ ಭಗವಂತನಿಗೆ ಮೇಷಾಯ ನಮಃ ಎಂದೂ ಹೆಸರಾಯಿತು.

ಸೌರಮಾನ ದ್ವಾದಶಮಾಸಗಳಲ್ಲಿ ಮೇಷ ಮಾಸವೇ ಮೊದಲನೆಯದು.

27 ನಕ್ಷತ್ರಗಳನ್ನು 12 ತಿಂಗಳು - 12 ರಾಶಿಗಳಲ್ಲಿ ವಿಂಗಡಿಸಿದ್ದಾರೆ. ಪ್ರತಿ ನಕ್ಷತ್ರಕ್ಕೂ 4 ಪಾದಗಳು. ಒಂಬತ್ತು ಒಂಭತ್ತು ಪಾದಗಳಿಗೆ ಒಂದೊಂದು ರಾಶಿಯಾಗಿ ಮಾಡಿ 12 ರಾಶಿಗಳನ್ನು ವಿಂಗಡಿಸಿದ್ದಾರೆ. ಅದರಲ್ಲಿ ಮೇಷ ರಾಶಿಯೇ ಮೊದಲನೆಯದು. ಈ ರಾಶಿಯಲ್ಲಿ ಅಶ್ವಿನಿಯ 4 ಪಾದಗಳು ಭರಣಿಯ 4 ಪಾದಗಳು, ಕೃತ್ತಿಕೆಯ ಒಂದು ಪಾದವು ಸೇರಿ 9 ಪಾದಗಳು ಬರುತ್ತವೆ. ಇದಾಗಿ ಕೃತ್ತಿಕೆಯ ತ್ರಿಪಾದಿ ನಕ್ಷತ್ರವೆಂದು ಪರಿಗಣಿಸಲ್ಪಡುತ್ತದೆ. ರಾಶ್ಯಾಧಿಪತಿಯು ಕುಜನು, ಅದರಿಂದ ಕುಜನಿಗೆ ನಮಸ್ಕಾರವೆಂದಾಯಿತು.

ಕುಜನು ನವಗ್ರಹಗಳಲ್ಲಿ ಒಬ್ಬನು. ಪರಮಾತ್ಮನು ಗ್ರಹರೂಪಿಯಾಗಿ ಭೂಮಂಡಲದ ಸಕಲ ಜೀವಿಗಳ ಆಗು ಹೋಗುಗಳನ್ನೂ ನಡೆಸುತ್ತಾನೆ. ಒಂದರಿಂದ ಒಂದಕ್ಕೆ ಸಂಬಂಧವಿದ್ದೇ ಇರುತ್ತದೆ. ಅದರಿಂದ ಮೇಷಾಯ ನಮಃ ಎಂದರೆ ಮೇಷ ವೃಷಣನಾದ ಇಂದ್ರನಿಗೆ, ಮಾಸಗಳ ಮೊದಲನೆಯದಾದ ಮೇಷಮಾಸಕ್ಕೆ, ದ್ವಾದಶ ರಾಶಿಗಳಲ್ಲಿ ಮೊದಲನೆಯದಾದ ಮೇಷ ರಾಶಿಗೆ, ಮೇಷರಾಶ್ಯಾಧಿಪತಿಯಾದ ನವಗ್ರಹಗಳಲ್ಲೊಬ್ಬನಾದ ಕುಜನಿಗೆ ನಮಸ್ಕರಿಸಿದಂತಾಗಿ ಈ ಎಲ್ಲರಿಂದಲೂ ಅನುಗ್ರಹವನ್ನು ಪಡೆಯುವ ಅವಕಾಶ ಒದಗಿ ಬಂತು ಎಂದಾಯಿತು.

ತನ್ನ ದೇಹದ ಪ್ರಜೋತ್ಪತ್ತಿಗೆ ಕಾರಣವಾದ ಒಂದು ಭಾಗವಾದ ವೃಷಣವೂ ದೇವೇಂದ್ರನಿಗೆ ಪುರುಷತ್ವವನ್ನು ನೀಡಿದ್ದರಿಂದ ಟಗರಿಗೆ ಜೀವ ಕೋಟಿಯಲ್ಲೆಲ್ಲಾ ಅಪೂರ್ವವಾದ ಸನ್ಮಾನ್ಯಸ್ಥಾನವು ದೊರಕಿತು. ಅಂದಮೇಲೆ ಆ ಟಗರಿನ ಪುಣ್ಯವೆಷ್ಟು? ಅದೆಷ್ಟು ಸಂಸ್ಕಾರದ್ದಾಗಿರಬೇಕು! ಅದರಿಂದ ಸಕಲ ಸೃಷ್ಟಿಗೇನೇ ಸಮಾಧಾನವಾಯಿತು. ಹೀಗೆ ಈ ಟಗರು ಬೇರೆ ಅಲ್ಲ, ಪರಮಾತ್ಮನು ಬೇರೆ ಅಲ್ಲ. ಟಗರೇ ಪರಮಾತ್ಮ. ಪರಮಾತ್ಮನೇ ಟಗರು. ಅಂದ ಮೇಲೆ ಪರಮಾತ್ಮ ಸ್ವರೂಪಿಯಾದ ಮೇಶನಿಗೆ (ಮೇಷನಿಗೆ) ನಮಸ್ಕಾರಗಳು.

44. ಮಹಾವೀರ್ಯಾಯ ನಮಃ

336ನೇಯ ನಾಮವೂ ಇದೇನೇ - ಮಹಾವೀರ್ಯಾಯ ನಮಃ ''ಮೇಷಾಯ ನಮಃ'' ನಾಮದ ನಂತರ ಬಂದಿರುವುದರಿಂದ ಈ ನಾಮವು ಆ ಮೇಷ ವೃಷಣದ ಪುರುಷತ್ವವನ್ನು ಶ್ಲಾಘಿಸುತ್ತದೆ. ಅದು ಪರಮಾತ್ಮನ ಸೃಷ್ಟಿಯಲ್ಲಿ ಮಹತ್ತಾದ ಶಕ್ತಿಯನ್ನು ಪಡೆದಿದ್ದರಿಂದ ದೇವೇಂದ್ರನಿಗೆ ಸಹಾಯಕವಾಯಿತು. ಇದನ್ನು ಪಡೆದ ದೇವೇಂದ್ರನು ಮಹಾವೀರ್ಯನಾದನು. ಒಂದರಿಂದ ಒಂದಕ್ಕೆ ಅನ್ಯೋನ್ಯ ಸಹಾಯವಾಗಿ ಎರಡೂ ಅಂದರೆ ದೇವೇಂದ್ರನೂ ವೃಷಣವೂ ಮಹತ್ವವನ್ನು ಪಡೆದರು. ದೇವೇಂದ್ರನೂ ದೇವ ಪೂಜ್ಯನೂ ದೇವಲೋಕಾಧಿಪತಿಯೂ ಮಹಾವೀರ್ಯನೇ ಆದನು.

ದೇವೇಂದ್ರನು ಸಕಲ ದೇವಲೋಕಕ್ಕೆ ಅಷ್ಟದಿಗ್ಪಾಲಕರಿಗೆ ಪ್ರಭುವು, ಅವನೇ ಪರಮಾತ್ಮನ ಸ್ವರೂಪ, ಅದಕ್ಕಾಗಿಯೇ ಅವನು ಮಹಾತೇಜಸ್ವಿಯಾಗಿ ಪ್ರಕಾಶಿಸಿದನು. ಅವನೇ ಪರಮಾತ್ಮ - ''ಮಹಾವೀರ್ಯಾಯ ನಮಃ'' ಎಂದಾಗಿದ್ದಾನೆ.

*ಮಹಾಬೀಜಾಯ ಬೀಜಾಯ ತೇಜೋಧಾಮ್ನೇ ವಿಭೂತಯೇ ।*
*ತೇಜೋಮಯನೃಸಿಂಹಾಯ ನಮಸ್ತೇ ತೇಜಸಾಂ ನಿಧೇ ॥57॥*

*(345-350)*

45. ಮಹಾಬೀಜಾಯ ನಮಃ

ಬೀಜ ಎಂದರೆ ಸಾಮಾನ್ಯವಾಗಿ ಧಾನ್ಯ, ಕಾಳು, ಗಿಡ, ವೃಕ್ಷಗಳು ಬೆಳೆಯಲು ಭೂಮಿಯಲ್ಲಿ ಹಾಕುವ ಬೀಜಗಳು ಎಂದು ಅರ್ಥಮಾಡುತ್ತೇವೆ.

ಇನ್ನೂ ಸ್ವಲ್ಪ ಮೇಲೆ ಹೋದರೆ - (ಯೋಚನಾಲಹರಿ ಮೇಲೆ ಹೋದರೆ) ಬೀಜ ಎಂದರೆ - ಮೂಲ ಕಾರಣ ರೂಪದ್ದು, ಉತ್ಪತ್ತಿಗೆ ಬೇಕಾದ ವಸ್ತು, ಉಗಮ ಸ್ಥಾನ, ಯೋನಿಯಲ್ಲಿ ಇಡತಕ್ಕ ವಸ್ತು (ಪುರುಷ ರೂಪದಿಂದ ಇಡುವ ವೀರ್ಯ).

''ಬೀಜ - ವೃಕ್ಷ ನ್ಯಾಯ'' ಎಂಬಂತೆ ಯಾವುದು ಮೊದಲು ಬಂತು ಎಂದು ಚಿಂತಿಸುವಾಗ ಬೀಜವೇ ಮೊದಲು ಇತ್ತೆಂದೂ ಅದನ್ನು ಬಿತ್ತಿರುವುದರಿಂದ ಮೊಳಕೆಯು ಬಂದು, ಗಿಡವಾಗಿ ನಂತರ ವೃಕ್ಷವು ಆಗಿ ಅದರಿಂದ ಬೀಜಗಳು ಬಂದವೆಂದು ಒಂದು ರೀತಿಯ ಯೋಚನಾ ತರಂಗ. ಆದರೆ ವೃಕ್ಷದಿಂದ ಬೀಜವಾದ್ದರಿಂದ ವೃಕ್ಷವೇ ಮೊದಲಿತ್ತೆಂದು ಇನ್ನೊಂದು ಯೋಚನಾ ತರಂಗ. ಆದರೆ ಸೃಷ್ಟಿಯ ಮೊದಲಲ್ಲಿ ಭಗವಂತನು ಮತ್ಸ್ಯಾವತಾರ ತಳೆದಾಗ, ಎಲ್ಲೆಲ್ಲೂ ಕತ್ತಲೆ ಪ್ರಸರಿಸಿದ್ದಾಗ, ತನ್ನ ಕೊಂಬಿಗೆ ಒಂದು ನಾವೆಯನ್ನು ಕಟ್ಟಿಕೊಂಡು ಅಂಧಕಾರದಿಂದ ಹೊರಗೆ ತಂದನು. ಆ ನಾವೆಯಲ್ಲಿ ಒಬ್ಬ ರಾಜರ್ಷಿಯು ತರುಲತೆಗಳನ್ನು ಔಷಧಿಗಳನ್ನು ಸಂಗ್ರಹಿಸಿ ಹತ್ತಲು ಭಗವಂತನೇ ಹೇಳಿದ್ದನು. ಈ ತರುಲತೆಗಳನ್ನು ಔಷಧಿಗಳನ್ನೂ ಬೀಜವನ್ನಾಗಿ ಉಪಯೋಗಿಸಿ ಸೃಷ್ಟಿಮಾಡಲು ಸಹಾಯಕ್ಕಾಗಿ ತರಲಾಯಿತು. ಅದರಿಂದ ಬೀಜವೇ ಮೊದಲಿತ್ತೆಂದು ಮೇಲಿನ ಯೋಚನಾ ತರಂಗಗಳಲ್ಲಿರುವ ಸಂಶಯವನ್ನು ನಿವಾರಿಸಬಹುದು.

ಪರಮಾತ್ಮನು ''ಮಮಯೋನಿರ್ಮಹದ್ಬ್ರಹ್ಮ ತಸ್ಮಿನ್ಗರ್ಭಂ ದದಾಮ್ಯಹಂ'' ಎಂದು ಗೀತೆಯಲ್ಲಿ ಹೇಳಿದ್ದಾನೆ. (ಅಧ್ಯಾಯ 14 ಶ್ಲೋಕ 3)

ಈ ಬೀಜಗಳನ್ನು ಅವನೇ ಇಡುವುದರಿಂದ ಈ ಬೀಜಗಳು ಮಹಾಮಹಿಮವಾದವು ಮತ್ತು ಮಹಾಬೀಜಗಳೆಂದು ತಿಳಿಯಬಹುದು. ಈ ಕಾರ್ಯವನ್ನು ಸಾಕ್ಷಾತ್ ಪರಮಾತ್ಮನೇ ಮಾಡುವುದರಿಂದ ಅವನೇ ''ಮಹಾಬೀಜನು - ಮಹಾಬೀಜಗಳಿಗೆ ಮಹಾಬೀಜನು'' - ಅದರಿಂದ ಅವನಿಗೆ ''ಮಹಾಬೀಜಾಯ ನಮಃ'' ಎಂದು ನಮಸ್ಕರಿಸುವುದು ಸಮಂಜಸ.

ಪ್ರಕೃತಿ, ಪುರುಷ ಮತ್ತು ಮಾಯೆಗಳನ್ನು ವಿಭಾಗಿಸಿ ಪ್ರಪಂಚದಲ್ಲಿ ಪಂಚಭೂತಗಳನ್ನು ಇಂದ್ರಿಯಗಳನ್ನು, ಮನೋ ಬುದ್ಧಿ ಅಹಂಕಾರ ಚಿತ್ತ, ಪ್ರಾಣಾಪಾನವ್ಯಾನೋದಾನ ಸಮಾನ ಪಂಚಪ್ರಾಣಗಳನ್ನು ಸೃಷ್ಟಿಸಿ ಬ್ರಹ್ಮದೇವನನ್ನು ನಿರ್ಮಿಸಿ ಈ ಎಲ್ಲವನ್ನು ನಿರಂತರ ನಡೆಸುತ್ತಿರುವ ಅವನೇ ಮತ್ತು ಅವನ ಸಂಕಲ್ಪಗಳೇ ಮಹತ್ತಾದವುಗಳು ಮತ್ತು ಅವೇ ಮಹಾಬೀಜಗಳು. ಅವನೇ

ಮಹಾಬೀಜನು. ಸೃಷ್ಟಿಯ ಎಲ್ಲಾ ಜೀವಕೋಟಿಗಳಿಗೂ ಸಚರಾಚರ ವಸ್ತುಗಳಿಗೂ ಅವನೇ ಉಗಮಸ್ಥಾನ, ಆದಿಸ್ಥಾನ, ಅಂತಸ್ಥಾನ, ಮಧ್ಯಸ್ಥಾನ ಎಲ್ಲವೂ ಅವನೇ - ಮೂಲಸ್ಥಾನವೂ ಅವನೇ. ಅವನನ್ನು ಬಿಟ್ಟು ಯಾರೂ ಅಲ್ಲಿಲ್ಲ. ನಾವೂ ಅವನೇ! ಸಕಲ ಜೀವಕೋಟಿಯೂ ಅವನೇ! ಕಾರಣ ಸಕಲ ಆತ್ಮಗಳೂ ಅವನಿಂದಲೇ ಬಂದವುಗಳು ಮತ್ತು ಅವನಲ್ಲಿಯೇ ಲೀನವಾಗುತ್ತವೆ ಎಂದ ಮೇಲೆ ಅವನು ಅಪ್ರತಿಮ, ಅಸಮನಾದ ಮಹಾಬೀಜನು. ಸರ್ವರೀತಿಯಲ್ಲೂ ಸರ್ವಆತ್ಮಗಳಿಂದಲೂ ವಂದ್ಯನು.

ಸರ್ವಜೀವಕೋಟಿಯ ಯೋನಿಗಳಲ್ಲಿ ಬೀಜಗಳನ್ನಿಡುವವನು ಅವನೇ. ಪ್ರಜಾವೃದ್ಧಿಗೂ ಪ್ರಪಂಚವು ನಿರಂತರ ನಡೆಯುವುದಕ್ಕೂ ಅವನೇ ಕಾರಣ. ಬೀಜಗಳಿಗೆಲ್ಲಾ ಕಾರಣಭೂತನು ಅವನೇ ಅವುಗಳಿಗೆಲ್ಲಾ ಮಹಾಬೀಜನು ಅವನೇ! ಎಷ್ಟು ಹೇಳಿದರೂ ವಿಮರ್ಶಿಸಿದರೂ ನಾವು ಅವನನ್ನೇ ಕಾರಣಮಾಡಿ ಹೇಳುತ್ತೇವೆ. ಬೀಜಾಧ್ಯಕ್ಷನು, ಮಹಾಮಹಿಮನಾದ ಮಹಾಬೀಜನು ಅವನೇ!!

.6. ಬೀಜಾಯ ನಮಃ

ಈ ಅಖಿಲಾಂಡ ಕೋಟಿ ಬ್ರಹ್ಮಾಂಡಗಳ ಸೃಷ್ಟಿಗೆ ಬೇಕಾದ್ದು ಅವನ ಸಂಕಲ್ಪ ಮಾತ್ರ. ಪರಮಾತ್ಮನ ಮನೋಕಾಮನೆಯ ಸಂಕಲ್ಪವೇ ಬೃಹದಾಕಾರವಾಗಿ ಬೆಳೆದ ಬ್ರಹ್ಮಾಂಡ. ಇದರಲ್ಲಿ ಬೇರೆ ಯಾರ ಪಾತ್ರವೂ ಇಲ್ಲ. ಅವನು ಅದ್ವಿತೀಯನು. ಏಕಮೇವಾದ್ವಿತಿಯನು ಅವನು ಒಬ್ಬನೇ! ಅವನ ಸಂಕಲ್ಪವೇ ಬೀಜ ಅದರಿಂದ ಬೀಜಾಯ ನಮಃ.

ಮಹಾಬೀಜಾಯ ಬೀಜಾಯ ಎಂದರೆ ಬೀಜಗಳಿಗೆ ಬೀಜನು ಮಹಾಬೀಜನು - ಕೊನೆಯಲ್ಲಿ ಅಂದರೆ ಎಲ್ಲಕ್ಕೂ ಮೊದಲಲ್ಲಿದ್ದವನು ಅವನೊಬ್ಬನೇ ಅವನೇ ಬೀಜಸ್ವರೂಪನು. ''ಬೀಜಂ ಮಾಂ ವಿದ್ಧಿ ಪಾರ್ಥ ಸನಾತನಮ್'' ಎಂದು ಗೀತೆಯಲ್ಲಿ ಹೇಳಿದೆ. (ಅ. 7 ಶ್ಲೋಕ 10)

ಸಕಲ ಕಾಮನೆಗಳಿಗೂ ಅವನೇ ಕರ್ತೃ. ಅವನೇ ಕಾರಣನು. ಅವನ ಮನಸ್ಸೇ ಮಹಾಯೋನಿ - ಅವನ ಕಾಮನೆಯೇ ಮಹಾ ಏಕೈಕ ಬೀಜ - ಇವೇ ಸರ್ವಕ್ಕೂ ಮೂಲ. ಹೇ ಮಹಾಬೀಜನೇ! ನಿನಗೆ ಶರಣು, ನಿನಗೆ ಶರಣು ಶರಣು ಶರಣು! ಸಂಪೂರ್ಣವಾಗಿ ಶರಣಾಗಿದ್ದೇವೆ! ಅನಾಥ ರಕ್ಷಕ, ಕಾಪಾಡು, ನಮೋನ್ನಮಃ.

ಮಹಾಬೀಜಾಯ ತೇ ನಮಃ.

ನಮ್ಮ ಮನಸ್ಸೆಂಬ ಆಕಾಶದಲ್ಲಿ ಬುದ್ಧಿಯ ಸಹಾಯದಿಂದ ಯೋಚನೆಗಳು ಅಲೆ ಅಲೆಯಾಗಿ ಭ್ರಮಿಸುತ್ತಿರುತ್ತವೆ. ಆ ಯೋಚನೆಗಳು ಆಕಾಶದಲ್ಲಿ ನಕ್ಷತ್ರಗಳಂತೆ ಭ್ರಮಿಸುತ್ತಿರುತ್ತವೆ. ಬುದ್ಧಿಯ ಸಹಾಯದಿಂದ ಯಾವುದಾದರೂ

ಹಳೆಯ ಘಟನೆ ಬೇಕೆಂದರೆ ಕ್ಷಣಮಾತ್ರದಲ್ಲಿ ಮತ್ತೆ (ಎಷ್ಟೇ ಹಿಂದಿನದಾದರೂ ಪರವಾಗಿಲ್ಲ) ಮನಃಪಟದಲ್ಲಿ ಚಿತ್ರಣವಾಗುತ್ತವೆ. ಹಾಗೆಯೇ ಹೊರಟು ಹೋಗುತ್ತವೆ. ಆದರೆ ಇದೇ ರೀತಿ ಹೊಸ ಹೊಸ ಸಂಕಲ್ಪಗಳು ಹುಟ್ಟುತ್ತವೆ. ಪ್ರಕಟವಾದ ಕ್ಷಣದಲ್ಲಿ ಮತ್ತೊಂದು ಸಂಕಲ್ಪವು ಮುಂದೆ ಬಂದು, ಈಗ ಬಂದಿರುವ ಸಂಕಲ್ಪವನ್ನು ಓಡಿಸುತ್ತದೆ. ಇದು ನಮ್ಮ ಮನಸ್ಸೆಂಬ ಆಕಾಶದಲ್ಲಿ ನಿರಂತರವಾಗಿ ನಡೆಯುತ್ತಿರುತ್ತದೆ. ಇದೊಂದು ನಮ್ಮ ಮನಸ್ಸು ಬುದ್ಧಿ ಅಹಂಕಾರ ಚಿತ್ತ, ಇಂದ್ರಿಯಗಳು, ಆತ್ಮಗಳ ಸಮೂಹದಲ್ಲಿ ಪರಮಾತ್ಮನು ಇಟ್ಟಿರುವ ಶಕ್ತಿ. ಈ ಶಕ್ತಿ ಸ್ವರೂಪನಾದ ಪರಮಾತ್ಮನ ಅಂಶವೇ ಬೀಜ. ಬೀಜಶಕ್ತಿಯು ಪ್ರಾರಂಭದಿಂದ ಅಂದರೆ ಆತ್ಮವು ಪರಮಾತ್ಮನಿಂದ ಹೊರಬಂದಾಗಿನಿಂದ ಮತ್ತೆ ಪರಮಾತ್ಮನಲ್ಲಿ ಲೀನವಾಗುವವರೆಗೆ ನಡೆಯುವ ಕಾರ್ಯವೆಂದರೆ ಇದೇ. ಈ ಕಾರಣ ಸೂಕ್ಷ್ಮ ಶರೀರ ಮಾತ್ರ ದೇಹದಿಂದ ದೇಹಕ್ಕೆ ಮುನ್ನಡೆಯುತ್ತದೆ. ತನ್ನ ನೆಲೆಯನ್ನು ಹುಡುಕಿಕೊಂಡು ಭ್ರಮಿಸುತ್ತದೆ. ಪರಮಾತ್ಮನಿಂದ ಬೀಜಶಕ್ತಿಯಾದ ಆತ್ಮವು ಸಂಸ್ಕಾರದಿಂದ ಕೂಡಿ ತನ್ನ ಕರ್ಮಗಳನ್ನು ವೃದ್ಧಿಪಡಿಸಿಕೊಂಡು ಪರಮಾತ್ಮನ ಸಾಕ್ಷಾತ್ಕಾರಕ್ಕೆ ಹಾತೊರೆಯುತ್ತಿರುತ್ತದೆ. ಬೀಜವು ಮತ್ತೆ ವೃಕ್ಷವಾಗದೆ ಪರಿಪಕ್ವತೆಯನ್ನು ಪಡೆದು ಪರಮಾತ್ಮನಲ್ಲಿ ಲೀನವಾಗುವ ದಾರಿಯೇ ಪರಮಾತ್ಮನ ಪೂಜೆ, ಭಜನೆ, ಧ್ಯಾನ, ಜಪ ಇವುಗಳಲ್ಲಿ ಜಪವೇ ಮೇಲ್ಮಟ್ಟದ್ದು. ಈ ನಾಲ್ಕೂ ಬೇಕು, ಕ್ರಮೇಣ ಒಂದಾದ ಮೇಲೊಂದು ನಮ್ಮ ಮನದಲ್ಲಿ ಪಕ್ವವಾದಾಗ ಮುಂದಿನದು ತಾನಾಗಿಯೋ ಅಥವಾ ಪರಮಾತ್ಮ ಕೃಪೆಯಿಂದ ಯಾವಾಗಲೋ ಗುರುಮುಖೇನ ಉಪದೇಶವಾಗಿ ಸಾಕ್ಷಾತ್ಕಾರಕ್ಕೆ ದಾರಿಯಾಗುತ್ತದೆ. ಗುರುವು ತಾನಾಗಿಯೇ ಬರಬಹುದು. ಅಥವಾ ನಾವೇ ಅವನನ್ನು ಸಂಧಿಸಬಹುದು. ಎರಡೂ ಒಂದೇ. ಪರಮಾತ್ಮನ ಕೃಪೆ, ಗುರುಕೃಪೆ ಬಯಸಿದರೆ ಬರುವುದಿಲ್ಲ. ಅದಕ್ಕೆ ನಮ್ಮ ಶ್ರದ್ಧೆ, ಅನನ್ಯ ಭಕ್ತಿ, ಅವ್ಯಭಿಚಾರಿಣಿ ಭಕ್ತಿ ಅಂಕುರವಾಗಬೇಕು. ಈ ರೀತಿ ಬೀಜವು ಮತ್ತೆ ಉಗಮ ಸ್ಥಾನವನ್ನು ಸೇರುವುದೇ ಗುರಿ - ಬೀಜಾಯ ನಮಃ. ಅದೇ ಅವನ ಕೃಪೆ ಅದೇ ಪ್ರತಿಜೀವಿಯೂ ಬೇಡುವುದು ಕಾಡುವುದು ಬರಿಸಿಕೊಳ್ಳಲು ಹಾತೊರೆಯುವುದು!! ಓಂ ನಮೋ ಬೀಜಾಯ ನಮಃ.

### 47. ತೇಜೋಧಾಮ್ನೇ ನಮಃ

ಧಾಮ - ವಾಸಸ್ಥಾನ, ತೇಜೋಧಾಮ - ತೇಜಸ್ಸು ಅಂದರೆ ಪ್ರಕಾಶ, ಶಕ್ತಿ, ವೀರ್ಯ, ಅಗ್ನಿ, ತಪಶ್ಶಕ್ತಿಯ ಲಕ್ಷಣ - ತೇಜಸ್ಸು. ಇವುಗಳ ವಾಸಸ್ಥಾನ - ಪರಮಾತ್ಮ. ಮೂಲತಃ ಎಲ್ಲವೂ ಅವನಿಂದಲೇ ಬಂದಿರುವುದರಿಂದ ಇವೆಲ್ಲಕ್ಕೂ ಅವನೇ ವಾಸಸ್ಥಾನ - ಅವನ ಉದರವೇ ತೇಜಸ್ಸಿನ ವಾಸಸ್ಥಾನ. ಇದೇ ಪರಂಧಾಮ. ಶ್ರೇಷ್ಠವಾದ ಇನ್ನೊಂದು ಸ್ಥಾನವಿಲ್ಲ.

ಎಲ್ಲ ರೀತಿಯ ತೇಜಸ್ಸುಗಳು, ಸಂಪೂರ್ಣವಾಗಿ ಆದಿಯಲ್ಲಿ ಪರಮಾತ್ಮನಲ್ಲಿ ನೆಲಸಿವೆ. ಪಂಚಭೂತಗಳ ಸೃಷ್ಟಿಯಾದಾಗ ಎಲ್ಲ ತೇಜಸ್ಸುಗಳು ಅಗ್ನಿಯ ರೂಪದಲ್ಲಿ ಪ್ರಕಟವಾದವು. ಪಂಚಭೂತಗಳ ಸರಣಿಯಲ್ಲಿ ಆಕಾಶಾದ್ವಾಯುಃ, ವಾಯೋರಗ್ನಿಃ, ಅಗ್ನೇರಾಪಃ, ಆಪಃ ಪೃಥಿವಿ ಎಂದು ಅಗ್ನಿಯು ಮಧ್ಯಮದಲ್ಲಿ ಬಂದಿದೆ. ಅಗ್ನಿಯೇ ತೇಜಸ್ಸು.

ಪ್ರತಿ ಜೀವಿಯಲ್ಲಿಯೂ ಅಗ್ನಿಯು ಅಂಶಮಾತ್ರದಲ್ಲಿ ಇರುತ್ತಾನೆ. ಇದಿಲ್ಲದೇ ಜೀವಕೋಟಿಯು ಮತ್ತು ಚರಾಚರ ಜಗತ್ತು ಅಸ್ಥಿತ್ವದಲ್ಲಿರಲು ಸಾಧ್ಯವಿಲ್ಲ.

ಜೀವಕೋಟಿಯ ಆತ್ಮ ಸ್ವರೂಪವೂ ತೇಜಸ್ಸೇ. ಇವುಗಳಿಗೂ ಪರಮಾತ್ಮನೇ ಆಶ್ರಯ ಸ್ಥಾನ. ಪರಮಾತ್ಮನಿಲ್ಲದೆ ಆತ್ಮಗಳು ಇರಲು ಸಾಧ್ಯವಿಲ್ಲ. ಅವು ಪರಮಾತ್ಮನಿಂದ ಬಂದು ಅಲ್ಲಿಯೇ ತೇಜಸ್ಸುಗಳೊಡನೆ ಸೇರುತ್ತವೆ. - ಅದರಿಂದ ಪರಮಾತ್ಮನೇ ತೇಜೋಧಾಮ್ನನು - ತೇಜೋಧಾಮ್ನೇ ನಮಃ.

.8. ವಿಭೂತಯೇ ನಮಃ

ವಿಭೂತಿ - ಭಸ್ಮ, ಅತಿ ಮಾನುಷ ಶಕ್ತಿ, ಅಲೌಕಿಕ ಶಕ್ತಿ.

ಯಜ್ಞ ಯಾಗಾದಿಗಳಲ್ಲಿ ಯಜ್ಞಕುಂಡದಲ್ಲಿ ಯಾಗದ ನಂತರ ಅಗ್ನಿಯೂ ಆರಿದ ನಂತರ ದೊರಕುವ ಭಸ್ಮ. ಇದು ಬಹಳ ಶ್ರೇಷ್ಠವಾದ ಯಜ್ಞಪ್ರಸಾದ. ಇದನ್ನು ದೇಹದ ಮೇಲೆ ಧರಿಸಿದರೆ ಬಹಳ ಶ್ರೇಯಸ್ಸಾಗುತ್ತದೆ. ಅದೂ ಹಣೆಯಮೇಲೆ ಭ್ರೂಮಧ್ಯದಲ್ಲಿ ಹಚ್ಚಿಕೊಂಡರೆ ಮಹತ್ತದ್ದಾಗುತ್ತದೆ. ಶಿರವೇ ದೇಹದಲ್ಲಿ ಉತ್ತಮವಾದ ಭಾಗ, ಶಿರಸಿನಲ್ಲಿ ಕಣ್ಣುಗಳು, ಕಿವಿಗಳು, ನಾಸಿಕ, ಬಾಯಿಗಳು ಅಡಗಿವೆ. ಈ ಇಂದ್ರಿಯಗಳು ಕ್ರಮವಾಗಿ ಚಕ್ಷು, ಶ್ರೋತೃ, ಪ್ರಾಣ (ನಾಸಿಕ), ಜಿಹ್ವಾತ್ವಕ್ ಇಂದ್ರಿಯಗಳು. ಅವುಗಳ ಅಧಿದೇವತೆಗಳು ವಾಸವಾಗಿರುವುದರಿಂದ ಅವುಗಳನ್ನೂ ಪೂಜಿಸಿದಂತಾಗುತ್ತದೆ. ಮತ್ತು ಭ್ರೂಮಧ್ಯದಲ್ಲಿ (ಹುಬ್ಬುಗಳು ಮತ್ತು ಮೂಗಿನ ಮೇಲ್ಭಾಗ ಸೇರುವ ಜಾಗ) ಪರಮಾತ್ಮನ ಅಂಶವು ನಿರಂತರವಾಗಿ ವಾಸವಾಗಿರುವುದರಿಂದ ಅದನ್ನು ಪೂಜಿಸಿದಂತಾಗುತ್ತದೆ. ಅರಿಸಿನ, ಕುಂಕುಮ, ಭಸ್ಮಗಳಲ್ಲಿ ಎಲ್ಲವೂ ಶ್ರೇಷ್ಠವೇ. ಅದನ್ನು ಇಲ್ಲಿ ಹಚ್ಚಿದಾಗ ದೇವ, ದೇವಿಯರನ್ನು ಪೂಜಿಸಿದಂತಾಗುತ್ತದೆ. ಪೂಜಿಸಲ್ಪಟ್ಟ ಪರಮಾತ್ಮನ ಅಂಶವೂ ವಿಭೂತಿಯಾಗಿ ಶ್ರೇಯಸ್ಸನ್ನು ದಯಪಾಲಿಸುತ್ತದೆ. ಅಂದರೆ ವಿಭೂತಯೇ ನಮಃ.

ವಿಭೂತಿ - ಎಂದರೆ ಪರಮಾತ್ಮನ ರೂಪಗಳು. ಪ್ರಪಂಚದಲ್ಲಿ ಕಾಣುವ ಎಲ್ಲ ವಸ್ತುಗಳೂ ಪರಮಾತ್ಮನ ಆತ್ಮಗಳಿಂದ ಬಂದ ರೂಪಗಳು. ಪ್ರತಿರೂಪದಲ್ಲಿಯೂ ಆತ್ಮವನ್ನೇ ಉದ್ದೇಶಿಸಿ ನಾವು ನೋಡಿದಾಗ ನಾವು ಅದನ್ನೇ ನೋಡಿ ವಿಶೇಷ ಗುಣವನ್ನೂ ತೇಜಸ್ಸನ್ನೂ ಕಾಣುತ್ತೇವೆ. ಸರ್ವರೂ ಎಂತಹ ಸ್ಥಿತಿಯಲ್ಲಿಯೇ ಆ ದೇಹವಿದ್ದರೂ ಅದರಲ್ಲಿರುವ ಆತ್ಮವು

ಪ್ರಕಾಶಮಾನವಾಗಿ ಶಕ್ತಿಯನ್ನು ಕೊಟ್ಟು ಅದನ್ನು ಹುರಿದುಂಬಿಸುತ್ತಿರುತ್ತದೆ. ಇತರರು ಹೇಗೆ ನೋಡಲಿ, ಏನೇ ಭಾವಿಸಲಿ, ಅದರ ಪರಿವೆಯಿಲ್ಲದೆ ಆ ದೇಹದಲ್ಲಿರುವ ದೇಹಿಯು ತಾನೇ ತಾನಾಗಿ ನಿರಂತರ ಶಾಂತಿಯನ್ನು ಪಡೆದಿರುತ್ತಾನೆ. ಆದರೆ ದೇಹವು ಬೇರೆ ಯಾವುದೋ ಭಾವನೆಯನ್ನು ಅನುಭವಿಸುತ್ತಿರುತ್ತದೆ. ಇತರರ ಭಾವನೆಗೆ ಸಂಪರ್ಕ ಹೊಂದಿದಾಗ ಮಾತ್ರ ಪ್ರತಿಕ್ರಿಯಿಸಿ ಸುಖ ದುಃಖ, ಲಾಭ ನಷ್ಟ ಮುಂತಾದ ದ್ವಂದ್ವಗಳನ್ನು ಅನುಭವಿಸುತ್ತದೆ. ಅದರಿಂದ ಮತ್ತೆ ಈ ಸಂಸಾರ ಸಾಗರದಲ್ಲಿ ಮುಳುಗಲು, ತೇಲಲು ಪ್ರಾರಂಭಿಸುತ್ತದೆ. ನಂತರ ಅದು ಎಲ್ಲಿಗೋ ಹೋಗುತ್ತದೆ. ತನ್ನ ಇದ್ದ ಶಾಂತಿಯಿಂದ, ಅಂದರೆ ತನ್ನ ಪರಮ ಗುರಿಯಾದ ಪರಮಾತ್ಮನನ್ನು ಸೇರುವ ದಾರಿಯಿಂದ ಬಹುದೂರ ಎಳೆಯಲ್ಪಡುತ್ತದೆ. ಆದರಿಂದ ಇದನ್ನು ತಪ್ಪಿಸಲು ದೇಹ, ಆತ್ಮಗಳು ಸಂಸಾರದಲ್ಲಿದ್ದಾಗ ಅಂಟಿಯೂ ಅಂಟದಂತೆ ಸಂಬಂಧ ಕಲ್ಪಿಸಿಕೊಂಡರೂ ಅದು ಇಲ್ಲದಂತೆ ಭಾವಿಸಿ ತಮ್ಮ ದಾರಿಯನ್ನು ಹಿಡಿದಿರುವುದೇ ಮೇಲು.

ಪರಮಾತ್ಮನು ಅರ್ಜುನನಿಗೆ ರಣರಂಗದಲ್ಲಿ ಕುರುಕ್ಷೇತ್ರದಲ್ಲಿ ಮಹಾಭಾರತ ಯುದ್ಧಕ್ಕೆ ಮೊದಲು ಉಪದೇಶ ಮಾಡುತ್ತಿರುವಾಗ ತನ್ನ ಅನೇಕ ರೂಪಗಳನ್ನು ಅವುಗಳ ಭಾವನೆಗಳನ್ನು ಅರ್ಜುನನಿಗೆ ವಿವರಿಸಿದನು. ಈ ರೂಪಗಳೇ ಅವನ ವಿಭೂತಿಗಳು. ಕೊನೆಗೆ ಎಲ್ಲವನ್ನು ಹೇಳಿ ''ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವ ವಾ'' ಎಂದು ಅವುಗಳಲ್ಲಿ ತನ್ನ ''ಏಕಾಂಶೇನ ಸ್ಥಿತೋ ಜಗತ್'' ಎಂದು ಹೇಳಿ ಮುಗಿಸಿಬಿಟ್ಟನು. ತನ್ನ ದೇಹದ ಯಾವುದೊ ಒಂದು ಅಂಶದಿಂದ ಈ ಜಗತ್ತೇ ಎಲ್ಲವೂ ನಿಂತಿದೆ ಎಂದು ಬಿಟ್ಟನು. ಅವನ ವಿಭೂತಿಗಳು ಅಗಣಿತ. ಅವುಗಳ ಪ್ರತಿಯೊಂದರ ತೇಜಸ್ಸು ಶಕ್ತಿಯೇ ಅಪರಿಮಿತ, (ಉದಾ, ಸೂರ್ಯ, ಆಕಾಶ...) ಅಂದಮೇಲೆ ಅವನ ಶಕ್ತಿ ತೇಜಸ್ಸು ಇತ್ಯಾದಿಗಳು ಅಪರಿಮಿತಕ್ಕೂ ಅಪರಿಮಿತ. ಮಹತೋ ಮಹೀಯಾನ್, ಅಣೋರಣೀಯಾನ್ ಎಂದರೆ ಅವನಿಗೆ ವಿಭೂತಯೇ ನಮಃ ಎನ್ನುವುದು ಎಲ್ಲದನ್ನು ಉದ್ದೇಶಿಸಿ ನಮಸ್ಕರಿಸಿದಂತಾಗುತ್ತದೆ.

ಮಹಾದೇವನಾದ ಶಿವನಿಗೆ ವಿಭೂತಿ, ಭಸ್ಮವೆಂದರೆ ಅತಿ ಪ್ರೇಮ. ಭಸ್ಮವನ್ನೇ ಹಚ್ಚಿಕೊಂಡು ನಟರಾಜನಾಗಿ ತಾಂಡವ ನೃತ್ಯವಾಡುತ್ತಾನೆ. ಅಂದಮೇಲೆ ಭಸ್ಮವು ಅವನ ದೇಹ ಸಂಪರ್ಕ ಪಡೆದದ್ದರಿಂದ ಅದರ ಮಹಿಮೆಯು ಅಪರಿಮಿತವಾಯಿತು. ಈ ರೀತಿಯಾಗಿ ನಾವು ವಿಭೂತಿ (ಭಸ್ಮ) ವನ್ನೇ ಪೂಜಿಸಿ ಅದನ್ನು ಅರ್ಥಪೂರ್ಣವಾಗಿ ಹಚ್ಚಿಕೊಂಡರೆ, ಸೇವಿಸಿದರೆ ನಮ್ಮ ದೇಹಕ್ಕೆ ಭವರೋಗಕ್ಕೆ ಉತ್ತಮವಾದ ಔಷಧಿಯನ್ನು ಪರಿಗ್ರಹಿಸಿದಂತಾಯಿತು. ಅಂತಹ ವಿಭೂತಿಗೆ ನಮೋನ್ನಮಃ.

9. ತೇಜೋಮಯನೃಸಿಂಹಾಯ ನಮಃ

ನರಸಿಂಹಸ್ವಾಮಿಗೆ ನಮಸ್ಕಾರಗಳು. ಅವನ ಸರ್ವಾಂಗಗಳಲ್ಲಿಯೂ ಅವನಿರುವ ಸರ್ವದೇಶದಲ್ಲಿಯೂ ಸರ್ವಕಾಲದಲ್ಲಿಯೂ ಅವನ ದಿವ್ಯ ತೇಜಸ್ಸೇ ಪ್ರಸರಿಸಿರುವುದರಿಂದ ಸರ್ವಾಂಗ ಸುಂದರನಾಗಿ ವಿರಾಜಮಾನನಾಗಿರುತ್ತಾನೆ. ಈ ನಮ್ಮ ಆರಾಧ್ಯ ದೈವ ಈ ಸಹಸ್ರನಾಮದಿಂದ ನಿರ್ದೇಶಿತನಾದ ನರಸಿಂಹಸ್ವಾಮಿ, ಅವನಿಗೆ ಸಾಷ್ಟಾಂಗ ನಮಸ್ಕಾರಗಳು.

ನರಸಿಂಹಸ್ವಾಮಿಯೇ ಅದ್ಭುತ ರೂಪನು, ಶಾಂತನು ಲಕ್ಷ್ಮೀ ಸಮೇತನಾಗಿ, ಲೋಕಾಂಬೆಯ ಸಖನಾಗಿ ತನ್ನ ಭಕ್ತಪರಿವಾರದೊಡನೆ ಸಂತೋಷದಿಂದ ಭಕ್ತರಿಗೆ ಅನವರತ ಪ್ರೀತಿಯ ತನ್ನ ವಾತ್ಸಲ್ಯ ಸುಧೆಯನ್ನು ಉಣಿಸುತ್ತ ಕಾಪಾಡುತ್ತಾನೆ.

ಪರಮಾತ್ಮನು ನರಸಿಂಹ ಅವತಾರವೆತ್ತಿ ತನ್ನ ದೃಢ ಸಂಕಲ್ಪದಿಂದ ಹಿರಣ್ಯಕಶಿಪುವನ್ನು ಸಂಹಾರಮಾಡಿ ಅವನಿಗೆ ಮುಕ್ತಿಯನ್ನು ಕೊಟ್ಟನು. ಭಕ್ತ ಪ್ರಹ್ಲಾದನಿಗೆ ಅಪಾರ ಭಕ್ತಿಯನ್ನು ಕರುಣಿಸಿ ಆದ್ಯವಾದ ಶಾಂತಿ, ನಿರಂತರ ಸಂಪರ್ಕವನ್ನು ದಯಪಾಲಿಸಿದನು. ಪ್ರಹ್ಲಾದನೇ ವಿಷ್ಣುವಿನ ಅಂಶ. ಎಂದ ಮೇಲೆ ಅವನನ್ನು ತನ್ನಲ್ಲಿ, ತನ್ನನ್ನು ಅವನಲ್ಲಿ ನಿರೂಪಿಸಿ ತೇಜೋಮಯ ನರಸಿಂಹನಾದನು. ಈ ಸಾಕ್ಷಾತ್ ನರಸಿಂಹನೇ ಭೂಲೋಕದಲ್ಲಿ ಅನೇಕ ಕ್ಷೇತ್ರದಲ್ಲಿ ಅನೇಕ ರೂಪದ ಮೂರ್ತಿಗಳಾಗಿ ಎಲ್ಲದರಲ್ಲಿಯೂ ತನ್ನ ತೇಜಸ್ಸನ್ನೇ ಇಟ್ಟು ಭಕ್ತಿಯನ್ನು ಮನುಜರಲ್ಲಿ ಅಂಕುರವಾಗಿಸಿದ್ದಾನೆ ಮತ್ತು ಎಲ್ಲರನ್ನು ಭಕ್ತಿಯ ಪರಕಾಷ್ಠೆಗೆ ಏರಿಸುತ್ತಿದ್ದಾನೆ. ಎಲ್ಲೆಲ್ಲೂ ತನ್ನ ತೇಜಸ್ಸನ್ನು ಬೆಳಕನ್ನು ಬೀರಿ ಅಜ್ಞಾನವೆಂಬ ಅಂಧಕಾರವನ್ನು ನಿರ್ನಾಮ ಮಾಡುತ್ತಿದ್ದಾನೆ. ಮತ್ತೆ ಎಲ್ಲರಿಗೂ ಕೈವಲ್ಯವನ್ನು ದಯಪಾಲಿಸಲು ನಿಂತಿರುವನೋ ಎಂದು ಹಾಗೆ ನಿಂತು ತನ್ನೆಡೆಗೆ ಎಲ್ಲರನ್ನು ಎಳೆಯುತ್ತಿರುವನೋ ಎಂದು ಭಕ್ತರಿಗೆ ಭಾಸವಾಗುತ್ತಿದ್ದಾನೆ. ಎಂತೆಂತಹ ನರಸಿಂಹರು - ಒಬ್ಬೊಬ್ಬರು ಒಂದು ಭಕ್ತ ಸಮೂಹವನ್ನೇ ಮಾಡಿದ್ದಾರೆ - ಒಂದೊಂದು ರೀತಿಯ ಭಕ್ತಿ ಭಾವವನ್ನು ಕೊಟ್ಟು ಮನಸ್ಸನ್ನು ತನ್ನ ಕಡೆ ಓಡುವಂತೆ ಹುಚ್ಚೆಬ್ಬಿಸಿದ್ದಾರೆ - ಒಬ್ಬರೇ, ಇಬ್ಬರೇ ಹಲವಾರು ನರಸಿಂಹರು ಶೀಬೀ ನರಸಿಂಹ, ದೇವರಾಯನ ದುರ್ಗದ ಭೋಗಾ ನರಸಿಂಹ, ಯೋಗಾ ನರಸಿಂಹ, ಪಾನಕದ ನರಸಿಂಹ, ಸಿಂಹಾಚಲದ ಉಗ್ರನರಸಿಂಹ, ಕಮ್ಮಸಂದ್ರದ ಕಂಬದ ನರಸಿಂಹ, ಜಗದಲಪುರದ ಹಿರಣ್ಯಕಶಿವುನ್ನು ಬಗೆಯುತ್ತಿರುವ ನರಸಿಂಹ, ಲಕ್ಷ್ಮೀ ನರಸಿಂಹ ಹೀಗೆಯೇ ಈ ಅನೇಕ ನರಸಿಂಹರು - ಅವರವರ ಪ್ರತಿಷ್ಠಿತ ಸ್ಥಾನ ನಾಮದಿಂದ ಪ್ರಸಿದ್ಧರಾದವರು.

ಆದರೆ ಹಿರಣ್ಯಕಶಿಪೋರಗ್ರೇ ಸಭಾಸ್ಥಂಭ ಸಮುದ್ಭವ ನರಸಿಂಹನು ಇವರೆಲ್ಲರಿಗೂ ಮೂಲ ನರಸಿಂಹನು. ಪ್ರಹ್ಲಾದನನ್ನು ಕಾಪಾಡಲು ಮತ್ತು ಹಿರಣ್ಯಕಶಿಪುವನ್ನು ಸಂಹರಿಸಲು ಉದಯಿಸಿದವನು. ಕಂಬವೇ ಇವನ ತಂದೆ. ಕಂಬವೇ ಇವನ ತಾಯಿ. ಆವಿರ್ಭವಿಸಿದ ಕೂಡಲೇ ಉಗ್ರರೂಪನಾದ ಈತನು ಮಹಾಘೋರ ರೂಪವನ್ನು ಹೊಂದಿ ಘೋರ ಯುದ್ಧ ಮಾಡಬೇಕಾಯಿತು. ನಂತರ ಬ್ರಹ್ಮಾದಿಗಳು ಮಹಾಲಕ್ಷ್ಮಿಯನ್ನು ಮುಂದಿಟ್ಟು ಬಂದು ಪ್ರಹ್ಲಾದನನ್ನು ಮುಂದೆ ಮಾಡಿ ಬಂದು ಬ್ರಹ್ಮನು ಸಾವಿರ ನಾಮಗಳನ್ನು ಭಕ್ತಿ, ಶ್ರದ್ಧೆ, ಭಯಗಳಿಂದ ಅವನ ಲೀಲೆಯನ್ನು ಪಾಡಿ, ಪೊಗಳಿ ಸಂತೈಸಿದ ಕಾರಣ ಉಗ್ರನರಸಿಂಹನು ಶಾಂತನಾದನು. ಮಹಾಲಕ್ಷ್ಮಿಯನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಮಹಾಭಕ್ತ ಪ್ರಹ್ಲಾದನಿಗೆ ಸಂತೈಸಿ ಪಟ್ಟಾಭಿಷೇಕ ಮಾಡಲು ಬ್ರಹ್ಮನಿಗೆ ಅನುಗ್ರಹಿಸಿದನು. ಈ ರೀತಿ ಅವತಾರ ನಡೆಸಿದ ನರಸಿಂಹನು ''ತೇಜೋಮಯ ನರಸಿಂಹಾಯ ನಮಃ'' ಎನ್ನಿಸಿಕೊಂಡಿದ್ದಾನೆ.

ಶ್ರೀಶ್ರೀಶ್ರೀ

''ಹರಿಃ ಓಂ ತತ್ ಸತ್''

ಇಂತಹ ನರಸಿಂಹನು ನಮ್ಮ ಆತ್ಮದಲ್ಲಿ ಕುಳಿತು ಸದಾ ವಿರಾಜಿಸಲಿ. ತನ್ನ ಸ್ವಧಾಮಕ್ಕೆ ಸೇರುವ ದಾರಿಯನ್ನೇ ತೋರಿಸಿ ಕರುಣಿಸಿ ಕಾಪಾಡಲಿ. ಇವನನ್ನ ಅನನ್ಯ ಶ್ರದ್ಧೆಯಿಂದ ಮತ್ತು ಅವ್ಯಭಿಚಾರಿಣಿ ಭಕ್ತಿಯಿಂದ ಮನಸ್ಸು ಬುದ್ಧಿಯಿಂದ ಒಡಗೂಡಿ ಎಲ್ಲರೂ ಆತ್ಮ ಸಮೇತ ಇವನನ್ನು ಸೇರುವಂತಾಗಲಿ ಎಂತಲೇ ಈ ಚಿಕ್ಕ ಗುಟ್ಟಿನ ಪ್ರಾರ್ಥನೆ.

**50. ತೇಜಾಸಾಂ ನಿಧಯೇ ನಮಃ**

ಪರಮಾತ್ಮನು ಸಮಸ್ತ ತೇಜಸ್ಸುಗಳಿಗೂ ನಿಧಿಯಾಗಿರುತ್ತಾನೆ, ಸ್ಥಾನವಾಗಿರುತ್ತಾನೆ, ಕಲಶ ಪ್ರಾಯನಾಗಿರುತ್ತಾನೆ, ಕಿರೀಟಪ್ರಾಯನಾಗಿರುತ್ತಾನೆ.

ಯಾರ ಯಾವ ರೀತಿಯ ತೇಜಸ್ಸು ಎಲ್ಲಿದ್ದರೂ ಯಾವಾಗಲೂ ಅದು ಪರಮಾತ್ಮನ ಅಂಶವೇ, ಅಗ್ನಿಯ ಅಂಶ, ಇದು ಸತ್ಯ ಏಕೆಂದರೆ ಬೇರೆ ಯಾರಿಂದಲೂ ಈ ತೇಜಸ್ಸಿನ ಸೃಷ್ಟಿ ಸಾಧ್ಯವಿಲ್ಲ. ಇದು ಅವನಲ್ಲಿಯೇ ಇರುತ್ತದೆ. ಅವನ ಸಂಕಲ್ಪ ಮಾತ್ರದಿಂದ ಜಗತ್ತಿನಲ್ಲಿ ವ್ಯಕ್ತವಾಗುತ್ತದೆ. ಅವನ ಸಂಕಲ್ಪದಿಂದಲೇ ಅವನಲ್ಲಿ ಐಕ್ಯವಾಗುತ್ತದೆ. ತೇಜಸ್ಸು ಬೇರೆಯಲ್ಲ ಅವನು ಬೇರೆಯಲ್ಲ. ಅವನೇ ತೇಜಸ್ಸು, ತೇಜಸ್ಸೇ ಅವನು.

ಪ್ರತಿ ಜೀವಿಯಲ್ಲಿಯೂ ಪ್ರತಿ ದೇಹದಲ್ಲಿಯೂ ತೇಜಸ್ಸು ಸದಾ ಇರುತ್ತದೆ. ಆತ್ಮನಲ್ಲಿರುವ ತೇಜಸ್ಸು ಆತ್ಮ ಸಂಬಂಧವಾದ್ದು, ಪರಮಾತ್ಮನ ರೂಪ. ದೇಹದಲ್ಲಿರುವ ತೇಜಸ್ಸು ಪರಮಾತ್ಮನ ಸಂಕಲ್ಪದಿಂದ ಉದ್ಭವವಾದ

ಪಂಚಭೂತಗಳಲ್ಲಿ ಒಂದು. ಇದು ಆತ್ಮವು ದೇಹವನ್ನು ತ್ಯಜಿಸಿದಾಗ ಪಂಚಭೂತಗಳಲ್ಲಿ ಲೀನವಾಗುತ್ತದೆ. ಇದು ಆತ್ಮನ ಜೊತೆ ಹೋಗುವುದಿಲ್ಲ.

ಇಂದ್ರಿಯಗಳಲ್ಲಿ ಇಂದ್ರಿಯಾಭಿಮಾನಿ ದೇವತೆಗಳಾಗಿ ತೇಜಸ್ಸಿರುತ್ತದೆ. ಇವು ಆತ್ಮದ ಸಂಸ್ಕಾರಕ್ಕೆ ಸಂಬಂಧ ಪಟ್ಟವುಗಳು. ಇಂದ್ರಿಯಗಳು ಆತ್ಮನಿಂದ ಸಾಕ್ಷಾತ್ಕಾರದ ಸಮಯದಲ್ಲಿ ಬೇರ್ಪಡುವವರೆಗೂ ಆತ್ಮದ ಜೊತೆಯಲ್ಲಿಯೇ ಇರುತ್ತದೆ. ಹಾಗೆಯೇ ಮನಸ್ಸಿನ ಶಕ್ತಿಯೂ ತೇಜಸ್ಸೇ. ಅದೂ ಸಹ ಆ ಸಮಯದವರೆಗೆ ಇರುತ್ತದೆ ಅಂದ ಮೇಲೆ ಬುದ್ಧಿ, ಮನಸ್ಸು, ಅಹಂಕಾರ, ಚಿತ್ (ಸೂಕ್ಷ್ಮ / ಕಾರಣ ಶರೀರವಾಗಿ) ಇಂದ್ರಿಯಗಳು ಅವುಗಳ ಅಭಿಮಾನಿ ದೇವತೆಗಳು, ಸದಾ ಆತ್ಮವನ್ನೇ ಅನುಸರಿಸುತ್ತಿರುತ್ತವೆ. ದೇಹಗಳು ಮಾತ್ರ ಪಂಚಭೂತಗಳಿಂದ ಆದದ್ದರಿಂದ ಸ್ಥೂಲ ಶರೀರವಾಗಿ ಬದಲಾಯಿಸುತ್ತಿರುತ್ತವೆ. ಈ ರೀತಿ ತೇಜಸ್ಸು ಪರಿ ಪರಿಯಾಗಿ ಪ್ರಸರಿಸಿ ಸೃಷ್ಟಿ, ಸ್ಥಿತಿ, ಲಯ ಕಾರ್ಯಗಳಲ್ಲಿ ಪರಮಾತ್ಮನ ಸಂಕಲ್ಪದಂತೆ ವಿರಾಜಮಾನವಾಗಿರುತ್ತದೆ. ಇದೇ ತೇಜಸ್ಸಿನ ಮಹಿಮೆ. ಅವನೇ ಇದಕ್ಕೆ ನಿಧಿ. " ತೇಜಸಾಂ ನಿಧಯೇ ನಮಃ".

*ಮಹಾದಂಷ್ಟ್ರಾಯ ತುಷ್ಟಾಯ ನಮಃ ಪುಷ್ಟಿಕರಾಯ ಚ /*
*ಶಿಪಿವಿಷ್ಟಾಯ ಹೃಷ್ಟಾಯ ಪುಷ್ಟಾಯ ಪರಮೇಷ್ಠಿನೇ //58//*

*(351-357)*

351. ಮಹಾದಂಷ್ಟ್ರಾಯ ನಮಃ

ದಂಷ್ಟ್ರ - ಕೋರೆದಾಡೆ, ಮಹಾದಂಷ್ಟ್ರ - ಮಹಾಶಕ್ತಿಯುತವಾದ ಮಹತ್ತಾದ ಕೋರೆದಾಡೆಯುಳ್ಳವನು.

ಪರಮಾತ್ಮನು ವರಾಹಾವತಾರದಲ್ಲಿ ಹೊಂದಿದ್ದ ಕೋರೆದಾಡೆಗಳು ಸಂಪೂರ್ಣ ಭೂಮಂಡಲವನ್ನೇ ಪಾತಾಳ ಲೋಕದಿಂದ ಸಮುದ್ರದ ಮೇಲೆ ಹೊತ್ತುಕೊಂಡು ತರುವಷ್ಟು ಶಕ್ತಿಯುತವಾಗಿದ್ದಿತು. ಅಷ್ಟೇ ಅಲ್ಲ ವರಾಹಸ್ವಾಮಿಯು ತನ್ನ ಕೋರೆದಾಡೆಯ ಮೇಲೆ ಭೂಮಿಯನ್ನು ಇರಿಸಿಕೊಂಡು ಬರುವಾಗ ಸಮುದ್ರದ ನೀರಿನ ತಡೆ, ರಭಸವನ್ನು ಎದುರಿಸಬೇಕಾಯಿತು ಮತ್ತು ಹಿರಣ್ಯಾಕ್ಷನು ಹಿಂದಿನಿಂದ ಅಟ್ಟಿಸಿಕೊಂಡು ಬರುವಾಗ ವರಾಹಸ್ವಾಮಿಯು ಭೂಮಿಯನ್ನು ತನ್ನ ಕೋರೆದಾಡೆಗಳ ಮೇಲಿನಿಂದ ಬೀಳದ ಹಾಗೆ ಇಟ್ಟುಕೊಂಡು ಓಡಬೇಕಾಯಿತು. ಇಷ್ಟನ್ನು ತಡೆದುಕೊಳ್ಳುವ ಶಕ್ತಿಯು ಆ ಮಹಾದಂಷ್ಟ್ರಕ್ಕೆ ಇರಬೇಕಾಯಿತು, ಇತ್ತು. ಅಂದಮೇಲೆ ಸಕಲ ಭೂಮಂಡಲದ ಭಾರವನ್ನು ಹೊರುವ, ಹೊತ್ತು ಬೀಳದ ಹಾಗೆ ಹಿಡಿದಿರುವ ಶಕ್ತಿ ಮತ್ತು ಚಾಕಚಕ್ಯತೆ ಬಹಳ ಅಪರಿಮಿತ ಮತ್ತು ಊಹಾತೀತ.

ಪರಮಾತ್ಮನ ಇಚ್ಛೆಗೆ ಸಾಧ್ಯವಾಗದುದು ಏನಿದೆ, ಎಲ್ಲವೂ ಅವನ ಕಲ್ಪನೆ, ಅವನ ಸಂಕಲ್ಪ.

ಈ ಕೋರೆದಾಡೆಗಳಿಂದಲೇ ವರಾಹಸ್ವಾಮಿಯು ಹಿರಣ್ಯಾಕ್ಷನನ್ನು ಸಂಹರಿಸಿದನು. ಸಾಮಾನ್ಯ ವರಾಹಕ್ಕೆ ಈ ಕೆಲಸ ಮಾಡಲು ಸಾಧ್ಯವೇ! ಇಲ್ಲ. ಅದಕ್ಕೆ ಮಹಾವಿಷ್ಣುವು ಮಹಾದೈತ್ಯ ಸ್ವರೂಪನಾದ ಹಿರಣ್ಯಾಕ್ಷನನ್ನು ಸಂಹಾರ ಮಾಡಲು ಮತ್ತು ಭೂಮಂಡಲವನ್ನು ರಕ್ಷಿಸಲು, ಸಮುದ್ರದಲ್ಲಿ ಪಾತಾಳದವರೆಗೆ ಹೋಗಿ ಬರಲು ಸಮುದ್ರದಲ್ಲಿರತಕ್ಕ ಪ್ರಾಣಿಯ ರೂಪವನ್ನೇ ಧರಿಸಿದನು. ಅಂತಹ ಮಹಾವರಾಹಸ್ವಾಮಿಯಾದ ಮಹಾದಂಷ್ಟ್ರನಿಗೆ ನಮಸ್ಕಾರಗಳು.

ನಮ್ಮಲ್ಲಿರುವ ತಾಮಸ ಗುಣಗಳು, ತಾಮಸಮಿಶ್ರಿತ ರಾಜಸಗುಣಗಳೇ ಹಿರಣ್ಯಾಕ್ಷರೂಪದ ದೈತ್ಯಗಳು. ಬುದ್ಧಿ ಮನಸ್ಸುಗಳೇ ಸಕಲ ಭೂಮಂಡಲ. ಇನ್ನೂ ಹೇಳಬೇಕೆಂದರೆ ಭೂಮಿಯಲ್ಲಿರುವ ಒಳ್ಳೆಯ ಮತ್ತು ಕೆಟ್ಟವುಗಳು ನಮ್ಮ ದುರ್ಬುದ್ಧಿ, ಸುಬುದ್ಧಿ, ದುರ್ಮನಸ್ಸು, ಒಳ್ಳೆಯ ಮನಸ್ಸುಗಳಿಗೆ ಹೋಲಿಸಬಹುದು. ಆಗ ತಮೋಗುಣವೆಂಬ ಹಿರಣ್ಯಾಕ್ಷನು ಬುದ್ಧಿ ಮತ್ತು ಮನಸ್ಸೆಂಬ ಭೂಮಂಡಲವನ್ನು ಅಪಹರಿಸಿಕೊಂಡು ಪಾತಾಳವೆಂಬ ಕತ್ತಲೆಯಲ್ಲಿ ಹೂತ್ತಿಟ್ಟಿದ್ದಾನೆ. ಈಗ ವಿವೇಕವೆಂಬ ವರಾಹಸ್ವಾಮಿಯು ಜ್ಞಾನವೆಂಬ ಕೋರೆದಾಡೆಯ ಮೇಲೆ ಬುದ್ಧಿ ಮನಸ್ಸುಗಳನ್ನು ಇರಿಸಿಕೊಂಡು ಕತ್ತಲೆಂಬ ಸಮುದ್ರದಲ್ಲಿ ಈಜಿಕೊಂಡು ಬಂದು ಪರಮಾತ್ಮ ಸಾಕ್ಷಾತ್ಕಾರಕ್ಕೆ ಬರುವಂತೆ ಮಾಡುತ್ತದೆ. ಆಗ ಆತ್ಮವು ಈ ವರಾಹಸ್ವಾಮಿಯು ಸಹಾಯದಿಂದ ಪರಮಾತ್ಮನ ಸಾನ್ನಿಧ್ಯವನ್ನು ಪಡೆಯುತ್ತದೆ. ಹಾಗಾಗಿ ಮಹಾದಂಷ್ಟ್ರಾಯ ನಮಃ ಎಂಬುದು ಜ್ಞಾನಕ್ಕೆ ಎಷ್ಟು ಸಮಂಜಸ!

52. ತುಷ್ಟಾಯ ನಮಃ

ತುಷ್ - ಸಂತೋಷಪಡಿಸು, ಸಂತುಷ್ಟನಾಗುವುದು, ಶಾಂತವಾಗುವುದು

ತುಷ್ಟಿ - ಸಂತೋಷ, ತೃಪ್ತಿ, ಆನಂದ ಅಥವಾ ಸುಖ.

ತುಷ್ಟಿಯನ್ನು ಹೊಂದಿದವನು ತುಷ್ಟ ಅಂದರೆ

ತುಷ್ಟ - ಆನಂದದಿಂದ ಇರುವವನು. ಸಂತೋಷಪಟ್ಟವನು, ಶಾಂತನಾಗಿರುವವನು, ಸಮಭಾವದಿಂದ ಇರುವವನು.

ತುಷ್ಟಾಯ ನಮಃ - ಆನಂದದಿಂದ ಇರುವವನಿಗೆ ನಮಸ್ಕಾರಗಳು.

ಪರಮಾತ್ಮನು ಸದಾನಂದನು, ಸಮಭಾವದಿಂದಿರುವವನು, ದ್ವಂದ್ವಾತೀತನು, ಗುಣಾತೀತನು, ಸೃಷ್ಟಿ, ಸ್ಥಿತಿ, ಲಯ, ಪ್ರಳಯ, ಕಲ್ಪಗಳನ್ನು ತನ್ನ ಸ್ವ - ಇಚ್ಛೆಯಂತೆ ನಡೆಸುತ್ತಿದ್ದರೂ ಅವನು ಅವುಗಳ ಅನುಭವಗಳಿಂದ

ಬಿಡಿಸಲ್ಪಟ್ಟವನು. ಅನುಭವಗಳನ್ನು ಅವನು ಅನುಭವಿಸುವುದಿಲ್ಲ. ಅವುಗಳಲ್ಲಿ ಯಾವ ರೀತಿಯದೇ ಆದ ತನ್ನ ಸಂಪರ್ಕವಿದ್ದರೂ ಇಲ್ಲದಂತೆ ಇರುವವನು. ತನ್ನ ಸಂಪರ್ಕಗಳಿಂದ ಅವುಗಳ ಆಗು ಹೋಗುಗಳನ್ನು ನಡೆಯುವಂತೆ ಮಾಡುತ್ತಾನೆ. ಸಂಕಲ್ಪ ಮಾತ್ರದಿಂದ ನಡೆಸುತ್ತಾನೆಯೇ ಹೊರತು ತಾನೇ ಮಾಡುವುದಿಲ್ಲ. ಇದಕ್ಕಾಗಿ ತಾನೇ ಪ್ರಕೃತಿ, ಪುರುಷ ಮತ್ತು ಮಾಯೆ ಎಂದು ವಿಭಾಗವಾಗಿರುತ್ತಾನೆ. ತನ್ನ ಅಂಶಗಳಿಂದ ನಡೆಸುತ್ತಾನೆ. ತನ್ನ ಅಂಶಗಳಾದ ಆತ್ಮಗಳನ್ನು ಸಂಸಾರ ಸಾಗರಕ್ಕೆ ಬಿಟ್ಟು ಅವುಗಳು ಯಾವ ರೀತಿ ಸಂಪರ್ಕ ಹೊಂದಿ, ಪ್ರಕೃತಿ, ಮಾಯೆ, ವಿಷಯ ಸುಖಗಳು ಇತ್ಯಾದಿಗಳೊಡನೆ ಹೇಗೆ ಬವಣೆಯಲ್ಲಿ ಮುಳುಗುತ್ತಿದ್ದರೂ ತನ್ನನ್ನ ಮರೆಯದಂತೆ ಮಾಡುತ್ತಾನೆ ಎಂಬುದೇ ಅವನ ದಯಾಮಯತೆ. ಹೀಗಿರುವಾಗ ಅವನು ಮಾತ್ರ ಸದಾ ತುಷ್ಟನಾಗಿ ಲೀಲಾಜಾಲವಾಗಿ ತಾನು ಎಲ್ಲವನ್ನು ಮಾಡಿದರೂ ಮಾಡದಂತೆ ಇರುತ್ತಾನೆ. ಇದೇ ಅವನ ಮಹಿಮೆ. ತನಗೆ ಏನೂ ಆಗಿಲ್ಲವೇನೋ, ತನ್ನಿಂದ ಏನೂ ನಡೆದಿಲ್ಲವೇನೋ, ತಾನು ಏನೂ ಮಾಡಬೇಕಾಗಿಲ್ಲವೇನೋ ಎಂಬಂತೆ ಅನಾಯಾಸವಾಗಿ ತುಷ್ಟನಾಗಿ, ಸುಖವಾಗಿ, ಆನಂದದಿಂದ ಇದ್ದಾನೆ, ಇದ್ದನು, ಇರುತ್ತಾನೆ.

ಭವಸಾಗರದಲ್ಲಿರುವ ಜೀವಿಗಳು ಅನುಭವಿಸುವ ಕಾರ್ಪಣ್ಯದೊಂದಿಗೆ, ಪರಮಾತ್ಮನನ್ನು ಮರೆಹೊಕ್ಕು ಅವನ ದಯೆಯಿಂದ ಇದೇ ರೀತಿ ತುಷ್ಟಿ ಭಾವದಿಂದ ಇರಲು ಸಾಧ್ಯ.

ಎಲ್ಲವೂ ತಮ್ಮ ಮೇಲೆ ಬಿದ್ದಿರುವುದೆಂದೂ, ಎಲ್ಲರ ಜೀವನಗಳಿಗೆ ತಾವೇ ಜವಾಬ್ದಾರರೆಂದು ಕ್ಷಣ ಕ್ಷಣವೂ ಜಿಗುಪ್ಸೆ ಪಡುವವರು ಸಂಸಾರದಲ್ಲಿ ಬಹಳ ಬೇಗ ಲಭ್ಯ. ಆದರೆ ನಿಜಸ್ಥಿತಿಯನ್ನು ಅರಿತು ಈ ಸಂಸಾರದಲ್ಲಿ ಎಲ್ಲ ಜೀವಿಗಳು ತಮ್ಮ ತಮ್ಮ ಮನ ಬುದ್ಧಿ ಅಹಂಕಾರ ಚಿತ್ ಮತ್ತು ಇಂದ್ರಿಯಗಳ ಸಂಸ್ಕಾರದಂತೆ ಋಣಾನುಬಂಧ ರೂಪದಿಂದ ಸಂಯೋಗ ವಿಯೋಗಗಳನ್ನು ಇತರ ಜೀವಿಗಳೊಡನೆ ಪಡುತ್ತಾ ಸಾಗಬೇಕೆಂದೂ ಮತ್ತು ಯಾವ ಜೀವಿಯೂ ಇನ್ನೊಂದು ಜೀವಿಯ ಆಗು ಹೋಗುಗಳಿಗೆ ಕಾರಣವಲ್ಲವೆಂದೂ ತಿಳಿದರೆ, ನಮ್ಮ ಮನಸ್ಸು ಅದೆಷ್ಟು ಭಾರರಹಿತವಾಗುತ್ತದೆ, ತಿಳಿಯಾಗುತ್ತದೆ, ಸಮಾಧಾನ ಹೊಂದುತ್ತದೆ ಎಂಬುದನ್ನು ಅನುಭವಿಸಿ ನೋಡಬೇಕು. ನಮ್ಮ ಮನಸ್ಸಿನ ಭಾವನೆಗಳು ನಮ್ಮ ಗುರಿಯನ್ನು ಅವಲಂಬಿಸಿರುತ್ತದೆ. ಮತ್ತು ನಿಜತ್ವ ನಿಜಸ್ಥಿತಿಯನ್ನು ಅರಿಯುವುದರ ಮೇಲೆ ಅವಲಂಬಿಸುತ್ತದೆ. ಹೀಗೆ ಮನಸ್ಸನ್ನು ಬದಲಾಯಿಸಿಕೊಂಡರೆ, ಸಂಪರ್ಕಗಳ ಕಾರಣವನ್ನು ತಿಳಿದು ಸಂಪರ್ಕಿಸಿದರೆ ನಾವೂ ಸಹ ಪರಮಾತ್ಮನಂತೆಯೇ ಈ ಸಂಸಾರ ಸಾಗರಕ್ಕೆ ಮತ್ತು ಸುತ್ತ ಮುತ್ತಲಿನ ಜೀವಿಗಳಿಗೆ ಮತ್ತು ನಮ್ಮ ಸಂಪರ್ಕಹೊಂದಿದ ಎಲ್ಲ ವಸ್ತು

ಮತ್ತು ಜೀವಿಗಳಿಗೆ ಸಂಪರ್ಕವಿದ್ದರೂ "ಅದು ತಾತ್ಕಾಲಿಕ" ಇದೂ ಹೋಗುತ್ತದೆ ಎಂದು ಭಾವಿಸಿದರೆ "ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ" (ಶ್ಲೋಕ 14 - ಅಧ್ಯಾಯ 2 - ಗೀತಾ), ಎಂದು ಶ್ರೀಕೃಷ್ಣನು ಅರ್ಜುನನಿಗೆ ಗೀತೆಯಲ್ಲಿ ವಿವರಿಸಿದಂತೆ ಆದರೆ ನಾವೂ ಸಹ ಅಂಟದೆ ತುಷ್ಟರಾಗಿರಲು ಸಾಧ್ಯ. ಆಗ ನಾವು ಸಮಾಧಾನ ಚಿತ್ತದಿಂದ ಇರಬಹುದು. ನಮ್ಮ ಮನಸ್ಸನ್ನು ತಿಳಿಮಾಡಬಹುದು.

ಸಮಚಿತ್ತರು, ತುಷ್ಟರಾದವರು ಸಂನ್ಯಾಸಿಗಳೇ ಆಗಬೇಕಾಗಿಲ್ಲ. ಗೃಹಸ್ಥಾಶ್ರಮದಲ್ಲಿದ್ದರೂ "ಎಲ್ಲವೂ ಪರಮಾತ್ಮನಿಂದ ಆವನ ಸಂಕಲ್ಪಕ್ಕನುಗುಣವಾಗಿ ನಡೆಯುತ್ತದೆ. ಅದನ್ನು ನಡೆಸಲು ಪರಮಾತ್ಮನು ನಮ್ಮ ಆತ್ಮವನ್ನು ಮತ್ತು ದೇಹವನ್ನು ಉಪಯೋಗಿಸುತ್ತಾನೆ. ನಾವು ಅವನ ಇಚ್ಛೆಗನುಸಾರವಾಗಿ ಅವನು ಉಪಯೋಗಿಸುವ ವಸ್ತುವಾದೆವಲ್ಲ ಅದೇ ಸಂತೋಷ" ಎಂದುಕೊಂಡು ಅವನನ್ನು ನಂಬಿದರೆ ನಮ್ಮ ಜೀವನ ತಿಳಿಯಾಗುವುದರಲ್ಲಿ ನಾವು ತುಷ್ಟರಾಗುವುದರಲ್ಲಿ ಸಂದೇಹವಿಲ್ಲ. ಈ ರೀತಿ ಮನೋಭಾವ ಆವಿರ್ಭವಿಸಲು ನಮಗೆ ಒಬ್ಬ ಗುರು, ಸಜ್ಜನರ ಸತ್ಸಂಗ, ದಾರಿ ತೋರಿಸುವವರು ಮತ್ತು ನಮ್ಮ ಹೊಂದಿಬಿಟ್ಟಿರುವ ಮನೋಭಾವನೆಯನ್ನು ಕದಲಿಸಿ ಬದಲಿಸುವವರು ಬೇಕು. ಅದು ಅವನ ಕೃಪೆಯಿಂದಲೇ ನಡೆಯುತ್ತದೆ. ಆಗ ನಾವು ತುಷ್ಟಿ ಹೊಂದಿ, ನಮ್ಮ ಆತ್ಮವನ್ನು ಪರಮಾತ್ಮನಂತೆ ಇರುವಂತೆ ಮಾಡಲು ಸಾಧ್ಯ.

ಅಂದರೆ ಆತ್ಮವು ಪವಿತ್ರವೇ. ಯಾವುದಕ್ಕೂ ಅಂಟಿರುವುದಿಲ್ಲ. ಆದರೆ ನಮ್ಮ ಮನಸ್ಸು ಬುದ್ಧಿಗಳು ಎಲ್ಲಕ್ಕೂ ಅಂಟಿರುವುದರಿಂದ ಅವುಗಳಿಂದ ಬಿಡಿಸಿ ಪರಮಾತ್ಮನಲ್ಲಿಡುವಂತೆ ಮಾಡುವ ವಿವೇಕವು ಉದಯವಾಗುತ್ತದೆ. ವಿವೇಕ ಬುದ್ಧಿಯು ಇದ್ದೇ ಇದೆ. ಆದರೆ ಅದಕ್ಕೆ ಅಂಟಿರುವ ಮಲಿನವು ಮಲಿನವೆಂದು ತಿಳಿಯುವ ಸಮಯ ಬರುತ್ತದೆ. ಪರಮಾತ್ಮನ ಕೃಪೆಯ ಸಾಕ್ಷಾತ್ಕಾರವಾಗುತ್ತದೆ. ನಾವು ತೃಪ್ತರಾಗುತ್ತೇವೆ. ಆಗ ನಾವೂ ಸಹ ಈ ಬವಣೆಗಳಿಂದ ಅವುಗಳಿಂದಾಗುವ ಮನೋಭಾವನೆಗಳನ್ನು ಪರಿವರ್ತಿಸಿ ತುಷ್ಟಿಪಡುತ್ತೇವೆ.

53. ಪುಷ್ಟಿಕರಾಯ ನಮಃ

ಪುಷ್ಟಿ - ಪೋಷಣೆ ಮಾಡುವುದು, ಸಂವೃದ್ಧಿ ಮಾಡುವುದು.

ಪುಷ್ಟಿಕರ - ಪೋಷಣೆ ಮಾಡುವವನು, ಇದ್ದದ್ದನ್ನು ಇನ್ನೂ ಉತ್ತಮ ಮಾಡುವವನು ಯಾರೋ ಅವನು - ಪರಮಾತ್ಮ.

ಇದ್ದ ಸ್ಥಿತಿಯನ್ನು ಉತ್ತಮ ರೀತಿಯಲ್ಲಿ ಪೋಷಣೆ ಮಾಡುವವನು

ಪರಮಾತ್ಮನೇ. ಇದಕ್ಕೆ ತಕ್ಕ ಪರಿಸರವನ್ನು ಕಲ್ಪಿಸುವವನು ಅವನೇ. ತಕ್ಕ ಬುದ್ಧಿಶಕ್ತಿ, ಮೇಧಾಶಕ್ತಿಯನ್ನು ವೀರ್ಯ, ತೇಜಸ್ಸು, ಧಾರಣಶಕ್ತಿಗಳನ್ನು ಕೊಟ್ಟಿರುವವನು, ಮತ್ತೆ ಮತ್ತೆ ಸಕಾಲದಲ್ಲಿ ಕೊಡುವವನು, ವೃದ್ಧಿ ಪಡಿಸುವವನು ಪರಮಾತ್ಮನೇ. ಸೃಷ್ಟಿಯಲ್ಲಿರುವ ಸಕಲ ವಸ್ತುಗಳಿಗೂ ಅವನೇ ಕಾರಣ.

ಕಾಯಾ, ವಾಚಾ, ಮನಸಾ ಪುಷ್ಟಿಕರವಾಗಿದ್ದರೆ ಸಮಾನ ಪುಷ್ಟಿಯಿಂದ ಕೂಡಿ ವರ್ತಿಸಿದರೆ ಆ ದೇಹವು ಆತ್ಮನ ಗುರಿಯಾದ ಪರಮಾತ್ಮನನ್ನು ಸೇರುವುದು ಸಾಧ್ಯವಾಗುತ್ತದೆ. ಪರಿಸರವನ್ನು ಕೊಡುವವನು, ಮನಸ್ಸು ಬುದ್ಧಿಯನ್ನು ಪ್ರಚೋದಿಸುವವನು ಅವನೇ ಆದರೂ ನಾವು ಎಲ್ಲವನ್ನು ಅವನ ಮೇಲೆ ಹಾಕದೆ ನಮ್ಮ ನಮ್ಮ ವಿವೇಚನೆಗೆ ಸೂಕ್ತವಾಗಿ ಇಂದ್ರಿಯ ಮನಸ್ಸು, ಬುದ್ಧಿಗಳನ್ನು ಜಗತ್ತಿಗೆ ಸಂಪರ್ಕಿಸಬೇಕು. ಒಂದು ಮುಖ್ಯ ಎಚ್ಚರಿಕೆ ಎಂದರೆ ಇವುಗಳ ಪರಸ್ಪರ ಅವಲಂಬನೆ ಮತ್ತು ಉತ್ತಮತೆ ತಿಳಿದರ ಅನುಕೂಲ.

*'ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।*
*ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥''*

*(ಶ್ಲೋಕ 42 - ಅಧ್ಯಾಯ 3)*

ಎಂದು ಗೀತೆಯಲ್ಲಿ ಶ್ರೀಕೃಷ್ಣನು ಹೇಳಿದ್ದಾನ. ಇದರಂತ ಒಂದೊಂದು ಒಂದೊಂದಕ್ಕಿಂತ ಉತ್ತಮವಾದರೂ ಅಂತದಲ್ಲಿ ಪರಮಾತ್ಮನೇ ಉತ್ತಮನು.

ಲೋಕವ್ಯವಹಾರದಲ್ಲಿ ಈ ಪರಸ್ಪರ ಪರತೆಯನ್ನು ತಿಳಿದುಕೊಂಡು ವ್ಯವಹರಿಸಿದರೆ ಮತ್ತು ಪ್ರತಿಕ್ಷಣದಲ್ಲಿಯೂ ''ವ್ಯರ್ಥಾಲಾಪವನ್ನು ವರ್ಜಿಸಬೇಕೆಂದು'' ನಿಯಮಿಸಿಕೊಂಡರೆ ಕಾಯಾ ವಾಚಾ ಮನಸ್ಸುಗಳು ಪುಷ್ಟಿಕರವಾಗಿ ಆಗುವುದರಲ್ಲಿ ಸಂದೇಹವಿಲ್ಲ. ಆಗ ಭಗವಂತನು ನಮ್ಮನ್ನು ಪುಷ್ಟಿಕರವಾಗಿ ಮಾಡುತ್ತಾನೆ. ನಮಗೆ ನಾವೇ ಪುಷ್ಟಿಕರರೆಂದರೂ ತಪ್ಪಿಲ್ಲ. ನಾವು ಪರರಿಗೆ ಪುಷ್ಟಿಕರರಾಗುತ್ತೇವೆ ಎಂದರೂ ತಪ್ಪಿಲ್ಲ. ಮುಖ್ಯವಾಗಿ ಸರ್ವರೂ ಸರ್ವರೀತಿಯಲ್ಲಿಯೂ ಪುಷ್ಟಿಕರರಾದಲ್ಲಿ ಆತ್ಮದ ಬಿಡುಗಡೆಗೆ ದಾರಿಯಾಗುತ್ತದೆ. ಒಟ್ಟಿನಲ್ಲಿ ಪರಮಾತ್ಮನ ಸಂಕಲ್ಪವೂ ನಮ್ಮ ಪ್ರಯತ್ನದ ಮೇಲೆ ನಿಂತಿರುತ್ತದೆ. ಸಂಸ್ಕಾರಗಳು ಮುಖ್ಯ. ಎಲ್ಲಕ್ಕೂ ಅವನೇ ಕಾರಣವೆಂದು ನಿರ್ಣಯಕ್ಕೆ ಬಂದರೂ ಆತ್ಮಗಳು ತಮ್ಮ ತಮ್ಮ ಸಂಸ್ಕಾರಗಳನ್ನು ಸ್ವತಂತ್ರವಾಗಿ ಬೆಳೆಸುವುದರಿಂದ ಸಂಪೂರ್ಣವಾಗಿ ಪರಮಾತ್ಮನೇ ಕಾರಣವೆಂದು ಹೇಳುವುದು ಸರಿಯಲ್ಲ. ಇದು ಗಹನವಾದ ವಿವಾದಾಸ್ಪದ ವಿಚಾರ. ಇದೇ ಗಹನತೆಯೇ ಪರಮಾತ್ಮನ ಸಂಕಲ್ಪ, ಧರ್ಮ.

**54. ಶಿಪಿವಿಷ್ಟಾಯ ನಮಃ**

(ಶಿಪಿ ವಿಷ್ಟ - ಬಿಳುಪು ಹತ್ತಿದ, ಬೋಳಾದದ್ದು ಎಂದು ಅರ್ಥ.)

''ಶಿಪಿ–ಕಿರಣಗಳು, ಭಗವಂತನು ಕಿರಣಗಳಲ್ಲಿ ತಾನೇ ಪ್ರವೇಶ ಮಾಡುವುದರಿಂದ ಮತ್ತು ವ್ಯವಸ್ಥಿತನಾಗಿರುವುದರಿಂದ ಅವನಿಗೆ.ಶಿಪಿವಿಷ್ಟ ಎಂದು ಹೆಸರು.

ಭಗವಂತನು ಪಶುಗಳಲ್ಲಿ ಯಜ್ಞರೂಪದಿಂದ ಇರುವುದರಿಂದ ಅವನು ಶಿಪಿವಿಷ್ಟನು. - ಎಂದರೆ ಯಜ್ಞಮೂರ್ತಿಯು.

ಪಶುಗಳು ಶಿಪಿ, ಪಶುಗಳಲ್ಲಿ ಯಜ್ಞವೇ ವ್ಯವಸ್ಥಿತವಾಗಿದೆ.''

(ವಿಷ್ಣು ಸಹಸ್ರನಾಮದಲ್ಲಿ ಇದೇ ನಾಮ 273ನೆಯದು. ಮೇಲಿನದು ಅದರಲ್ಲಿ ಕೊಟ್ಟಿರುವಂತಿದೆ.) (ಮುಂದಿನದು ಇಲ್ಲಿಯ ವ್ಯಾಖ್ಯೆ)

ಎಲ್ಲ ದೇಹಗಳಲ್ಲಿಯೂ ಆತ್ಮನು ಪ್ರತಿಷ್ಠಿತನಾಗಿರುತ್ತಾನೆ. ಪ್ರತಿ ದೇಹವೂ ಬೆಳೆಯಬೇಕಾದರೆ, ಇರುವ ಸ್ಥಿತಿಯಲ್ಲಿ ಇರಬೇಕಾದರೆ ಆತ್ಮನು ಅದರಲ್ಲಿ ಇರಬೇಕಾದರೆ ಆಹಾರವನ್ನು ಸೇವಿಸಲೇಬೇಕು. ಸೇವಿಸಿದ ಆಹಾರವು ಆಹಾರ ರೀತಿಯಲ್ಲಿಯೇ ದೇಹದಲ್ಲಿರದೆ, ಅದು ಶಕ್ತಿರೂಪವಾಗಿ ಪರಿವರ್ತನೆ ಹೊಂದಿ ದೇಹದ ಅವಯವಗಳಲ್ಲಿಯೂ ರಕ್ತದಲ್ಲಿಯೂ ಎಲ್ಲಾ ಭಾಗಗಳಲ್ಲಿಯೂ ಪ್ರಸರಿಸಬೇಕು. ಮತ್ತು ಆಹಾರದಲ್ಲಿರುವ ಶಕ್ತಿಯನ್ನು ಸಂಗ್ರಹಿಸಿ ಮೇಲೆ ಅನುಪಯುಕ್ತವಾದ ಆಹಾರದ ಭಾಗಗಳನ್ನು ಅವು ದೇಹಕ್ಕೆ ಬೇಡವಾದ್ದರಿಂದ ದೇಹದಿಂದ ಹೊರಗೆ ಎಸೆಯಬೇಕು.

ಆಹಾರ ತೆಗೆದುಕೊಳ್ಳುವುದು ಕ್ಲುಪ್ತ ಮತ್ತು ಮಿತವಾಗಿರುವಂತೆ ನಿಯಂತ್ರಿಸಬೇಕು. ಸಮಯಗಳನ್ನು ನಿರ್ಧರಿಸಬೇಕು. ತೆಗೆದುಕೊಂಡ ಆಹಾರ, ಪರಿವರ್ತನೆಯಾಗಬೇಕು. ಪರಿವರ್ತನೆಯಾದ್ದು ಗ್ರಹಿಸಲ್ಪಡಬೇಕು. ಬೇಡವಾದ್ದನ್ನು ತ್ಯಜಿಸಬೇಕು. ಈ ಕ್ರಮದಲ್ಲಿ ಯಾವ ಭಾಗಗಳಲ್ಲಿಯೂ ಅವಶ್ಯಕತೆಗೆ ಮತ್ತು ಶಕ್ತಿಗೆ ಮೀರಿ ಯಾವ ವಸ್ತುವೂ ಇರಬಾರದು. ಈ ರೀತಿ ನಡೆಯುವ ವ್ಯವಸ್ಥೆಯನ್ನು ಪರಮಾತ್ಮನು ಸಕಲ ದೇಹಗಳಲ್ಲಿಯೂ ತಾರತಮ್ಯವಿಲ್ಲದೆ ಇಟ್ಟಿರುತ್ತಾನೆ. ಮತ್ತು ತಾನೇ ಮನಸ್ಸು, ಬುದ್ಧಿ, ಇಂದ್ರಿಯಗಳಲ್ಲಿ ನಿಂತು ನಡೆಸುತ್ತಿರುತ್ತಾನೆ ಮತ್ತೆ ಪಚನವಾಗುವ ಕೇಂದ್ರವಾದ ಜಠರದಲ್ಲಿ ಜಠರಾಗ್ನಿಯಾಗಿ ನಿಂತು ಮಾಡುತ್ತಿರುತ್ತಾನೆ. ಹೃದಯದಲ್ಲಿ ನಿಂತು ಆಹಾರದಿಂದ ಬಂದ ಶಕ್ತಿಯನ್ನು ರಕ್ತವಾಗಿ ಪರಿವರ್ತಿಸಿ ದೇಹದ ಎಲ್ಲ ಭಾಗಗಳಲ್ಲಿಯೂ ಹರಿಯುವಂತೆ ಮಾಡುತ್ತಾನೆ ಎಂದ ಮೇಲೆ ಪ್ರತಿ ಆತ್ಮವು ಧರಿಸಿದ ದೇಹದಲ್ಲಿಯೂ ಇದು ಮಹಾ ಅಪ್ರತಿಮ ಯಜ್ಞದ ರೀತಿಯಲ್ಲಿ, ಏಕೆ ಯಜ್ಞವೇ ನಿರಂತರ ನಡೆಯುತ್ತಲೇ ಇರುತ್ತದೆ. ನಮ್ಮ ಬುದ್ಧಿ ಶಕ್ತಿಗೆ ಇದು ಸಾಮಾನ್ಯವಾಗಿ ನಿಲುಕದ ವಿಚಾರ.

ಪರಮಾತ್ಮನು ತನ್ನ ಅಗ್ನಿರೂಪದಲ್ಲಿ ಕಿರಣರೂಪದಲ್ಲಿ ದೇಹದಲ್ಲಿ ಪ್ರಸರಿಸಿ ದೇಹವೆಂಬ ಪಶುವಿನಲ್ಲಿ ಇರುವುದರಿಂದ "ಶಿಪಿವಿಷ್ಟ" ಎಂದಾಗಿದ್ದಾನೆ. ಆದರಿಂದ "ಶಿಪಿವಿಷ್ಟಾಯ ನಮಃ" ಎಂದು ಹೇಳಿದರೆ ತಪ್ಪಿಲ್ಲ. ದೇಹವೇ ಪಶು. ಪರಮಾತ್ಮನೇ ಯಜ್ಞಮಾಡುವವನು. ದೇಹವೇ ಯಜ್ಞಕುಂಡ. ಆತ್ಮನೇ ಸಾಕ್ಷಿಭೂತನಾಗಿ ನಿಂತಿರುವ ಬ್ರಹ್ಮದೇವರು. ಪರಮಾತ್ಮನೇ ಯಜ್ಞಕ್ಕೆ ಯಜಮಾನ ಸ್ವರೂಪನು. ಈ ರೀತ ಜ್ಞಾನವು ನಮಗೆ ಬಂದಮೇಲೆ ನಮ್ಮ ದೇಹವು ಎಂತಹ ಪುಣ್ಯಭೂಮಿ ಎಂದು ಆಶ್ಚರ್ಯವಾಗುತ್ತದೆ. ಮತ್ತೆ ಪ್ರತಿಯೊಬ್ಬರನ್ನು ಗೌರವಿಸಬೇಕೆಂಬ ಭಾವನೆ ಉತ್ಪನ್ನವಾಗುತ್ತದೆ. ಅಹಾ! ಪರಮಾತ್ಮನ ಸೃಷ್ಟಿಯೇ ವಿಚಿತ್ರ, ವಿಶೇಷವಾದ್ದು.

ಇದೇ ವಿಮರ್ಶೆಯು ಸಕಲ ಜೀವಕೋಟಿಗೂ ಮತ್ತು ಸಕಲ ಚರಾಚರ ವಸ್ತುಗಳಿಗೂ ಅನ್ವಯಿಸುತ್ತದೆ. ಎಲ್ಲದರ ಶ್ರೇಷ್ಠತೆಯು ತಾನಾಗಿಯೇ ವ್ಯಕ್ತವಾಗುತ್ತದೆ. ಅವನ ಆ ಶಕ್ತಿ, ದೇಹದ ರಚನಾ ಸಾಮರ್ಥ್ಯ ಎಲ್ಲವೂ ವಿಚಿತ್ರವೇ! ಎಂತಹ ಚತುರನು, ಬುದ್ಧಿವಂತನು, ಕ್ರಿಯಾಶೀಲನು. ನಡೆಸುವ ಸಾಮರ್ಥ್ಯವುಳ್ಳವನು. ಶಿಪಿವಿಷ್ಟನು. - "ಶಿಪಿವಿಷ್ಟಾಯ ನಮಃ" ಒಂದು ಶಬ್ದ ನಾಮದಲ್ಲಿ ಎಂತಹ ವಿಚಾರ ಅಡಗಿದೆ!!

### 55. ಹೃಷ್ಟಾಯ ನಮಃ

ಹೃಷ್ಟನಾದವನಿಗೆ ನಮಸ್ಕಾರಗಳು. ಪರಮೇಶ್ವರನು ಸದಾ ಸಂತೋಷದ ಸ್ಥಿತಿಯಲ್ಲಿ ಇರುತ್ತಾನೆ. ಯಾವಾಗಲೂ ಆನಂದಮಯನಾಗಿರುತ್ತಾನೆ. ಎಲ್ಲರನ್ನು ತನ್ನ ವಾತ್ಸಲ್ಯ ಭಾವದಿಂದ ಸಂತೋಷಪಡಿಸುತ್ತಾನೆ.

ಇದೇ ರೀತಿ ಸಂತುಷ್ಟರಾದವರು ಇತರರನ್ನು ಆನಂದದಲ್ಲಿರಲು ಸಹಾಯ ಮಾಡುತ್ತಾರೆ. ಹೃಷ್ಟರಾದರು ಎಲ್ಲರೂ ಪರಮಾತ್ಮನ ಭಾವವನ್ನೇ ಅನುಕರಿಸುತ್ತಾರೆ.

ಹೃ - ಎಂದರೆ ಆಕರ್ಷಿಸು ಎಂದು ಅರ್ಥಮಾಡಬಹುದು.

ಹೃಷ್ಟ - ಆಕರ್ಶಿಸಲ್ಪಟ್ಟವನು. ಪರಮಾತ್ಮನು ತನ್ನ ಮನಮೋಹಕ ನಯನಗಳಿಂದಲೂ, ತನ್ನ ವಾತ್ಸಲ್ಯದಿಂದಲೂ ಎಲ್ಲರ ಮನಸ್ಸನ್ನು ಸೂರೆ (ಗೊಳ್ಳುತ್ತಾನೆ) ಮಾಡುತ್ತಾನೆ. ಭಕ್ತರುಗಳು ಬಹಳ ಬೇಗ ಇವನ ರೂಪಲಾವಣ್ಯಗಳಿಂದಲೂ ಇವನ ಚರಿತ್ರೆಗಳಿಂದಲೂ ತಮ್ಮ ಮನಸ್ಸನ್ನು ಇವನಲ್ಲಿ ನೆಡುತ್ತಾರೆ ಮತ್ತು ಇವನಲ್ಲಿ ತಮ್ಮ ಆಶ್ರಯವನ್ನು ಕಂಡುಕೊಳ್ಳುತ್ತಾರೆ. ಇವನೇ ಅವರ ಮನಸ್ಸನ್ನು ಅಪಹರಿಸುವವನು, ಹೃಷ್ಟನು. - "ಹೃಷ್ಟಾಯ ನಮಃ".

ಹೃ - ನಾಶಮಾಡುವುದು - ಎಂದೂ ಅರ್ಥ. ಆಗ ಭಗವಂತನು ತನ್ನನ್ನು

ಪ್ರಾರ್ಥಿಸುವವರ ಕಷ್ಟಗಳನ್ನು ನಾಶಮಾಡುತ್ತಾನೆ. ಪ್ರಾರ್ಥಿಸಿದವರ ತೊಂದರೆಗಳನ್ನು ನಾಶಪಡಿಸುವುದೇ ಭಗವಂತನ ಧ್ಯೇಯ, - ಹೀಗೆ ಅರ್ಥಮಾಡಿದರೂ ಅವನು ಹೃಷ್ಟನು ಎಂದು ಹೇಳಬಹುದು.

**56.** ಪುಷ್ಟಾಯ ನಮಃ

ಪುಷ್ಟಿ - ಪೋಷಿಸುವವನು - ಪೋಷಣೆ, ವೃದ್ಧಿ ಮಾಡುವಿಕೆ.

ಪುಷ್ಟ - ಪೋಷಣೆ ಹೊಂದಿದ, ವೃದ್ಧಿಯಾದ, ಹೇರಳವಾಗಿ ಸಂತೋಷದಿಂದ ಬೆಳೆದವನು.

ಪರಮಾತ್ಮನಿಗೆ ದುಃಖವೆಲ್ಲಿ ಬಂತು, ಅವನಿಗೆ ಜೀವಕೋಟಿಗಳಿಗಿರುವಂತೆ ದ್ವಂದ್ವ - ಸುಖ ದುಃಖ, ಕಷ್ಟ, ಲಾಭ ನಷ್ಟ ಇತ್ಯಾದಿಗಳು ಇಲ್ಲ. ಅವನು ಯಾವಾಗಲೂ ಇವುಗಳಿಂದ ಮುಕ್ತನು. ಅವನು ಸದಾ ಆನಂದಮಯಿ. ಸಚ್ಚಿದಾನಂದ ಸ್ವರೂಪನು. ಅವನಿಗೆ ಪೋಷಣೆ ಎಂಬುದು ಇಲ್ಲ. ಅವನು ಪುಷ್ಟನು ಎಂದರೆ ಭಕ್ತರ ಪ್ರೇಮ, ಪ್ರೀತಿ ವಾತ್ಸಲ್ಯ, ಅತೀವ ಶ್ರದ್ಧೆ, ಅವ್ಯಭಿಚಾರಿಣೀ ಭಕ್ತಿ ಇವುಗಳಿಂದ ತುಂಬಿ ತುಳುಕಿ ಭಕ್ತರಿಗಾಗಿ ಏನನ್ನು ಬೇಕಾದರೂ ಮಾಡಲು ಸದಾ ಸಿದ್ಧನಿರುತ್ತಾನೆ. ಈ ರೀತಿ ನೋಡಿದರೆ, ವಿಮರ್ಶೆ ಮಾಡಿದರೆ ಅವನು ಪುಷ್ಟನು ಎನ್ನಬಹುದು.

ತದ್ವಿರುದ್ಧವಾಗಿ ದುಷ್ಟರನ್ನು ಶಿಕ್ಷಿಸುವಾಗ ಅವನು ಅತೀವ ಶಕ್ತಿಯನ್ನು ಪ್ರಕಟಿಸಬೇಕಾಗುತ್ತದೆ. ಆಗಲೂ ಅವನು ಶಕ್ತಿ, ಶೌರ್ಯಗಳಿಂದ ಪುಷ್ಟನಾಗಿರಬೇಕಾಗುತ್ತದೆ. ಆಗಲೂ ಅವನನ್ನು ಪುಷ್ಟನು ಎನ್ನಬಹುದು. ಎಂತಹ ಅರ್ಥದಿಂದ ನೋಡಿದರೂ ಪರಮಾತ್ಮನು ಸರ್ವ ರೀತಿಯಲ್ಲಿಯೂ ಸರ್ವಕಾಲದಲ್ಲಿಯೂ ಪುಷ್ಟನೇ ಆಗಿರಬೇಕು. ಅದರಿಂದ ಅವನಿಗೆ ''ಪುಷ್ಟಾಯ ನಮಃ'' ಎಂದು ನಮಸ್ಕರಿಸುತ್ತೇವೆ.

**57.** ಪರಮೇಷ್ಠಿನೇ ನಮಃ

ಪರಮ - ಉತ್ತಮವಾದ, ಉದಾತ್ತವಾದ,

ಇಷ್ಟಿ - ಯಜ್ಞ, ಆಶೆ, ಹುಡುಕುವುದು, ಕರೆಯುವುದು.

ಉತ್ತಮವಾದ ಯಜ್ಞಮಾಡಿದವನು ಯಾರೋ ಅವನು - ಶತಾಶ್ವಮೇಧಯಾಗ ಮಾಡಿದವನು ಯಾರೋ ಅವನು ದೇವೇಂದ್ರ.

ಪರಮೇಷ್ಠಿ - ದೇವೇಂದ್ರ, ಬ್ರಹ್ಮ ದೇವ.

ಪರಮೇಷ್ಠಿನ್ - ಬ್ರಹ್ಮದೇವ, ಶಿವ, ವಿಷ್ಣು, ಅಗ್ನಿ.

ಇಷ್ಟಿ ಎಂದರೆ ಯಜ್ಞ ಎಂದೇ ಸಾಮಾನ್ಯವಾಗಿ ಅರ್ಥಮಾಡುತ್ತೇವೆ. ಇದನ್ನ ಅನುಸರಿಸಿ ಈ ರೀತಿ ''ಪರಮೇಷ್ಠಿ'' ಶಬ್ದವನ್ನು ಅರ್ಥೈಸಬಹುದು.

ಶ್ರೇಷ್ಠನಾದ, ಅತ್ಯುತ್ತಮವಾದ ಯಜ್ಞಮಾಡಿದವನು.

ಶತಾಶ್ವಮೇಧಯಾಗ ಮಾಡಿದವನು ಎಂದರೆ ''ದೇವೇಂದ್ರ'' ಎನ್ನಬಹುದು.

ಪರಬ್ರಹ್ಮ ಸ್ವರೂಪಿಯಾದ, ಸೃಷ್ಟಿಕರ್ತನಾದ ಬ್ರಹ್ಮನ ಕಾರ್ಯವು ಒಂದು ಮಹಾಯಾಗವೇ. ನಿರಂತರ ಸೃಷ್ಟಿಮಾಡುವುದು ಊಹಿಸಲಸಾಧ್ಯವಾದ ಕಾಲ. ಒಂದೇ ಸಮನೇ ಸೃಷ್ಟಿಮಾಡುವುದು, ಜೀವಿಗಳಿಗೆ ಅವವುಗಳ ಸಂಸ್ಕಾರ, ಕರ್ಮ ಫಲಕ್ಕೆ ತಕ್ಕಂತೆ ಹಣೆಯ ಬರಹ ಬರೆದು ವಿಧಾತನಾಗಿ ಕೆಲಸ ಮಾಡುವುದು, ಜೀವಿಗಳನ್ನು ಆಯಾ ಯೋನಿಗಳಲ್ಲಿ ಸಚರಾಚರ ವಸ್ತು ಮತ್ತು ಯೋನಿಗಳಲ್ಲಿ ನಿರ್ವಹಿಸುವುದು, ದೇವ ದೇವತೆಗಳು, ಕಿನ್ನರ ಕಿಂಪುರುಷರು, ಇತ್ಯಾದಿಗಳನ್ನು ನಿರ್ವಹಿಸುವುದು, ಸಕಲ ಸ್ವರ್ಗದಿಂದ ಹಿಡಿದು ಪಾತಾಳದವರೆಗೆ ಎಲ್ಲವನ್ನು ನಿರ್ವಹಿಸುವುದು, ಕಲ್ಪಾದಿಯಿಂದ ಕಲ್ಪಾಂತದವರೆಗೆ ಮಹಾವಿಷ್ಣುವಿನ ಆಜ್ಞೆಯಂತೆ ಭೂಮಂಡಲ, ಬ್ರಹ್ಮಾಂಡಗಳನ್ನು ನಿರ್ವಹಿಸುವುದು, ಇತ್ಯಾದಿ - ಒಂದೇ ಎರಡೆ, ಅಗಣಿತ ಕಾರ್ಯಗಳು - ಸೇರಿದರೆ ಊಹಿಸಲಸಾಧ್ಯವಾದ ಯಜ್ಞವಾಗುತ್ತದೆ. ಇದೇ ಪರಮವಾದ ಇಷ್ಟಿ. ಇದನ್ನು ನಡೆಸುವವನು ಪರಮೇಷ್ಠಿ - ಇವನೇ ಬ್ರಹ್ಮ.

ಈ ಬ್ರಹ್ಮ ವಿಧಾತ, ಸೃಷ್ಟಿಕರ್ತ ಎಂದೆಲ್ಲ ಏನು ಹೇಳುತ್ತೇವೆಯೋ ಅವನೇ ಪರಬ್ರಹ್ಮ - ಮಹಾವಿಷ್ಣುವಿನ ನಾಭಿಯಲ್ಲಿ ಜನಿಸಿದ ಬ್ರಹ್ಮದೇವರು - ಕೊನೆಯಲ್ಲಿ ಬ್ರಹ್ಮದೇವರೂ ಸಹ ಪರಮಾತ್ಮನಲ್ಲಿ ಲೀನವಾಗಿ ಹೋಗುತ್ತಾರೆ. ಪರಮಾತ್ಮನ ಅಂಶದಲ್ಲಿದ್ದು ಕಾರ್ಯ ನಿರ್ವಹಿಸುತ್ತಾರೆ. ಅದರಿಂದಲೇ ಪರಮೇಷ್ಠಿನೇ ನಮಃ ಎಂದು ನಮಸ್ಕರಿಸುತ್ತೇವೆ.

ಅಗಾಧವಾದ ಕಾರ್‍ಯಗಳನ್ನು ಮಾಡುವುದೂ ಸಹ ಮಹಾಯಜ್ಞ ಮಾಡಿದಹಾಗೆ. ಈ ವಿಚಾರಧಾರೆಯಲ್ಲಿ ನೋಡಿದರೆ ಸೃಷ್ಟಿಕರ್ತನು ಪರಮೇಷ್ಠಿ ಎಂದಾದರೆ, ಮಹಾವಿಷ್ಣುವು ಸ್ಥಿತಿ ರೂಪದಲ್ಲಿರುವ ಕಾರಣ ಪರಮೇಷ್ಠಿ, ಲಯಕರ್ತೃವಾದ ಶಿವನೂ ಪರಮೇಷ್ಠಿಯೇ.

ಯಜ್ಞಗಳಲ್ಲಿ ಅಗ್ನಿಯು ಹವ್ಯವಾಹಕ. ಅವನು ಮಾಡುವ ಕಾರ್ಯವು ಸಕಲ ದೇವತೆಗಳಿಗೆ ಬೇಕಾದ್ದು. ಯಜ್ಞಮಾಡುವವರ ಇಷ್ಟಾರ್ಥಗಳನ್ನು ನಡೆಸಬೇಕಾದ್ದು ಅಗ್ನಿ ದೇವನ ಕರ್ತವ್ಯ. ಯಜ್ಞದಲ್ಲಿ ಸಮರ್ಪಿಸಿದ ಸಕಲ ಹವಿಸ್ಸುಗಳನ್ನು ಅಗ್ನಿದೇವರು ಪತ್ನಿ ಸ್ವಾಹಾದೇವಿಯೊಡನೆ ಬಂದು ಪರಿಗ್ರಹಿಸಿ ಪಚನ ಮಾಡಿ, ಹವ್ಯವನ್ನು ದೇವತೆಗಳಿಗೆ ತೆಗೆದುಕೊಂಡು ಹೋಗಿ ಕೊಡುವುದು - ಎಲ್ಲವೂ ಅಗ್ನಿದೇವನ ಪರಮ ಕರ್ತವ್ಯ. ಇಂತಹ ಪರಮ ಶ್ರೇಷ್ಠನಾದ ಕರ್ತವ್ಯಗಳನ್ನು ಇಷ್ಟಿಗಳ ಮೂಲಕ ಮಾಡುವುದರಿಂದ ಅಗ್ನಿದೇವನು ಪರಮೇಷ್ಠಿ. - ''ಪರಮೇಷ್ಠಿನೇ ನಮಃ''.

*ಪಟಿಷ್ಠಾಯ ವಸಿಷ್ಠಾಯ ಗರಿಷ್ಠಾಯೇಷ್ಟದಾಯಿನೇ ।*
*ನಮೋ ಜ್ಯೇಷ್ಠಾಯ ತುಷ್ಟಾಯ ಶ್ರೇಷ್ಠಾಯಾಮಿತತೇಜಸೇ ।।59।।*
*(358-365)*

**58. ಪಟಿಷ್ಠಾಯ ನಮಃ**

1. ಪಟ್ - ಭೇದಿಸು, ಇಷ್ಟ - ಅದರಲ್ಲಿ ಆಸಕ್ತಿಯುಳ್ಳವನು.

ಗೂಢ ಅರ್ಥಗಳನ್ನು ತಿಳಿಯುವುದರಲ್ಲಿ ಆಸಕ್ತಿಯುಳ್ಳವನು. ಅಜ್ಞಾನವನ್ನು ತೆಗೆದು ಜ್ಞಾನವನ್ನು ಕೊಡುವವನು ಯಾರೋ ಅವನು - ಪರಮಾತ್ಮ. ಅಜ್ಞಾನ, ಕತ್ತಲನ್ನು ಭೇದಿಸಿ ಜ್ಞಾನವನ್ನು ಮತ್ತು ಬೆಳಕನ್ನು ಪರಮಾತ್ಮನು ಕೊಡುತ್ತಾನೆ.

2. ಪಟ್ - ವಸ್ತ್ರ, ಪರದೆ, ಇಷ್ಟ - ಆಸಕ್ತಿಯುಳ್ಳವನು.

ಅಜ್ಞಾನವೂ, ಕತ್ತಲೆಯೂ,. ಮಾಯೆಯ ಪರದೆಯಿಂದ ಸತ್ಯವನ್ನು ಮುಚ್ಚಿರುತ್ತದೆ. ಯಾವಾಗ ಮಾಯೆಯು ನಿರ್ಮೂಲವಾಗಿ ಹೋಗಲು ಪರಮಾತ್ಮನ ಕೃಪೆಯಾಗುವುದೋ ಆಗ ಸತ್ಯಸ್ಥಿತಿಯು ಬಯಲಾಗುತ್ತದೆ. ಈ ಬಯಲಾಗುವ ಅತ್ಯುತ್ತಮ ಸ್ಥಿತಿ ಎಂದರೆ ಪರಮಾತ್ಮನ ಸಾಕ್ಷಾತ್ಕಾರ. ಇದಾಗ ಬೇಕಾದರೆ ಸಂಸಾರದ ಬಂಧನದಿಂದ ಕ್ರಮ ಕ್ರಮವಾಗಿ ಬಿಡುಗಡೆಯಾಗಬೇಕು. ಇದನ್ನು ನಮ್ಮ ಶ್ರದ್ಧೆ ಮತ್ತು ಅವ್ಯಭಿಚಾರಿಣಿ ಭಕ್ತಿಯೇ ಕೊಡುತ್ತವೆ. ಅದರಿಂದ ಮುಸುಕನ್ನು, ಕತ್ತಲೆಯನ್ನು, ಅಜ್ಞಾನವನ್ನು ತೆಗೆದು ಹಾಕುವವನು ಪರಮಾತ್ಮನೇ. ಅದಕ್ಕೇನೆ ಅವನಿಗೆ ಪಟಿಷ್ಟಾಯ ನಮಃ ಎನ್ನುತ್ತೇವೆ.

**59. ವಸಿಷ್ಠಾಯ ನಮಃ**

ವಸಿಷ್ಠರು ಸಪ್ತಋಷಿಗಳಲ್ಲಿ ಒಬ್ಬರು. ತಮ್ಮ ಹತ್ತಿರವಿದ್ದ ಕಾಮಧೇನುವಿನಿಂದ ವಿಶ್ವಾಮಿತ್ರನಿಗೆ ಮತ್ತು ಅವನ ಪರಿವಾರದವರಿಗೆ (ಸತ್ಕಾರವನ್ನು) ಕಿಂಚಿತ್ತೂ ಹಿಂದು ಮುಂದು ನೋಡದೆ ಸತ್ಕರಿಸಿದರು. ಆಗ ವಿಶ್ವಾಮಿತ್ರರಾಜನು ಧೇನುವನ್ನು ಯಾಚಿಸಲು ಅದು ಹೋಗದಿರಲು ವಿಶ್ವಾಮಿತ್ರನಿಗೂ ಮತ್ತು ವಸಿಷ್ಠರಿಗೂ ಮನಸ್ತಾಪವಾಯಿತು. (ಬ್ರಹ್ಮತೇಜೋ ಬಲಂ ಬಲಂ) ''ಧಿಗ್ಬಲಂ ಕ್ಷತ್ರಿಯ ಬಲಂ ಬ್ರಹ್ಮತೇಜೋ ಬಲಂ ಬಲಂ'' ಎಂದು ವಿಶ್ವಾಮಿತ್ರನು ಕ್ಷತ್ರಿಯತ್ವವನ್ನು ಧಿಕ್ಕರಿಸಿ ತಪಸ್ಸುಮಾಡಿ ಬ್ರಹ್ಮರ್ಷಿಯಾದನು. ವಸಿಷ್ಠರಿಂದಲೇ ಬ್ರಹ್ಮರ್ಷಿ ಎಂದು ಕರೆಸಿಕೊಂಡಾಗ ಅವನ ಮನಸ್ಸಿಗೆ ಶಾಂತಿಯಾಯಿತು.

ವಸಿಷ್ಠರು ಸೂರ್ಯವಂಶದ ರಾಜರ ಕುಲಗುರುಗಳು.

ವಸಿಷ್ಠರು ಸಪ್ತಋಷಿಮಂಡಲದಲ್ಲಿ ಇದ್ದಾರೆ. ಇವರ ಮತ್ತು ಇವರ ಪತ್ನಿ ಅರುಂಧತಿಯರ ದಾಂಪತ್ಯ ಎಷ್ಟು ಆದರ್ಶವಾಗಿದೆ ಎಂದರೆ ಮದುವೆಯಾದ ಪ್ರತಿ ದಂಪತಿಗಳಿಗೂ ವಸಿಷ್ಠ ಮತ್ತು ಅರುಂಧತಿಗಳಂತೆ ಬಾಳಿರಿ ಎಂದು

ಹಾರೈಸಿ ಅರುಂಧತಿ ನಕ್ಷತ್ರವನ್ನು ಅವರಿಗೆ (ನೂತನ ದಂಪತಿಗಳಿಗೆ) ತೋರಿಸುತ್ತಾರೆ.

ವಸಿಷ್ಠರು ಬ್ರಹ್ಮ ಮಾನಸ ಪುತ್ರರು.

ಪರಮಾತ್ಮನ ಸ್ವರೂಪವೇ ಆದ ಅಂಶದಿಂದ ವಸಿಷ್ಠರು ಬ್ರಹ್ಮರ್ಷಿಗಳಾಗಿ ಸಪ್ತಋಷಿಮಂಡಲದಲ್ಲಿ ವಿರಾಜಿಸಿದ್ದಾರೆ. ಆದರಿಂದ ವಸಿಷ್ಠರಿಗೆ ನಮಸ್ಕಾರ.

50. ಗರಿಷ್ಠಾಯ ನಮಃ

ಗರಿಷ್ಠ - ಎಂದರೆ ಅತ್ಯುತ್ತಮವಾದ ಸ್ಥಿತಿ, ಅತ್ಯುನ್ನತ ಸ್ಥಿತಿ.

ಬ್ರಹ್ಮಾಂಡದಲ್ಲೆಲ್ಲ ಅದರ ಸೂತ್ರಧಾರನು ಅತ್ಯುನ್ನತ ಸ್ಥಿತಿಯಲ್ಲಿರುವವನು.

ಸಕಲ ರೀತಿಯಲ್ಲಿಯೂ, ಯಾರ ರೀತಿಯಲ್ಲಿ ವಿಮರ್ಶೆ ಮಾಡಿದರೂ ಪರಮಾತ್ಮನೇ ''ಗರಿಷ್ಠ''ನು.

ಪ್ರಪಂಚದಲ್ಲಿ ಒಬ್ಬರಿಗಿಂತ ಇನ್ನೊಬ್ಬರು ಯಾವುದಾದರೂ ಒಂದು ವಿಧದಲ್ಲಿ ಗರಿಷ್ಠರಾಗಿರಬಹುದು. ಯೋನಿಗಳಲ್ಲಿ ತೆಗೆದುಕೊಂಡರೆ ಒಂದು ಯೋನಿಗಿಂತ ಇನ್ನೊಂದು ಯೋನಿಯು ಗರಿಷ್ಠ. ದೇವತೆಗಳಲ್ಲಿ ತೆಗೆದುಕೊಂಡರೆ ಒಬ್ಬರಿಗಿಂತ ಇನ್ನೊಬ್ಬರು ಗರಿಷ್ಠ. ಪ್ರತಿಯೊಂದಕ್ಕೂ ಒಬ್ಬರು ಗರಿಷ್ಠರು ಇದ್ದೇ ಇರುತ್ತಾರೆ. ಆದರೆ ಪರಮಾತ್ಮನೇ ಎಲ್ಲಕ್ಕೂ ಗರಿಷ್ಠನು. ಅವನಿಗಿಂತ ಗರಿಷ್ಠರು ಯಾವ ರೀತಿಯಲ್ಲಿಯೂ ಯಾವಾಗಲೂ ಯಾರೂ ಇಲ್ಲ. ಆದರಿಂದ ಇವನನ್ನು ''ಗರಿಷ್ಠಾಯ ನಮಃ'' ಎಂದು ನಮಸ್ಕರಿಸುತ್ತೇವೆ.

ಪರಬ್ರಹ್ಮ ಸ್ವರೂಪನಾದ ಮಹಾವಿಷ್ಣುವೇ ಸರ್ವಶಕ್ತನು, ಸರ್ವವನ್ನು ಸಂಕಲ್ಪಮಾತ್ರದಿಂದ ನಡೆಸುವವನು. ದೇವರುಗಳಲ್ಲಿ ಇಂತಹ ದೇವರು ದೊಡ್ಡವನೆಂದು ಹೇಳುವುದು ಸರಿಯಲ್ಲ. ಅದರಿಂದ ನಮ್ಮ ಮನಸ್ಸಿನಲ್ಲಿರುವ ಶ್ರದ್ಧೆ, ಭಕ್ತಿ ಕಡಿಮೆಯಾಗುತ್ತದೆ. ಆದರಿಂದ ಅನೇಕ ನಾಮರೂಪಗಳಿಂದ ಜೀವ ಕೋಟಿಗೆ ಸರ್ವವನ್ನು ಒದಗಿಸುವ ದೇವರು ಒಬ್ಬನೇ. ಇವನಲ್ಲಿ ನಾಮ ರೂಪ ಭೇದವಿಲ್ಲ. ಭೇದವೆಂದು ತಿಳಿಯುವುದು ಸರಿಯಲ್ಲ. ಅವರವರ ಶ್ರದ್ಧೆ ಭಕ್ತಿಗಳಿಗೆ ಅನುಗುಣವಾಗಿ ಅವರವರು ಪ್ರಾರ್ಥಿಸುವ ಪ್ರಾರ್ಥನೆಗಳನ್ನು ಪರಮಾತ್ಮನು ಈಡೇರಿಸುತ್ತಾನೆ.

ನಾವು ಕೇಳುವ ಪ್ರಾರ್ಥನೆ ಆಗಿನ ಸಮಯದಲ್ಲಿ ಕಂಡು ಬರುವ ಕಷ್ಟಗಳಿಗೆ ಪರಿಹಾರ ಮಾತ್ರ. ಆದರೆ ಯಾರು ಇಹ ಪರಗಳ ಅವಶ್ಯಕತೆಗಳನ್ನು ಅರಿತಿರುವರೋ ಅವರು ಬೇಡುವುದು ಸಾಮಾನ್ಯವಾದ ತಾತ್ಕಾಲಿಕ ಪರಿಹಾರಗಳನ್ನಲ್ಲ. ಅವರು ಬೇಡುವುದು ಭಗವಂತನಲ್ಲಿ ಅನನ್ಯ ಶ್ರದ್ಧೆ, ಅವ್ಯಭಿಚಾರಿಣಿ ಭಕ್ತಿ ಬೆಳೆಯಬೇಕೆಂದು ಮತ್ತು ಪುನರಾವೃತಿರಹಿತ ಸಾಲೋಕ್ಯ, ಸಾಯುಜ್ಯ, ಸಾರೂಪ್ಯ, ಸಾಮಿಪ್ಯಗಳನ್ನೆ. ಸದಾ ಭಗವಂತನಲ್ಲಿಯೇ

ಇರಬೇಕೆಂದು. ಇದನ್ನು ದಯಪಾಲಿಸುವವನು ದೇವರೊಬ್ಬನೇ - ಅವನೇ ಪರಮಾತ್ಮ - ಪರಬ್ರಹ್ಮ - ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕ - ಸೃಷ್ಟಿಕರ್ತೃ - ಸೂತ್ರಧಾರನು - ಅವನೇ ಗರಿಷ್ಠನು. ಅವನಿಗಿಂತ ಗರಿಷ್ಠರಿಲ್ಲ.

ಎಲ್ಲ ದೇವ ದೇವತೆಗಳು ಪರಮೇಶ್ವರನ ವಿಭಾಗದಂತೆ ಅವನ ಅಂಶವೇ ಆಗಿದ್ದು ಅವನ ಇಚ್ಛೆಯಂತೆ ಕಾಮನೆಗಳನ್ನು ದಯಪಾಲಿಸುತ್ತಾರೆ. ಒಬ್ಬನೇ ವ್ಯಕ್ತಿಯು ತಂದೆಯ ರೂಪದಲ್ಲಿ ಮಕ್ಕಳಿಗೂ, ಪತಿಯ ರೂಪದಲ್ಲಿ ಪತ್ನಿಗೂ, ಅಣ್ಣ, ತಮ್ಮಂದಿರ ರೂಪದಲ್ಲಿ ಸಹೋದರರಿಗೂ, ಮಗನ ರೂಪದಲ್ಲಿ ತಾಯಿಗೂ, ಕಾರ್ಯ ನಿರ್ವಾಹಕನಾಗಿ ಕಾರ್ಯಾಲಯದಲ್ಲಿಯೂ ಇದ್ದು ಅವರವರ ಕಾಮನೆಗಳನ್ನು ನಡೆಸುವಂತೆ, ಒಬ್ಬನೇ ಪರಮಾತ್ಮನು ವಿವಿಧ ರೂಪಗಳಲ್ಲಿ ವಿವಿಧ ಪ್ರಾರ್ಥನೆಗಳನ್ನು ನೆರವೇರಿಸುತ್ತಾನೆ. ವ್ಯಕ್ತಿಯು ಆಯಾ ಸಂಬಂಧಿಗಳಿಗೆ ತಕ್ಕಂತೆ ಸ್ಪಂದಿಸುತ್ತಾನೆ. ಪರಮಾತ್ಮನೂ ಹೀಗೆಯೇ. ಅದೇ ರೀತಿ ದೇವರನ್ನು ಒಬ್ಬನೇ ಎಂದು ತಿಳಿದು ಆರಾಧಿಸಬೇಕು. ಗರಿಷ್ಠನೆಂದೂ ಎಲ್ಲ ದೇವರುಗಳೂ ನಮ್ಮ ಅನುಕೂಲಕ್ಕೆ ಮಾತ್ರ ಎಂದು ತಿಳಿದು ಆರಾಧಿಸಬೇಕು.

## 61. ಇಷ್ಟದಾಯಿನೇ ನಮಃ

ಇಷ್ಟವಾದದ್ದನ್ನು ಕೊಡುವವನು ಯಾರೋ ಅವನು. ಇಷ್ಟವಾದುದು ಯಾವುದೋ ಅದನ್ನು ಯಾರಿಗೆ ಅದನ್ನು ಹೊಂದಿರುವ ಶಕ್ತಿ ಇದೆಯೋ ಅವರು ಮಾತ್ರ ಇಷ್ಟವಾದುದನ್ನು ಕೊಡಬಲ್ಲರು. ಅದನ್ನು ಹೊಂದಿರುವವರನ್ನು ಹುಡುಕಿಕೊಂಡು ಹೋಗುವುದು ಕಷ್ಟ. ಅಂತಹವರು ಸಿಕ್ಕಿದರೂ ಕೊಡುವ ಬುದ್ಧಿ ಮತ್ತು ಪ್ರಚೋದನೆ ಅವರಿಗೆ ಇರಬೇಕು. ಇದ್ದರೂ ಇಂತಹವರಿಗೆ ಕೊಡಬೇಕೆಂಬ ಬುದ್ಧಿ ಅವರಿಗೆ ಬರಬೇಕು, ಬಂದರೂ ಇಷ್ಟಪಟ್ಟವರ ಸಮಯಕ್ಕೆ ಸರಿಯಾಗಿ ಕೊಡಬೇಕು, ಕಾಲ ದೇಶ ಪಾತ್ರ ಇವು ಸರಿ ಎಂದು ಇದ್ದವರಿಗೆ ತೋರಿದರೆ ಮಾತ್ರ ಇದು ಸಾಧ್ಯ. ಇಷ್ಟಾದ ಮೇಲೆ ಈ ದಾತೃ, ದಾತರ ವ್ಯವಹಾರ ನಡೆದರೆ ಕೊಟ್ಟವನಿಗೆ ''ಇಷ್ಟದಾಯಿನೇ ನಮಃ'' ಎಂದು ತೆಗೆದುಕೊಂಡವರು ಕೃತಜ್ಞತೆಯನ್ನು ಸಲ್ಲಿಸಬಹುದು.

ಇದಿಷ್ಟೂ ಪ್ರಾಪಂಚಿಕ ದೈನಂದಿನ ವ್ಯವಹಾರ ಪ್ರತಿಕ್ಷಣದಲ್ಲಿಯೂ ಪ್ರತಿಯೊಂದು ಜೀವಿಯಲ್ಲಿಯೂ ನಡೆಯುತ್ತಲೇ ಇರುತ್ತದೆ. ಇದು ನಿರಂತರವಾಗಿ ನಡೆಯುವ ವ್ಯವಹಾರ.

ಇದು ಸೃಷ್ಟಿಯ ನಿಯಮ. ಇದು ನಡೆಯಬೇಕೆಂಬುದು ಪರಮಾತ್ಮನ ಸಂಕಲ್ಪ, ಜೀವ ಕೋಟಿಯ ಪ್ರತಿ ಜೀವಿಯೂ ಇದಕ್ಕೆ ಒಳಪಡುತ್ತದೆ ಮತ್ತು ಜೀವನವನ್ನು ನಡೆಸಲು ಇದಕ್ಕೆ ಒಳಪಡಲೇ ಬೇಕಾಗುತ್ತದೆ. ಹಾಗಾದರೆ

ಪ್ರತಿ ಇಷ್ಟದಾಯಕನು ಸದಾ ಇಷ್ಟದಾಯಕನಾಗಿ ಇದ್ದು ಕೃತಜ್ಞತೆಯನ್ನು ಪಡೆಯುವ ಸಾಧ್ಯತೆ ಬಹಳ ಕಡಿಮೆ.

ಆದರಿಂದ ನಮ್ಮ ಜೀವನದಲ್ಲಿ ಇಹಪರದಲ್ಲಿ ನಮ್ಮ ಶ್ರೇಯಸ್ಸಿಗೆ ಪ್ರೇಯಸ್ಸಿಗೆ ಅತ್ಯಂತ ಕಳಕಳಿಯುಳ್ಳವನು ಪರಮಾತ್ಮನೊಬ್ಬನೇ. ಇವನನ್ನು ಬಿಟ್ಟರೆ ಬೇರೆ ಎಲ್ಲರೂ ತಾತ್ಕಾಲಿಕವಾಗಿ ತತ್ಕ್ಷಣಕ್ಕಾಗಿ ಇಷ್ಟದಾಯಕರಾಗಿ ಮುಂದಿನ ಕ್ಷಣದಲ್ಲಿ ಅಳಿಸಿ ಹೋಗುತ್ತಾರೆ.

ಆದರಿಂದ ಸರ್ವಕಾಲದಲ್ಲಿಯೂ, ಸರ್ವದೇಶದಲ್ಲಿಯೂ ಇಹದ ಇಷ್ಟವಾಗಲೀ ಪರದ ಇಷ್ಟವಾಗಲೀ, ಅದನ್ನು ನೆರವೇರಿಸುವವನು ಪರಮಾತ್ಮನೊಬ್ಬನೇ. ಅವನೊಬ್ಬನೇ ನಂಬಿಕೆಗೆ ಅರ್ಹನು. ಇದಕ್ಕೆ ಬೇಕಾದ ವಸ್ತು ''ಇಷ್ಟ'', ನಂಬಿಕೆ, ಅನನ್ಯಶ್ರದ್ಧೆ, ಅವ್ಯಭಿಚಾರಿಣೀ ಭಕ್ತಿ. ಶ್ರದ್ಧೆ ಭಕ್ತಿ, ನಂಬಿಕೆಗಳಿಂದಲಾದರೂ ಭಗವಂತನಿಂದ ಏನನ್ನು ಬೇಕಾದರೂ ಪಡೆಯಬಹುದು. ಪಡೆಯಬೇಕಾದರೆ ನಮ್ಮ ಅತ್ಯಂತ ಅಮೂಲ್ಯವಾದ ಇಷ್ಟವೆಂದರೆ ಪರಮಾತ್ಮನಲ್ಲಿ ''ತ್ವತ್ಪಾದಾಂಭೋರುಹಯುಗಗತಾ ನಿಶ್ಚಲಾಭಕ್ತಿರಸ್ತು''. ಇದನ್ನೇ ಸರ್ವ ಭಕ್ತರೂ ಬೇಡುವುದು, ಇದನ್ನು ಅವನು ಕರುಣಿಸಿಯೇ ಕರುಣಿಸುತ್ತಾನೆ. ಏಕೆಂದರೆ ಭಕ್ತಿ ಪರವಶತೆಯಿಂದ ಮತ್ತು ಆಳವಾದ ಭಕ್ತಿಯಿಂದ ಪರಮಾತ್ಮನು ಭಕ್ತರ ಬಂಧನದೊಳಗೆ ಬೀಳುತ್ತಾನೆ. ಬಿಡಿಸಿಕೊಂಡು ಹೋಗಲು ಅವನಿಗೆ ಸಾಧ್ಯವಾಗಲಿಲ್ಲ.

''ಇಷ್ಟದಾಯಿನೇ ನಮಃ'' - ಇಷ್ಟದಾಯಕ ಶ್ರೇಷ್ಠನು ಪರಮಾತ್ಮ. ಸರ್ವ ಶ್ರೇಷ್ಠವಾದ ಇಚ್ಛೆ - ಪರಮಾತ್ಮನ ''ಸಾಲೋಕ್ಯ, ಸಾಮಿಪ್ಯ, ಸಾಯುಜ್ಯ, ಸಾರೂಪ್ಯ''.

**52. ಜ್ಯೇಷ್ಠಾಯ ನಮಃ**

ಜ್ಯೇಷ್ಠ - ಮೊದಲಿಗನು, ಮೊದಲನೆಯದು, ದ್ವಾದಶ ಮಾಸಗಳಲ್ಲಿ ಒಂದು - ಜ್ಯೇಷ್ಠಮಾಸ (3ನೆಯದು), 27 ನಕ್ಷತ್ರಗಳಲ್ಲಿ ಒಂದು ನಕ್ಷತ್ರ - ಜ್ಯೇಷ್ಠಾ (18ನೇಯದು).

ಮೊದಲಿಗನು - ಪರಮಾತ್ಮನು ಸಕಲ ಸೃಷ್ಟಿಗೂ, ಕಲ್ಪದ ಮುಂಚೆಯೂ, ಇದ್ದನು. ಈತನು ಪ್ರಳಯಾನಂತರ, ಪ್ರಳಯಕಾಲದಲ್ಲಿಯೂ, ಅಂಧಕಾರದಲ್ಲಿ ವಿಶಾಲ ಸಾಗರದಲ್ಲಿ ವಟಪತ್ರಶಾಯಿಯಾಗಿಯೂ ಚಿಕ್ಕ ಮಗುವಿನ ಆಕಾರದಲ್ಲಿಯೂ, ಯೋಗ ನಿದ್ರೆಯಲ್ಲಿಯೂ, ಸುಪ್ತವಾಗಿದ್ದರೂ ಜಾಗೃತಾವಸ್ಥೆಯಲ್ಲಿ ಮಗುವಿನರೂಪದಲ್ಲಿ ಆಟವಾಡುತ್ತಲೂ ಇದ್ದನು. ಇದು ಬ್ರಹ್ಮದೇವರು ನೋಡಿದ ಪರಮಾತ್ಮನ ರೂಪ. ಆದರೆ ಬ್ರಹ್ಮನು ನಾಭಿಕಮಲದಲ್ಲಿ ಬರುವುದಕ್ಕೆ ಮೊದಲು ನಾಭಿ ಪದ್ಮವುಳ್ಳ ಮಹಾವಿಷ್ಣುವು

ಆದಿಶೇಷನ ತಲ್ಪದಲ್ಲಿ ಶೇಷಶಾಯಿಯಾಗಿ (ಪವಡಿಸುತ್ತಿದ್ದನು) ಪವಡಿಸಿದ್ದನು. ಇದೆಲ್ಲ ನಡೆಯುವಾಗಲೂ ಕಾಲದೇವನಾಗಿ, ಸಮಯ ಪ್ರಭುವಾಗಿ ಸತತವಾಗಿ ಇದ್ದನು. ಆದರಿಂದ ಎಲ್ಲಕ್ಕೂ ಮೊದಲು ಪರಮಾತ್ಮನು ಇದ್ದದ್ದರಿಂದ ಜ್ಯೇಷ್ಠನೆಂದು ಹೇಳುತ್ತೇವೆ. ಅದರಿಂದ ಇವನಿಗೆ ''ಜ್ಯೇಷ್ಠಾಯ ನಮಃ'' ಎಂದು ನಮಸ್ಕರಿಸುತ್ತೇವೆ.

ಪ್ರತಿಸಮಯದಲ್ಲಿಯೂ ''ಯಾವುದು ಪ್ರಾರಂಭವಾಗುತ್ತದೆ ಯಾವುದನ್ನು ಪ್ರಾರಂಭಿಸುತ್ತೇವೆ'' ಎನ್ನುವ ಸನ್ನವೇಶ, ಕಾಲ, ದೇಶ, ಕಾರ್ಯಗಳು ಬರುವುವೋ ಅವೆಲ್ಲದರಲ್ಲಿಯೂ ಗುರುವನ್ನು, ಗಣಪತಿಯನ್ನು, ಇಷ್ಟದೇವರನ್ನು ಮೊದಲು ಪ್ರಾರ್ಥಿಸುತ್ತೇವೆ. ನಂತರ ಆ ''ತತ್'' ಕೆಲಸಕ್ಕೆ ಕೈ ಹಾಕುತ್ತೇವೆ. ಈಗ ಇದರಲ್ಲಿ ಬರುವ ''ಗುರು''ವು ಜ್ಯೇಷ್ಠನು. ಗುರುಕೃಪೆಯಿಲ್ಲದೆ ಯಾವುದೂ ಸಫಲವಾಗುವುದಿಲ್ಲ, ನಡೆಯುವುದಿಲ್ಲ, ಹೆಚ್ಚೇಕೆ ಪರಮಾತ್ಮನ ಕರುಣೆಯೂ ಲಭಿಸುವುದಿಲ್ಲ. ಕಾರ್ಯವೂ ನಡೆಯುವುದೇ ಇಲ್ಲ. ಅದರಿಂದ ಗುರುಪೂಜೆ ಅಗ್ರಪೂಜೆಯಾಗಿ ನಡೆಯುವುದು ಅಗತ್ಯ. ಗುರುವೇ ಪರಮಾತ್ಮನ ಸ್ವರೂಪ. ಗುರುತತ್ವವನ್ನು ಗುರುವಿನ ರಹಸ್ಯವನ್ನು ಪರಮಾತ್ಮನೂ ಸಹ ಅರಿಯನು. ಗುರುವು ಕೃದ್ಧನಾದರೆ ಪರಮಾತ್ಮನೂ ಕಾಪಾಡಲು ಶಕ್ತನಲ್ಲ. ಅದರಿಂದ ಗುರುವಿಗೆ ಇಷ್ಟು ಮಹತ್ವವಿದೆ. ಆದರೆ ಗುರುವು ಯಾರೂ ಅಲ್ಲದೆ ಎಲ್ಲದರಲ್ಲಿಯೂ ಪರಮಾತ್ಮನಲ್ಲಿಯೂ ಪ್ರಕಾಶಿಸುತ್ತಾನೆ. ಗುರುವು ಬೇರೆ ಅಲ್ಲ, ಪರಮಾತ್ಮನು ಬೇರೆ ಅಲ್ಲ. ಇದು ಬಹಳ ಗಹನವಾದ ರಹಸ್ಯ. ಅದರಿಂದ ಜ್ಯೇಷ್ಠಾಯ ನಮಃ ಎನ್ನುವುದು ಗುರುವಿಗೆ ಸಲ್ಲುತ್ತದೆ.

ಗಣಪತಿಯು ವಿಘ್ನಗಳಿಗೆ ಅಧಿಪತಿಯಾದ್ದರಿಂದ ವಿಘ್ನಗಳನ್ನೂ ಅಡೆತಡೆಗಳನ್ನು (ಬರಿಸಲು) ಒಡ್ಡಲೂ ಶಕ್ತನು. ಪರಿಹರಿಸಲೂ ಶಕ್ತನು. ಸರ್ವಕಾರ್ಯವು, ಸರ್ವ ಸಮಯದಲ್ಲಿಯೂ, ಸರ್ವದೇಶದಲ್ಲಿಯೂ ನಿರ್ವಿಘ್ನವಾಗಿ ನಡೆಯಬೇಕಾದರೆ ವಿಘ್ನೇಶ್ವರನಾದ ಗಣಪತಿಯ ಅನುಗ್ರಹ ಬೇಕು. ಅದರಿಂದ ಗಣಪತಿಗೆ ಮೊದಲು ಪೂಜೆ ಸಲ್ಲಿಸುತ್ತೇವೆ. ಈ ಕಾರಣಕ್ಕಾಗಿ ವಿಘ್ನೇಶ್ವರನು ಜ್ಯೇಷ್ಠನೆಂದಾಯಿತು, ಅದರಿಂದ ಅವನಿಗೆ ''ಜ್ಯೇಷ್ಠಾಯ ನಮಃ'' ಎಂದು ನಮಸ್ಕರಿಸಬೇಕು.

ನಂತರ ಇಷ್ಟದೈವ ಕುಲದೈವವೆಂದು ಯಾವ ದೇವರನ್ನು ನಂಬ ಹಿರಿಯರ ಕಾಲದಿಂದ ಮನೆಯಲ್ಲಿ ಪೂಜಿಸುತ್ತೇವೆಯೋ ಆ ದೇವರಿಗೆ ಮೊದಲು ಪೂಜಿಸಿ ನಂತರ ಆಗ ನಡೆಸುವ ಪೂಜೆ, ಕಾರ್ಯ ಮೊದಲಾದವುಗಳನ್ನು ಪ್ರಾರಂಭಿಸಬೇಕು. ಹೀಗೆ ವಿಮರ್ಶಿಸಿದರೆ ಇಷ್ಟದೇವರು, ಕುಲದೇವರು ಜ್ಯೇಷ್ಠ ದೇವರೇ! ಆದಕಾರಣ ಜ್ಯೇಷ್ಠಾಯ ನಮಃ ಎನ್ನುತ್ತೇವೆ.

ಅನೇಕ ಜ್ಯೇಷ್ಠದೇವರ ಪೂಜೆ ಮಾಡಿದಂತಾಯಿತು. ಶ್ರದ್ಧೆ, ಭಕ್ತಿಯಿಂದ

ಇವರುಗಳನ್ನು ನೆನೆದು ಪೂಜಿಸಿದರೆ ಎಂತಹದೇ ಕಾರ್ಯವಾದರೂ ಸಫಲವಾಗುತ್ತದೆ. ಎಲ್ಲ ದೇವರುಗಳೂ ಒಂದೇ ಎಂದು ತಿಳಿದರೂ ಈ ರೀತಿ ಮಾಡುವುದು ವಿವರಿಸಿ ವಿಮರ್ಶಿಸಿದಾಗ ಉಚಿತವೆನಿಸುತ್ತದೆ.

ಕಾಲಗಣನೆಯಲ್ಲಿ ಮಾಸಗಳು ಒಂದು ಭಾಗ.

ಮೂವತ್ತು ದಿನ ರಾತ್ರಿಗಳು ಸೇರಿದರೆ ಒಂದು ಮಾಸವಾಗುತ್ತದೆ. ಚಾಂದ್ರಮಾನ ಗಣನೆಯಲ್ಲಿ ಜ್ಯೇಷ್ಠಮಾಸವು ಮೂರನೆಯದು. ಮಾಸದ ಅಂಕಿತ ನಾಮವು ಆಯಾ ಮಾಸದ ಪೌರ್ಣಿಮೆಯ ದಿನ ಯಾವ ನಕ್ಷತ್ರವು ಬರುವುದ್ಲೊ ಆ ನಕ್ಷತ್ರದ ಮೇಲೆ ಮಾಸನಾಮವು ಬರುತ್ತದೆ.

ಜ್ಯೇಷ್ಠಮಾಸ, ಜ್ಯೇಷ್ಠ ನಕ್ಷತ್ರಗಳು ಒಂದನ್ನೊಂದು ಅವಲಂಬಿಸಿದೆ.

ಹಾಗೂ ಜ್ಯೇಷ್ಠಮಾಸ, ಜ್ಯೇಷ್ಠ ನಕ್ಷತ್ರದ ಜ್ಯೇಷ್ಠ ಪುತ್ರನಾದರೆ ಜ್ಯೇಷ್ಠಮಾಸದಲ್ಲಿ ಮದುವೆ ಮಾಡಬಾರದೆಂದು ಒಂದು ಸಂಪ್ರದಾಯವೂ ಹಿಂದುಗಳಲ್ಲಿ ವರ್ತನೆಯಲ್ಲಿದೆ.

ಕಾಲವನ್ನು ನಿರ್ಣಯಿಸುವ ಜ್ಯೇಷ್ಠಮಾಸವೂ ಕಾಲದೇವನಿಗೆ. ಅದರಿಂದ ''ಜ್ಯೇಷ್ಠಾಯ ನಮಃ''.

ನಕ್ಷತ್ರವು ದಿನವನ್ನು ಸೂಚಿಸುತ್ತದೆ, ನಕ್ಷತ್ರಗಳು ಪರಮಾತ್ಮನ ಸ್ವರೂಪವೇ.

ನಕ್ಷತ್ರಗಳು ಚಂದ್ರನ ಪ್ರಿಯರು, ಚಂದ್ರನು ಪರಮಾತ್ಮನ ಮನಸ್ಸಿನಿಂದ ಬಂದವನು (ಚಂದ್ರಮಾ ಮನಸೋಜಾತಃ) ಚಂದ್ರನು ಪರಮಾತ್ಮನ ರೂಪ, ಅದರಿಂದ ನಕ್ಷತ್ರಗಳೂ ಸಹ ಪರಮಾತ್ಮನೆ ''ನಕ್ಷತ್ರಾಣಾಂ ಅಹಂ ಶಶಿ''.

### 53. ತುಷ್ಟಾಯ ನಮಃ

ತೃಪ್ತನಾದವನು. ಜ್ಯೇಷ್ಠಸ್ಥಾನವನ್ನು ಪಡೆದದ್ದರಿಂದ ಸಕಲದಿಂದ ಅಗ್ರಪೂಜಿತನಾದವನು. ಅದರಿಂದ ತೃಪ್ತನಾಗಿದ್ದಾನೆ. ಪರಮಾತ್ಮನಿಗೆ ಯಾವ ಆಸೆಯೂ ಇಲ್ಲ, ಮಾಡಬೇಕಾದುದು ಯಾವುದೂ ಇಲ್ಲ. ಅವನು ಮಾಡದೇ ನಿಲ್ಲಿಸಿದರೆ ಪ್ರಪಂಚವು ಸ್ಥಗಿತವಾಗುತ್ತದೆ. ಇತರರೂ ಅವನನ್ನೇ ಅನುಸರಿಸುವುದರಿಂದ ಸ್ಥಗಿತವಾಗಿರುವುದೇ ಮೇಲ್ಪಂಕ್ತಿಯಾಗುತ್ತದೆ. ಸಂಸಾರವು ದುರ್ಗತಿಯ ಕಡೆ ಪ್ರವರ್ತಿಸುತ್ತದೆ. ಅದರಿಂದ ಅವನು ನಡೆಸುತ್ತಿರುವ ಪ್ರಪಂಚವನ್ನು ನಡೆಸುತ್ತಲೆ ಇರುತ್ತಾನೆ. ಇದರಿಂದ ತಾನು ಸಂಕಲ್ಪಿಸಿಕೊಂಡದ್ದು ನಡೆಯುತ್ತಿದೆ ಎಂದು ತುಷ್ಟನಾಗಿರುತ್ತಾನೆ. ಅದರಿಂದ ''ತುಷ್ಟಾಯ ನಮಃ'' ಎಂದಾಗುತ್ತದೆ.

ಪರಮಾತ್ಮನು ನಿತ್ಯ ತೃಪ್ತನು, ಅವನಿಗೆ ಇನ್ನೂ ಬೇಕು ಅಥವಾ ಬೇಡ ಎಂಬುದೇ ಇಲ್ಲ.

ನಿತ್ಯ ತೃಪ್ತನಾದ ಜೀವಿಯೂ ಜೀವನ್ಮುಕ್ತನು. ಅವನಿಗೆ ಬೇಕಾದುದು,

ಬೇಡವಾದುದು ಯಾವುದೂ ಇಲ್ಲ. ಇಂತಹವರು ಪ್ರಪಂಚದಲ್ಲಿ ವಿರಳ.

364. ಶ್ರೇಷ್ಠಾಯ ನಮಃ

ಶ್ರೇಷ್ಠ - ಎಂದರೆ ಉತ್ತಮನು, ಇತರರಿಂದ ಗೌರವಸಲ್ಪಡುವವನು, ಇತರರಿಗಿಂತ ಹೆಚ್ಚು ಕಲ್ಯಾಣ ಗುಣಗಳುಳ್ಳವನು ಯಾರೋ ಅವನು ಶ್ರೇಷ್ಠನು - ಪರಮಾತ್ಮ.

ಸಮಾಜದಲ್ಲಿ ಒಬ್ಬರಿಗಿಂತ ಒಬ್ಬರು ಉತ್ತಮರು ಇದ್ದೇ ಇರುತ್ತಾರೆ. ಆದರೆ ಒಂದೊಂದು ಗುಣದಲ್ಲಿ, ವಿಚಾರದಲ್ಲಿ, ವಿಶಯದಲ್ಲಿ ಎಂದು ಬಿಡಿಸಬಹುದು. ಆಚಾರದಲ್ಲಿ, ವ್ಯವಹಾರದಲ್ಲಿ, ಕರುಣೆಯಲ್ಲಿ, ದಯೆಯಲ್ಲಿ, ಹಣದಲ್ಲಿ, ವಿದ್ಯೆಯಲ್ಲಿ ಉತ್ತಮರೆಂದು ವಿಭಾಗಿಸಬಹುದು. ಒಂದೊಂದರಲ್ಲಿ ಉತ್ತಮರೆಂದು ಗುರುತಿಸಬಹುದು. ಒಂದು ಮನೆಯಲ್ಲಿ, ಒಂದು ಗ್ರಾಮದಲ್ಲಿ, ಒಂದು ಜಿಲ್ಲೆಯಲ್ಲಿ, ಒಂದು ನಾಡಿನಲ್ಲಿ, ಒಂದು ದೇಶದಲ್ಲಿ, ಹೀಗೆಯೇ ನಾನಾ ವಿಭಾಗದಲ್ಲಿ ಶ್ರೇಷ್ಠರನ್ನು ಗುರುತಿಸಬಹುದು. ಹಾಗೆ ಗುರುತಿಸಲ್ಪಟ್ಟವರಲ್ಲಿ ಮತ್ತೆ ಶ್ರೇಷ್ಠರನ್ನು ಗುರುತಿಸಲ್ಪಡಬಹುದು. ವಿವಿಧ ಗುಣಗಳಲ್ಲಿ - ಧನ, ವಿದ್ಯೆ - ಇತ್ಯಾದಿಗಳಲ್ಲಿ ಶ್ರೇಷ್ಠರಲ್ಲಿ ಶ್ರೇಷ್ಠತಮರನ್ನು ಗುರುತಿಸಬಹುದು. ಈ ಗುಣಗಳಲ್ಲಿ ಕೂಡಿ ಶ್ರೇಷ್ಠರನ್ನು ಗುರುತಿಸುವುದು ಕಷ್ಟ. ಸಕಲ ರೀತಿಯಲ್ಲಿಯೂ, ಸಕಲ ಕಾಲದಲ್ಲಿಯೂ, ಸಕಲ ಭುವನದಲ್ಲಿ, ಸಕಲ ಲೋಕಗಳಲ್ಲಿಯೂ, ಎಲ್ಲೆಲ್ಲಿಯೂ ಅಗ್ರಶ್ರೇಷ್ಠನನ್ನು ಹುಡುಕುವುದು ಬಹಳ ಕಷ್ಟ, ಹೀಗಾಗಿ ಆತನು ಎಲ್ಲರಿಗೂ ಸದಾಕಾಲದಲ್ಲಿಯೂ, ಸರ್ವ ರೀತಿಯಲ್ಲಿಯೂ ಮಾನ್ಯನಾಗಿ ಶ್ರೇಷ್ಠನಾಗಿರಬಹುದು. ಎಲ್ಲರಿಗೂ ಒಪ್ಪಿಗೆಯಾಗಿರಬೇಕು, ಇಂತಹ ಮಾನದಂಡ ಎಂದರೆ - ಸದಾ ಸಕಲ ಜೀವ ಕೋಟಿಗೂ ಸಕಲ ಚರಾಚರ ವಸ್ತುವಿಗೂ ಸರ್ವದಾ ಬೇಕಾದ ಹಿತೈಷಿ ಎಂದರೆ - ಸಾಕ್ಷಾತ್ ಪರಮೇಶ್ವರನನ್ನ ಬಿಟ್ಟರೆ ಬೇರೆ ಇಲ್ಲ - ಅವನೇ ಶ್ರೇಷ್ಠನು - ಸಕಲ ಸೃಷ್ಟಿಯಲ್ಲಿ ಆ ಬ್ರಹ್ಮ ಕೀಟ ಪರ್ಯಂತದಲ್ಲಿ ಯಾವ ದೇವತೆಯೇ ಆಗಲೀ, ದೇವನಾಗಲೀ, ಜೀವಿಯೇ ಆಗಲಿ, ಪರಮಾತ್ಮನ ಸಮಕ್ಕೆ ಬರಲಾರರು. ಸಕಲರಿಗೂ ಕರುಣೆಯಲ್ಲಿಯೂ ಭಕ್ತ ಪರಾಧೀನತೆಯಲ್ಲಿಯೂ ಯಾರೂ ಸಮರಲ್ಲ.

ಪರಮಾತ್ಮನೇ ಪರಮ ಶ್ರೇಷ್ಠನು. ಸರ್ವರಿಗೂ ಸಮ್ಮತನಾದ ಶ್ರೇಷ್ಠನು. ಸರ್ವರಿಂದಲೂ ಪೂಜಿಸಲ್ಪಡುವವನು. ಆರ್ತರು, ಜಿಜ್ಞಾಸುಗಳು, ಅರ್ಥಾರ್ಥಿಗಳು ಜ್ಞಾನಿಗಳು ಎಲ್ಲರಿಂದಲೂ ಮೊರೆ ಹೋಗಲ್ಪಡುವ ಏಕೈಕ ಭಕ್ತಪರಾಧೀನ - ಪರಮೇಶ್ವರ - ಶ್ರೇಷ್ಠಾಯ ನಮಃ.

365. ಅಮಿತತೇಜಸೇ ನಮಃ

ತೇಜಃ - ಬೆಳಕು, ಜ್ಞಾನವು ಬೆಳಕೇ,

ಮಿತ - ಇಷ್ಟು ಎಂದು ಹೇಳುವ ಭಾವನೆ ಅಥವಾ ಇಷ್ಟು ಸಾಕು, ಇಷ್ಟು ಸಾಕಾಗುತ್ತದೆ ಎಂದು ಹೇಳುವ ಭಾವನೆ.

ಅ - ಮಿತ - ಇಷ್ಟೆಂದು ಬಂಧನವಿಲ್ಲ, ಎಷ್ಟಾದರೂ ಆಗಬಹುದು.

ಅಮಿತತೇಜಸೇ ನಮಃ, ಪರಿಮಿತಿಯಿಲ್ಲದಷ್ಟು ಬೆಳಕು ಉಳ್ಳವನು, ಜ್ಞಾನವುಳ್ಳವನು, ಪ್ರಕಾಶವುಳ್ಳವನು. ಪರಮಾತ್ಮನಿಗೆ ಯಾವುದೂ ಇಷ್ಟೇ ಎಂದು ಇಲ್ಲ. ಅವನ ಶಕ್ತಿ, ಚತುರತೆ, ತೇಜಸ್ಸು ಮುಂತಾದವು ಇಷ್ಟೇ ಎಂದು ಮಿತಿಯಿಲ್ಲ.

ಪ್ರತಿ ಜೀವಿಯಲ್ಲಿಯೂ ಒಂದು ಅವ್ಯಕ್ತ ಶಕ್ತಿ ಇರುತ್ತದೆ. ತೇಜಸ್ಸು ಇರುತ್ತದೆ. ಇದೇ ಆತ್ಮಶಕ್ತಿ. ಇದಕ್ಕೇನೆ ಇಷ್ಟೇ ಶಕ್ತಿ, ತೇಜಸ್ಸು ಎಂದು ಮಿತಿಯಿಲ್ಲ. ಆದರೆ ಇದರ ತೇಜಸ್ಸು, ಶಕ್ತಿ ಎಲ್ಲವೂ ಅವ್ಯಕ್ತ. ಇದರ ಪ್ರಕಾಶವನ್ನು ತಿಳಿಯಲು ಜ್ಞಾನ ಶಕ್ತಿ ಬೇಕು. ಇದು ಪರಮಾತ್ಮನ ಕೃಪೆಯಿಂದ ಬರುತ್ತದೆ. ಒಂದು ಜೀವಶಕ್ತಿ ದೇಹದಲ್ಲಿರುವ ಆತ್ಮಶಕ್ತಿಯೇ ಅಮಿತವಾಗಿರಬೇಕಾದರೆ, ಸಕಲ ಬ್ರಹ್ಮಾಂಡವನ್ನೇ ನಿರ್ಮಿಸಿದ ಪರಮಾತ್ಮನ ತೇಜಸ್ಸು ಎಷ್ಟಿರಬಹುದು, ಇದನ್ನು ಊಹಿಸಲು ಅಸಾಧ್ಯ.

ಈ ಬ್ರಹ್ಮಾಂಡವನ್ನೇ ತನ್ನ ಉದರದಲ್ಲಿ ಅಡಗಿಸಿಕೊಂಡಿರುವ ಪರಮಾತ್ಮನ ತೇಜಸ್ಸು ಎಷ್ಟಿರಬೇಕು, ''ಅಮಿತ''. ಎಷ್ಟು ಪ್ರಮಾಣದ ''ಅಮಿತ'' ಎಂದು ಹೇಳಿದರೂ ಸಾಲದು. ಆದರಿಂದಲೇ ಭಗವಂತನು ''ಅಮಿತತೇಜಸೇ ನಮಃ'' - ಇದರಲ್ಲಿ ಯಾರದೇ ಆದ ವಿಮರ್ಶನಾ ಶಕ್ತಿ, ಊಹಾ ಶಕ್ತಿ, ಎಲ್ಲವೂ ಶೂನ್ಯವಾಗುತ್ತದೆ. ಅಷ್ಟೇ ಏಕೆ, ಸಕಲ ದೇವ ದೇವತೆಗಳು, ಋಷಿಮುನಿಗಳು, ವೇದಾದಿಗಳು - ಇವುಗಳಿಗೆ ಪರಮಾತ್ಮನನ್ನು ಊಹಿಸಲು ಸಾಧ್ಯವೇ ಇಲ್ಲ.

ಆದರೆ ಭಗವಂತನು ಭಕ್ತಪರಾಧೀನನು, ಶ್ರದ್ಧೆ, ಭಕ್ತಿಯಿರುವಲ್ಲಿ ಪರಮಾತ್ಮನು ಸುಲಭ, ತನ್ನ ರೂಪವನ್ನು ತೋರಿಸುತ್ತಾನೆ. ಆದರೆ ಅದನ್ನು ನೋಡಲು ದಿವ್ಯಚಕ್ಷುವನ್ನು ಕೂಡುತ್ತಾನೆ. ಶ್ರೀಕೃಷ್ಣನು ಅರ್ಜುನನಿಗೆ ವಿಶ್ವರೂಪವನ್ನು ನೋಡಲು ದಿವ್ಯಚಕ್ಷುವನ್ನು ಕೊಟ್ಟನು. ಅದನ್ನು ನೋಡಿ ಸಂತೋಷಪಡಬೇಕೇ ಹೊರತು, ಇತರರಿಗೆ ವಿವರಿಸಲು ಸಾಧ್ಯವಿಲ್ಲ. ಅಂತಹ ಶಕ್ತಿಯೂ ಇಲ್ಲ. ಇದಕ್ಕೇ ಪರಮಾತ್ಮನು ''ಅಮಿತತೇಜಸೇ ನಮಃ'' ಎನ್ನುವುದು.

ಗೋಪಿಯರಿಗೆ ತನ್ನ ತೇಜೋಮಯ ದೇಹದಿಂದ ಸಂತೋಷಪಡಿಸಿದನು. ತನ್ನದೇ ಆದ ತೇಜಶ್ಶಕ್ತಿಯಿಂದ ಎಲ್ಲವನ್ನು ಸೂತ್ರಧಾರನಾಗಿ ನಡೆಸುತ್ತಾನೆ. ಇಡೀ ವಿಶ್ವವೇ ಅವನ ತೇಜಶ್ಶಕ್ತಿಯಿಂದಲೇ ಅವನ ''ಏಕಾಂಶೇನ ಸ್ಥಿತೋ ಜಗತ್'' ಎಂದಾಗಿದೆ. ಪರಮಾತ್ಮನು ಕಿರು ಬೆರಳಿನಿಂದ ಗೋವರ್ಧನ

ಪರ್ವತವನ್ನು ಎತ್ತಿ ಏಳು ದಿನ ಸತತವಾಗಿ ಹಿಡಿದಿದ್ದನು. ಇದೇ ಅವನ ಅಮಿತ ತೇಜಸ್ಸಿಗೆ ಉದಾಹರಣೆ.

*ಅಷ್ಟಾಂಗನ್ಯಸ್ತರೂಪಾಯ ಸರ್ವದುಷ್ಟಾಂತಕಾಯ ಚ ।*
*ವೈಕುಂಠಾಯ ವಿಕುಂಠಾಯ ಶಿತಿಕಂಠಾಯ ತೇ ನಮಃ ॥60॥*
*(366-370)*

**66. ಅಷ್ಟಾಂಗನ್ಯಸ್ತರೂಪಾಯ ನಮಃ**

ನ್ಯಸ್ತ - ಎಂದರೆ ಇಡಲ್ಪಟ್ಟಿದ್ದು, ಪ್ರಮಾಣಕ್ಕಾನುಸಾರವಾಗಿ ಇಡಲ್ಪಟ್ಟಿದ್ದು, ಆಶ್ರಯ ಹೊಂದಿದ್ದು, ಚಿತ್ರಿಸಲ್ಪಟ್ಟಿದ್ದು ಅಥವಾ ತನ್ನ ಅಂಕುಶದಲ್ಲಿರುವಂತೆ ಇರುವಂತಹದು.

ಅಷ್ಟಾಂಗಗಳು - ನಮಸ್ಕಾರ ಮಾಡುವಾಗ ಸಾಷ್ಟಾಂಗ ನಮಸ್ಕಾರ ಮಾಡುವುದು ಎನ್ನುತ್ತೇವೆ - ಹೇಗೆಂದರೆ ಶಿರಸಾ, ಉರಸಾ, ಪದ್ಭ್ಯಾಂ, ಹಸ್ತಾಭ್ಯಾಂ, ಕರ್ಣಾಭ್ಯಾಂ, ಚಕ್ಷುಭ್ಯಾಂ, ಶ್ರೋತ್ರಭ್ಯಾಂ, ನಾಸಿಕೇನ ನಮಃ ಎಂದು. ಈ ಎಂಟು ಅಂಗಗಳನ್ನು ಪ್ರಮಾಣೀಕರಿಸಿ ಇಡಲ್ಪಟ್ಟ ದೇಹಕ್ಕೆ ಆಜಾನುಬಾಹು - ಎನ್ನುತ್ತೇವೆ. ಶ್ರೀರಾಮನು ಆಜಾನುಬಾಹು, ಸುಂದರ ರೂಪನು, ದೇಹದ ಎಲ್ಲಾ ಅವಯವಗಳು ಹೇಗಿದ್ದವೆಂದು ಸೀತಾದೇವಿಯು ಹನುಮಂತನನ್ನು ಅವನು ತಂದ ರಾಮನ ಉಂಗುರವನ್ನು ಅಶೋಕವದಲ್ಲಿ ಕೊಟ್ಟಾಗ ಕೇಳಿದಳು. ಆಗ ವ್ಯಾಕರಣ ಪಂಡಿತ ಹನುಮಂತನು ಹೇಳಿದನು. ಸೀತಾದೇವಿಗೆ ತಿಳಿದಿದ್ದರೂ ರಾಮನ ದೇಹದ ವರ್ಣನೆಯನ್ನು ಕೇಳಬೇಕೆಂದು ಇಷ್ಟ; ಹಾಗೂ ಹನುಮಂತನನ್ನು ನಿಜವಾಗಿ ರಾಮನು ಕಳಿಸಿದ್ದಾನೆಯೇ, ರಾಮನನ್ನು ಇವನು ನೋಡಿರುವನೇ ಎಂದು ತಿಳಿಯಲು ಕೇಳಿದಳು. ಪರಮಾತ್ಮನ ಅವತಾರದ ಎಲ್ಲ ದೇಹಗಳು ಪ್ರಮಾಣಕ್ಕೆ ತಕ್ಕಂತೆ ಇದ್ದವೆಂದು ತಿಳಿದಿರುತ್ತೇವೆ. ಸರ್ವಾಂಗಗಳು ಸುಂದರವಾಗಿದ್ದವು, ರೂಪ ಲಾವಣ್ಯದಲ್ಲಿ ಮನಮೋಹಕವಾಗಿದ್ದವು, ಅದರಿಂದ ಅಷ್ಟಾಂಗನ್ಯಸ್ತರೂಪಾಯ ಎಂದು ನಮಸ್ಕರಿಸುತ್ತೇವೆ. ಎಂತಹದೇ ಅವತಾರವಾಗಲೀ ಅವನ ಅವತಾರ ವಿಶೇಷವಾದ್ದು.

ದೇಹದ ಎಲ್ಲಾ ಅವಯವಗಳೂ ವಿಶೇಷವಾಗಿ ಯಾರನ್ನಾದರೂ ಆಕರ್ಷಿಸುತ್ತವೆ.

ಇದೇ ರೀತಿ ಯಾವ ಯೋನಿಯ ಯಾವುದೇ ಜೀವಿಯ ದೇಹವೇ ಆಗಲಿ ಅದದರ ರೀತಿಯಲ್ಲಿ ಸರ್ವಾಂಗಗಳಿಂದ ಕೂಡಿ ಸುಂದರವಾಗಿರುತ್ತದೆ. ಇದು ಪರಮಾತ್ಮನ ಸೃಷ್ಟಿಯ ವೈಶಿಷ್ಟ್ಯ. ಆಕರ್ಷಕವೇನೆಂದರೆ ಅದರಲ್ಲಿರುವ ಆತ್ಮ - ತೇಜಸ್ಸಿನ ಪ್ರಭಾವವೇ ಕಾರಣ.

ಸಕಲ ಆತ್ಮಗಳೂ ಒಂದೇ. ಏಕ ರೀತಿಯಲ್ಲಿ ತೇಜಸ್ಸುಉಳ್ಳವುಗಳು. ಅದೇ ಪರಮಾತ್ಮನಿಂದ ಹೊರ ಹೊಮ್ಮಿ ಬಂದವುಗಳು.

67. ಸರ್ವದುಷ್ಟಾಂತಕಾಯ ನಮಃ

ದುಷ್ಟ - ಎಂದರೆ ಕೆಟ್ಟವರು, ಸಾತ್ವಿಕವಲ್ಲದ ಗುಣವುಳ್ಳವರು,

ಅಂತ - ಎಂದರೆ ಈ ಗುಣವುಳ್ಳವರ ದುರ್ಗುಣಗಳನ್ನು ಕೊನೆಗಾಣಿಸುವುದು,

ಅಂತಕ - ಕೊನೆಗಾಣಿಸುವವನು.

ಸರ್ವದುಷ್ಟಾಂತಕಾಯ - ಎಂದರೆ ಎಲ್ಲಾ ದುರ್ಗುಣಗಳುಳ್ಳವರ ದುರ್ಗುಣಗಳನ್ನು ಕೊನೆಗಾಣಿಸುವವನು ಯಾರೋ ಅವನು.

ದುಷ್ಟಗುಣಗಳನ್ನು ಹೋಗಲಾಡಿಸವರು ಹಿತೈಷಿಗಳು. ಒಳ್ಳೆಯ ದಾರಿಯಲ್ಲಿ ಬರುವ ಹಾಗೆ ಮಾಡುವವರು ಅವರೇ. ಇವರಿಗೆ ಯಾವಾಗಲೂ ಒಳ್ಳೆಯದನ್ನೆ ಮಾಡಬೇಕೆಂಬ ಅಭಿಲಾಷೆ ಇರುತ್ತದೆ. ಸಜ್ಜನರಿಗೆ, ಸಾಧುಗಳಿಗೆ, ಸಂತರಿಗೆ, ಸನ್ಯಾಸಿಗಳಿಗೆ ಯಾವಾಗಲೂ ಯಾರಾದರೇನು - ಅವರಿಗೆ ಜ್ಞಾನ, ಒಳ್ಳೆಯ ನಡತೆ ಬೋಧಿಸುವ ಅಭಿಲಾಷೆ ಇರುತ್ತದೆ. ಇವರಿಗೆ ಯಾವ ಸ್ವಾರ್ಥವೂ ಇರುವುದಿಲ್ಲ. ಒಳ್ಳೆಯ ಹೆಸರನ್ನು ಪಡೆಯಬೇಕೆಂಬ ಆಸೆ ಇರುವುದಿಲ್ಲ. ಲೋಕಕಲ್ಯಾಣವೇ ಮುಖ್ಯವಾದ್ದು ಮತ್ತು ಧ್ಯೇಯವಾಗಿ ಇರುತ್ತದೆ. ಆದರೆ ಕೆಲವರು ತತ್ಕಾಲದಲ್ಲಿ ತೋರಿಕೆಯ ಒಳ್ಳೆಯ ಮನಸ್ಸಿನಿಂದ ಬೋಧಿಸಿ ನಂತರ ಅವರಿಂದ ಸ್ವಾರ್ಥದ ಇಷ್ಟವನ್ನು ಪಡೆಯುತ್ತಾರೆ. ಇದು ಸರಿಯಲ್ಲ. ಇದು ಮನುಷ್ಯರಲ್ಲಿ ಸಹಜ ಗುಣವಾಗಿರುತ್ತೆ. ಆದರೆ ಪರಮಾತ್ಮನಲ್ಲಿ ಆ ತರಹದ ಯಾವ ಸ್ವಾರ್ಥವೂ ಇರುವುದಿಲ್ಲ. ಅವನಿಗೆ ಒಳ್ಳೆಯ ಸಾತ್ವಿಕ ಗುಣವನ್ನು ವೃದ್ಧಿಪಡಿಸುವುದೇ ಗುರಿ. ಈ ಕಾರಣದಿಂದ ಭಗವಂತನನ್ನು ಎಲ್ಲರೂ ಯಾವಾಗಲೂ ಸದಾ ಪೂಜಿಸುತ್ತಾರೆ ಮತ್ತು ಭಕ್ತಿ ಶ್ರದ್ಧೆಯಿಂದ ಅವನನ್ನೇ ಬೇಡುತ್ತಾರೆ. ಎಲ್ಲ ರೀತಿಯ ದೃಷ್ಟಪರಿಣಾಮವನ್ನು ಹೋಗಲಾಡಿಸುತ್ತಾನೆ. ಬಂಧನವೂ ಒಂದು ರೀತಿಯ ದುಷ್ಟಗುಣವೇ ಸಂಸಾರ ಬಂಧನವನ್ನು ಸುಖ ಲೋಲುಪ್ತಿಯಲ್ಲಿಯೇ ಪರಿವರ್ತಿಸಿದರೆ ಅದು ಬಿಡುಗಡೆಯ ದಾರಿಯಲ್ಲ. ಆದರೆ ಆ ಸಂಸಾರ ಬಂಧನವನ್ನೇ ಪರಮಾತ್ಮನೆಡೆಗೆ ತಿರುಗಿಸಿ ಮುಕ್ತಿ ಸಾಧಿಸಲು ಮಾಡಿದಾಗ ಬಿಡುಗಡೆಯು ತಾನಾಗಿಯೇ ಬರುತ್ತದೆ.

ನಮಗೆ ಬಂದ ದುಷ್ಟ ಬಾಧೆಗಳನ್ನೇ ಆಗಲಿ, ದುಷ್ಟ ಬಂಧನಗಳೇ ಆಗಲಿ, ದುಷ್ಟ ಪರಿಸರವೇ ಆಗಲಿ, ದುಷ್ಟ ಸಹವಾಸವೇ ಆಗಲಿ - ಇವುಗಳನ್ನು ಸೂಕ್ತ ರೀತಿಯಲ್ಲಿ ಪರಮಾತ್ಮನನ್ನು ಆಶ್ರಯಿಸುವುದರಿಂದ ಪರಿಹರಿಸಿಕೊಳ್ಳಬಹುದು.

ಸೃಷ್ಟಿಯಲ್ಲಿ ಪರಮಾತ್ಮನೊಬ್ಬನೇ ಎಲ್ಲರಿಂದಲೂ ಆಶ್ರಯಿಸಲ್ಪಡುವ ಸರ್ವದುಷ್ಟಾಂತಕನು. ಇವನನ್ನು ಆಶ್ರಯಿಸಬೇಕಾದರೆ ಯಾವುದೇ ರೀತಿಯ ಸಂಕೋಚವೂ ಅನುಮಾನವೂ ಬೇಕಾಗಿಲ್ಲ. ನಿರ್ವಂಚನೆಯಿಂದ ನಿಷ್ಕಲಂಕವಾದ ಪರಿಶುದ್ಧವಾದ ಮನಸ್ಸಿನಿಂದ ಮೊರೆ ಹೊಕ್ಕರೆ ಸಕಲವೂ ಸಿದ್ಧಿಸುವುದು.

368. ವೈಕುಂಠಾಯ ನಮಃ

ವೈಕುಂಠ ಎಂಬುದು ಮಹಾವಿಷ್ಣುವಿನ ವಾಸಸ್ಥಾನ, ಇದನ್ನೇ ಪರಮ ಪದ, ಪರಂಧಾಮ, ಎಂದು ಕರೆಯುತ್ತೇವೆ. ಇದರ ಹೆಸರಿನಲ್ಲಿಯೇ ಪರಮಾತ್ಮನನ್ನು ''ವೈಕುಂಠಾಯ ನಮಃ'' ಎಂದು ಕರೆಯುವುದು.

ವೈಕುಂಠದಲ್ಲಿ ಜೀವಿಗಳು ಪರಮಾತ್ಮನಾದ ಮಹಾವಿಷ್ಣುವಿನ ಸಾಯುಜ್ಯ ಪದವಿಯನ್ನು ಪಡೆಯಲು ಹಾತೊರೆಯುವುದು. ಇಲ್ಲಿ ಜೀವಿಗಳು ಪರಮಾತ್ಮನ ಸಮೀಪದಲ್ಲಿ - ಸಾರೂಪ್ಯ, ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ ಪದವಿಯಲ್ಲಿ ಇರಬಹುದು ಅಥವಾ ಅವನಲ್ಲಿಯೇ ಐಕ್ಯವಾಗಿ ಭೇದವಿಲ್ಲದಂತೆ ಇರಬಹುದು. ಯಾವುದನ್ನು ಹೊಂದಿದರೂ ಪುನರಾವೃತ್ತಿ ಇರುವುದಿಲ್ಲ. ಇದೇ ಅತ್ಯುತ್ತಮ ಗುರಿ.

ಈ ಪದವಿಯನ್ನು ಜೀವಿಗಳು ಯಾವಾಗ ಇಹಲೋಕದಲ್ಲಿ ಬಂಧನದಿಂದ ಬಿಡುಗಡೆಯಾಗಿ ಇರುತ್ತಾರೆಯೋ ಆಗ ಜೀವನ್ಮುಕ್ತ ಪದವಿಯಿಂದ ಇದೇ ಆತ್ಮಾನುಭವವನ್ನು ಅನುಭವಿಸುತ್ತಾರೆ. ಜೀವನ್ಮುಕ್ತರಾದವರು ಆತ್ಮಾರಾಮದಲ್ಲಿ ಇದ್ದು ಬೇರೆಯ ಆತ್ಮಗಳ ಉದ್ಧಾರಕ್ಕಾಗಿ ಸಹಾಯಕರಾಗುತ್ತಾರೆ. ಪರಮಾತ್ಮನು ಬೇರೆ ಬೇರೆ ಕಡೆಗೆ ಹೋಗುವ ಭೂತಗಳನ್ನು ಒಂದುಗೂಡಿಸಿ ಅವುಗಳ ಗತಿಯನ್ನು ಪ್ರತಿಬಂಧಿಸುತ್ತಾನೆ. ಆದರಿಂದ ಅವನು ವೈಕುಂಠನು (ವಿ.ಸ.405)

369. ವಿಕುಂಠಾಯ ನಮಃ

ಯಾವ ತರಹದ ವಿಲಕ್ಷಣವಿಲ್ಲದವನು, ಯಾವ ತರಹ ವಿಚಾರದಲ್ಲಿಯೂ ಇದು ಕಡಿಮೆ ಎಂದು ಇಲ್ಲದವನು, ವಿಶೇಷವಾದ ಸದ್ಗುಣಗಳುಳ್ಳವನು. ಪರಮಾತ್ಮನು ಸರ್ವಗುಣ ಸಂಪನ್ನ.

ವೈಕುಂಠ ಲೋಕಕ್ಕೆ ಸಂಬಂಧಪಟ್ಟದ್ದರಿಂದ ವಿಕುಂಠ ಎಂದು ಹೇಳಬಹುದು. ವೈಕುಂಠಪುರವಾಸಿಯಾದ ಇವನು ನಾರಾಯಣನು, ಸರ್ವ ಜೀವಿಗಳಿಗೂ ಮೋಕ್ಷ ಕೊಡುವವನು, ವಿಕುಂಠಾಯ ನಮಃ.

370. ಶಿತಿಕಂಠಾಯ ನಮಃ

ಶಿತಿ - ಬಿಳಿಯ ಬಣ್ಣ, ಕಪ್ಪು ಬಣ್ಣ,

ಬಿಳಿಯ ಕಂಠವಿರುವವನು, ಕಪ್ಪು ಕಂಠವಿರುವವನು,

ನೀಲಕಂಠ - ನೀಲಿಯ ಬಣ್ಣದ ಕಂಠವಿರುವವನು,

ಪ್ರಾಯಶಃ ಹಾಲಾಹಲ ವಿಷವನ್ನು ಸೇವಿಸುವುದಕ್ಕೆ ಮೊದಲು ಶಿವನು ಶಿತಿಕಂಠನಾಗಿರಬಹುದು. ಪರಮಾತ್ಮನು ಕತ್ತನ್ನು ಈ ನಾಮವು ನಿರ್ದೇಶಿಸುತ್ತದೆ.

ಪರಮಾತ್ಮನ ಸುಂದರವಾದ ಮುಖವು ಕಂಠದ ಸೌಂದರ್ಯದಿಂದ ಮತ್ತೂ ಶೋಭಿಸುತ್ತದೆ.

ದೇಹದ ಅವಯವಗಳಲ್ಲಿ ಕಂಠವು ಶೃಂಗಾರ ರೂಪವಾದ್ದು. ಕಂಠದ ಸುತ್ತಲೂ ಆಭರಣಗಳನ್ನು ಧರಿಸುತ್ತೇವೆ. ಕಂಠದಿಂದ ಬರುವ ಶಬ್ದವು ಸರ್ವರನ್ನು ಆಕರ್ಷಿಸುತ್ತದೆ. ಶಿತಿಕಂಠವು ಅವನ ಕಂಠದಿಂದ ಯಾವಾಗಲೂ ಒಳ್ಳೆಯ ವರಗಳೇ ಬರುವುದನ್ನು ನಿರ್ದೇಶಿಸುತ್ತದೆ. ಸರ್ವರನ್ನು ಕಂಠದ ಶಬ್ದದಿಂದ ಸಂಕೇತಿಸಿ ಇಂತಹವರೇ ಎಂದು ಗುರುತಿಸುತ್ತೇವೆ ಪರಮಾತ್ಮನನ್ನು ಶಿತಿ - ಕಂಠನೆಂದು ನಮಸ್ಕರಿಸುತ್ತೇವೆ.

*ಕಂಠೀರವಾಯ ಲುಂಠಾಯ ಶನಿರಾಹುಹರಾಯ ಚ /*
*ಸತ್ವೋದ್ರಿಕ್ತಾಯ ಕೃಷ್ಣಾಯ ರಜೋದ್ರಿಕ್ತಾಯ ವೇಧಸೇ //61//*
*(371-377)*

371. ಕಂಠೀರವಾಯ ನಮಃ

ಕಂಠೀರವ ಎಂದರೆ - ಸಿಂಹ, ಮದಿಸಿದ ಆನೆ ಎಂದು ಅರ್ಥ,

ಸಿಂಹ ಎಂದಾಗ,

ಸಿಂಹವು ಮೃಗಗಳ ರಾಜ, ಅರಣ್ಯದ ರಾಜ, ಸಿಂಹದಲ್ಲಿ ಶಕ್ತಿ, ಶೌರ್ಯ, ರಾಜಗಾಂಭೀರ್ಯ ಇರುತ್ತದೆ. ಸಿಂಹದ ಮುಖವನ್ನು ಹೊಂದಿರುವ ನರಸಿಂಹಸ್ವಾಮಿಯು ಬಹಳ ಅಪರಿಮಿತ ಶಕ್ತಿಯನ್ನು ಚತುರತೆಯನ್ನು ಉಪಯೋಗಿಸಿ ಹಿರಣ್ಯಕಶಿಪುವನ್ನು ಸಂಹರಿಸಿದನು.

ಸಿಂಹ ಮುಖದ ನರಸಿಂಹನನ್ನು ನೋಡಿದರೆ ಅಪಾರ ಶ್ರದ್ಧೆ ಮತ್ತು ಭಕ್ತಿಯು ಮೂಡುತ್ತದೆ. ಭಕ್ತ ಪ್ರಹ್ಲಾದನ ರಕ್ಷಣೆಗೋಸ್ಕರ ಈ ರೂಪವನ್ನು ಹರಿಯು ಧರಿಸಬೇಕಾಯಿತು. ತ್ರಿಲೋಕಗಳಲ್ಲಿ ಶಾಂತಿಯನ್ನು ಪ್ರಸರಿಸಲು, ಲೋಕಕಂಟಕನಾದ ಹಿರಣ್ಯಕಶಿಪುವನ್ನು ಸಂಹರಿಸಲು ಈ ಅವತಾರವನ್ನು ತಾಳಬೇಕಾಯಿತು. ಅದರಿಂದ ನರಸಿಂಹನಿಗೆ ಕಂಠೀರವಾಯ ನಮಃ ಎಂದರೆ ಉಚಿತವಾಗುತ್ತದೆ

ಮದಿಸಿದ ಆನೆ ಎಂದು ಅರ್ಥ ಮಾಡಿದರೆ,

ಪರಮಾತ್ಮನು ಯಾವಗಲೂ ಒಂದೇ ಸಮಾನತೆಯಲ್ಲಿಯೇ ಇರುತ್ತಾನೆ. ಜೀವಿಗಳು ಬೇಡುವ ಪ್ರಾರ್ಥನೆಗೆ ಅವಲಂಬಿಸಿ ದಯೆಯನ್ನು ಕರುಣಿಸುತ್ತಾನೆ. ಆಗ ನಮ್ಮ ಸನ್ನಿವೇಶಕ್ಕೆ ಮತ್ತು ಮನೋಗುಣಕ್ಕೆ ತಕ್ಕಂತೆ ಅವನು ರೂಪವನ್ನು ಶಕ್ತಿಯನ್ನು ಚತುರತೆಯನ್ನು ಅದನ್ನು ಉಪಯೋಗಿಸುವ ರೀತಿ ವೈಖರಿಯನ್ನು

ಅನುಸರಿಸಬೇಕಾಗುತ್ತದೆ. ಅದಕ್ಕೆ ಮದಿಸಿದ ಆನೆಯಂತೆ, ಶ್ರೀಮದ್ಗಾಂಭೀರ್ಯ, ಕಠಿಣತೆ, ವೈಶಾಲ್ಯತೆ ಮುಂತಾದ ಗುಣಗಳು ವ್ಯಕ್ತವಾಗುತ್ತವೆ. ಇದನ್ನು ಕಂಠೀರವತೆ ಎನ್ನಬಹುದು. ಆನೆಯ ಗುಣವನ್ನು ಹೊಂದಿದವನು ಎನ್ನಬಹುದು.

ಗೀತೆಯಲ್ಲಿ ಶ್ರೀಕೃಷ್ಣನು ''ಮೃಗಗಳಲ್ಲಿ ಸಿಂಹವೂ ನಾನಾಗಿದ್ದೇನೆ, ಸಮುದ್ರ ಮಥನದಲ್ಲಿ ಉದಯಿಸಿ ಬಂದ ಐರಾವತವೂ ನಾನೇ ಆಗಿದ್ದೇನೆ'' ಎಂದಿದ್ದಾನೆ. ಇವೆರಡೂ ಪರಮಾತ್ಮನ ಸ್ವರೂಪವೇ ಆದ್ದರಿಂದ ಕಂಠೀರವಾಯ ನಮಃ ಎನ್ನುವುದು ಸರಿಯಾಗಿಯೇ ಇದೆ.

372. ಲುಂಠಾಯ ನಮಃ

ಲುಂಠನ - ಎಂದರೆ ಕಳವು, ಲುಂಡ್ - ಕಳ್ಳತನ,

ಪರಮಾತ್ಮನು ಎಲ್ಲರ ಮನಸ್ಸನ್ನು ಭಕ್ತಿ, ಶ್ರದ್ಧೆಯ ಕಡೆಗೆ ಎಳೆದು ತನ್ನ ಕಡೆಗೆ ಬರುವ ಹಾಗೆ ಮಾಡುತ್ತಾನೆ. ಜೀವಿಗಳಿಗೆ ತಿಳಿಯದೆಯೇ ಈ ರೀತಿ ಮೋಹದಿಂದ ಎಳೆದುಕೊಳ್ಳುವುದರಿಂದ ಕಳ್ಳತನ ಮಾಡಿದಂತಾಗುತ್ತದೆ. ಮನಸ್ಸನ್ನು, ಬುದ್ಧಿಯನ್ನು, ಏಕಕಾಲದಲ್ಲಿ ಅಪಹರಿಸಿ ಉದ್ದಾರ ಮಾಡುತ್ತಾನೆ. ಇದು ಒಂದು ರೀತಿಯಲ್ಲಿ ಅನುಗ್ರಹವೇ. ಮನುಷ್ಯ ಮಾತ್ರದವರು ಅನುಗ್ರಹಿಸಿದರೆ ಅದು ತಾತ್ಕಾಲಿಕವಾದದ್ದು ಮತ್ತು ಸ್ವಾರ್ಥಪರತೆಯಿಂದ ಕೂಡಿದ್ದು, ಆದರೆ ಪರಮಾತ್ಮನದು ನಿಷ್ಕಾಮ ಪೂರಿತವಾದ್ದು, ಅನುಗ್ರಹಪೂರ್ವಕವಾದ್ದು. ಅದರಿಂದ ಸೃಷ್ಟಿಯಲ್ಲೆಲ್ಲ ಪ್ರತಿ ಜೀವಿಯೂ ಆಶ್ರಯಿಸುವುದು, ಮೊರೆ ಹೋಗುವುದು ಪರಮಾತ್ಮನನ್ನೇ. ಅವನೇ ''ಲುಂಠಾಯ ನಮಃ'' ಎಂದು ಕರೆಯಲ್ಪಡುತ್ತಾನೆ.

373. ಶನಿರಾಹುಹರಾಯ ನಮಃ

ಶನಿ ಮತ್ತು ರಾಹುಗಳಿಂದ ಒದಗಬಹುದಾದ ಸಾತ್ವಿಕವಲ್ಲದ ಸನ್ನಿವೇಶ, ಮನಸ್ಸಿನ ಮೇಲೆ ಆಗಬಹುದಾದ ಸುಖ ಸಂತೋಷವಲ್ಲದ ಪರಿಣಾಮಗಳನ್ನು ಹೋಗಲಾಡಿಸುವವನು - ಪರಮಾತ್ಮನೇ. ಶನಿ ಮತ್ತು ರಾಹುಗಳು ಜೀವಿಗಳ ಜೀವನದಲ್ಲಿ ಸುಖ ಸಂತೋಷ ಮತ್ತು ಇಷ್ಟವಾದ ಅರ್ಥಗಳನ್ನು ಸಹ ಕೊಡುತ್ತವೆ. ಆದರೆ ಸಂಪ್ರದಾಯದಲ್ಲಿ ಈ ರೀತಿಯವು ಬಹಳ ಕಡಿಮೆ ಎಂದು ನಂಬಿಕೆ ಇದೆ. ಇಷ್ಟವಲ್ಲದ ಪರಿಣಾಮಗಳು ಹೆಚ್ಚು.

ಶನಿ ಮತ್ತು ರಾಹುಗಳು ನವಗ್ರಹಗಳಲ್ಲಿ ಸೇರಿವೆ. ಮತ್ತು ಶಕ್ತಿಯುತವಾದವುಗಳು. ಅದರಿಂದ ಪರಿಣಾಮವನ್ನು ಹೋಗಲಾಡಿಸಬೇಕಾದರೆ ಇನ್ನೂ ಶಕ್ತಿಯುತವಾದ ಶಕ್ತಿಯೂ ಬೇಕು. ಶನಿಯನ್ನು ಮತ್ತು ರಾಹುವನ್ನು ನಡೆಸುವವನು ಪರಮಾತ್ಮನೇ. ಅದರಿಂದ ಪರಮಾತ್ಮನೊಬ್ಬನೇ ಸರ್ವರಿಂದ ಈ ಪರಿಹಾರಕ್ಕೆ ಅಪೇಕ್ಷಿಸಲ್ಪಡುತ್ತಾನೆ.

ರಾಹು ಮತ್ತ ಕೇತುಗಳು ಸೂರ್ಯ ಚಂದ್ರರನ್ನೇ ಪರ್ವಕಾಲದಲ್ಲಿ ಗ್ರಹಿಸುತ್ತಾರೆ. ಗ್ರಹಣವೆಂದು ಪರಿಣಮಿಸುತ್ತದೆ. ಪುರಾಣದಂತೆ ಕ್ಷೀರಸಾಗರದ ಮಥನದ ಸಮಯದಲ್ಲಿ ದೇವತೆಗಳೂ ರಾಕ್ಷಸರೂ ಜೊತೆ ಜೊತೆಯಾಗಿ ಕಡೆದರೂ ಸಹ ಅಮೃತಕ್ಕಾಗಿ ವೈಷಮ್ಯ, ಅಸೂಯೆ ಬೆಳೆಯಿತು. ಆಗ ಮಹಾವಿಷ್ಣುವು ಮೋಹಿನಿಯ ರೂಪದಲ್ಲಿ ಬಂದು ಅಮೃತವನ್ನು ತನ್ನ ವಿಷ್ಣುಮಾಯೆಯಿಂದ ದೇವತೆಗಳಿಗೇ ಹಂಚಿದನು. ರಾಕ್ಷಸರು ತಾಳ್ಮೆಯಿಂದ ಕಾಯುತ್ತಿದ್ದರೂ ಮೋಹಿನಿಯ ಮಾಯಾ ವಿದ್ಯೆಯಿಂದ ಅಮೃತವನ್ನು ಕಳೆದುಕೊಂಡರು. ಆದರೆ ಆ ಸಮಯದಲ್ಲಿ ಒಬ್ಬ ರಾಕ್ಷಸನು ದೇವತೆಗಳ ರೂಪದಲ್ಲಿ ಬಂದು ಅವರ ಮಧ್ಯೆ ಕುಳಿತು ಅಮೃತವನ್ನು ಪಡೆದನು ಇದನ್ನು ತಿಳಿದು ಸೂರ್ಯ ಚಂದ್ರರು ಹೇಳಿ ಬಹಿರಂಗಪಡಿಸಿದ್ದರಿಂದ ರಾಕ್ಷಸನ ಶಿರವು ಕತ್ತರಿಸಲ್ಪಟ್ಟಾಗ ತಲೆಯು ರಾಹುವಾಗಿಯೂ, ಶರೀರವು ಕೇತುವಾಗಿಯೂ ಆಗಿ ಸೂರ್ಯ ಚಂದ್ರರಿಗೆ ಗ್ರಹಣ ಕಾಲದಲ್ಲಿ ಪೀಡಿಸುತ್ತಾರೆ.

ಜೀವಿಗಳಿಗೆ ರಾಹುವಿನ ಅಸ್ವಾಭಾವಿಕ ಪರಿಣಾಮವನ್ನು ಪರಮಾತ್ಮನೇ ಹೋಗಲಾಡಿಸುತ್ತಾನೆ.

ಶನಿಯು ನವಗ್ರಹಗಳಲ್ಲಿ ಸ್ವಲ್ಪ ಫಲಕೊಡುವುದರಲ್ಲಿ ನಿಧಾನ - ಅದರಿಂದ ಮಂದಗ್ರಹ ಎನ್ನುತ್ತೇವೆ. ಆದರೆ ಜೀವಿಗಳಿಗೆ ಒಳ್ಳೆಯ ಫಲ ಕೊಡುವುದು ಕಡಿಮೆ. ಪರಮಾತ್ಮನ ಅನುಗ್ರಹದಿಂದ ಒಳ್ಳೆಯ ಫಲಗಳೇ ಬರುವಂತೆ ಆಗುತ್ತದೆ.

ಅದರಿಂದ ಪರಮಾತ್ಮನನ್ನು "ಶನಿರಾಹುಹರಾಯ ನಮಃ" ಎಂದರೆ ಉಚಿತ ಮತ್ತು ಸರಿ.

**74.** ಸತ್ತ್ವೋದ್ರಿಕ್ತಾಯ ನಮಃ

ಉದ್ರಿಕ್ತ - ಎಂದರೆ ಸಾಮಾನ್ಯವಾಗಿ ಒಳ್ಳೆಯ ಭಾವ ಬರುವುದಿಲ್ಲ, ಆದರೆ ನಿಜವಾಗಿ ಇದರ ಅರ್ಥ - ಹೆಚ್ಚಾದ್ದು, ಬೆಳವಣಿಗೆ ಹೊಂದಿದ್ದು, ಸ್ಪಷ್ಟವಾದ್ದು,

ಸತ್ವ - ಎಂದರೆ ಸಾತ್ವಿಕಗುಣದಿಂದ ಉದ್ರಿಕ್ತ - ಅತಿಶಯವಾದುದ್ದು, ಸತ್ವಗುಣವೇ ಪ್ರಧಾನವಾಗಿರುವ ಸ್ಥಿತಿ - ಇತರ ಗುಣಗಳು ರಾಜಸ, ತಾಮಸ ಗುಣಗಳು ಇಲ್ಲದ ಅಥವಾ ಇದ್ದರೂ ಗಮನಕ್ಕೆ ತೆಗೆದುಕೊಳ್ಳದಂತಹ ಸ್ಥಿತಿ.

ಸತ್ವಗುಣವೇ ಪ್ರಧಾನಬಾಗಿರುವವನು ಪರಮಾತ್ಮನೊಬ್ಬನೆ.

ಜೀವಿಗಳ ಜೀವನದಲ್ಲಿ ಈ ಮೂರು ಗುಣಗಳು ಇದ್ದೇ ಇರುತ್ತವೆ. ಆದರೆ ಸತ್ವಗುಣ ಪ್ರಧಾನವಾದ ಸ್ಥಿತಿ ಬಹಳ ಅಪರೂಪ.

ಪರಮಾತ್ಮನು ಗುಣಾತೀತನು ಆದರೂ ಎಲ್ಲ ಗುಣಗಳನ್ನು ತನ್ನಲ್ಲಿ ಅಡಗಿಸಿಕೊಂಡಿರುವವನು - ಗುಣಮಯನು. ಅದರಿಂದ ಸತ್ತ್ವೋದ್ರಿಕ್ತಾಯ ಎಂದು ಹೇಳಿದರೂ ಸರಿಯೇ ಆಗುತ್ತದೆ.

75. ಕೃಷ್ಣಾಯ ನಮಃ

ಹೇಗೆ ಪರಮಾತ್ಮನಿಂದ ಆತ್ಮಗಳು ಹೊರ ಹೊಮ್ಮಿವೆಯೋ ಮತ್ತು ಹೇಗೆ ಅವನಲ್ಲಿಯೇ ಕಲ್ಪಾಂತದಲ್ಲಿ ಅಡಗಿ ಹೋಗುವುವೋ, ಹಾಗೆಯೇ ಈ ಮಧ್ಯಕಾಲದಲ್ಲಿ ಆತ್ಮಗಳು ದೇಹದಲ್ಲಿರುವಾಗ ಪರಮಾತ್ಮನಿಂದಲೇ ಅವನೆಡೆಗೆ ಆಕರ್ಷಿಸಲ್ಪಡುತ್ತವೆ. ಅವ್ಯಕ್ತವಾದ ಪರಮಾತ್ಮನ ಶಕ್ತಿಯಿಂದ ಜೀವಿಗಳು ಸರ್ವಕಾಲದಲ್ಲಿಯೂ ಅವನೆಡೆಗೆ ಎಳೆಯಲ್ಪಡುತ್ತಿವೆ. ಕರ್ಷತೀತಿ ಕೃಷ್ಣಃ, ಆದರಿಂದ ಭಗವಂತನಿಗೆ ಕೃಷ್ಣ ಎಂದು ಹೆಸರು. ಭಗವಂತನ ಅವತಾರ - ಕೃಷ್ಣಾವತಾರ - ಇದು ಪರಿಪೂರ್ಣವಾದ ಅವತಾರ.

ಕೃಷ್ಣ - ಎಂದರೆ ಕಪ್ಪು ಬಣ್ಣ. ವಿಗ್ರಹದಲ್ಲಿ ಕಪ್ಪು ಬಣ್ಣವಾದರೂ ಧ್ಯಾನ ಸಮಯದಲ್ಲಿ ಸಾಕಾರಮೂರ್ತಿಯ ರೂಪವು ಸ್ವಚ್ಛವಾಗಿ ಬಿಳುಪಾಗಿರುತ್ತದೆ. ಜ್ಞಾನವನ್ನು ತುಂಬುತ್ತದೆ. ಭಕ್ತಿಯನ್ನು ತುಂಬುತ್ತದೆ. ಭಗವಂತನು ಇಂತಹದೇ ಬಣ್ಣದವನು, ರೂಪದವನು, ಮುಂತಾಗಿ ನಿರ್ದೇಶಿಸಲು, ತಿಳಿಯಲು ಸಾಧ್ಯವಿಲ್ಲ. ಹೇಗಿದ್ದಾನೋ ಹಾಗೆಯೇ ಇರುತ್ತಾನೆ, ಇದ್ದನು, ಈಗಲೂ ಇದ್ದಾನೆ, ಮುಂದೆಯೂ ಇರುತ್ತಾನೆ. ಇದೇ ಅವನನ್ನು ನೇತಿ, ನೇತಿ ಎಂದು ಎಲ್ಲವನ್ನು ವರ್ಜಿಸಿದಾಗ ಉಳಿಯುವುದು. ಹಾಗೆಯೇ ಇರುವ ಮತ್ತು ಹೀಗೆ ಹಾಗೆ ಇಲ್ಲದ ಸ್ಥಿತಿ, ಆದರೂ ಅವನು ಕರ್ಷಿಸುತ್ತಾನೆ. ಅದರಿಂದ ಕೃಷ್ಣನು.

76. ರಜೋದ್ರಿಕ್ತಾಯ ನಮಃ

ಉದ್ರಿಕ್ತ - ಎಂದರೆ ಪ್ರಬಲವಾಗಿ, ಯಥೇಚ್ಛವಾಗಿ ಇರುವುದು, ಬೇರೆ ಯಾವುದು ಇದ್ದರೂ ಅವು ಗಣನೆಗೆ ಬರುವುದಿಲ್ಲ. ಅವುಗಳ ಪರಿಣಾಮ ಗೊತ್ತಾಗುವುದಿಲ್ಲ.

ಗುಣಗಳು ಮೂರು - ಸಾತ್ವಿಕ, ರಾಜಸ, ತಾಮಸ, ಸ್ಥೂಲವಾಗಿ ವಿವರಿಸಬೇಕಾದರೆ ಹೀಗೆ - ಸಾತ್ವಿಕ - ಎಂದರೆ ಒಳ್ಳೆಯ ಸ್ವಭಾವದ ಪರಿಣಾಮ ಬೀರುವಂತಹ ಗುಣಗಳು, ನಡತೆಗಳು. ಇದರಲ್ಲಿ ದೇವತಾಂಶ ಭಾವನೆಗಳು ಮೈಗೂಡಿರುತ್ತವೆ.

ತಾಮಸ - ಇದರಲ್ಲಿ ಆಲಸ್ಯಭಾವನೆ, ಜಡಸ್ವಭಾವ, ನಿರಾಸಕ್ತಿ, ನಿದ್ರಾಮೋಹ, ಮುಂತಾದವು ಜೀವಿಯಲ್ಲಿ ಪರಿಣಾಮ ಬೀರುತ್ತವೆ.

ರಾಜಸ - ಇದರಲ್ಲಿ ಸಾತ್ವಿಕ ಮತ್ತು ತಾಮಸ ಭಾವನೆಗಳು ಜೊತೆ ಜೊತೆಯಾಗಿ ಇರುತ್ತವೆ.

ರಜೋದ್ರಿಕ್ತಾಯ ನಮಃ

ರಜೋಗುಣವೇ ಪ್ರಭಾವಿತವಾಗಿರುವಾಗ ಅದೂ ಮಿತಿಯಿಲ್ಲದೆ ಇರುವಾಗ ಜೀವಿಯು ಸಾತ್ವಿಕ ಸ್ವಭಾವದಿಂದ ಇಳಿದು ತಾಮಸದಿಂದ ಮೇಲೆರುವ

ಭಾವದಲ್ಲಿರುತ್ತಾನೆ. ದೇಹದಲ್ಲಿರುವ ಜೀವಿಯು ಪರಮಾತ್ಮನ ಅಂಶದಿಂದ ಬಂದಿರುವುದರಿಂದ ಮತ್ತು ಅವನ ಅಂಶದಲ್ಲಿರುವುದರಿಂದ ಪರಮಾತ್ಮನೇ ನಮ್ಮಲ್ಲಿ ಆವಿರ್ಭವಿಸುತ್ತಿದ್ದಾನೆ ಎಂದು ತಿಳಿಯಬಹುದು. ಆಗ ಅವನು ರಜೋದ್ರಿಕ್ತನು.

ರಜಸ್ - ಸ್ತ್ರೀಯರ ದೇಹದಲ್ಲಿ ಉತ್ಪತ್ತಿಯಾಗುವ ಸ್ರಾವ, ಇದು ಉದ್ರಿಕ್ತವಾಗಿರುವ ಸ್ಥಿತಿ - ಪರಮಾತ್ಮನು ಪ್ರಕೃತಿ ರೂಪದಲ್ಲಿದ್ದು ರಜಸ್‌ನಿಂದ ರಜೋಗುಣದಿಂದ ಕೂಡಿದವನಾಗಿ ಮಾಯಾ ಭ್ರಮಣೆಯಲ್ಲಿರುತ್ತಾನೆ. ಆತ್ಮಗಳು ದೇಹವನ್ನು ಪಡೆದು ಪ್ರಜಾಭಿವೃದ್ಧಿಗಾಗಿ ಎಲ್ಲ ಭಾವಗಳನ್ನು ಹೊಂದಲೇ ಬೇಕು, (ರಜೋದ್ರಿಕ್ತಸ್ಥಿತಿ).

ಈ ರಜೋದ್ರಿಕ್ತ ಪರಿಸ್ಥಿತಿಯಲ್ಲಿ ಸ್ತ್ರೀಯಲ್ಲಿ ಬ್ರಹ್ಮಹತ್ಯೆಯ ಭಾವವು ಅಡಗಿರುತ್ತದೆ. ಅದರಿಂದ ಬ್ರಹ್ಮಹತ್ಯಾ ಪಾಪವು ಯಥೇಚ್ಛವಾಗಿ ತಾಂಡವವಾಡುತ್ತಿರುವುದರಿಂದ ಆ ಸಮಯದಲ್ಲಿ ಸ್ತ್ರೀಯು ಉದ್ರಿಕ್ತ ಸ್ಥಿತಿಯಲ್ಲಿದ್ದು, ಸಾಮಾನ್ಯ ಭಾವನೆಗಳನ್ನು ಕಳೆದುಕೊಂಡಿರುತ್ತಾಳೆ. ಇದು ಸಾಮಾನ್ಯವಾದ ಸಹಜವಾದ ಪರಿಸ್ಥಿತಿ - ಅವಳು ರಜೋದ್ರಿಕ್ತಳು. ಪರಮಾತ್ಮನಿಗೆ ಲಿಂಗ ಭೇದವಿಲ್ಲ. ಆತ್ಮಕ್ಕೆ ಲಿಂಗಭೇದವಿಲ್ಲ. ಈ ಸ್ಥಿತಿ ಸೃಷ್ಟಿಯ ಸಕಲ ಜೀವಿಗಳಲ್ಲೂ ಇರುತ್ತದೆ.

ಪುರುಷನಲ್ಲಿ ರಜೋಗುಣವು ಯಥೇಚ್ಛವಾಗಿರುತ್ತದೆ. ಅದರಿಂದ ಮೇಲೆ ಬರಬೇಕಾದರೆ ಸಾತ್ವಿಕಗುಣದ ಭಾವನೆಯು ಹೆಚ್ಚಾಗಬೇಕು. ಇದಕ್ಕೆ ಪರಿಸರ, ಸಂಸ್ಕಾರ, ಪರಮಾತ್ಮನ ಕೃಪೆ ಬೇಕು, ಇದರಿಂದಲೇ ಜೀವಿಯು ಉದ್ಧಾರವಾಗಿ ಪರಮಾತ್ಮನಲ್ಲಿಗೆ ಸೇರಲು ಸಾಧ್ಯ.

77. ವೇಧಸೇ ನಮಃ

ವೇಧಸ್ - ಬ್ರಹ್ಮ, ವಿಷ್ಣು, ಶಿವ, ಪರಮಾತ್ಮನು ತ್ರಿಮೂರ್ತಿ ಸ್ವರೂಪನು, ನರಸಿಂಹನ ಅವತಾರವೂ ವಿಷ್ಣುವಿನ ದಶಾವತಾರಗಳಲ್ಲಿ ಒಂದು. ರಾಮಾವತಾರವೂ ವಿಷ್ಣುವಿನ ಅವತಾರ, ವಸಿಷ್ಠರು ಶ್ರೀರಾಮನನ್ನು "ವೇಧಸೇ" ಎಂದು ರಾಮಚಂದ್ರ ಎಂದೂ ಸಂಬೋಧಿಸುತ್ತಿದ್ದರು.

*"ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ |*
*ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ ||"*

ಋಷಿಗಳು ಶ್ರೀರಾಮನನ್ನು "ವೇಧಸೇ" ಎಂದು ಸಂಭೋದಿಸುತ್ತಿದ್ದರು. ವೇಧಸೇ, ಪರಬ್ರಹ್ಮನೇ! ಮಹಾವಿಷ್ಣುವೇ! ಬ್ರಹ್ಮನೇ, ಮಹಾದೇವನೇ! ಎಂದು ಸಂಭೋದಿಸುತ್ತಿದ್ದರು.

ವೇಧಸೇ - ತ್ರಿಮೂರ್ತಿಗಳೇ ನಮಸ್ಕಾರಗಳು, ಈ ಸಹಸ್ರನಾಮವನ್ನು ಬ್ರಹ್ಮದೇವರು ನರಸಿಂಹನನ್ನು ಶಾಂತಗೊಳಿಸಲು ಹೇಳಿದರು. ನರಸಿಂಹ ಅವತಾರದಲ್ಲಿ ಹಿರಣ್ಯಕಶಿಪುವನ್ನು ಸಂಹಾರಮಾಡಿದ ಉಗ್ರನರಸಿಂಹನಿಗೆ ಸಂಭೋಧಿಸುತ್ತಿದ್ದರು.

ನರಸಿಂಹ ಸಹಸ್ರನಾಮದ ಕರ್ತೃ - ಬ್ರಹ್ಮ - ಅವನು ವೇಧಸೇ. ಮಹಾವಿಷ್ಣು ಬೇರೆ ಅಲ್ಲ - ತ್ರಿಮೂರ್ತಿಗಳು ಬೇರೆ ಅಲ್ಲ ಪರಸ್ಪರ ''ವೇಧಸೇ ನಮಃ''.

*ತಮೋದ್ರಿಕ್ತಾಯ ರುದ್ರಾಯ ಋಗ್ಯಜುಃಸಾಮಗಾಯ ಚ ।*
*ತಾರ್ಕ್ಷ್ಯಧ್ವಜಾಯ ಭದ್ರಾಯ ಮಂತ್ರರಾಜಾಯ ಮಂತ್ರಿಣೇ ॥62॥*
*(378-384)*

78. ತಮೋದ್ರಿಕ್ತಾಯ ನಮಃ

ತಮೋಗುಣದಿಂದ ಹೇರಳವಾಗಿ, ಪುಷ್ಕಳವಾಗಿರುವವನು, ಪ್ರಾಣಿಗಳಿಂದ ಹಿಡಿದು ಪರಿಪೂರ್ಣ ಮನುಷ್ಯ ದೇಹದವರೆಗೆ ಅನೇಕ ತಾಮಸ ಪ್ರಕೃತಿಯ ದೇಹಗಳು, ಯೋನಿಗಳು ಇರುತ್ತವೆ. ಬುದ್ಧಿಶಕ್ತಿ, ಮೇಧಾಶಕ್ತಿ, ಮಾನಸಿಕ ಬೆಳವಣಿಗೆ ಕಡಿಮೆಯಾಗಿರುವ ದೇಹಗಳು ಯೋನಿಗಳೂ ಸಹ ಇವೆ.

ಆದರೆ ಭಗವಂತನು ಎಂತಹ ಕೀಳಾದ ಯೋನಿಯನ್ನೂ ಆಶ್ರಯಿಸಿ ತನ್ನ ಸಂಕಲ್ಪವನ್ನು ನೆರವೇರಿಸಿಕೊಳ್ಳುತ್ತಾನೆ. ಮತ್ಸ್ಯಾವತಾರ, ಕೂರ್ಮಾವತಾರ, ವರಾಹಾವತಾರ, ಇವುಗಳಲ್ಲಿ ಅವತಾರಗಳು ಕಡಿಮೆಯಿಂದ ಮುಂದು ಮುಂದಿನ ಯೋನಿಗಳವುಗಳು - ಭಗವಂತನು ಆ ಕಾರ್ಯಕ್ಕೆ ತಕ್ಕಂತೆ ತನ್ನನ್ನು ತಾನು ಸೃಷ್ಟಿ ಮಾಡಿಕೊಂಡನು. ಈ ಅವತಾರಗಳಿಗೂ ರಾಮಾವತಾರ, ಕೃಷ್ಣಾವತಾರಗಳಿಗೂ ಬಹಳ ವ್ಯತ್ಯಾಸವಿದೆ. ಸನ್ನಿವೇಶಗಳು ಸಹ ಬದಲಾದವುಗಳು. ಅವತಾರಕ್ಕೆ ಕಾರಣಗಳೂ ಸಹ ಬಹಳ ಮುಂದುವರಿದವುಗಳು.

ಕೃಷ್ಣಾವತಾರದಲ್ಲಿ ಮತ್ತು ರಾಮಾವತಾರದಲ್ಲಿ ಉಪಯೋಗಿಸುವ ಬುದ್ಧಿವಂತಿಕೆಯ ಚಾಕಚಕ್ಯತೆಯ ವಿಧಾನಗಳು ಮತ್ಸ್ಯಾವತಾರದಲ್ಲಿಲ್ಲ. ಕೂರ್ಮಾವತಾರ, ವರಾಹಾವತಾರದಲ್ಲಿಲ್ಲ. ಇದೇ ವ್ಯತ್ಯಾಸ. ಇವುಗಳಲ್ಲಿ ಮಾಡುವ ಕಾರ್ಯಗಳು ಬಹಳ ಮಹದಾಕಾರದ್ದು, ಸಮುದ್ರದಲ್ಲಿ ಪ್ರಳಯಕಾಲದಲ್ಲಿ ವೇದಗಳನ್ನು ರಕ್ಷಿಸಿದ್ದು, ಮೇರು ಪರ್ವತವನ್ನು ಕ್ಷೀರಸಾಗರ ಮಥನದ ಕಾಲದಲ್ಲಿ ತನ್ನ ಬೆನ್ನು ಮೇಲೆ ಹೊತ್ತಿದ್ದು, ಭೂಮಂಡಲವನ್ನೇ ತನ್ನ ಏಕೈಕ ಕೋರೆದಾಡೆಯ ಮೇಲೆ ಹೊತ್ತು ತಂದದ್ದು ಇವು ತಾಮಸ ಪ್ರಕೃತಿಯ ಉದ್ರಿಕ್ತ ಶಕ್ತಿಗಳ ಪರಮಾವಧಿ. ಆದಕ್ಕೆ ತಮೋದ್ರಿಕ್ತಾಯ ನಮಃ ಎಂದು ನಮಸ್ಕರಿಸುವುದು.

**379. ರುದ್ರಾಯ ನಮಃ**

ರುದ್ರ - ಶಿವನು, ಮಹಾಕೃದ್ಧನಾದ ಶಿವನು, ಭಯಂಕರನಾದ ಶಿವನು.

ತನ್ನ ಸೃಷ್ಟಿಯೂ ಪರಿಪೂರ್ಣವಾಗಿ ಆಗದಿರಲು, ಸನಕಾದಿ ಕುಮಾರರು ಪ್ರಜಾಭಿವೃದ್ಧಿ ಮಾಡಲು ಒಪ್ಪದೆ ತಪಸ್ಸಿಗೆ ಹೋದದ್ದರಿಂದಲೂ, ಬ್ರಹ್ಮನಿಗೆ ಮಹಾ ಕೋಪವು ಬಂದಿತು. ಅವನ ಹಣೆ ಮತ್ತು ಹುಬ್ಬುಗಳಿಂದ ಕೋಪವು ರೌದ್ರವಾಗಿ ಪ್ರಕಟಿತವಾಗಿ ಹೊರಹೊಮ್ಮಲು, ಒಂದು ಅತೀವ ಕೃದ್ಧವಾದ ಶಕ್ತಿಯು ಉತ್ಪನ್ನವಾಯಿತು. ಆ ಶಕ್ತಿಯು ಹಸಿವಿನಿಂದ ಕೂಗುತ್ತ, ಕೋಪದಿಂದ ಕಿರುಚುತ್ತಿರಲು ಬ್ರಹ್ಮನು ಸಮಾಧಾನ ಪಡಿಸಿದನು. ಮಹಾಕ್ರೋಧದಿಂದ ಕೆಂಪಾಗಿ ಕಿರುಚುತ್ತಿರುವುದರಿಂದ ಬ್ರಹ್ಮನು ಆ ದೇಹಕ್ಕೆ ''ರುದ್ರ'' ಎಂದು ಹೆಸರು ಕೊಟ್ಟನು. ರುದ್ರನು ಸೃಷ್ಟಿಮಾಡಲು ಒಪ್ಪಿ, ತನ್ನಂತೆಯೇ ಆದ ಗಣಗಳನ್ನು ಭಟರನ್ನು ಸೃಷ್ಟಿಸಿದನು. ಈ ಗಣಗಳು ಪ್ರಪಂಚವನ್ನೆಲ್ಲ ನಾಶಪಡಿಸುತ್ತಿರಲು, ಬ್ರಹ್ಮನು ರುದ್ರನನ್ನು ಸೃಷ್ಟಿಮಾಡುವುದನ್ನು ನಿಲ್ಲಿಸಲು ಹೇಳಿದನು. ರುದ್ರನು ಹಾಗೆಯೇ ಮಾಡಿದನು. ಮತ್ತು ತನ್ನ ಗಣಗಳನ್ನು ತನ್ನ ಅಂಕೆಯಲ್ಲಿಟ್ಟುಕೊಂಡನು.

ರುದ್ರ - ಭಯಂಕರವಾದವನು - ಶಿವ - ಏಕಾದಶರುದ್ರರು.

ಎಲ್ಲಾ ದೇವತೆಗಳಿಗೂ ಅಭಿಷೇಕ ಮಾಡುವಾಗ ರುದ್ರ ನಮಕ ಮತ್ತು ಚಮಕವನ್ನು ಹೇಳುತ್ತೇವೆ. ಈ ರುದ್ರಪ್ರಶ್ನವು ಎಲ್ಲ ವೇದಗಳಿಗೂ ಅನ್ವಯಿಸುತ್ತದೆ ಮತ್ತು ಒಂದೇ ರೀತಿ ಉದಾತ್ತ, ಅನುದಾತ್ತ ಸ್ವರದಲ್ಲಿ ಹೇಳಲ್ಪಡುತ್ತದೆ - ರುದ್ರಪ್ರಶ್ನ - ರುದ್ರಾಧ್ಯಾಯ.

**380. ಋಗ್ಯಜುಸ್ಸಾಮಗಾಯ ನಮಃ**

ಪರಮಾತ್ಮನು ವೇದಸ್ವರೂಪನು, ಋಗ್ವೇದ, ಯಜುರ್ವೇದ, ಸಾಮವೇದಗಳಲ್ಲಿ ಪರಮಾತ್ಮನು ವಿವರವಾಗಿ ಹೊಗಳಲ್ಪಟ್ಟಿದ್ದಾನೆ, ಹಾಡಲ್ಪಟ್ಟಿದ್ದಾನೆ. ಋಷಿ, ಮುನಿಗಳು ತಾವು ಪರಮಾತ್ಮನನ್ನು ಕಂಡ ಹಾಗೆ ಮಂತ್ರಗಳ ಮೂಲಕ ತಿಳಿಸಿದ್ದಾರೆ. ಅವರ ಶ್ರೇಷ್ಠತೆ ಎಷ್ಟೆಂದರೆ ಈ ವೇದಗಳ ಕರ್ತೃಗಳು ಯಾರೆಂದು ಯಾರಿಗೂ ತಿಳಿಯದು. ಅನೇಕ ಸಹಸ್ರ ವರ್ಷಗಳ ಹಿಂದಿನದಾದರೂ ಈಗಲೂ, ಮುಂದೆಯೂ, ಆಚಂದ್ರಾರ್ಕಕಾಲಪರ್ಯಂತ ಮತ್ತು ಇನ್ನೂ ಮುಂದೆ ವೇದಗಳು ಇದ್ದೇ ಇರುತ್ತವೆ ಮತ್ತು ಸರ್ವಕಾಲಕ್ಕೂ ಅನ್ವಯಿಸುತ್ತವೆ.

ಧರ್ಮವು ಬಹಳ ಗಹನವಾದುದು. ವೇದಗಳು ಬಹಳ ಗಹನವಾದ್ದು. ಪರಮಾತ್ಮನನ್ನು ಹಾಡಿ ಹೊಗಳುತ್ತವೆ, ಪೂಜಿಸುತ್ತವೆ, ಧ್ಯಾನಿಸುತ್ತವೆ, ಜಪಿಸುತ್ತವೆ. ಅವನು ಹೀಗೇ ಇರುವನೆಂದು ಹೇಳಿ ಹೇಳಿ ಹುಡುಕಿ, ಹುಡುಕಿ,

ಕೊನೆಗೆ ನೇತಿ, ನೇತಿ ಎಂದು ನಿರ್ಣಯಕ್ಕೆ ಬರುತ್ತವೆ. ಆದರೂ ಇದು ಇಲ್ಲಿಗೇ ನಿಲ್ಲುವುದಿಲ್ಲ ಅನಂತ, ಅನಾದಿ. ಆದರೆ ಎಲ್ಲ ದೇವ ದೇವತೆಗಳಿಗೂ, ಜೀವಕೋಟಿಯ ಎಲ್ಲ ಜೀವಿಗಳೂ ಪ್ರಾರ್ಥಿಸುವಂತೆ ಭಗವಂತನನ್ನು ಸೇರುವಂತೆ ದಾರಿಯನ್ನು ವೇದಗಳು ಉಪನಿಷತ್ತುಗಳು ತೋರಿಸುತ್ತವೆ. ಇದು ಮಹತ್ಕಾರ್ಯ, ಮಹಾಮಹಿಮನದು, ಅವನು ''ಋಗ್ಯಜುಃಸಾಮಗಾಯ ನಮಃ'' ಎಂದೆನಿಸುತ್ತಾನೆ.

81. ತಾರ್ಕ್ಷ್ಯಧ್ವಜಾಯ ನಮಃ

ತಾರ್ಕ್ಷ್ಯ - ಗರುಡ, ಗರುಡನನ್ನೇ ಧ್ವಜವಾಗಿ ಉಳ್ಳವನು ಮಹಾವಿಷ್ಣು.

ವಿಷ್ಣುವು ಗರುಡವಾಹನ, ಗರುಡನ ಚಿಹ್ನೆಯನ್ನೇ ತನ್ನ ರಥಕ್ಕೆ ಧ್ವಜವನ್ನಾಗಿ ಇಟ್ಟುಕೊಂಡಿದ್ದಾನೆ. ಅದರಿಂದ ಅವನಿಗೆ ತಾರ್ಕ್ಷ್ಯಧ್ವಜ, ಗರುಡಧ್ವಜ, ಗರುಡವಾಹನ, ಗರುಡಗಮನ ಎಂದು ಮುಂತಾಗಿ ಹೆಸರುಗಳಿವೆ.

82. ಭದ್ರಾಯ ನಮಃ

ಭದ್ರಾಯ - ಕಾಪಾಡುವವನು

ಭದ್ರ - ಶುಭವಾಗಲಿ ಎಂದು ಶುಭವನ್ನು ಕೋರುವವನು
- ಪತಿ ಸ್ವರೂಪದಲ್ಲಿ ಪತ್ನಿಯನ್ನು ಕಾಪಾಡುವವನು
- ಸುರಕ್ಷಿತ ಮಾಡುವವನು
- ಸುಖವನ್ನು ಕೊಡುವವನು, ಕಲ್ಯಾಣ ಮಾಡುವವನು.

ಇದೆಲ್ಲವನ್ನು ಸಕಲ ಜೀವಿಗಳಿಗೂ ಯಾವ ರೀತಿಯ ಪಕ್ಷಪಾತವಿಲ್ಲದೆ ಪರಮಾತ್ಮನು ಒದಗಿಸುತ್ತಾನೆ. ಇದರಲ್ಲಿ ಅವನಿಗೆ ಸಮರು ಎಲ್ಲಿಯೂ ಯಾರೂ ಇಲ್ಲ.

ಆಯಾ ಯೋನಿಗಳಲ್ಲಿ ಸಕಲ ಜೀವಿಗಳಿಗೂ ಯಾವುದಾದರೂ ಒಂದು ಜೀವಿಯೂ ಈ ಮೇಲಿನ ಅನುಕೂಲಗಳನ್ನು ಒದಗಿಸುತ್ತವೆ. ಆದರೆ ಎಲ್ಲವನ್ನು ಎಲ್ಲಾ ಯೋನಿಗಳಲ್ಲಿಯೂ ಪಕ್ಷಪಾತವಿಲ್ಲದೆ ಒದಗಿಸುವವನು ಪರಮಾತ್ಮನೊಬ್ಬನೇ, ಇವನನ್ನು ಭಕ್ತಿ, ಶ್ರದ್ಧೆಯಿಂದ ಕಾಡಿ ಬೇಡಿದರೆ, ಅವನು ಬಂದು ಕಾಪಾಡುತ್ತಾನೆ. ಇದು ನಿಶ್ಚಿತ. ಯಾರೇ ಆಗಲೀ - ಯಾವಾಗಲೇ ಆಗಲಿ, ಹೇಗೇ ಆಗಲೀ ಕರೆದರೆ ಬಂದು ರಕ್ಷಿಸುವವನು ಪರಮಾತ್ಮನೊಬ್ಬನೇ! ಅದಕ್ಕೆ ಅವನನ್ನು ಭದ್ರಾಯ ನಮಃ ಎಂದು ನಮಸ್ಕರಿಸುತ್ತೇವೆ. ಅವನು ಸರ್ವಭದ್ರನು, ಸಕಲ ಭದ್ರನು, ಸಕಲ ರೀತಿಯಲ್ಲಿಯೂ ಸರ್ವಕಾಲದಲ್ಲಿಯೂ ಭದ್ರನು, ಸಕಲದಿಂದ, ಸರ್ವಕಾಲದಲ್ಲಿಯೂ ಅಪೇಕ್ಷಿಸಲ್ಪಡುವ ಏಕೈಕ ಪರಮಾತ್ಮ - ಧಾಮ - ಪರಮೇಶ್ವರ.

83. ಮಂತ್ರರಾಜಾಯ ನಮಃ

ಮಂತ್ರರಾಜ - ಮಂತ್ರಗಳಿಗೆ ರಾಜನು - ಅಧ್ಯಕ್ಷನು, ಮಂತ್ರಗಳನ್ನು ಅವುಗಳಿಗೆ ಶಕ್ತಿಯನ್ನು ಭರಿಸಿ ನಡೆಸುವವನು. ಅಂದರೆ ಅವುಗಳಿಗೆ ಸೂತ್ರಧಾರನು, ಪ್ರತಿ ಮಂತ್ರಕ್ಕೂ ಸೂತ್ರಧಾರನಾಗಿ ಅವು ಫಲಗಳನ್ನು ಕೊಡುವಂತೆ ಮಾಡುವವನು. ಅಂದರೆ ಮಂತ್ರಕ್ಕೆ ಗುರು ಸ್ವರೂಪದಲ್ಲಿರುವವನು ಅಥವಾ ಪ್ರತಿಮಂತ್ರವೂ ತನ್ನ ಭಕ್ತರ ಇಷ್ಟಾರ್ಥಗಳನ್ನು ಕೊಡಬೇಕಾದರೆ, ಪರಮ ಶ್ರೇಷ್ಠನಾದ ಪರಮಾತ್ಮನ ಅನುಗ್ರಹದಿಂದಲೇ ಫಲಗಳನ್ನು ಕೊಡಬೇಕಾಗುತ್ತದೆ. ಅದರಿಂದ ಪರಮಾತ್ಮನೇ ಈ ಮಂತ್ರಗಳಿಗೆ ಶಕ್ತಿದಾತೃ, ರಾಜ.

ಪರಮೋಚ್ಚ ಶಕ್ತಿಯುತವಾದ, ಈಪ್ಸಿತ ಫಲವನ್ನು ಅನುಗ್ರಹಿಸುವ ಮಂತ್ರ - ಯಾವ ಮಂತ್ರವು ಪರಮಾತ್ಮನು ಅನುಗ್ರಹಿಸಬಹುದಾದ ಅತ್ಯುತ್ತಮವಾದ ಸಾಲೋಕ್ಯ, ಸಾಯುಜ್ಯ, ಸಾಮಿಪ್ಯ, ಸಾರೂಪ್ಯ ಪದವಿಯನ್ನು ಕೊಡುವುದೋ ಅದೇ ರಾಜಮಂತ್ರ. ''ನಾಮಸ್ಮರಣಾದನ್ಯೋಪಾಯಂ ನ ಹಿ ಪಶ್ಯಾಮೋ ಭವತರಣೇ।'' ಎಂದಿದೆ. ಅಂದ ಮೇಲೆ ನಾಮಸ್ಮರಣೆ ಜಪಕ್ಕಿಂತ ಶ್ರೇಷ್ಠವಾದುದು, ಬೇರೆ ದಾರಿ ಇಲ್ಲ. ಅದೂ ಸಹ ಮಂತ್ರವು ಶ್ರೇಷ್ಠ ಸತ್‌ಗುರುವಿನಿಂದ ಉಪದೇಶವಾಗಿದ್ದರೆ ಬಹಳ ಉತ್ತಮ. ಜಪವನ್ನು ಕೋಟಿ ಕೋಟಿ ಸಂಖ್ಯೆಯಲ್ಲಿ ಮಾಡಿದರೆ ನಮ್ಮ ಹೃದಯದಲ್ಲಿ ಪರಮಾತ್ಮನು ನಿಂತು ಉಸಿರಿನಲ್ಲಿ ಜಪವನ್ನೇ ಮಾಡುತ್ತಿರುವಂತೆ ಅನುಗ್ರಹಿಸುತ್ತಾನೆ. ಇದೇ ರಹಸ್ಯವಾದುದ್ದು - ಇದು ಮಂತ್ರರಾಜನ ಗುಟ್ಟು.

ಎಲ್ಲ ಮಂತ್ರಗಳೂ ಪೂಜ್ಯವೇ, ನಾವು ಎಲ್ಲದರಲ್ಲಿಯೂ ಪರಮಾತ್ಮನು ವಾಸವಾಗಿರುವನೆಂದು ಪ್ರತಿ ಮಂತ್ರವನ್ನು ಪೂಜ್ಯ ಭಾವನೆಯಿಂದ ಗೌರವಿಸಬೇಕು. ಸಲ್ಲಬೇಕಾದ ಗೌರವ ಮಂತ್ರಕ್ಕೆ, ಮಂತ್ರವನ್ನು ಜಪಿಸುವವರಿಗಲ್ಲ. ಜಪಿಸುವವರು ಮಂತ್ರದ ಫಲದಿಂದ ಗೌರವವನ್ನು ತಾವಾಗಿಯೇ ಪಡೆಯುತ್ತಾರೆ. ಆತ್ಮದ ಉದ್ಧಾರದ ದಾರಿಯನ್ನು ಕಂಡುಕೊಳ್ಳುತ್ತಾರೆ.

ಮಂತ್ರಗಳು ದೇವನನ್ನು ಉದ್ದೇಶಿಸಿರುತ್ತದೆ. ಓಂಕಾರ ಸಹಿತ ಮಾಡಿದ ನಾಮ ನಮನ ಮಂತ್ರವು ಬಲಯುತವಾಗಿರುತ್ತದೆ.

ನಾಮಗಳು ಬಲವಾದುವುಗಳು, ಭಾವನೆಯನ್ನು ಪ್ರಕಟಿಸುತ್ತವೆ. ''ನಮಃ'' ಶಬ್ದದಿಂದ ಕೂಡಿದ ನಾಮಗಳು ಮನಸ್ಸಿನಲ್ಲಿ ಗೌರವ ಭಾವನೆಯನ್ನು ಉತ್ಪನ್ನ ಮಾಡುತ್ತವೆ. ಓಂಕಾರದಿಂದ ಕೂಡಿದ ಮಂತ್ರಗಳು ಮತ್ತೂ ಶಕ್ತಿಯುತವಾಗುತ್ತವೆ. ಗುರುವಿನಿಂದ ಉಪದೇಶ ಪಡೆದ ಮಂತ್ರ ಇನ್ನೂ ಉತ್ತಮ ಫಲಕೊಡುತ್ತದೆ. ಶ್ರದ್ಧೆ, ಭಕ್ತಿಯಿಂದ ಕೂಡಿದ ''ಓಂ ನಮಃ

ಶಿವಾಯ'', ''ಓಂ ನಮೋ ನಾರಾಯಣಾಯ'' ಮಂತಾದ ಮಂತ್ರಗಳು ನಮ್ಮ ಮನಸ್ಸಿನ ಭಾವನೆಗಳಿಗೆ ಸಾತ್ವಿಕ ಭಾವವನ್ನು ಕೊಡುತ್ತವೆ.

**384. ಮಂತ್ರಿಣೇ ನಮಃ**

ಮಂತ್ರ - ವೇದಗಳು ಮಂತ್ರ, ಪರಮಾತ್ಮನನ್ನು ಕುರಿತು ಮಾಡುವ ಮಂತ್ರಗಳು, ವಾಮಾಚಾರದ ದುಷ್ಫಲಗಳನ್ನು ಹೋಗಲಾಡಿಸಲು ಮಾಡುವ ಕ್ರಿಯೆ.

- ಪರಸ್ಪರ ಆಲೋಚನೆ ಮಾಡುವುದು,
- ಪರಮಾತ್ಮನನ್ನು ಕುರಿತು ಜಪಿಸುವ ಪದ ಸಮುದಾಯ,
- ಬುದ್ಧಿವಂತಿಕೆ,

ಮಂತ್ರವನ್ನು ತಿಳಿದವನು, ಮಂತ್ರಿನ್, ಮಂತ್ರಿ, ಮಾಟಮಾಡುವವನು.

ಇಷ್ಟೆಲ್ಲ ಅರ್ಥವಿದ್ದರೂ, ಇಲ್ಲಿ ಎಲ್ಲ ವೇದಗಳನ್ನು ಚತುರತೆಯನ್ನು ಬುದ್ಧಿವಂತಿಕೆಯನ್ನು ತನ್ನಲ್ಲಿ ಅಡಗಿಸಿಕೊಂಡಿರುವವನು ಎಂದು ಅರ್ಥಮಾಡುವುದು ಸಮಂಜಸ. ಇಂತಹ ಪರಮಾತ್ಮನು ಏನು ಬೇಕಾದರೂ ಕೊಡುವವನು, ಇಚ್ಛಾಶಕ್ತಿ, ಕ್ರಿಯಾಶಕ್ತಿ, ಬುದ್ಧಿಶಕ್ತಿಯನ್ನು ಕೊಡುವವನು ಪರಮಾತ್ಮನೇ. ಆದರಿಂದ ಅವನ ಪ್ರಚೋದನೆಯಿಂದಲೇ ಜೀವಿಗಳು ತಮ್ಮ ಸಂಸಾರ ಬಂಧನವನ್ನು ಬಿಡಿಸಿಕೊಳ್ಳುವುದಕ್ಕಾಗಿ ಪರಮ ಶಾಂತಿಯನ್ನು ಹೊಂದುವುದಕ್ಕಾಗಿ ಪರಮಾತ್ಮನನ್ನೇ ಆಶ್ರಯಿಸುತ್ತಾರೆ. ಇವನಷ್ಟು ಫಲ ನೀಡುವವರು ಯಾರೂ ಇಲ್ಲ.

ಒಬ್ಬೊಬ್ಬರೂ ಇತರರಿಗೆ ಮಂತ್ರಿಗಳ ಹಾಗೆ ನಟಿಸಿ ಶ್ರೇಯಸ್ಸನ್ನು ಕೋರುವುದೂ ಉಂಟು. ಆದರೆ ಸದಾ ಶ್ರೇಯಸ್ಸನ್ನೇ ಕೋರುವ ಮತ್ತು ಮನಸ್ಸಿಗೆ ಮತ್ತು ಬುದ್ಧಿಗೆ ಪ್ರೇರಣೆ ನೀಡುವವನೆಂದರೆ ಪರಮಾತ್ಮನೇ. ಈತನೇ ಪರಮ ಪ್ರಿಯವಾದ ಗೋಪ್ಯವಾಗಿ ನಮ್ಮ ಮನಸ್ಸಿನ ಭಾವನೆಯನ್ನು ಕೇಳಿ ನಮಗೆ ಶ್ರೇಯಸ್ಸಾಗುವ ರೀತಿ ಪ್ರೇರಣೆ ಕೊಡುವವನು - ''ಮಂತ್ರಿಣೇ ನಮಃ''.

*ತ್ರಿನೇತ್ರಾಯ ತ್ರಿವರ್ಗಾಯ ತ್ರಿಧಾಮ್ನೇ ಚ ತ್ರಿಶೂಲಿನೇ ।*
*ತ್ರಿಕಾಲಜ್ಞಾನರೂಪಾಯ ತ್ರಿದೇಹಾಯ ತ್ರಿರಾತ್ಮನೇ ॥63॥*

*(385-391)*

**385. ತ್ರಿನೇತ್ರಾಯ ನಮಃ**

ತ್ರಿ - ಮೂರು, ನೇತ್ರ - ಕಣ್ಣುಗಳು, ತ್ರಿನೇತ್ರ - ಮೂರು ಕಣ್ಣುಳ್ಳವನು, ಮೂರು ಕಣ್ಣುಗಳುಳ್ಳವನು - ಶಿವ.

ತ್ರಿನೇತ್ರಾಯ ನಮಃ - ಶಿವನಿಗೆ ನಮಸ್ಕಾರಗಳು.

ಎಲ್ಲ ದೇವರುಗಳಿಗೂ ಎರಡು ಕಣ್ಣುಗಳಾದರೆ ಶಿವನಿಗೆ ಮೂರನೆಯ ಕಣ್ಣು ಸಹ ಇದೆ.

ಪರಮಾತ್ಮನಿಗೆ ಸೂರ್ಯ, ಚಂದ್ರರು ಕಣ್ಣುಗಳಾದರೆ, ಶಿವನಿಗೆ ಹಣೆಯ ಮೇಲೆ ಅಗ್ನಿಯೆಂಬ ಮೂರನೆಯ ಕಣ್ಣು ಸಹ ಇದೆ. ಈ ಮೂರನೆಯ ಕಣ್ಣಿನಿಂದಲೇ ಈಶ್ವರನು ಅವನ ತಪೋ ಭಂಗಮಾಡಲೆತ್ನಿಸಿದ ಮನ್ಮಥನನ್ನು ಉರಿಸಿ ಬೂದಿ ಮಾಡಿದನು.

ಪರಮಾತ್ಮ ಸೃಷ್ಟಿಯಲ್ಲಿರುವ ಜೀವ ಕೋಟಿಗಳಿಗೆ ಸಾಮಾನ್ಯವಾಗಿ ಎರಡು ಕಣ್ಣುಗಳಿರುತ್ತವೆ. ಅವನ ಕೃಪೆಯಿಂಲೇ ಅಂತಃ ಚಕ್ಷು ಅಥವಾ ಜ್ಞಾನ ಚಕ್ಷುವೆಂಬ ಮೂರನೆಯ ದೃಷ್ಟಿ / ಕಣ್ಣನ್ನು ಕೊಟ್ಟು ಜೀವಿಗಳನ್ನು ತನ್ನ ಕಡೆಗೆ ಎಳೆಯುತ್ತಾನೆ. ಇದು ಅವನು ದಯಪಾಲಿಸುವ ಅಮೋಘವಾದ ಮತ್ತು ಅಪಾರವಾದ ವರಪ್ರಸಾದ. ಈ ಚಕ್ಷುವು ಇದ್ದರೂ ನಿದ್ರಾವಸ್ಥೆಯಲ್ಲಿ ಅಥವಾ ಸುಪ್ತಾವಸ್ಥೆಯಲ್ಲಿ ಇರುತ್ತದೆ. ಅದನ್ನು ಅವನೇ ನಮ್ಮ ನಮ್ಮ ಸಂಸ್ಕಾರಾನುಸಾರವಾಗಿ ಎಬ್ಬಿಸುತ್ತಾನೆ. ಈ ಮೂರನೆಯ ಚಕ್ಷುವು ಎದ್ದಾಗ ನಮಗಾಗುವ ಅನುಭವ ಅಷ್ಟಿಷ್ಟಲ್ಲ. ಈ ಸಂಸಾರ ಸಾಗರದ ಬಂಧನವನ್ನು ಕ್ರಮ ಕ್ರಮವಾಗಿ ಹೋಗಲಾಡಿಸುತ್ತದೆ. ಆಗಾಗುವ ಸಂತೋಷವೇ ದಿವ್ಯ ಸಂತೋಷ, ಶಾಶ್ವತವಾದ ಸಂತೋಷ.

ಪರಮಾತ್ಮನ ಕೃಪೆಗಾಗಿ ''ಅನನ್ಯ ಶ್ರದ್ಧೆ, ಅವ್ಯಭಿಚಾರಿಣೀ ಭಕ್ತಿಯಿಂದ ಅವನನ್ನು ಕಾಡಿ ಬೇಡಿ ಪೊಗಳಿ, ಪಾಡಿ ಕೊಂಡಾಡಿ ಪಡೆಯೋಣ'' ಎಂದು ಸಂಕಲ್ಪಿಸಿ ಪ್ರಯತ್ನಿಸಿದರೆ ಬರಬಹುದು. ನಾವೂ ತ್ರಿನೇತ್ರರಾಗಿ ಅವನನ್ನು ಹೊಂದಬಹುದು.

ಇದೇ ಪರಮ ಗುರಿಯಾಗಲಿ.

36. ತ್ರಿವರ್ಗಾಯ ನಮಃ

ತ್ರಿ - ಮೂರು, ವರ್ಗ - ಭಾಗಗಳು, ಪರಮಾತ್ಮನನ್ನು ಮೂರು ವರ್ಗಗಳೆಂದು ತಿಳಿಯುವ ಭಾವ - ಪರಮಾತ್ಮನನ್ನು ಮೂರು ಭಾಗದವನೆಂದು ತಿಳಿದು ನಮಸ್ಕರಿಸುವುದು. ಇವು ಯಾವೆಂದು ತಿಳಿಯುವುದು ಕಷ್ಟ. ನಮ್ಮ ಸಂಕುಚಿತ ಮನಸ್ಸು ಮತ್ತು ಬುದ್ಧಿ ಈ ಗೂಢ ಅರ್ಥವನ್ನು ಹೇಗೆ ತಿಳಿಯಬೇಕು?

ಸರ್ವರಿಗೂ ವೇದ್ಯವಾದ ಪರಮಾತ್ಮನನ್ನು ಸಾಕಾರ ಮೂರ್ತಿ, ನಿರಾಕಾರ ಮೂರ್ತಿ ಎಂದು ಹೇಳುತ್ತೇವೆ. ಅಂದರೆ ಅವನು ಹೀಗೇ ಎಂದು ಹೇಳಿದಂತಾಯಿತು, ಪರಮಾತ್ಮನನ್ನು ಹೀಗೆ ಎಂದು ನಿರ್ದೇಶಿಸಿದಂತಾಯಿತು. ಇದು ಸರಿಯಲ್ಲ. ಅವನು ಯಾರ ಆಲೋಚನೆಗೂ ಸಿಕ್ಕದವನು. ಇದರಿಂದ ಮೂರನೆಯದು ಯಾವದೋ ಒಂದು ಇದೆ, ಅದು ಯಾರಿಗೂ ಹೀಗೆಂದು ಹೇಳದ ಭಾವನೆ, ರೂಪ, ''ನೇತಿ ನೇತಿ'' ಇತ್ಯಾದಿ. ಅದರಿಂದ ಅವನು

''ತ್ರಿವರ್ಗನು'' ಎಂದಾಯಿತು. ಅಂದರೆ ''ತ್ರಿವರ್ಗಾಯ ನಮಃ''. ಇದನ್ನು ತಿಳಿದವರಾದ ಬ್ರಹ್ಮದೇವರು ಈ ನರಸಿಂಹ ಸಹಸ್ರನಾಮದಲ್ಲಿ ಈಗ ಈ ನಾಮದ ಮೂಲಕ ಹೇಳಿದ್ದಾರೆ. ಪರಮಾತ್ಮನು ಮಹಾವಿಷ್ಣುವು ನರಸಿಂಹನು ತ್ರಿವರ್ಗನು.

ಸೃಷ್ಟಿ, ಸ್ಥಿತಿ, ಲಯಗಳೆಂಬ ತ್ರಿವರ್ಗ ಸ್ವರೂಪನು ಪರಮಾತ್ಮನೇ.

ಹಗಲು, ರಾತ್ರಿ, ಸಂಧ್ಯಾಕಾಲಗಳು - ಎಂದು ಕಾಲವನ್ನು ಮೂರು ವಿಭಾಗವಾಗಿ ಮಾಡಿ, ಪರಮಾತ್ಮನೇ ಅವುಗಳಲ್ಲಿ ಅಡಕವಾಗಿದ್ದಾನೆ - ಅಂತಹ ತ್ರಿವರ್ಗಮೂರ್ತಿಗೆ ನಮಸ್ಕಾರಗಳು.

ಪ್ರಕೃತಿ, ಪುರುಷ, ಮಾಯೆ ಎಂದು ತನ್ನನ್ನು ತಾನೇ ಮೂರು ವರ್ಗಗಳಾಗಿ ಮಾಡಿಕೊಂಡು ಮೂರರಲ್ಲಿಯೂ ಅಡಗಿ ಈತನು ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನಾಗಿ ಪ್ರವರ್ತಿಸುತ್ತಿದ್ದಾನೆ.

ತನ್ನ ಲೋಕ - ಸ್ವರ್ಗ ಲೋಕದಿಂದ ಭೂಮಿಯವರೆಗೆ, ಭೂಲೋಕ, ಇದರಿಂದ ಪಾತಾಳದವರೆಗೆ ಎಂದು ಮೂರು ಭಾಗಗಳಾಗಿ ವಿಂಗಡಿಸಿ ಸ್ವರ್ಗದಲ್ಲಿ ಶಿರಸ್ಸು, ಭೂಮಿಯಲ್ಲಿ ನಾಭಿ, ಪಾತಾಳದಲ್ಲಿ ಪಾದವಾಗಿ ಪ್ರಸರಿಸಿ ಮಹಾವಿಷ್ಣುವೂ ತ್ರಿವರ್ಗ ಸ್ವರೂಪನಾಗಿ ಬೆಳೆದಿದ್ದಾನೆ. ಅಂತಹ ತ್ರಿವರ್ಗ ಸ್ವರೂಪಿಗೆ ನಮಸ್ಕಾರಗಳು.

ಮೂರೇ ವರ್ಗಗಳೆಂತ ನಿಯಮವಿಲ್ಲ, ಅವನು ಇಷ್ಟೆ ಎಂದರೆ ನಿರ್ದೇಶಿಸಿದಂತಾಗುತ್ತದೆ. ಇದು ಅವನ ''ಅಪರಿಮಿತ'' ಭಾವನೆಗೆ ಅಪವಾದವಾಗುತ್ತದೆ. ಆದರೂ ಬ್ರಹ್ಮ ದೇವರೇ ಹೇಳಿರುವುದರಿಂದ ಅಪವಾದವಾಗುವುದಿಲ್ಲ ಮತ್ತು ಅವನಿಗೆ ಅಪಚಾರವೂ ಆಗುವುದಿಲ್ಲ.

ಜೀವಿಗಳ ಮನೋ ಬುದ್ಧಿಗಳು ವಿಕಾಸವಾಗುವುದಕ್ಕೆ ಈ ನಾಮಗಳು ಸಹಾಯವಾಗುತ್ತವೆ.

(ತ್ರಿಮೂರ್ತಿಗಳಾಗಿಯೂ, ತ್ರಿಗುಣಗಳಲ್ಲಿಯೂ ಇನ್ನು ಅನೇಕ ರೀತಿ ವಿಭಾಗಿಸಿ ಕೊಂಡಿದ್ದಾನೆ).

387. ತ್ರಿಧಾಮ್ನೇ ನಮಃ

ಧಾಮ - ಎಂದರೆ ವಾಸಸ್ಥಾನ, ಧಾಮದಲ್ಲಿರುವವನು - ಧಾಮ್ನ.

ತ್ರಿ - ಮೂರು, ಧಾಮ್ನೇ - ವಾಸಸ್ಥಾನಗಳಲ್ಲಿರುವವನು - ಪರಮಾತ್ಮ.

ತ್ರೈಲೋಕ್ಯವಾಸಿ ಪರಮಾತ್ಮನಿಗೆ ನಮಸ್ಕಾರಗಳು.

ತ್ರಿ - ಧಾಮಗಳು - ಸ್ವರ್ಗ, ಮರ್ತ್ಯ, ಪಾತಾಳಗಳು,

- ತ್ರಿಧಾಮಗಳು, ಅತೀತ ಕಾಲದಲ್ಲಿ, ವರ್ತಮಾನ ಕಾಲದಲ್ಲಿ ಮತ್ತು

ಾವ ಕಾಲದಲ್ಲಿ ಸದಾ ಇರುವವನು - ಪರಮಾತ್ಮ - ಅವನು ತ್ರಿಧಾಮ್ನೇ
ಃ.

್ರೀ, ಪುರುಷ, ನಪುಂಸಕ ಲಿಂಗಗಳಲ್ಲಿ ಆತ್ಮ ಸ್ವರೂಪನಾಗಿ
ಸಮಾಡಿರುವುದರಿಂದ ಇವು ಅವನ ತ್ರಿಧಾಮ್ನಗಳು.

ರ್ವಜನ್ಮ, ಈವರ್ತಮಾಸ ಜನ್ಮ, ಪುನರ್ಜನ್ಮದಲ್ಲಿ ದೇಹಗಳಲ್ಲಿ ದೇಹಿ
ತ್ಮ ಸ್ವರೂಪನಾಗಿ ಪರಮಾತ್ಮನು ವಾಸಮಾಡುವುದರಿಂದ ಅವನು
ಮ್ನನು.

್ರಕೃತಿ ರೂಪ, ಪುರುಷ ರೂಪ ಮತ್ತು ಮಾಯಾ ರೂಪದಲ್ಲಿ
ಸಮಾಡುವವನಿಗೆ ಅವುಗಳೇ ಮೂರು ಧಾಮಗಳು.

ೂತ, ಭವಿಷ್ಯತ್ ಮತ್ತು ವರ್ತಮಾನ ಕಾಲದಲ್ಲಿ ಕಾಲ ಸ್ವರೂಪನಾಗಿ
ಮಾತ್ಮನು ಇರುವುದರಿಂದ ಈ ಮೂರು ಕಾಲಗಳೇ ''ತ್ರಿಧಾಮಗಳಾಗಿ''
ನಿಗೆ ಪರಿಣಮಿಸುತ್ತವೆ.

ಲ್ಲವನ್ನು ಅಡಗಿಸಿಕೊಂಡಿರುವ ಪರಮಾತ್ಮನು ತ್ರಿಧಾಮ್ನನು.

ೃಷ್ಟಿ, ಸ್ಥಿತಿ, ಪ್ರಲಯಗಳನ್ನೇ ತನ್ನ ವಾಸಸ್ಥಾನವಾಗಿ ಉಪಯೋಗಿಸುವವನು
ಧಾಮ್ನನು

ರ್ವದರಲ್ಲಿಯೂ ಸರ್ವಕಾಲದಲ್ಲಿಯೂ, ಇರುವವನನ್ನು ಯಾವ ರೀತಿ
ಾದರೂ ವಿಭಾಗಿಸಿ ಪ್ರಾರ್ಥಿಸಬಹುದು. ಇದು ಕೇವಲ ಭಕ್ತರ
ೋಭಾವನೆಗೆ ಅನುಕೂಲವಾಗುತ್ತದೆ. ಅವನು ಇರುವುದು, ಹೇಗಿದ್ದಾನೆಯೋ
ಯೇ ಇದ್ದಾನೆ, ಇದು ನಮ್ಮ ಮನ ಬುದ್ಧಿಗೆ ನಿಲುಕುವಂತೆ ಆಗಿರುವ
ಗಗಳು! ಅಷ್ಟೆ!

ಶೂಲಿನೇ ನಮಃ

ಶೂಲವು ಪರಮಾತ್ಮನ ಒಂದು ಆಯುಧ. ಇದನ್ನು ಅವನು
ೂಪದಲ್ಲಿರುವಾಗ ಹಿಡಿದಿರುತ್ತಾನೆ. ಅದರಿಂದ ಶಿವನಿಗೆ ತ್ರಿಶೂಲಿ ಎಂದು
ು.

ಶೂಲವನ್ನು ಉಪಯೋಗಿಸಿ ಯಮನಪಾಶದಿಂದ ಶಿವನು
ಮಾರ್ಕಂಡೇಯನನ್ನು ರಕ್ಷಿಸಿದನು.

ಕಾಲಜ್ಞಾನರೂಪಾಯ ನಮಃ

- ಮೂರು - ಕಾಲ - ಸಮಯಗಳಲ್ಲಿ, ಜ್ಞಾನ - ಸತ್ಯಸ್ಥಿತಿ, ಹೇಗಿದೆಯೋ
ಯೇ ತಿಳಿಯುವ ಪ್ರಜ್ಞೆಯ, ರೂಪ - ಸ್ವರೂಪ, ಸ್ಥಿತಿಯೇ ಆಗಿರುವವನು.
ಂದೆ, ಈಗ ಮತ್ತು ಮುಂದೆ ನಡೆದ, ನಡೆಯುತ್ತಿರುವ ಮತ್ತು ನಡೆಯುವ
ರಗಳ ತಿಳಿವಳಿಕೆಯೇ ಆಗಿರುವವನು - ಪರಮಾತ್ಮ. ಪರಮಾತ್ಮನಿಗೆ

ತಿಳಿಯದ ವಿಚಾರವೇ ಇಲ್ಲ. ಅವನು ಜೀವಿಗಳ ಆತ್ಮದಲ್ಲಿ ಕುಳಿತು ಸದಾ ನಡೆಯುವುದನ್ನು ಸಾಕ್ಷೀ ರೂಪನಾಗಿ ತಿಳಿಯುತ್ತಾನೆ. ಆದರಿಂದ ಅವನಿಗೆ ತಿಳಿಯದಂತೆ ದೇಹ, ಮನಸ್ಸು, ಬುದ್ಧಿ ಅಹಂಕಾರ, ಇಂದ್ರಿಯಗಳ ಸಮುದಾಯಗಳಲ್ಲಿ ಯಾವ ಚಿಂತನೆಯನ್ನಾಗಲೀ, ಕಾರ್ಯವನ್ನಾಗಲೀ ಮಾಡಲು ಸಾಧ್ಯವಿಲ್ಲ. ಇದು ಸಕಲ ಜೀವಿಗಳಲ್ಲಿಯೂ ನಡೆಯುತ್ತದೆ. ಆದರಿಂದ ಹಿಂದೆ ನಡೆದ, ಈಗ ನಡೆಯುವ ಮತ್ತು ಮುಂದೆ ನಡೆಯುವುದನ್ನು ತಿಳಿಯುವವನು ಅವನೇ! ಇಷ್ಟೇ ಅಲ್ಲ, ಕಲ್ಪಾಂತ - ಕಲ್ಪಾದಿ - ಕಲ್ಪಾಂತಗಳಲ್ಲಿ (ಅಂತರ - ಸಮಯದಲ್ಲಿ) ನಡೆಸುವ ಸೂತ್ರಧಾರನು ಅವನೇ ಆಗಿರುವುದರಿಂದ ತ್ರಿಕಾಲಜ್ಞಾನರೂಪನಾಗುತ್ತಾನೆ. ಮತ್ತು ಯಾವುದನ್ನೂ ಅವನಿಂದ ಬಚ್ಚಿಡಲು ಸಾಧ್ಯವಿಲ್ಲ. ಹಾಗೆ ಮಾಡಿದೆವೆಂದು ತಿಳಿದರೂ ಅದು ಆತ್ಮವಂಚನೆಯಾಗುತ್ತದೆ.

0. ತ್ರಿದೇಹಾಯ ನಮಃ

ಮೂರು ದೇಹಗಳುಳ್ಳವನು - ಅವನಿಗೆ ನಮಸ್ಕಾರಗಳು.

ಹಿಂದಿನ ಜನ್ಮಗಳಲ್ಲಿ ಅನುಭವಿಸಿದ ದೇಹಗಳು, ಈಗ ಅನುಭವಿಸುತ್ತಿರುವ ದೇಹ ಮತ್ತು ಮುಂದೆ ಅನುಭವಿಸುವ ದೇಹಗಳು - ತ್ರಿಕಾಲ ದೇಹಗಳು. ಇವುಗಳನ್ನು ಹೊಂದಿರುವವನು ಆತ್ಮನು - ಆತ್ಮವು ಪರಮಾತ್ಮ ಸ್ವರೂಪದಿಂದ ಕಲ್ಪಾದಿಯಲ್ಲಿ ಹೊರ ಬಂದ ಕಾರಣ ಪರಮಾತ್ಮನೇ ಆಗಿದ್ದಾನೆ. ದೇಹಗಳು ಪಂಚಭೂತಗಳಿಂದ ಆದದ್ದವೆಂದೂ, ಪಂಚಭೂತಗಳು - ಪೃಥಿವಿ, ಅಪಃ, ತೇಜಸ್ಸು, ವಾಯು ಮತ್ತು ಆಕಾಶಗಳು ಮೂಲದಲ್ಲಿ ಪರಮಾತ್ಮನಿಂದ ಬಂದದ್ದರಿಂದ ಅವನೇ! ಸ್ವರೂಪ ಮಾತ್ರ ಬೇರೆ - ಅದರಿಂದ ಎಷ್ಟೇ ದೇಹಗಳನ್ನು ಆತ್ಮವು ಕಲ್ಪಾದಿಯಿಂದ ಕಲ್ಪಾಂತದವರೆಗೆ ಧರಿಸಿದರೂ, ಪರಮಾತ್ಮನನ್ನೇ ಅವಲಂಬಿಸುತ್ತಿರುತ್ತದೆ. ಇವು ಹಿಂದಿನ, ಈಗಿನ ಮತ್ತು ಮುಂದಿನ ಮೂರು ದೇಹಗಳು, ತ್ರಿದೇಹಗಳು.

1. ತ್ರಿರಾತ್ಮನೇ ನಮಃ

ತ್ರಿ - ಮೂರು ಆತ್ಮನೇ ನಮಃ, ಆತ್ಮಗಳನ್ನು ಹೊಂದಿದವನು.

ಪ್ರತಿ ದೇಹದಲ್ಲಿಯೂ ಒಂದು ದಿವ್ಯ ತೇಜಸ್ಸು ಇರುತ್ತದೆ. ದೇಹ ನಾಶವಾದರೂ ಈ ತೇಜಸ್ಸು ನಾಶವಾಗುವುದಿಲ್ಲ. ಅದು ತನ್ನ ಸಂಸ್ಕಾರ - ಎಂದರೆ ಪಂಚ ಇಂದ್ರಿಯಗಳು (ಕರ್ಮದ್ದು) ಪಂಚ ಇಂದ್ರಿಯಗಳು (ಜ್ಞಾನಕ್ಕೆ ಸಂಬಂಧಪಟ್ಟದ್ದು), ಅಧಿ ದೇವತೆಗಳು, ಮನಸ್ಸು, ಬುದ್ಧಿ, ಅಹಂಕಾರ, ಚಿತ್ತದೊಡನೆ ಮೊದಲಿನಿಂದ ಪರಮಾತ್ಮನನ್ನು ಸೇರುವವರೆಗೆ ದೇಹದಿಂದ ದೇಹಕ್ಕೆ ಕಾಲಪಟದಲ್ಲಿ ಪ್ರಯಾಣಿಸುತ್ತಿರುತ್ತದೆ. ಇದಕ್ಕೆ ಸರ್ವಕಾಲದಲ್ಲಿಯೂ ''ಗುರು'' ಎಂಬ ಒಂದು ತೇಜಸ್ಸು ದಾರಿಯನ್ನು ತೋರಿಸುತ್ತಿರುತ್ತದೆ.

ಹೀಗೆ ಪರಮಾತ್ಮ ಮತ್ತು ಆತ್ಮಗಳ ಮಧ್ಯದಲ್ಲಿ ''ಗುರು'' ಎಂಬ ವಸ್ತು ರಿ ತೋರಿಸಿ ಮೋಕ್ಷವನ್ನು ಪಡೆಯುವುದಕ್ಕೆ, ಆ ಪರಮಾತ್ಮನನ್ನು ರುವುದಕ್ಕೆ ಸಹಾಯವಾಗುತ್ತದೆ. ''ಗುರು''ವು ಆತ್ಮಕ್ಕೂ ಪರಮಾತ್ಮನಿಗೂ ಂಪರ್ಕ ಕಲ್ಪಿಸುವ ಸೇತುವೆ. ಭವ ಸಾಗರವನ್ನು ದಾಟುವ, ದಾರಿಯನ್ನು ಲ್ಪಿಸುವ ''ತೇಜಸ್ಸು''.

ಈ ಗುರು, ಪರಮಾತ್ಮ, ಆತ್ಮ ಮೂರೂ ಸಹ ಆತ್ಮ ಸ್ವರೂಪವೇ, ಾವ ಭೇದವೂ ಇಲ್ಲ. ಮೂರರಲ್ಲಿಯೂ ಆತ್ಮವೇ ಇರುತ್ತದೆ. ಆದರೆ ನ, ಕರ್ತವ್ಯ, ಭೇದದಿಂದ ಬೇರೆ ಬೇರೆಯಾಗಿ ತೋರುತ್ತದೆ.

ಗುರುವಿನ ಧ್ಯೇಯ ಶಿಷ್ಯನನ್ನು ಪರಮಾತ್ಮನ ನೆಲೆಯಲ್ಲಿ ಸೇರಿಸುವುದು, ಷ್ಯನ ಧ್ಯೇಯ ಪರಮಾತ್ಮನನ್ನು ಸೇರುವುದು, ಪರಮಾತ್ಮನ ಧ್ಯೇಯ ಆತ್ಮನಿಗೆ ಕ್ಷಾತ್ಕಾರ ಕೊಡುವುದು. ಈ ಮೂಲಕ ಮೂರು ಆತ್ಮಗಳು ಒಂದಾಗಿ ಲೆಯಲ್ಲಿ ಲವಲೇಶಭೇದವಿಲ್ಲದೇ ಹೋಗುತ್ತವೆ. ತ್ರಿರಾತ್ಮಗಳು - ''ತ್ರಿರಾತ್ಮನೇ ಮಃ'' ಎಂದಾಗುತ್ತದೆ.

*ನಮಃ ತ್ರಿಮೂರ್ತಿವಂದ್ಯಾಯ ತ್ರಿತತ್ತ್ವಜ್ಞಾನಿನೇ ನಮಃ ।*
*ಅಕ್ಷೋಭ್ಯಾಯಾನಿರುದ್ಧಾಯ ಅಪ್ರಮೇಯಾತ್ಮಭಾನವೇ ॥64॥*
*(392-397)*

**ತ್ರಿಮೂರ್ತಿವಂದ್ಯಾಯ ನಮಃ**

ಲೋಕದಲ್ಲಿ ತ್ರಿಮೂರ್ತಿಗಳೆಂದರೆ ಬ್ರಹ್ಮ, ವಿಷ್ಣು, ಶಿವ. ಸಕಲ ದೇವ ವತೆಗಳಿಗಿಂತಲೂ ಇವರು ಬಹಳ ಶಕ್ತಿಯುತರಾದವರು, ಚತುರರು ಮತ್ತು ಕಳ ಸೂಕ್ಷ್ಮವಾದ ಕಾರ್ಯಗಳನ್ನು ಮಾಡುವವರು. ಬ್ರಹ್ಮನು ಸಕಲ ೋಕಗಳನ್ನು, ಸಮಸ್ತ ಜೀವಿ ಕೋಟಿಯ ಆಗು ಹೋಗುಗಳನ್ನು ಬರೆಯುವ ಧಾತನಾಗಿಯೂ, ವಿಷ್ಣುವು ಅವುಗಳನ್ನು ಕಾಲದ ಉದ್ದ ಅಗಲದ ದಾರಿಯಲ್ಲಿ ಡೆಯಿಸುವವನಾಗಿಯೂ ಮತ್ತು ಶಿವನು ಸಕಲ ಜೀವ ಕೋಟಿಯ ದೇಹಗಳ ತ್ತು ಚರಾಚರ ವಸ್ತುಗಳ ಲಯ ಸ್ಥಿತಿಯನ್ನುಂಟುಮಾಡಿ ಪುನಃ ದೇಹ ಂದುವ ದಾರಿಯನ್ನು ಕಲ್ಪಿಸುವವನಾಗಿಯೂ ಮಾಡುತ್ತಾರೆ. ಇದರಿಂದ ವರು ಎಲ್ಲರಿಗಿಂತಲೂ ಶ್ರೇಷ್ಠರು ಮತ್ತು ಎಲ್ಲರಿಂದಲೂ ವಂದ್ಯರು.

ಇಂತಹ ಈ ತ್ರಿಮೂರ್ತಿಗಳಿಗೇ ಕಾರ್ಯ ವಿಭಾಗ ಮಾಡಿ, ತನ್ನ ಮನೆಯಂತೆ ಈ ಸಕಲ ಬ್ರಹ್ಮಾಂಡಗಳನ್ನೇ ನಡೆಯಿಸುವ ಮತ್ತು ಕೇವಲ ೂತ್ರಧಾರನಂತೆ ನಿಲ್ಲುವ ಪರಬ್ರಹ್ಮನಿಗೆ ಅನಂತಾನಂತ ನಮಸ್ಕಾರಗಳು. ಪರಬ್ರಹ್ಮನು - ಭಗವಾನ್ ಶ್ರೀಮನ್ನಾರಾಯಣನು - ಏನೇ ಹೆಸರಿರಲಿ ತ್ರಿಮೂರ್ತಿಗಳಿಂದ ಮಾಡಿಸುವ ಸೂತ್ರಧಾರನನ್ನು, ತ್ರಿಮೂರ್ತಿಗಳೇ

ವಂದಿಸುತ್ತಾರೆ. ಇವನು ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕ. ಈ ಶಕ್ತಿಗೆ ಸರ್ವರೂ ನಮಿಸುತ್ತಾರೆ.

ಹೆಚ್ಚೆಂದರೆ ಯಾವ ದೇವ ಅಥವಾ ದೇವತೆಯನ್ನು ಆರಾಧಿಸುವೆವೋ, ಯಾವ ದೇವತೆಯನ್ನು ಭಕ್ತಿಯಿಂದ ಆರಾಧಿಸುವೆವೋ, ಆ ದೇವಿಯನ್ನು ಅಥವಾ ದೇವತೆಯನ್ನು ನಮ್ಮ ಭಕ್ತಿಯ ಪರಮಾವಧಿಗೆ ಏರಿಸಿ, ಪರಮ ಶಕ್ತಿಯಿಂದ ಕೂಡಿದ ಈ ಪ್ರಸ್ತುತ ಶಕ್ತಿಗೆ ಇತರ ಎಲ್ಲ ಶಕ್ತಿಗಳೂ ಅಧೀನವಾಗುತ್ತವೆ ಎನ್ನುತ್ತೇವೆ. ನಮ್ಮ ಪ್ರಸ್ತುತ ಆರಾಧ್ಯ ಶಕ್ತಿಯೇ ಸರ್ವೋಚ್ಚ ಎಂದು ಭಾವಿಸುತ್ತೇವೆ. ಉದಾಹರಣೆಗೆ,

1. ಲಲಿತಾ ದೇವಿಯ ಸಹಸ್ರನಾಮದಲ್ಲಿ ಇತರ ಎಲ್ಲ ದೇವರುಗಳಿಗಿಂತಲೂ ಈ ದೇವಿಯೇ ಪರಮ ಶಕ್ತಿ ಎಂದು ಹೇಳಲ್ಪಡುತ್ತದೆ.
2. ಮೂಕಾಂಬಿಕಾ ದೇವಿಯ ದೇವಸ್ಥಾನದಲ್ಲಿ ಇತರ ಎಲ್ಲ ಶಕ್ತಿಗಳಾದ ಶಿವ, ವಿಷ್ಣು, ಬ್ರಹ್ಮ, ಸರಸ್ವತಿ, ಲಕ್ಷ್ಮಿಯರ ಶಕ್ತಿಯನ್ನು ಕೇಂದ್ರಿಕರಿಸಿರುವುದನ್ನು ಲಿಂಗ ರೂಪದಲ್ಲಿ ನೋಡುತ್ತೇವೆ.
3. ಶಿವನನ್ನು ಬ್ರಹ್ಮ ವಿಷ್ಣುಗಳು ಸರ್ವೋಚ್ಚ ಎಂದು ತಿಳಿಯುತ್ತೇವೆ.
4. ಹಾಗೆಯೇ ಮಹಾವಿಷ್ಣುವೇ ಬ್ರಹ್ಮನನ್ನು ನಾಭಿ ಕಮಲದಲ್ಲಿ ಉದ್ಭವವಾಗುವಂತೆ ಮಾಡಿದ ನಂತರ ಬ್ರಹ್ಮನಿಂದ ರುದ್ರ ಮೊದಲಾದ ದೇವತೆಗಳ ಉದ್ಭವವಾದರೆಂದು ಪುರಾಣಗಳು ಹೇಳುತ್ತವೆ.
5. ಆದರೆ ಇವೆಲ್ಲಕ್ಕೂ ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನು ಪರಮ ವಂದ್ಯನು.

ಹೀಗಾಗಿ ನಾವು ಪರಮ ಜಿಜ್ಞಾಸೆಯಲ್ಲಿ ಸಿಕ್ಕಿಕೊಳ್ಳುತ್ತೇವೆ. ಒಂದು ಸತ್ಯ, ಯಾವ ದೇವರನ್ನು ಆರಾಧಿಸಿದರೂ ನಮ್ಮ ಸಾಕ್ಷಾತ್ಕಾರವನ್ನು ಪಡೆಯಬಹುದು. ದಾರಿಗಳು ಹಲವು - ಗುರಿ ಒಂದೇ - ಸಾರೂಪ್ಯ, ಸಾಲೋಕ್ಯ, ಸಾಯುಜ್ಯ ಮತ್ತು ಸಾಮಿಪ್ಯ. ಪರಮಾತ್ಮನಲ್ಲಿ ಐಕ್ಯವಾಗುವ ಸ್ಥಿತಿಯೇ ಪರಮ ಪವಿತ್ರವಾದ ಗುರಿ. ಇದನ್ನು ಸಕಲ ಜೀವ ಕೋಟಿಯೂ ಪಡೆಯಬಹುದು. ಪರಮಾತ್ಮನು ಪರಮ ಕರುಣಾಳು - ಆ ತ್ರಿಮೂರ್ತಿ ವಂದ್ಯನನ್ನು ನಾಮಜಪದಿಂದಲೇ ಸೇರಬಹುದು, ಪೂಜೆ, ಭಜನೆ, ಧ್ಯಾನ, ಜಪಗಳು ಪವಿತ್ರವಾದ ದಾರಿಗಳು- ಇದನ್ನು ತಿಳಿಯುವುದೇ ಜ್ಞಾನ - ಇದರಿಂದಲೇ ಸಂಸಾರಸಾಗರದಿಂದ ಮುಕ್ತಿ. ತ್ರಿಮೂರ್ತಿವಂದ್ಯನಾದ ಪರಬ್ರಹ್ಮಸ್ವರೂಪಿ - "ಓಂ" - ಕಾರಕ್ಕೆ ನಮಸ್ಕಾರಗಳು.

3. ತ್ರಿತತ್ತ್ವಜ್ಞಾನಿನೇ ನಮಃ

ತ್ರಿ - ಮೂರು, ತತ್ತ್ವ - ಭಾವನೆಯ ಮೂಲವನ್ನು, ಜ್ಞಾನಿನೇ - ತಿಳಿದವನಿಗೆ, ನಮಃ - ನಮಸ್ಕಾರಗಳು.

ಸ್ಟಿ, ಸ್ಥಿತಿ, ಲಯಗಳ ಮೂಲಭೂತ ಕಾರಣ ಸ್ವರೂಪವನ್ನು, ಕರ್ತೃ ಸವನ್ನು ತಿಳಿದವನು - ಪರಮೇಶ್ವರನು - ಪರಬ್ರಹ್ಮನು. ಈ ಪರಬ್ರಹ್ಮನಿಗೆ ಸ್ಕಾರಗಳು.

ರ್ಹ್ಮಸ್ವರೂಪ, ವಿಷ್ಣುಸ್ವರೂಪ, ಶಿವಸ್ವರೂಪ ಮತ್ತು ಕಾರಣ, ರ್ಗಗಳನ್ನು ತಿಳಿದು ವಿಭಾಗಿಸಿದವನು - ಪರಬ್ರಹ್ಮ.

ೂತ, ವರ್ತಮಾನ, ಭವಿಷ್ಯತ್‌ಗಳ ಕಾಲ ಸ್ವರೂಪ, ಅವುಗಳಲ್ಲಿ ರ್ಭದಲ್ಲಿ ಅಡಗಿರುವ ವಿಚಾರಗಳನ್ನು ತಿಳಿದವನು - ಪರಮೇಶ್ವರನು ರಬ್ರಹ್ಮ.

ೃತಿ, ಪುರುಷ, ಮಾಯೆ - ಇವುಗಳಲ್ಲಿ ಅಡಗಿರುವ ವಸ್ತು ಸ್ಥಿತಿಯನ್ನು ವನು - ಪರಮೇಶ್ವರ.

ಯಾ, ವಾಚಾ, ಮನಸ್ - ತತ್ವಗಳನ್ನು ಅರಿತವನು - ಪರಮಾತ್ಮ.

ು ತತ್ವ, ಆತ್ಮ ತತ್ವ, ಪರಮಾತ್ಮ ಸ್ವರೂಪಗಳನ್ನು ತಿಳಿದವನು.

ಸಾರ ಸಾಗರ ಅಥವಾ ಭವಸಾಗರ (ಭೂಲೋಕ), ಪಾತಾಳಲೋಕ, ಲೋಕಗಳನ್ನು ನಡೆಸುವ ಸೂತ್ರವನ್ನು ತಿಳಿದವನು.

ರ್ಮ ಫಲಗಳು - ಪ್ರಾರಬ್ಧ, ಸಂಚಿತ, ಆಗಮ ಕರ್ಮಗಳನ್ನು ತಿಳಿದವನು ಮಾತ್ಮನೊಬ್ಬನೇ.

ನ, ಅಜ್ಞಾನ, ಇತರದು ಇವೆರಡಕ್ಕೆ ಸೇರದುದನ್ನು ತಿಳಿದವನು.

ಣ ರೂಪ, ನಿರ್ಗುಣ ರೂಪ, ನೇತಿ ನೇತಿ ಎಂದು ವರ್ಜಿಸಿದ ಮೇಲೆ ಯುವ ಪರಮಾತ್ಮನನ್ನು - ತಿಳಿದವನು - ಪರಬ್ರಹ್ಮ.

ಗೆಯೇ ಎಷ್ಟು ವಿಮಗಳು ಈ ''ತ್ರಿತತ್ವಜ್ಞಾನದಲ್ಲಿ'' ಬರುವುವೋ, ದಿಲ್ಲವೋ ಮತ್ತು ಇವುಗಳನ್ನು ಮೀರಿದವುಗಳೋ - ಸಕಲವನ್ನು ವನು - ಪರಮಾತ್ಮ - ಅವನೇ ತ್ರಿತತ್ವಜ್ಞಾನಿ - ಅವನಿಗೆ ನಮಃ - ನಮಸ್ಕಾರಗಳು.

ೋಭ್ಯಾಯ ನಮಃ

- ಕಣ್ಣುಗಳುಳ್ಳವನು, ಅರ್ಥಾತ್ ದೃಷ್ಟಿಯುಳ್ಳವನು, ಪಥಗಳುಳ್ಳವನು, ೃಷ್ಟಿ, ಬಹಿರ್ದೃಷ್ಟಿಯುಳ್ಳವನು,

ಜೀವಿಗೂ ಎರಡು ಕಣ್ಣುಗಳನ್ನು ಮತ್ತು ಎರಡು ವಿಧವಾದ ದೃಷ್ಟಿಯನ್ನು ಾಲಿಸಿದ್ದಾನೆ. ಅಂತರಂಗ ದೃಷ್ಟಿ, ಬಹಿರಂಗ ದೃಷ್ಟಿ, ಮತ್ತೆ ಜ್ಞಾನ ದಿವ್ಯ ಚಕ್ಷು. ಈ ದೃಷ್ಟಿಗಳು, ಚಕ್ಷುಗಳು (ಎರಡು), ದೇಹದಲ್ಲಿರುವ ಂದ್ರಿಯ ಮತ್ತು ಕರ್ಮೇಂದ್ರಿಯಗಳಲ್ಲಿ ಅಧಿದೇವತೆಗಳು ಾನವಾಗಿರುತ್ತವೆ. ಈ ದೇವತೆಗಳೇ ದಿವ್ಯ ತೇಜಸ್ಸುಗಳು - ಪರಮಾತ್ಮನ

ಅಂಶಗಳು. ಈ ಪರಮಾತ್ಮನ ಅಂಶಗಳಿಗೆ ನಾವು ನಮನ ಮಾಡುತ್ತೇವೆ. ''ಅಕ್ಷೋಭ್ಯಾಯ ನಮಃ''.

ಹಾಗೆಯೇ ಜೀವ ಕೋಟಿಗೇ ಜೀವವಾಗಿರುವ ಪರಮಾತ್ಮನು ಅಕ್ಷೋಭ್ಯನು. ತನ್ನ ದೃಷ್ಟಿ ಮಾತ್ರದಿಂದ ನಾಶವಾಗುವ (ಕ್ಷ) ಸ್ಥಿತಿಯಿಂದ ಅಕ್ಷ - ನಾಶವಿಲ್ಲದ ಸ್ಥಿತಿಗೆ ಎಳೆಯುವವನು.

ಅಕ್ಷೋಭ್ಯ - ನಾಶವಿಲ್ಲದವನು - ಅವಿನಾಶಿ - ಪರಮಾತ್ಮ.

ಅಕ್ಷ - ಪಥ. ಎಂದರೆ ಪರಮಾತ್ಮನೇ ಕಾಲದೇವನಾಗಿ ಸಕಲ ಜೀವಿಗಳಿಗೂ ದಾರಿ ತೋರಿಸುವವನಾಗಿದ್ದಾನೆ.

ಕ್ಷೋಭ - ಮನಸ್ಸಿನ ಹೋರಾಟ, ಅ - ಇಲ್ಲದ ಹಾಗೆ ಮಾಡುವವನು, ಮನಸ್ಸಿಗೆ ಶಾಂತಿಯನ್ನು ಕೊಡುವವನು (ವಿ.ಸ. 801).

ಭಗವಂತನು ರಾಗ ದ್ವೇಷಗಳಿಂದಲಾಗಲೀ ಶಬ್ದಾದಿ ವಿಷಯಗಳಿಂದಲಾಗಲೀ ದೇವ ಶತ್ರುಗಳಿಂದ ಕ್ಷೋಭೆ ಹೊಂದುವುದಿಲ್ಲ. ಅದರಿಂದ ಅಕ್ಷೋಭ್ಯನು (ವಿ.ಸ. 801).

395. ಅನಿರುದ್ಧಾಯ ನಮಃ

ಅನಿರುದ್ಧ ದೇವನಾಗಿ ಸಕಲದಿಂದ ಪೂಜ್ಯನಾಗಿದ್ದಾನೆ.

ಶ್ರೀಕೃಷ್ಣನ ಮೊಮ್ಮಗ, ಬಾಣಾಸುರನ ಮಗಳಾದ ಉಷೆಯ ಪತಿ,

ಕೇಶವನಾಮಗಳಲ್ಲಿ - ''ಅನಿರುದ್ಧಾಯ ನಮಃ'' ಎಂಬುದೂ ಒಂದು.

ಪರಮಾತ್ಮನ ಒಂದು ರೂಪ - ಅನಿರುದ್ಧ -

ಅನಿರುದ್ಧ - ತನ್ನ ಅವತಾರಗಳಲ್ಲಿ ಯಾರಿಂದಲೂ ನಿರೋಧಿಸಲ್ಪಡದೆ ಇರುವವನು. (ವಿ.ಸ. 185)

ನಿರೋಧಂ ಕರ್ತುಂ ಯಸ್ಯ ನಾಸ್ತಿ - ಸಃ - ಅನಿರುದ್ಧಃ -

(ನಿರೋಧ - ವಿರೋಧಿಸಿ ಕೈದು ಮಾಡುವುದು, ಲಯ ಮಾಡುವುದು, ಅ - ಅಂತಹದನ್ನು ಮಾಡಲಾಗದಿರುವವನು ಅನಿರುದ್ಧ.)

396. ಅಪ್ರಮೇಯಾಯ ನಮಃ

ಪ್ರಮೇಯ - ಪರಿಮಿತ, ಅಳೆಯಲಿಕ್ಕೆ ಬರುವವನು ಅಥವಾ ಸಿದ್ಧಮಾಡತಕ್ಕ ವಿಚಾರ - ವಾದ ಸರಣಿ.

ಅಪ್ರಮೇಯ - ಎಂದರೆ ''ಇಷ್ಟೇ'' ಎಂದು ಅಳೆಯಲು ಸಾಧ್ಯವಿಲ್ಲದವನು. ''ಇದೇ'' ಎಂದು ನಿರ್ದೇಶಿಸಲು ಸಾಧ್ಯವಿಲ್ಲದವನು, ಯಾವ ''ಪರಿಮಾಣ'' ಅಳತೆಗೂ ಒಳಪಡದವನು - ಅಂದರೆ ವಿಶಾಲವಾದವನು.

ಪರಮಾತ್ಮನನ್ನು ಇಂತಿಷ್ಟೇ ಎಂದು ಹೇಳಲು ಸಾಧ್ಯವಿಲ್ಲ. ಅವನ ರೂಪ,

ಾವಣ್ಯ, ಕರುಣೆ, ದಯೆ, ಭಕ್ತರಲ್ಲಿ ಓಡಿ ಬಂದು ಅವರನ್ನು ಪರಿಪಾಲಿಸಿ ಅವರ ಇಚ್ಛೆಗಳಿಗನುಸಾರವಾಗಿ ಯಾವ ಸಂಕೋಚವೂ ಇಲ್ಲದೆ ರ್ತಿಸುವುದರಲ್ಲಿ ''ಹೀಗೆಯೇ'' ''ಇಷ್ಟೇ'' ''ಇಷ್ಟರ ನಂತರ ಇನ್ನಿಲ್ಲ'' ಂದು ''ಪರಿಮಿತಿಯನ್ನು'' ಹಾಕಲು ಸಾಧ್ಯವಿಲ್ಲ. ಇದರಿಂದ ಅವನನ್ನು ಕ್ತರಾದವರೂ ಮತ್ತು ಇತರರೂ ಸಹ ಅಪ್ರಮೇಯನೆಂದು ಕರೆಯುತ್ತಾರೆ. ಅವನನ್ನು ''ಹೀಗೇನೇ '' ಎನ್ನಲೂ ಸಹ ಸಾಧ್ಯವಿಲ್ಲ. ವೇದಗಳು, ಉಪನಿಷತ್ತುಗಳು, ಋಷಿಗಳು, ಮುನಿಗಳು, ಮಹಾ ಮಹಾ ದೇವರ್ಷಿ, ್ರಹ್ಮರ್ಷಿ, ಬ್ರಹ್ಮದೇವರಾದಿಯಾಗಿ ಸಕಲ ದೇವ ದೇವತೆಗಳು - ಎಲ್ಲರೂ ಯಾರನ್ನು ಬಿಡದೆ ಸರ್ವ ಜೀವಕೋಟಿ - ತ್ರೈಂತೀಸ ಕೋಟಿ ದೇವ ದೇವತೆಗಳು ಎಲ್ಲರೂ) ಈ ದಾರಿಯಲ್ಲಿ ಪ್ರಯತ್ನಿಸಿ ಕೊನೆಗೆ ''ಅಪ್ರಮೇಯ'' ಎಂದು ರೆದಿದ್ದಾರೆ. ಈ ಸಹಸ್ರನಾಮದ ಕರ್ತೃ - ಬ್ರಹ್ಮದೇವರು ಸಹ ಅಪ್ರಮೇಯಾಯ ನಮಃ'' ಎಂದಿರುತ್ತಾರೆ. ಅಂದ ಮೇಲೆ ಈ ಪ್ರಮೇಯಕ್ಕೆ ಳಪಡದ ''ಅಪ್ರಮೇಯ''ನೇ - ಪರಬ್ರಹ್ಮ ವಸ್ತು - ಅದಕ್ಕೆ ಅಪ್ರಮೇಯಾಯ ನಮಃ'' ಎಂದು ನಮಸ್ಕರಿಸೋಣ.

(ಆತ್ಮಭಾವಾಯ ನಮಃ) ಆತ್ಮಭಾನವೇ ನಮಃ

ಪರಮಾತ್ಮನ ಭಾವವೇ ಆತ್ಮಭಾವ, ಅಂದರೆ ಪರಮಾತ್ಮನ ಗುಣವೇ ತ್ಮಗುಣ.

ಆತ್ಮ - ಎಂದರೆ ಶಕ್ತಿ, ತೇಜಸ್ಸು, ಪರಮಾತ್ಮನ ಅಂಶ.

ಸಕಲ ಜೀವ ಕೋಟಿಗಳಲ್ಲಿ ಪ್ರತಿಯೊಂದರಲ್ಲಿಯೂ ಇರುವ ಶಕ್ತಿಗೆ ತೇಜಸ್ಸು ನ್ನಬಹುದು. ಈ ತೇಜಸ್ಸು ತನಗೆ ಸಂಸ್ಕಾರ ಎಂಬುದನ್ನು ಅಂಟಿಸಿಕೊಂಡು ಂಸ್ಕಾರಗಳನ್ನು ವೃದ್ಧಿ ಪಡಿಸಿಕೊಳ್ಳುತ್ತ ದೇಹದಿಂದ ದೇಹಕ್ಕೆ ಹೋಗುತ್ತಾ ೊನೆಗೆ, ಯಾವುದೋ ಒಂದು ಸಮಯದಲ್ಲಿ ಗುರುಮುಖೇನ ತನ್ನ ಗಳಿಸಿರುವ ಂಸ್ಕಾರ - ಕರ್ಮ ಫಲಕ್ಕೆ ನಾಶವಾಗುವ ದಾರಿಯನ್ನು ಪಡೆಯುತ್ತದೆ. ದಾದ ನಂತರ ಪರಮಾತ್ಮನನ್ನು ಹೊಂದುವ ದಾರಿಯನ್ನು ಭಗವತ್ಕೃಪೆಗೆ ಾತ್ರವಾದ ನಂತರ ಪಡೆದು ನಂತರ ಅನತಿ ಕಾಲದಲ್ಲಿ ಪರಮಾತ್ಮನಲ್ಲಿ ೀನವಾಗುತ್ತದೆ. ಇದೇ ಪ್ರತಿ ಆತ್ಮವು ಪಡೆಯುವ ''ಭಾವ'' - ಅಥವಾ ತ್ಮಭಾವ - ಈ ಆತ್ಮಕ್ಕೆ ಈ ದಾರಿಯೇ ಬೆಳಕನ್ನು ಕೊಡುವುದರಿಂದ ಭಾನು - ಸೂರ್ಯ'' ಎಂದಾಗುತ್ತದೆ. ಆಗ ಆತ್ಮವು ''ಆತ್ಮಭಾನುವಾಗಿ'' ರಿವರ್ತಿತನಾಗಿ ಪರಮಾತ್ಮನೇ ಆಗುತ್ತದೆ.

ಪರಮಾತ್ಮನೇ ಆತ್ಮಭಾನು - ಸ್ವಯಂ ಸೂರ್ಯನು - ಸ್ವಯಂ ತೇಜಸ್ವಿ, ್ವಯಂ ಪ್ರಕಾಶನು.

*ಅಮೃತಾಯಾಪ್ಯನಂತಾಯ ಅಮಿತಾಯಾಮರಾಯ ಚ ।*
*ಅಪಮೃತ್ಯುವಿನಾಶಾಯ ಅಪಸ್ಮಾರವಿಘಾತಿನೇ ।।65।।*
*(398 - 403)*

**ಅಮೃತಾಯ ನಮಃ**

ಮೃತ - ಸತ್ತ, ಮರಣಹೊಂದಿದಸ್ಥಿತಿ, ಅ - ಇಲ್ಲದವನು - ಅಮೃತ - ನಾಶವಾಗದೆ ಇರುವವನು - ಅವಿನಾಶಿ - ಪರಮಾತ್ಮ ಮತ್ತು ಅವನ ತತ್ತ್ವಗಳು, ಹಾಗೆಯೇ ಜ್ಞಾನ, ಬೆಳಕು, ಕಾಲದೇವ.

ಅಮೃತ - ನಾಶವಾಗದ ಹಾಗೆ ಮಾಡುವ ಒಂದು ರಸ, ಅಮೃತ.

ಅಮೃತ - ಈ ಅಮೃತ ರಸಕ್ಕಾಗಿ ಕ್ಷೀರಸಾಗರದಲ್ಲಿ ದೇವತೆಗಳು ಮತ್ತು ರಾಕ್ಷಸರು ಸೇರಿ ಮಂದರ ಪರ್ವತವನ್ನು ಕಡೆಗೋಲಾಗಿ ಮಾಡಿ ವಾಸುಕಿಯನ್ನು ಹಗ್ಗವಾಗಿ ತಿಳಿದು ಪರ್ವತಕ್ಕೆ ಸುತ್ತಿ ಬಹಳ ಕಾಲ ಕಡೆದರು. ಅನೇಕ ವಸ್ತುಗಳು, ಐರಾವತವೆಂಬ ಆನೆ, ಉಚ್ಚೈಶ್ರವಸ್ ಕುದುರೆ, ಮಹಾಲಕ್ಷ್ಮಿ, ಮುಂತಾದವು ಸಮುದ್ರದಿಂದ ಬಂದ ನಂತರ, ಧನ್ವಂತರಿಯು ''ಅಮೃತ ಕಲಶ''ವನ್ನು ಸಮುದ್ರದಿಂದ ಎತ್ತಿಕೊಂಡು ಬಂದನು. ಅದನ್ನು ತೆಗೆದುಕೊಂಡು ಸೇವಿಸಲು ದೇವತೆಗಳಿಗೂ ರಾಕ್ಷಸರಿಗೂ ದ್ವಂದ್ವ ಯುದ್ಧದೋಪಾದಿಯಲ್ಲಿ ಕಾಳಗ ನಡೆಯಿತು. ಇದನ್ನು ತೀರ್ಮಾನಿಸಲು ವಿಷ್ಣುವು ಮೋಹನಿಯ ಅವತಾರವೆತ್ತಿ ಅಮೃತವೆಲ್ಲ ದೇವತೆಗಳಿಗೆ ಸಿಗುವಂತೆ ಮಾಡಿದನು. ರಾಕ್ಷಸರು ವಂಚಿಸಲ್ಪಟ್ಟರು. ದೇವತೆಗಳು ಅಮರರಾದರು, ಅಮೃತರಾದರು.

ಅಮರತ್ವವನ್ನು ನೀಡಿದ ಅಮೃತವು ಪರಮಾತ್ಮನ ಒಂದು ರೂಪ. ಅದರಿಂದ ಮತ್ತು ಅವನು ಅವಿನಾಶಿಯಾದ್ದರಿಂದ ''ಅಮೃತ'' ಎಂದು ಆದನು.

''ಮೃತ್ಯೋರ್ಮಾ ಅಮೃತಂ ಗಮಯ'' - ಮೃತ್ಯುವನ್ನು ದಾಟಿ ಹೋಗುವ ಮೂಲಕ ಅಮೃತತ್ವ ಸ್ಥಿತಿಗೆ ಅಂದರೆ ಅಮರತ್ವಕ್ಕೆ (ದೇವತೆಗಳು ಹೊಂದಿರುವ ಸ್ಥಿತಿಗೆ) ಹೋಗೋಣ ಎಂದು ಶಾಂತಿ ಪ್ರಾರ್ಥನೆ ಇದೆ. ಪರಮಾತ್ಮನ ಸಾಯುಜ್ಯ, ಸಾಮೀಪ್ಯ, ಸಾಲೋಕ್ಯ ಮತ್ತು ಸಾರೂಪ್ಯವನ್ನು ಹೊಂದಬೇಕೆಂಬುದೇ ಗುರಿ - ಇದೇ ಅಮೃತತ್ವ ಸ್ಥಿತಿಯ ಸಂಪಾದನೆ. ಇದಕ್ಕೆ ಪರಮಾತ್ಮನ ಅಪಾರ ಕೃಪೆ, ನಮ್ಮ ಸಂಸ್ಕಾರ ಬಲ ಮತ್ತು ಅವನಲ್ಲಿ ಅಪರಿಮಿತ ಅನನ್ಯ ಶ್ರದ್ಧೆ ಮತ್ತು ಅವ್ಯಭಿಚಾರಿಣೀ ಭಕ್ತಿಗಳಿಂದ ಈ ಗುರಿ ತಲುಪಲು ಸಾಧ್ಯ.

ಪರಮಾತ್ಮನು ''ಅಮೃತ''ನಾಗಿರುವುದರಿಂದ ಈ ಅಖಿಲಾಂಡ ಕೋಟಿ ಬ್ರಹ್ಮಾಂಡಗಳಿಗೆ ನಾಯಕನಾಗಿ ನಿರಂತರ ಕಾಲ ವಿರಾಮವಿಲ್ಲದೆ ನಡೆಸುತ್ತಾ ಇದ್ದಾನೆ. ಅವನು ಮಾಡಿರುವ ಸಂಕಲ್ಪದಂತೆ ಆ ಬ್ರಹ್ಮಸ್ತಂಭ ಪರ್ಯಂತ ಸಕಲ ಜೀವಕೋಟಿಯು ಮತ್ತು ಸಚರಾಚರ ವಸ್ತುಗಳು, ಸಕಲ ಲೋಕಗಳು

ಎಲ್ಲವೂ ನಾಶ ಹೊಂದುವಂತಹವು - ಅವನೊಬ್ಬನೇ ಅಮೃತನು - ವಿನಾಶಿಯು - ಸಕಲಕ್ಕೂ ಸೂತ್ರಧಾರನಾಗಿರುವುದರಿಂದ ಇದೆಲ್ಲವೂ ಯುತ್ತಿವೆ. ಅವನ ಸಂಕಲ್ಪಾನುಸಾರವಾಗಿಯೇ ನಡೆಯುವುದರಿಂದ ಯಾವ ವ ದೇವತೆಗಳಿಗೂ, ನಡೆಯುವ ಕಾರ್ಯ ವೈಖರಿಗೂ, ಯಾರೂ ಅವನಿಗೆ ಪಡಿಸಲು ಸಾಧ್ಯವಿಲ್ಲ. ಅವನು ಅಸಮ ಭವನು, ಇದರಿಂದ ಇಷ್ಟೆಲ್ಲವೂ ಯುವುದು ಸಾಧ್ಯ. ಇಲ್ಲದಿದ್ದರೆ ಎಲ್ಲವೂ ಸ್ವತಂತ್ರವಾಗಿ ಈ ವಿಶ್ವವೂ ದೋ ನುಚ್ಚು ನೂರಾಗಿ ಲವ ಲೇಶವಿಲ್ಲದೆ ನಾಶವಾಗಿ ಹೋಗುತ್ತಿತ್ತು.

ಅನಂತಾಯ ನಮಃ

ಪರಮಾತ್ಮನು ಅಂತವಿಲ್ಲದವನು - ಅನಂತನು. ಇಲ್ಲಿಗೇ ಪರಮಾತ್ಮನ , ಚತುರತೆ, ರೂಪ ಮೊದಲಾದ ಸ್ವಭಾವಗಳು ಕೊನೆಯಾಗುತ್ತವೆ ಎಂದು ಳಲು ಸಾಧ್ಯವೂ ಇಲ್ಲ ಮತ್ತು ಕೊನೆಯೂ ಇಲ್ಲ.

ಅನಂತ - ಎಂದರೆ ಆದಿಶೇಷನ ಹೆಸರು. ಆದಿಶೇಷನು ಮಹಾವಿಷ್ಣುವಿಗೆ ಯ್ಯೆಯಾಗಿ ನಿಂತು ನಿರಂತರ ಅವನನ್ನು ಸೇವಿಸುತ್ತಾನೆ. ಅದರಿಂದ ಹಾವಿಷ್ಣುವನ್ನು ಅನಂತ ಶಯನ, ಅನಂತ ಪದ್ಮನಾಭಸ್ವಾಮಿ ಎಂದು ಯುತ್ತೇವೆ.

ಂಗೆಯೇ ತಿಳಿದರೆ ಜೀವ, ಆತ್ಮನ ಪ್ರಯಾಣವು ಮತ್ತು ಅದು ಗ್ರಹಿಸುವ ಹಗಳು ನಮ್ಮ ಈ ಮಾನವ ಬುದ್ಧಿ ಮನಸ್ಸುಗಳಿಗೆ ಕೊನೆ ಮೊದಲಿಲ್ಲದ್ದು ಲ್ಲಿಗೆ, ಎಲ್ಲಿಯವರೆಗೆ ಈ ಸಂಸಾರ ಸಾಗರದಲ್ಲಿ ಸಿಕ್ಕಿಕೊಂಡಿರುವುದು ಸುತ್ತದೆ. ಆಧ್ಯಾತ್ಮಿಕವಾಗಿ ವಿಮರ್ಶಿಸಿದರೆ ಕೊನೆ ಇದೆ ಎನ್ನಿಸುತ್ತದೆ. ಆ ನೆಯೇ ಪರಮಾತ್ಮನಲ್ಲಿ ಐಕ್ಯವಾಗುವುದು.

ಆದರೆ ಪರಮಾತ್ಮನು ಹಾಗೆ ಅಲ್ಲ, ಅವನಿಗೆ ಕೊನೆಯೂ ಇಲ್ಲ, ಮೊದಲೂ . ಸದಾಕಾಲ ಇರುವವನು - ಅವನು ಅನಂತ.

ಅನಂತ - ಶಾಶ್ವತ, ಅಂತ್ಯವಿಲ್ಲದ್ದು, ಕೃಷ್ಣ, ವಾಸುಕಿ, ಆದಿಶೇಷ, ಆಕಾಶ, ಹ್ಮ ಎಂದೆಲ್ಲ ಅರ್ಥಮಾಡಬಹುದು. ಈ ವಿವರಗಳೂ ಆಕಾಶದಷ್ಟು ಂತವಾದ್ದು.

ಅಮಿತಾಯ ನಮಃ

ಅಮಿತ - ಇಷ್ಟೇ ಎಂದು ನಿರ್ಧರಿಸಲು ಸಾಧ್ಯವಿಲ್ಲದವನು. ಅವನ ವುದೇ ರೀತಿಯಲ್ಲಿ, ಶಕ್ತಿಯಲ್ಲಿ, ರೂಪದಲ್ಲಿ, ಪ್ರಮಾಣದಲ್ಲಿ, ಮಹತ್ತಿನಲ್ಲಿ ುವಿನಲ್ಲಿ ಏತರಲ್ಲಿಯೂ ಇಷ್ಟೇ ಎಂದು ನಿರ್ಧರಿಸಲು ಸಾಧ್ಯವಿಲ್ಲ.

ಅವನು ''ಇಂತಿಷ್ಟೆಂದು'' ಕರೆಯಲು ಸಾಧ್ಯವಿಲ್ಲದವನು. ಣೋರಣಿಯಾನ್, ಮಹತೋ ಮಹೀಯಾನ್'' ಆಗಿರುತ್ತಾನೆ.

ನಮ್ಮ ಮನಸ್ಸು ಸಹ ಇಷ್ಟೇ ಎಂದು ತಿಳಿಯಲು ಸಾಧ್ಯವಿಲ್ಲ. ಮನೋವೈ ಗಗನಾಕಾರಃ ಎನ್ನುತ್ತಾರೆ. ಮನಸ್ಸು ಎಲ್ಲಿಯವರೆಗೆ ಇರುವುದೋ ಅಲ್ಲಿಯವರೆಗೆ ಯೋಚನಾ ತರಂಗಗಳು - ಅನಂತವಾಗಿ ಅಮಿತವಾಗಿ ಮನಃ ಪಟದಲ್ಲಿ ಹೊಸ ಹೊಸದಾಗಿ ಹುಟ್ಟುತ್ತಲೇ ಇರುತ್ತವೆ ಮತ್ತು ನಾಶವಾಗುತ್ತಲೇ ಇರುತ್ತವೆ. ಅಂದಮೇಲೆ ಯೋಚನಾ ತರಂಗಗಳು ''ಅಮಿತವಾದ್ದು''.

ಇನ್ನು ಮುಂದೆ ಒಂದು ಹೆಜ್ಜೆ ಹೋದರೆ ಈ ಮನಸ್ಸು ಆತ್ಮದ ಜೊತೆ ಪರಮಾತ್ಮನಿಂದ ಹೊರಗೆ ಬಂದಾಗಿನಿಂದ ಮತ್ತೆ ಅವನಲ್ಲಿ ಐಕ್ಯವಾಗುವವರೆಗೆ ಇದ್ದೇ ಇರುತ್ತದೆ. ಅಂದರೆ ಇದೂ ಒಂದು ರೀತಿ ಅಮಿತವಾದ್ದು, ಅಮಿತ ಶಕ್ತಿಯುತವಾದ್ದು ಎಂದು ಹೇಳಬಹುದು.

ಆತ್ಮವೂ ಹೀಗೆಯೇ ಇದೆ ಎಂದು ವಿವರಿಸಲಸಾಧ್ಯವಾದ್ದರಿಂದ ಅದೂ ಒಂದು ರೀತಿಯಲ್ಲಿ ಅಮಿತವೇ! ಹೀಗಾಗಿ ಸರ್ವವೂ ಅಮಿತವೇ.

ಆದರೆ ಪರಮಾತ್ಮನ ಅಮಿತತ್ವವೇ ವಿಶೇಷ ರೀತಿಯದು. ಅದನ್ನು ಪರಿಮಿತಿಗೊಳಿಸಲು ಸಾಧ್ಯವೇ ಇಲ್ಲ. ಹಾಗೇನಾದರೂ ಸಾಧ್ಯವಾದರೆ ಅವನಿಂದಲೇ ಇದು ನಡೆಯಬೇಕು. ಆದರಿಂದ ಪರಮಾತ್ಮನಿಗೆ ವಿಶೇಷವಾಗಿ ಅಮಿತಾಯ ನಮಃ ಎಂದು ಹೇಳುವುದು. ಇವೆಲ್ಲ ಪರಮಾತ್ಮನ ಗುಣಗಳು.

ಉಳಿದ ''ಅಮಿತ'' ವಿಮರ್ಶೆಯನ್ನು ಯಾವುದಾದರೂ ಆಧಾರದ ಮೇಲೆ ಯಾವುದೋ ಒಂದು ಹಂತದಲ್ಲಿ ಮಿತಗೊಳಿಸಬಹುದು. ಆದರೆ ಪರಮಾತ್ಮನ ''ಅಮಿತತ್ವ''ವು ಹಾಗಲ್ಲ.

**ಅಮರಾಯ ನಮಃ**

ಮರಣವು ಯಾರಿಗಿಲ್ಲವೋ ಅವರು ಅಮರರು - ದೇವತೆಗಳು - ದೇವರು - ಪರಮಾತ್ಮ - ಪರಬ್ರಹ್ಮ.

ಸಕಲ ದೇವ, ದೇವತೆಗಳು, ದೇವರುಗಳು, ದೇವಿಯರು, ಬ್ರಹ್ಮಾದಿ ದೇವರುಗಳು ಸೃಷ್ಟಿಕರ್ತರು, ಲಯಕರ್ತನಾದ ಶಿವ, ಇವರುಗಳು, ಅಮರರು. ದೇವತೆಗಳು ಕ್ಷೀರಸಾಗರ ಮಥನದಿಂದ ಬಂದ ಅಮೃತವನ್ನು ಮಹಾವಿಷ್ಣುವಿನ ಮೋಹಿನೀ ರೂಪದ ಸಹಾಯದಿಂದ ಕುಡಿದು ಮರಣವಿಲ್ಲದವರಾದರು - ಅಂದರೆ ಅಮರರಾದರು. ಆ ಬ್ರಹ್ಮ ಸ್ತಂಭ ಪರ್ಯಂತ ಎಲ್ಲವೂ - ಸೃಷ್ಟಿಯಲ್ಲಿರುವ ಎಲ್ಲವೂ ನಾಶವಾಗತಕ್ಕವುಗಳು - ಏಕೆಂದರೆ ಕಲ್ಪಾಂತ ಪ್ರಳಯದಲ್ಲಿ ಪರಬ್ರಹ್ಮನ ಇಚ್ಛೆಯಂತೆ ಸಕಲವೂ ಲಯವಾಗಿ ಪರಬ್ರಹ್ಮನ ಉದರದಲ್ಲಿ ಅಡಕವಾಗುತ್ತವೆ. ಎಂದ ಮೇಲೆ ಈ ಅಮೃತದಿಂದ ಪಡೆದ ಅಮರತ್ವವು ಬಹುಕಾಲವಿರುವುದಾದರೂ ಅಂತ್ಯದಲ್ಲಿ ನಾಶವಾಗತಕ್ಕದ್ದು ಎಂದಾಯಿತು. ಆದರೆ ಪರಬ್ರಹ್ಮನ ಅಮರತ್ವ ಎಂದೆಂದಿಗೂ ಇರುವಂತಹದ್ದು.

ಯಾವ ಮಹಾವಿಷ್ಣುವು ಆಲದ ಎಲೆಯ ಮೇಲೆ ಪ್ರಳಯ ಸಾಗರದಲ್ಲಿ ಅಪಾರ ಕತ್ತಲಿನಲ್ಲಿ ಮಗುವಾಗಿ ಮಲಗಿರುವನೋ ಅವನೇ ನಿಜವಾದ ಅರ್ಥದಲ್ಲಿ ಅಮರನು. ಸಹಸ್ರನಾಮದಲ್ಲಿ ಬ್ರಹ್ಮ ದೇವರು "ಅಮರ"ನಾಮದಲ್ಲಿ ನಿರ್ದೇಶಿಸಿ ಹೊಗಳುವುದು ಇದೇ ನಿತ್ಯ ಅಮರನಾದ ಪರಬ್ರಹ್ಮ - ವಟಪತ್ರಶಾಯಿಯನ್ನೇ. ಇವನೇ "ಅಮರಾಯ ನಮಃ" ಎಂಬುದರಲ್ಲಿ ಅಡಕವಾಗಿರುವುದು.

ಮರಣವನ್ನು ಸೃಷ್ಟಿಸಿದವನೂ ಪರಮಾತ್ಮನೇ, ಬ್ರಹ್ಮ ವಿಷ್ಣು ಶಿವ ಮುಂತಾದವರನ್ನು ಸೃಷ್ಟಿಸಿದವನೂ ಪರಬ್ರಹ್ಮನೇ. ಅದರಿಂದ ಇವರುಗಳು ಅವನ ಆಜ್ಞಾನಧಾರಕರು. ಅವನ "ಸೋಽಕಾಮಯತ - ಪ್ರಜಾಃ ಸೃಜೇಯೇತಿ" ಎಂಬಂತೆ ತನ್ನ ಲೀಲೆಗಾಗಿ ತನಗೆ ತಾನೇ ವಿಭಾಗಮಾಡಿಕೊಂಡು ಈ ಅಖಿಲಾಂಡ ಕೋಟಿ ಬ್ರಹ್ಮಾಂಡಗಳ ಆಗು ಹೋಗುಗಳಿಗೆ ನಾಯಕನಾಗಿ ನಡೆಸುತ್ತಿದ್ದಾನೆ. ಅದರಿಂದ ಅವನೇ ಪರಮೋಚ್ಚ. ಅವನ ಅಮರತ್ವವೇ ನಿಜವಾದ ನಿತ್ಯ - ಅಮರತ್ವ. ಇದನ್ನರಿತೇ ಬ್ರಹ್ಮ ದೇವರು ತಾವು ಮಾಡಿ ಸ್ತೋತ್ರ ಮಾಡಿದ ಉಗ್ರ ನರಸಿಂಹನನ್ನು ಶಾಂತಮಾಡಲು ಅಮರತ್ವದ ಹಿರಿಮೆಯನ್ನು ಪಾಡಿ ನರಸಿಂಹನನ್ನು ತೃಪ್ತಿ ಪಡಿಸಿದರು. ನರಸಿಂಹಸ್ವಾಮಿಯೂ ಅಪಾರ ತೃಪ್ತಿ ಹೊಂದಿ ಶಾಂತನಾಗಿ ಲಕ್ಷ್ಮೀನರಸಿಂಹಸ್ವಾಮಿಯಾಗಿ ಭಕ್ತ ಪ್ರಹ್ಲಾದನಿಗೆ ರಾಜ್ಯಾಭಿಷೇಕವನ್ನು ಮಾಡಲು ಬ್ರಹ್ಮ ದೇವರಿಗೆ ಹೇಳಿದನು.

ಪರಮಾತ್ಮನು ತನ್ನಿಂದ ಸೃಷ್ಟಿಯಾದ ದೇವ ದೇವತೆಗಳಿಗೆ ಕೊಡುವ ಅಮರತ್ವವೇ ಬೇರೆ.

ತನ್ನ ಭಕ್ತರಿಗೆ ಕೊಡುವ ಅಮರತ್ವ ಬೇರೆ. ಭಕ್ತರಿಗೆ ಅಮರತ್ವವು ಹಿರಿಮೆಯ ಆಸೆಯಲ್ಲ. ಇದನ್ನು ಯಾವ ಭಕ್ತನೂ ಬೇಡುವುದಿಲ್ಲ. ಅವನು ಬೇಡುವುದು ಪರಮಾತ್ಮನಲ್ಲಿ ಲೀನವಾಗುವುದು - ಐಕ್ಯವಾಗುವುದು. ಅವನು ಕಲ್ಪಾಂತದಲ್ಲಾಗುವ ಲೀನತೆಯವರೆಗೆ ಕಾಯುವುದಿಲ್ಲ. ಇದನ್ನು ಗುರಿಯಾಗಿಟ್ಟುಕೊಳ್ಳುವುದಿಲ್ಲ. ಅವನ ಪ್ರಾರ್ಥನೆ - ಧರ್ಮ, ಅರ್ಥ, ಕಾಮ, ಮೋಕ್ಷವೆಂಬ ಚತುರ್ವಿಧ ಪುರುಷಾರ್ಥಕ್ಕಾಗಿ ಅಲ್ಲ. ಸ್ವರ್ಗಲೋಕದಲ್ಲಿನ ವಾಸವಲ್ಲ - ಅವನು ಬೇಡುವುದು ಪರಮಾತ್ಮನ ಇಚ್ಛೆಯಂತೆ ಕೊಡುವುದನ್ನು ಪರಮಾತ್ಮನೇ ಅವರಿಗೆ ಸಾರೂಪ್ಯ, ಸಾಲೋಕ್ಯ, ಸಾಯುಜ್ಯ, ಸಾಮೀಪ್ಯ ಪದವಿಯನ್ನು ಭಕ್ತರಿಗೆ ತಾನೇ ಸ್ವೇಚ್ಛೆ - ಸ್ವ - ತನ್ನ - ಇಚ್ಛೆಯಿಂದ ದಯಪಾಲಿಸುತ್ತಾನೆ. ಇದು ವಿಶೇಷ ಕೃಪೆ, ಅವನು ನಿಸ್ವಾರ್ಥ ಭಕ್ತರಿಂದ ಕಟ್ಟಲ್ಪಟ್ಟಿದ್ದರಿಂದ ಅವರಿಗೆ ಇದನ್ನು ಕರುಣಿಸುತ್ತಾನೆ. ಇದು ಎಲ್ಲ ಅಮರತ್ವಕ್ಕಿಂತ ಉನ್ನತವಾದುದು.

**ಅಪಮೃತ್ಯುವಿನಾಶಾಯ ನಮಃ**

ಅಪಮೃತ್ಯು - ಆಕಸ್ಮಿಕ ಮರಣ, ಅಕಾಲ ನಿಧನ, ಅಪಘಾತ, ಇದನ್ನು ಸಂಪೂರ್ಣವಾಗಿ ನಾಶಮಾಡುವವನು - ಯಾರೋ ಅವನು - ಪರಮಾತ್ಮನೊಬ್ಬನೇ.

ಇದರಲ್ಲಿ ಅಪಮೃತ್ಯುವನ್ನು ಮಾತ್ರ ನಾಶಮಾಡುವವನು ಎಂದಿದೆ. ಮೃತ್ಯುವಿನಾಶಾಯ ಎಂದಲ್ಲ.

ಎಂದ ಮೇಲೆ ಸಕಲ ಜೀವ ಕೋಟಿಯೂ ಮರಣಕ್ಕೆ, ಮೃತ್ಯುವಿನ ಪ್ರಭಾವಕ್ಕೆ ಒಳಪಟ್ಟಿದೆ. ಪರಮಾತ್ಮನು ಇದನ್ನು ಎಂದರೆ ಸಹಜವಾದ ಮೃತ್ಯುವನ್ನು ನಿಲ್ಲಿಸುವುದಿಲ್ಲ. ಏಕೆಂದರೆ ಅವರವರ ಕರ್ಮದಂತೆ ಅವುಗಳನ್ನು ಅನುಭವಿಸುವುದು ಜೀವಿಗಳ ದೇಹ - ಮನಬುದ್ಧಿ - ಇಂದ್ರಿಯಗಳ ಸಹಜ ಗುಣ, ಸ್ವಭಾವ. ಇದಕ್ಕೆ ಹಿಂದಿನ, ಈಗಿನ ಮತ್ತು ಮುಂದಿನ ಕರ್ಮಕ್ಕೆ ಅನುಗುಣವಾಗಿ ದೇಹ, ಮತ್ತು ಯೋನಿಗಳನ್ನು ಪಡೆಯಬೇಕು. ಇದಿಲ್ಲದಿದ್ದರೆ ಸಂಸಾರ ಸಾಗರವೂ ನಡೆಯುವುದಿಲ್ಲ. ಕಲ್ಪಾದಿಯಿಂದ ಕಲ್ಪಾಂತದವರೆಗಿನ ಅಗಾಧ ಕಾಲದ ಅಂತರದಲ್ಲಿ ಒಂದೇ ದೇಹ ಅಥವಾ ಯೋನಿ ಜನ್ಮವನ್ನು ಅನುಭವಿಸಬೇಕೆಂದರೆ ಅದು ಮತ್ತು ಅದರ ಪರಿಣಾಮ - ಜೀವಕೋಟಿಯ ಪರಸ್ಪರ ಋಣಾನುಬಂಧದ ಸಂಯೋಗ ವಿಯೋಗಗಳು - ಪರಿಣಾಮಗಳು - ಅತ್ಯಂತ ಊಹಾತೀತ. ಇದಕ್ಕಾಗಿಯೇ ಪರಮಾತ್ಮನು ಮೃತ್ಯುದೇವತೆಯನ್ನು ಸೃಷ್ಟಿಸಿ ಪ್ರಪಂಚ ನಡೆಯುವಂತೆ ನಿಯಮಿಸಿದ್ದಾನೆ. ಜೀವಿಗಳಿಗೆ ದೇಹ ವಿಸರ್ಜನೆಗೆ ಮೃತ್ಯುವು ಅವಶ್ಯಕ, ಇದು ಶತಸ್ಸಿದ್ಧ. ಸೃಷ್ಟಿಯಲ್ಲಿ ಜೀವಿಗಳ ಉದ್ಧಾರಕ್ಕಾಗಿಯೇ ಈ ದೇಹತ್ಯಾಗ, ದೇಹ ಹೊಂದುವುದು, ಜೀವನ ಎಲ್ಲವೂ ಅವಶ್ಯಕ. ಪರಮಾತ್ಮನು ಈ ನಿಯಮವನ್ನು ನಿರಾತಂಕವಾಗಿ ನಿರಂತರ ನಡೆಯುವಂತೆ ಸಕಲಕ್ಕೂ ಒಬ್ಬೊಬ್ಬ ದೇವ, ದೇವತೆಗಳನ್ನು ತನ್ನ ಪರವಾಗಿ ನಿಯಮಿಸಿದ್ದಾನೆ.

ಆದರೆ ಹೆಚ್ಚೆಂದರೆ ಅಪಮೃತ್ಯುವನ್ನು ಸಾಕಷ್ಟು ಸಾರಿ ತಡೆಯಲು ಶಕ್ತನಾಗಿದ್ದಾನೆ. ಜೀವಿಗಳು ದುರ್ದಾರಿಗಳಲ್ಲಿ ಹೋಗಿ ನಾಶವಾಗುವುದನ್ನು ಪ್ರತಿಕ್ಷಣದಲ್ಲಿಯೂ ತಡೆಯುತ್ತಾನೆ. ಕ್ಷಣ ಕ್ಷಣವೂ ಆಗತಕ್ಕ ಅಪಘಾತವನ್ನು ತಪ್ಪಿಸುತ್ತಾನೆ. ಅಪಮರಣವನ್ನು ಮತ್ತು ಅಕಾಲ ಮರಣವನ್ನು ತಪ್ಪಿಸುತ್ತಾನೆ.

ಆದರೆ ಜೀವಿಗಳು ದೇಹ ತ್ಯಾಗ ಮಾಡುವ ಒಂದು ಕ್ಷಣ, ದಾರಿಬೇಕಷ್ಟೇ. ಇದಕ್ಕೆ ಅವನು ಅವರವರ ಸಂಸ್ಕಾರಗಳನ್ನು ಉಪಯೋಗಿಸಿಕೊಂಡು ಅಂತ್ಯದಲ್ಲಿ ದೇಹತ್ಯಾಗಕ್ಕೆ ಒಂದು ದಾರಿಯನ್ನು ಕಲ್ಪಿಸುತ್ತಾನೆ. ಇದು ಸಹಜವಾಗಿ ನಡೆಯುವ ಒಂದು ಕ್ರಿಯೆ. ಅಪಮೃತ್ಯುವಿನಾಶವೂ ಸಹ ಇಲ್ಲದಿದ್ದರೆ ಜೀವಿಗಳು

ುದ್ಧಾರವಾಗಲು ಮತ್ತು ಸಂಸ್ಕಾರಗಳನ್ನು ಕಳೆದುಕೊಳ್ಳಲು ಮತ್ತು ಾರಮಾರ್ಥಿಕ ಅನುಕೂಲಗಳನ್ನು ಪಡೆಯಲು ಮತ್ತು ಪ್ರಗತಿ ಪಡೆಯಲು ಾಧ್ಯವಾಗುತ್ತಿರಲಿಲ್ಲ. ಎಲ್ಲವೂ ಪರಮಾತ್ಮನು ತನ್ನ ಸಂಕಲ್ಪಕ್ಕನುಗುಣವಾಗಿ ಲ್ಪಿಸುತ್ತಾನೆ. ಇದು ಅವನ ಇಚ್ಛೆ - ನಡೆಯಲೇಬೇಕಾದ ಕ್ರಿಯೆ. ಅಪಮೃತ್ಯು ನಾಶವೂ ಒಂದು ಇರಲೇಬೇಕಾದ ಅವಶ್ಯಕತೆ.

**ಅಪಸ್ಮಾರವಿಘಾತಿನೇ ನಮಃ**

ಅಪಸ್ಮಾರ - ಮಲರೋಗ, ವಿಘಾತಿನೇ - ಇದನ್ನು ನಿರ್ಮೂಲ ಾಡುವವನು.

ರೋಗಗಳಲ್ಲೆಲ್ಲಾ ಅಪಸ್ಮಾರ, ಅತಿಸಾರ ರೋಗಗಳು ದೇಹದ ಶಕ್ತಿಯನ್ನು ೀರಿ ಬಿಡುತ್ತವೆ. ಮಲರೋಗ ಬಂದರೆ ದೇಹಕ್ಕೆ ನಾಶಬರುವುದು ಬಹಳ ೀಗ. ಇದನ್ನು ಹೊಡೆದು ಓಡಿಸುವವನು - ಪರಮಾತ್ಮ.

ಸಂಸಾರ ಸಾಗರಕ್ಕೆ ಅತಿಯಾಗಿ ವ್ಯಾಮೋಹದಿಂದ ಅಂಟಿಕೊಂಡಿರುವುದು ಂದು ರೋಗವೇ. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಂದೊಂದೂ ಮನುಷ್ಯನನ್ನು ಉದ್ಧಾರಮಾಡಲೂಬಹುದು ಅಥವಾ ಾಳುಮಾಡಲೂಬಹುದು. ಅದೇ ರೀತ ಯೌವನ, ಧನ ಸಂಪತ್ತಿ, ಪ್ರಭುತ್ವ, ವಿವೇಕತೆ - ಒಂದೊಂದೂ ಮನುಷ್ಯನಿಗೆ ಅನರ್ಥವನ್ನು ಮಾಡುತ್ತದೆ. ಈ ಲ್ಲೂ ಒಂದೇ ಸಮಯದಲ್ಲಿ ಒಬ್ಬನೇ ಮನುಷ್ಯನಲ್ಲಿ ಸೇರಿಕೊಂಡರೆ ಏನೆಲ್ಲ ನರ್ಥವಾಗುತ್ತದೆ.

*''ಯೌವನಂ ಧನಸಂಪತ್ತಿಃ ಪ್ರಭುತ್ವಮವಿವೇಕತಾ ।*
*ಏಕೈಕಮಪ್ಯನರ್ಥಾಯ ಕಿಮುಯತ್ರ ಚತುಷ್ಟಯಮ್ ॥''*

ಎಂಬಂತೆ ಇದೂ ಒಂದು ವಿಚಿತ್ರ ರೋಗವೇ! ನಾಶವಾಗುವುದಕ್ಕೆ ನಾದರೇನು! ಅವು ಮಾಡಿಯೇ ಮಾಡುತ್ತವೆ. ನಮ್ಮ ವಿವೇಕ ಬುದ್ಧಿ ನಮ್ಮ ಯಲ್ಲಿದ್ದರೆ ಯಾರೇನು ಮಾಡುತ್ತಾರೆ. ಮಲರೋಗವು ತಾನಾಗಿಯೇ ಕರಗಿ ೋಗುತ್ತದೆ.

ಕಾಮ, ಕ್ರೋಧಗಳು ರಜೋಗುಣದಿಂದ ಹುಟ್ಟಿದವುಗಳು. ಇವುಗಳ ಾಸಸ್ಥಾನ ಇಂದ್ರಿಯಗಳು. ಇಂದ್ರಿಯಗಳೇ ಉತ್ತಮವಾದುವು. ಂದ್ರಿಯಗಳಿಗಿಂತ ಉತ್ತಮವಾದುದು ಮನಸ್ಸು, ಮನಸ್ಸಿಗಿಂತ ಉತ್ತಮವಾದ್ದು ುದ್ಧಿ. ಬುದ್ಧಿಗಿಂತ ಉತ್ತಮವಾದ್ದು - ಅವನು ''ಸಃ'', ಈ ''ಸಃ'' ನನ್ನು ಶ್ರಯಿಸಿ ಇಂದ್ರಿಯ, ಮನಸ್ಸು ಬುದ್ಧಿಯನ್ನು ವಿವೇಕದಿಂದ ನಡೆಸಿದರೆ ಈ ಂಸಾರಸಾಗರದಿಂದ ದಾಟಿ ಪರಮಾತ್ಮನನ್ನು ಸೇರಬಹುದು. ಇದಕ್ಕೆ ಅಪಸ್ಮಾರ ಘಾತನ ಕೃಪೆ, ನಮ್ಮ ಸತ್ಸಂಸ್ಕಾರ, ಗುರುವಿನ ಕೃಪೆ ಬೇಕು. ಆಗ ನಾವು

ಪರಾಭವ ಹೊಂದದೆ ಸಂಸಾರದಲ್ಲಿದ್ದರೂ ಅಂಟಿಕೊಂಡರೂ ಅಂಟಿಕೊಳ್ಳದ ಹಾಗೆ ಭವಸಾಗರವನ್ನು ದಾಟುತ್ತೇವೆ.

ಎಲ್ಲಾ ರೋಗಗಳೂ ದೇಹವನ್ನು ಸಂಪೂರ್ಣವಾಗಿ ಕಶ್ಮಲದಿಂದ ಬಿಡುಗಡೆ ಮಾಡುತ್ತವೆ. ಮನಸ್ಸನ್ನು ಬುದ್ಧಿಯನ್ನು ತಿಳಿ ಮಾಡುತ್ತದೆ. ಈ ರೋಗಗಳಿಂದ ಕಾಯಾ, ವಾಚಾ, ಮನಸ್ಸು ಬಿಡುಗಡೆ ಹೊಂದಿದವೆಂದರೆ ಪರಮಾತ್ಮನನ್ನು ಸೇರಲು ಜ್ಞಾನೋದಯವಾಯಿತೆಂದು ತಿಳಿಯಬಹುದು. ಅದಕ್ಕೆ ಅಪಸ್ಮಾರವಿಘಾತನ ಕೃಪೆ ಅಗತ್ಯ. ಆಗ ದೇಹಿಯು ದೇಹದ ಮೇಲಿನ ಮತ್ತು ಪ್ರಪಂಚದ ಮೇಲಿನ ವ್ಯಾಮೋಹವನ್ನು ಬಿಡುತ್ತಾನೆ. ಪರಮಾತ್ಮನನ್ನು ಬಿಟ್ಟು ಇನ್ನಿತರರಲ್ಲಿ ಆಸಕ್ತಿಯನ್ನು ತ್ಯಜಿಸುತ್ತಾನೆ. ಜೀವನ್ಮುಕ್ತನ ರೀತಿ ಸಂಸಾರದಲ್ಲಿ, ಇಹದಲ್ಲಿ ಪರದಲ್ಲಿ ವರ್ತಿಸುತ್ತಾನೆ. ಇದಕ್ಕೂ ಸಹ ನಮ್ಮ ಶ್ರದ್ಧಾಯುಕ್ತ ಭಕ್ತಿಯುಕ್ತ ಪ್ರಯತ್ನ ಅವಶ್ಯಕ. ಇವುಗಳಿದ್ದಾಗ ಅವನು ತಾನಾಗಿಯೇ ನಮ್ಮನ್ನು ಉದ್ಧಾರ ಮಾಡುತ್ತಾನೆ.

*ಅನ್ನದಾಯಾನ್ನರೂಪಾಯ ಅನ್ನಾಯಾನ್ನಭುಜೇ ನಮಃ ।*
*ನಾದ್ಯಾಯ ನಿರವದ್ಯಾಯ ವೇದ್ಯಾಯಾದ್ಭುತಕರ್ಮಣೇ ॥66॥*
*(404-411)*

**ಅನ್ನದಾಯ ನಮಃ**

ಅನ್ನ - ಅನ್ನವನ್ನು, ದ - ಕೊಡುವವನು, ಯಾರೋ ಅವನು ಅನ್ನದನು. ಅವನಿಗೆ ನಮಸ್ಕಾರ - ಅನ್ನದಾಯ ನಮಃ.

ಅಥವಾ ಅನ್ನದಾತನು ಎಂದರೂ ಇದೇ ಅರ್ಥ.

ಪರಮಾತ್ಮನ ಸಂಕಲ್ಪದಂತೆ ಅವನ ಬ್ರಹ್ಮಾಂಡದಲ್ಲಿ ಜೀವ ಕೋಟಿಗಳು ಕಾಲಚಕ್ರದಲ್ಲಿ ಸೇರಿಕೊಂಡು ಕಲ್ಪಾದಿಯಲ್ಲಿ ಅವನಿಂದ ಹೊರ ಹೊಮ್ಮಿ ಕಲ್ಪಾಂತದಲ್ಲಿ ಅವನನ್ನು ಸೇರುತ್ತವೆ. ಹೀಗೆ ಸೇರುವ ಸಮಯದ ತನಕ ಅಗಾಧ, ಊಹಿಸಲಸಾಧ್ಯವಾದ ಕಾಲವನ್ನು ಯಾಪನೆ ಮಾಡಬೇಕು. ಆತ್ಮಗಳು ಅನೇಕ ಯೋನಿಗಳಲ್ಲಿ ದೇಹಗಳನ್ನು ತಮತಮಗೆ ಅಂಟಿಕೊಂಡಿರುವ ಸಂಸ್ಕಾರ, ಕರ್ಮಗಳಿಗನುಸಾರವಾಗಿ ದೇಹಗಳನ್ನು ಪಡೆಯುತ್ತವೆ ಮತ್ತು ಪಡೆಯುತ್ತಲೂ ಇರುತ್ತವೆ ಮತ್ತು ತ್ಯಜಿಸುತ್ತಲೂ ಇರುತ್ತವೆ. ಈ ದೇಹಗಳನ್ನು ಪಡೆಯುವುದು, ಇರುವುದು, ತ್ಯಜಿಸುವುದು ನಿರಂತರ ಕ್ರಿಯೆ. ಇದು ಸೃಷ್ಟಿಯ ನಿಯಮ. ಈ ಸಮಯದಲ್ಲಿ ದೇಹಗಳ ಹುಟ್ಟುವಿಕೆ, ಬೆಳೆಯುವಿಕೆ, ಇರುವಿಕೆ, ಕೂಡುವಿಕೆ, ಕಡೆಗೆ ನಶಿಸಿ ನಾಶವಾಗುವಿಕೆ - ಈ ಕ್ರಿಯೆಗಳಿಗೆ ಅವುಗಳ ಪೋಷಣೆಗೆ ಆಹಾರ, ಪಂಚಭೂತಗಳ ಸಹಕಾರ, ಪಂಚ ಪ್ರಾಣಗಳ ಇರುವಿಕೆ ಇಂದ್ರಿಯ ಮನೋಬುದ್ಧಿ ಅಹಂಕಾರ, ಚಿತ್ ಸಹಕಾರದಿಂದ ಪ್ರಯಾಣ ಮಾಡುತ್ತಿರುತ್ತದೆ.

ಈ ಇರುವಿಕೆಗೆ ಪರಮಾತ್ಮನು ಸಕಲ ಜೀವಕೋಟಿಗೂ ''ಅನ್ನ'' ಎಂಬ ಳೆವಣಿಗೆಯ ವಸ್ತುವನ್ನು ಸಹ ಸೃಷ್ಟಿಸಿಕೊಟ್ಟಿರುತ್ತಾನೆ. ದೇಹದ ಇರುವಿಕೆಗೆ ಳೆಯುವುದಕ್ಕೆ ''ಅನ್ನ''ವೇ ಅಮೃತವಾದ ಅಪಾರ ಅವಶ್ಯಕತೆಯ ವಸ್ತು. ದನ್ನು ಪ್ರಕೃತಿ ನಿಯಮ, ಸೃಷ್ಟಿ ವ್ಯಾಪಾರದಲ್ಲಿ ಇರಿಸಿ ನಿರಂತರ ಜೀವಿಗಳ ದ್ಧಾರಕ್ಕಾಗಿ ನಡೆಸುತ್ತಿರುತ್ತಾನೆ. ಎಂದ ಮೇಲೆ ಅನ್ನ, ವಾಯು, ನೀರು ಯಂತಾದುವುಗಳನ್ನು ಕರುಣಿಸಿರುವ ಪರಮಾತ್ಮನ ಬುದ್ಧಿ ಕುಶಲತೆ, ಚತುರತೆ, ಪಾರ ದಯಾಪರತೆ, ಮುಂದಾಲೋಚನೆ ಎಲ್ಲವೂ ಊಹಿಸಲು ಅಸಾಧ್ಯ. ಷ್ಟು ಸಲ ಅವನನ್ನು ಈ ಕೃತಜ್ಞತೆಯ ದೃಷ್ಟಿಯಲ್ಲಿ ನಾವು ಯೋಚಿಸುತ್ತೇವೆ ಂಬುದು ನಮ್ಮ ಸಂಕುಚಿತ ಮನಸ್ಸನ್ನು ತಿಳಿಸುತ್ತದೆ. ನಾವು ಎಷ್ಟು ಸ್ವಾರ್ಥಿಗಳು ಪರಮಾತ್ಮನನ್ನು ಜೀವನದಲ್ಲಿ ಎಷ್ಟು ಬಾರಿ ದೂರುತ್ತೇವೆ. ಇದೆಲ್ಲ ತಪ್ಪಲ್ಲವೇ! ಷ್ಟಿಸಿದ ದೇವರು ಹುಲ್ಲು ಮೇಯಿಸಲಾರನೆ! ಎಂದು ಅವನ ಮೇಲೆ ವಾಬ್ದಾರಿಯನ್ನು ಎಷ್ಟು ಲಘುವಾಗಿ ಹಾಕುತ್ತೇವೆ. ಈ ರೀತಿಯ ಮರ್ಶೆಯಲ್ಲಿ ನಾವು ಎಷ್ಟು ಸ್ವಾರ್ಥಿಗಳು! ವಿಚಿತ್ರ, ನಮ್ಮ ಮನಸ್ಸು, ದ್ಧಿ - ಸ್ವಾರ್ಥ, ಸ್ವಾರ್ಥ ಎಲ್ಲಿ ನೋಡಿದರೂ ಸ್ವಾರ್ಥವೇ! ''ಅನ್ನದಾಯ ಮಃ'' ಎಂದು ಒಂದು ಸಾರಿಯೂ ಅವನಿಗೆ ಹೇಳುವುದಿಲ್ಲವಲ್ಲ.

ನಮ್ಮ ಅನ್ನದಾತನು ನಮ್ಮ ಪರಿಸರದಲ್ಲಿರುವ ನಮ್ಮ ಸಂಬಂಧಿಗಳು, ೇಹಿತರು, ಹೀಗೆ - ಇವರೆಲ್ಲರೂ ಸಹ ಅವನ ಮೇಲೆಯೇ ಬಿದ್ದಿರುವುದರಿಂದ, ವರು ಯಾವ ಮಹಾ ಅನ್ನದಾತರು!.

ಸೃಷ್ಟಿಯಲ್ಲಿ ಪರಮಾತ್ಮನೊಬ್ಬನೇ ಯಾವ ತಾರತಮ್ಯವೂ ಇಲ್ಲದೆ, ಕ್ಷಪಾತವಿಲ್ಲದೆ ಸಕಲ ಜೀವಿಗಳ ಅಭ್ಯುದಯಕ್ಕಾಗಿ ಅನುಕೂಲತೆಗಳನ್ನು ರ್ಮಿಸಿದ್ದಾನೆ. ಸೂರ್ಯನ ಕಿರಣಗಳು ಎಲ್ಲರ ಮೇಲೆಯೂ ಒಂದೇ ರೀತಿ ೀಳುವಂತೆ, ಪರಮಾತ್ಮನು ಸಮಭಾವದಿಂದ ಕಾಪಾಡುವುದರಿಂದ ಅವನೇ ರಮ ಶ್ರೇಷ್ಠನಾದ ಅನ್ನದಾತನು. ಅವನೇ ಅನ್ನದಾಯ ನಮಃ ನ್ನಿಸಿಕೊಳ್ಳುವವನು.

ಅನ್ನ ಎಂದರೆ ಅಕ್ಕಿಯಿಂದ ಅನ್ನ ಮಾತ್ರವಲ್ಲ, ಸಕಲ ಆಹಾರವೂ ಅನ್ನವೇ. ೇಹದ ಬೆಳವಣಿಗೆಗೆ ಬರುವ ವಸ್ತುವೆಲ್ಲವೂ ಅನ್ನವೇ!.

ಅನ್ನರೂಪಾಯ ನಮಃ

ಪರಮಾತ್ಮನು ಅನ್ನ ಸ್ವರೂಪನು. ದೇಹಕ್ಕೆ ಬೇಕಾಗುವ ಆಹಾರವೆಲ್ಲವೂ ನ್ನದ ವಿವಿಧ ರೂಪಗಳು, ಮೂಲದಲ್ಲಿ ಎಲ್ಲ ಆಹಾರಗಳೂ ಪರಮಾತ್ಮನ ೂಪವೇ. ಮತ್ತು ಪರಮಾತ್ಮನಿಗೆ ನಿವೇದಿಸುವ ವಸ್ತುಗಳೇ! ದೇಹವು ಆತ್ಮದ ಸಸ್ಥಾನ, ಆತ್ಮವು ಪರಮಾತ್ಮನ ಅಂಶ, ಅದರಿಂದ ಆತ್ಮದ ವಾಸಕ್ಕೆ

ಯೋಗ್ಯವಾಗಿರುವ ಈ ದೇಹವು ಸರಿಯಾಗಿರಲು ಪರಮಾತ್ಮನೇ ತನಗೆ ಬೇಕಾದದ್ದನ್ನು ನಿರ್ಮಿಸಿ, ಸೇವಿಸುತ್ತಾನೆ. ಸೃಷ್ಟಿಯಲ್ಲಿ ಸಕಲವೂ ಪರಮಾತ್ಮನ ವಿವಿಧ ರೂಪಗಳು, ವಿಭೂತಿಗಳು, ಎಲ್ಲವೂ ಅವನ ಅನುಕೂಲಕ್ಕಾಗಿಯೇ ಉಪಯೋಗಿಸುವುದರಿಂದ ಸಕಲವೂ ಪವಿತ್ರತೆಯನ್ನೇ ಹೊಂದಿರುತ್ತದೆ.

ದೇಹವೂ ದಿವ್ಯ ವಸ್ತುಗಳಿಂದ ನಿರ್ಮಿಸಲ್ಪಟ್ಟದ್ದರಿಂದ ಮತ್ತು ದಿವ್ಯ ವಸ್ತುಗಳಾದ ವಾಯು, ಆಹಾರಗಳು, ಪರಿಸರದಲ್ಲಿರುವ ಪಂಚಭೂತಗಳು, ಪರಮಾತ್ಮನ ಸೇವೆ, ನಾಮಸ್ಮರಣೆ, ಧ್ಯಾನ, ಜಪ, ಪೂಜೆ, ಭಜನೆಗಳಿಗಾಗಿ ಉಪಯೋಗಿಸಲ್ಪಡುವುದರಿಂದ ದೇಹವೂ ಅತ್ಯುತ್ತಮತೆಯನ್ನು ದಿನೇ ದಿನೇ ಕ್ರಮೇಣ ಪಡೆಯುತ್ತದೆ. ಪರಮಾತ್ಮನ ಸೇವೆಯೂ ಸಹ ಮನಸ್ಸಿಗೆ ಆತ್ಮಕ್ಕೆ, ಬುದ್ಧಿಗೆ ಅನ್ನರೂಪವೇ - ಏಕೆಂದರೆ ಬುದ್ಧಿಯ ವಿಕಾಸಕ್ಕೆ ಇವು ಕಾರಣ. ಮನಸ್ಸಿನ ನಿಗ್ರಹಕ್ಕೆ ಮತ್ತು ಸಾಕ್ಷಾತ್ಕಾರಕ್ಕೆ ಎಲ್ಲವೂ ಕಾರಣ. ಅನ್ನದ ರೂಪವಾಗಿಯೇ ಪರಿಣಮಿಸುತ್ತವೆ. ಅಂದರೆ ಆತ್ಮ ಪರಮಾತ್ಮನ ಅಂಶದ ಗುರಿಗಾಗಿ ಪರಮಾತ್ಮನೇ ಅನ್ನರೂಪನಾಗಿ ಬಂದು ಸಕಲ ಕ್ರಿಯೆಗಳನ್ನು ತಾನೇ ಮಾಡುತ್ತಾನೆ. ಅವನೇ ಸರ್ವಮಯ - ಸದಾ ಸರ್ವರಲ್ಲಿಯೂ ಸರ್ವರೂಪದಲ್ಲಿಯೂ ಇರುವವನು - ಅನ್ನರೂಪನು, ಅನ್ನಮಯನು - ಕಾಯಾ, ವಾಚಾ, ಮನಸ್ಸಿಗೆ ತ್ರಿಕರಣಗಳಿಗೆ ಅನ್ನರೂಪವನು - ಅನ್ನರೂಪಾಯ ನಮಃ, ಎಂದರೆ ಅವನಿಗೆ ಅವನೇ ಅವನ ರೂಪದ ಕಾರಣಕ್ಕಾಗಿ ನಮಸ್ಕರಿಸುತ್ತಾನೆ. ಸರ್ವಕ್ರಿಯೆಯೂ ಅವನ ಮಯ - ತತ್‌ಮಯ - ಸರ್ವತ್ರ ಸರ್ವರೂಪದಿಂದಿರುವ ಅನ್ನರೂಪನಿಗೆ ನಮಸ್ಕಾರಗಳು.

## 6. ಅನ್ನಾಯ ನಮಃ

ಅನ್ನವೇ ಅವನು - ಅನ್ನವೇ ಪರಮಾತ್ಮನು. ಪ್ರತಿಯೊಂದು ಆಹಾರ ವಸ್ತುವು ಅವನ ರೂಪವೇ, ಅಂಶವೇ ಆದ್ದರಿಂದ ಅದು ಅವನೇ!

ಬುದ್ಧಿಗೆ ಪರಮಾತ್ಮನ ನಾಮಸ್ಮರಣೆ, ಜಪ, ಧ್ಯಾನ, ಪೂಜೆ ಬೇಕು. ಮನಸ್ಸಿನ ಸಮಸ್ಥಿತಿಗೆ ಇವುಗಳೇ ಬೇಕು.

ದೇಹದ ಇರುವಿಕೆಗೆ ಬುದ್ಧಿ, ಮನಸ್ಸು ಸಮಭಾವದಿಂದ ಇರಬೇಕು. ಇವೆಲ್ಲವೂ ಆತ್ಮದ ವಾಸಸ್ಥಾನಕ್ಕೆ ಆಗಿ ಮತ್ತು ಆತ್ಮಕ್ಕೆ ಅಂಟುವ ಸತ್ ಸಂಸ್ಕಾರಕ್ಕಾಗಿ ಅಂದರೆ ಅನ್ನವೇ ಪರಮಾತ್ಮ - ಯಾವ ಭೇದವೂ ಇಲ್ಲ.

ಬ್ರಹ್ಮದೇವರು ಪರಮಾತ್ಮನನ್ನು ಮತ್ತು ಅನ್ನವನ್ನು ಪರಸ್ಪರ ಭೇದವಿಲ್ಲ ಎನ್ನುವುದನ್ನು ವಿವಿಧ ರೀತಿಯಲ್ಲಿ ಪ್ರತಿಪಾದಿಸಿದ್ದಾರೆ.

ಅಗ್ನಿಗೆ ವೈಶ್ವಾನರ ಎಂದು ಹೆಸರು. ಇವು ಜಠರದಲ್ಲಿ ಇದ್ದುಕೊಂಡು ನಾವು ತೆಗೆದುಕೊಳ್ಳುವ ಆಹಾರವನ್ನು ಪಚನಮಾಡಿ ಅದರಿಂದ ಶಕ್ತಿರಸವನ್ನು

ರ್ಪಡಿಸುತ್ತದೆ. ಈ ರಸವು ಶರೀರಕ್ಕೆ ಶಕ್ತಿಯನ್ನು ಕೊಡುತ್ತದೆ. ಶಕ್ತಿರಸವನ್ನು ಡುವ ಪ್ರತಿ ವಸ್ತುವೂ ಆಹಾರವೇ. ಅನ್ನವೇ. ಶಕ್ತಿಯೇ ಪರಮಾತ್ಮ. ಯೊಂದು ವಸ್ತುವಿನಲ್ಲಿಯೂ ಶಕ್ತಿಯು ಅಡಗಿರುವುದರಿಂದ ಅನ್ನದಲ್ಲಿ ಮಾತ್ಮನಿದ್ದಾನೆ.

ಾಯಾ, ವಾಚಾ, ಮನಸ್ಸುಗಳ ಬೆಳವಣಿಗೆಗೆ ಅನ್ನವು ಬೇಕಾಗಿರುವುದರಿಂದ ಮಾತ್ಮನು ಆತ್ಮನಿಗೆ ಪರಮಾತ್ಮ ರೂಪದಲ್ಲಿಯೇ ಅನ್ನವನ್ನು ಕೊಟ್ಟು ಸುತ್ತಾನೆ. ಅದರಿಂದ "ಅನ್ನಾಯ ನಮಃ" ಎಂದು ಅವನಿಗೆ ಹೇಳುತ್ತೇವೆ.

ಅನ್ನಭುಜೇ ನಮಃ

ಪರಮಾತ್ಮನು ಅನ್ನವನ್ನೇ ತನ್ನ ಭುಜಬಲವಾಗಿ ಇರಿಸಿಕೊಂಡಿದ್ದಾನೆ. ಅಂದರೆ ಯಾದರೂ ತನ್ನ ಶಕ್ತಿಯನ್ನು ಪ್ರಯೋಗಿಸಬೇಕಾದರೆ ಅಥವಾ ತನ್ನ ಯಿಂದ ಸಹಾಯ ಮಾಡಬೇಕಾದರೆ ತೆಗೆದುಕೊಳ್ಳುವರಿಗೆ ಬೇಕಾದ ಶಕ್ತಿ ಕ್ತಿ ಬಲಗಳನ್ನು ಅನ್ನ (ಆಹಾರ) ದ ಮೂಲಕ ಕೊಡುತ್ತಾನೆ. ಶಕ್ತಿ ತ್ತಿ ಬಲವು ಬೇಕಾದ್ದು ಅಪೇಕ್ಷಿಸುವವರ "ಕಾಯಾ, ವಾಚಾ, ಮನಸಾ" ಗೆ ಅದನ್ನು ಕೊಟ್ಟು ಹುರಿದುಂಬಿಸಿ ಪ್ರಬಲ ಮಾಡುವವನು ಪರಮಾತ್ಮನೇ. ರಿಗೂ ಬೆನ್ನು ಹಿಂದೆ ಅವ್ಯಕ್ತವಾಗಿ ನಿಂತು ಮನಸ್ಸು ಮತ್ತು ಬುದ್ಧಿಯನ್ನು ರೇಪಿಸುವವನು ಪರಮಾತ್ಮನೇ. ಇದರ ಮೂಲಕ ಸರ್ವಜೀವಿಗಳಿಗೂ ಜಬಲವನ್ನು ಯೋಚಿಸುವ ಶಕ್ತಿಯ ಮೂಲಕ ಕೊಡುತ್ತಾನೆ. ಅನ್ನವೇ , ಭುಜಬಲ - ಅವ್ಯಕ್ತವಾಗಿ ಏನೇನು ಪ್ರೋತ್ಸಾಹವಾಗಿ ದೊರೆಯುವುದೋ ಲ್ಲ ಅನ್ನಭುಜನ ಕ್ರಿಯೆ.

ಅನ್ನ - ಭುಜ್ ಎಂದಾಗ - (ಭುಜ್ - ಭುಂಜ್ - ತಿನ್ನುವವನು) ಎಂದು ್ ಮಾಡಿದಾಗ - ಅನ್ನವನ್ನು ಜಠರಾಗ್ನಿ ರೂಪದಲ್ಲಿ ಪಚನಮಾಡಿ ದೇಹವನ್ನು ಕ್ಷಿಸುತ್ತಾನೆ. ಅವನಿಗೆ ನಮಸ್ಕಾರಗಳು ಎಂದು ಅರ್ಥೈಸಬಹುದು. ಇದೂ ಂಜಸವೇ.

ಾದ್ಯಾಯ ನಮಃ

ಾದ - ಎಂದರೆ ಶಬ್ದ, ಧ್ವನಿ. ನಾದವನ್ನು ಪ್ರಕಟಿಸುವವನು ಯಾರೋ ನು - ಪರಮಾತ್ಮ - ಅಥವಾ ಶಬ್ದವನ್ನು ತಯಾರು ಮಾಡುವ ಯುಳ್ಳವನು - ನಾದ್ಯ.

ಅಥವಾ ನಾದದ ಭಾವ - ನಾದ್ಯ, ಅದನ್ನು ಮಾಡುವವನು - ಕರ್ತೃ - - ಪರಮಾತ್ಮನೇ. ಆತ್ಮವು ದೇಹದಲ್ಲಿರುವಾಗ ಜೀವಿವನ್ನಿರಿಸಿಕೊಳ್ಳುತ್ತದೆ ರೆ ಜೀವಿಯು ಸ್ವತಂತ್ರವಲ್ಲ. ಎಲ್ಲ ತರಹದ ಶಕ್ತಿಗಳೂ ಸಹ ಇಂದ್ರಿಯಗಳ ಮಾನಿ ದೇವತೆಗಳಿಂದ ಬರುತ್ತವೆ.

ನ - ಇಲ್ಲ - ಅದ್ಯ - ಈಗ - ಪರಮಾತ್ಮ ಈಗ ಮಾತ್ರವೇ ಅಲ್ಲ - ಎಂದೆಂದಿಗೂ ಇರುವವನು. ಸದಾ ಸರ್ವಕಾಲದಲ್ಲಿಯೂ, ಸರ್ವದೇಶಗಳಲ್ಲಿಯೂ ಇರುವವನು. - ಆದರಿಂದ ''ನಾದ್ಯಾಯ ನಮಃ''.

ನಾದ ಶಬ್ದ ಮತ್ತು ಧ್ವನಿಯನ್ನು ತಯಾರಿಸುವವನು - ಶಕ್ತಿ - ಪರಮಾತ್ಮ. ಆದರಿಂದ ನಾದ್ಯಾಯ ನಮಃ.

9. ನಿರವಾದ್ಯಾಯ ನಮಃ

ನಿರವದ್ಯ - ನಿರಪೇಕ್ಷ - ಸ್ವತಂತ್ರನು, ವಿರಕ್ತನು, ಆಸೆಯಿಲ್ಲದವನು.

ಪರಮಾತ್ಮನು ಸ್ವತಂತ್ರನು. ಇಂತಹದೇ ಬೇಕೆಂಬ ಆಸೆಯಿಲ್ಲದವನು ಉನ್ನತಮಟ್ಟವನ್ನು ಏರಿದವನು.

ನಿಷ್ಕಾಮನಾಗಿ ತನ್ನ ಲೀಲೆಯಿಂದ, ಸ್ವ-ಇಚ್ಛೆಯಿಂದ ಈ ಬ್ರಹ್ಮಾಂಡ ಕೋಟಿಯನ್ನು ನಡೆಸುತ್ತಿದ್ದಾನೆ. ಹೆಚ್ಚೆಂದರೆ ಎಲ್ಲ ಜೀವಿಗಳನ್ನು ಉದ್ಧಾರ ಮಾಡುವುದೇ ಇವನ ಆದ್ಯ ಇಚ್ಛೆ, ಕರ್ತವ್ಯ. ಪ್ರಾರ್ಥಿಸಿದವರಿಗೆ ಇಲ್ಲವೆನ್ನುವುದಿಲ್ಲ.

ನಿರವದ್ಯಾ - ದೋಷರಹಿತನು, ಅವಿದ್ಯೆಯ ವಿಕಾರ ದೋಷಕ್ಕೆ ಅವಿದ್ಯ ಎಂದು ಹೆಸರು. ಅವಿದ್ಯೆಯಿಂದ ಬಿಡಿಸವವನು ನಿರವದ್ಯಾ. ಬಿಡಿಸಲ್ಪಟ್ಟವನೂ ಸಹ ''ನಿರವದ್ಯನು''. ಆದರೆ ಬಿಡಿಸಲ್ಪಟ್ಟವನು ನಿರವದ್ಯನಾಗಿರುವುದು ಪರಮಾತ್ಮನ ಕೃಪೆಯಿರುವವರೆಗೆ ಮಾತ್ರ - ಅಂದರೆ ಇದು ತಾತ್ಕಾಲಿಕ. ಆದರೆ ಪರಮಾತ್ಮನು ಸ್ವಯಂ ತಾನೇ ಅವಿದ್ಯೆಯಂತಹ ಉಪಾಧಿಇಲ್ಲದ ಕಾರಣ ಸದಾ ನಿರವದ್ಯನು. ಅವನಿಗೆ ಯಾರ ಕೃಪೆಯೂ ಬೇಕಾಗಿಲ್ಲ.

ಒಂದು ವಿಧವಾದ ನರಕಕ್ಕೆ ಅವದ್ಯ ಎಂದು ಹೆಸರು. ಯಾವನ ಅನುಗ್ರಹದಿಂದ ಅವದ್ಯವೆಂಬ ನರಕದಿಂದ ತಪ್ಪಿಸಿಕೊಳ್ಳುತ್ತಾರೆಯೋ ಅವನಿಗೆ ''ನಿರವದ್ಯ'' ಎಂದು ಹೆಸರು (ಲ.ಸ. 150).

0. ವೇದ್ಯಾಯ ನಮಃ

ವೇದಗಳಿಂದ ತಿಳಿಯಲ್ಪಡುವವನು, ಭಕ್ತರಿಂದ ತಿಳಿಯಲ್ಪಡುವವನು,

ವೇದ - ತಿಳಿಯುವುದು, ಜ್ಞಾನ, ಚತುರ್ವೇದಗಳು.

ವೇದ್ಯ - ತಿಳಿಯಲ್ಪಟ್ಟವನು.

ಪರಮಾತ್ಮನನ್ನು ತಿಳಿಯಬೇಕೆಂದರೆ ಪೂಜ, ಭಜನೆ, ಧ್ಯಾನ, ಜಪಗಳು ಬೇಕು. ಅವನ ಲೀಲೆಗಳನ್ನು ತಿಳಿಯಲು ವೇದಗಳು, ಉಪನಿಷತ್ತು, ಪುರಾಣಗಳು ಬೇಕು. ಇವುಗಳನ್ನು ಕಲಿಯುವುದರಿಂದ ಮನಶ್ಶಾಂತಿ ಬರುತ್ತದೆ. ಮತ್ತು

ೀವಿಯು ಸದ್ವರ್ತನೆಯನ್ನು ತಿಳಿದು ಮುಂದುವರಿಯುತ್ತಾನೆ. ಚ್ಚರಿತ್ರನಾಗುತ್ತಾನೆ.

ನಿಃ ಶ್ರೇಯಸ್ಸನ್ನು ಇಚ್ಛಿಸುವುದರಿಂದ ತಿಳಿಯಲ್ಪಡಲು ಯೋಗ್ಯನಾಗಿರುವವನು. .ಸ.163)

**ಅದ್ಭುತಕರ್ಮಣೇ ನಮಃ**

ಅದ್ಭುತವಾದ ಕರ್ಮ, ಕಾರ್ಯಗಳನ್ನು ಮಾಡುವವನಿಗೆ ನಮಸ್ಕಾರಗಳು.

ನಮಸ್ಕರಿಸುವವರು ಯಾವಾಗಲೂ ತಮಗಿಂತ ಉನ್ನತ ಟ್ಟದಲ್ಲಿರುವವರನ್ನು ನಮಸ್ಕರಿಸುತ್ತಾರೆ. ಇದು ಒಂದು ರೀತಿಯಲ್ಲಿ - ವರಲ್ಲಿರುವ ಉತ್ತಮತೆಯನ್ನು ಮತ್ತು ಜ್ಞಾನವನ್ನು ತಿಳಿದು - ುಸ್ಕರಿಸುತ್ತೇವೆ. ಕೆಲವು ಸಲ ಅವರು ಮಾಡುವ ಕಾರ್ಯಗಳು ನಮ್ಮ ನಸ್ಸು ಮತ್ತು ಬುದ್ಧಿ ಶಕ್ತಿಗಳಿಗಿಂತ ಅವರದು ತೀಕ್ಷ್ಣವೆಂದು ನಮಗೆ ೀಚರವಾಗುತ್ತದೆ.

ಜಗತ್ತಿನಲ್ಲಿ ಪ್ರತಿ ಜೀವಿಗೂ ಅನೇಕರು ಉತ್ತಮರೆಂದೂ, ಕೆಲವರು ಕ್ಷ್ಣಬುದ್ಧಿಯವರೆಂದೂ ಮತ್ತೆ ಕೆಲವರು ಅದ್ಭುತ ಕಾರ್ಯಗಳನ್ನು ಾಡುವವರೆಂದೂ ತಿಳಿದು ಗೌರವಿಸುತ್ತೇವೆ.

ಸರ್ವರಿಗೂ, ಸರ್ವಕಾಲಕ್ಕೂ, ಸರ್ವದೇಶಕ್ಕೂ ಅದ್ಭುತ ಕಾರ್ಯ ಾಡುವವನು, ಮಾಡಿದವನು, ಮಾಡುತ್ತಾ ಇರುವವನು ಪರಮಾತ್ಮನೊಬ್ಬನೇ! ನು ರಚಿಸಿರುವ ಪ್ರಪಂಚವೇ ಅದ್ಭುತ ಕಾರ್ಯ. ಇವನು ನಮ್ಮನ್ನು ್ಮ ಜೀವನವನ್ನು ನಡೆಸುತ್ತಿರುವುದೇ ಒಂದು ಅದ್ಭುತ ಕಾರ್ಯ. ನಮಗೆ ಟ್ಟಿರುವ ವಾಯು, ದೇಹದಲ್ಲಿ ಅದು ಕೆಲಸ ಮಾಡುವ ರೀತಿ, ದೇಹ ಯನ್ನು ಸರಿಯಾಗಿ ಇರಿಸಲು ಆಹಾರಗಳು, ಉಸಿರಾಡುವ ಶಕ್ತಿ, ಜೀವ , ಪರಿಸರಗಳು, ಹತ್ತಿರವಿರುವ ಜೀವಿಗಳು (ಸಂಬಂಧಿಗಳು), ಆಗಾಗ ಯೋಗ ವಿಯೋಗವಾಗುವ ಸಂಪರ್ಕ ಜೀವಿಗಳು, ನಾವು ಅವರಿಗ ಸ್ಪಂದಿಸುವ ತಿ, ಪ್ರತಿಯೊಂದೂ ''ಆಗಮಾಪಾಯಿನ'' ದ್ವಂದ್ವಗಳು - ಇನ್ನೂ ೇಕವಾದವುಗಳು - ಇವುಗಳನ್ನು ಪ್ರತಿ ಜೀವಿಗೂ ಯೋನಿಗಳ ಪಕ್ಷಪಾತವಿಲ್ಲದೆ ರ್ಪಾ ಸಮಯಕ್ಕೆ ಮಾತ್ರ ಒದಗಿಸಿ (ನಂತರ) ಅವವುಗಳ ಕಾರ್ಯಾನಂತರ ಯವಾಗಿಸುವುದು, ಎಲ್ಲವನ್ನು ಸ್ಮೃತಿ ಪಟದಲ್ಲಿ ಜ್ಞಾಪಕ ಶಕ್ತಿಯಿಂದ ಾರಿಸುವುದು- ಇವುಗಳಿಗಿಂತ ಅದ್ಭುತ ಕರ್ಮಗಳು ಉಂಟೆ! ಇವೇ, ಸಕಲ ಹ್ಮಾಂಡದಲ್ಲಿ ಅನೇಕವನ್ನು ಸೃಷ್ಟಿಸಿ, ಜೀವಿಗಳನ್ನು ಕಾಲಯಾನದಲ್ಲಿ ಸಿಕ್ಕಿಸಿ, ತ್ರಧಾರನಂತೆ ನಿಲ್ಲುತ್ತಾನಲ್ಲಾ, ಆ ಪರಮಾತ್ಮನಿಗೆ ಸಮರಾರು! ಒಳಗಿದ್ದರೂ ಾವ ರೀತಿಯ ಅಂಟನ್ನೂ ಮಾಡಿಕೊಳ್ಳದೆ ಎಲ್ಲವೂ ತಮಗೆ ತಾವೇ

ನಡೆಯುವಂತೆ ಅಖಿಲಾಂಡ ಕೋಟಿ ಬ್ರಹ್ಮಾಂಡವನ್ನು ನಡೆಸುತ್ತಾ ನಾಯಕನಾಗಿ ಇರುವ ಪರಮಾತ್ಮನಿಗಿಂತ ಅದ್ಭುತ ಕರ್ಮಗಳನ್ನು ಮಾಡುವವರು ಯಾರು!

''ಅದ್ಭುತ ಕರ್ಮಣೇ ನವೋನ್ನಮಃ'' - ಎಂದು ಬ್ರಹ್ಮದೇವರು ವಿಸ್ಮಯದಿಂದ ಪರಮಾತ್ಮನಿಗೆ ಈ ನಾಮದಲ್ಲಿ ಸ್ಮರಿಸಿರುವುದರಲ್ಲಿ ಹೆಚ್ಚೇನು!

*ಸದ್ಯೋಜಾತಾಯ ಸಾಧ್ಯಾಯ ವೈದ್ಯುತಾಯ ನಮೋ ನಮಃ ।*
*ಅಧ್ವಾತೀತಾಯ ಸತ್ವಾಯ ವಾಗಾತೀತಾಯ ವಾಗ್ಮಿನೇ ॥67॥*
*(412-418)*

**12. ಸದ್ಯೋಜಾತಾಯ ನಮಃ**

ಸದ್ಯ ಏವ ಆವಿರ್ಭೂತಲ ಪ್ರಪಂಚ ಉನ್ಮೇಷ ಹೇತುಂ ಸದ್ಯೋಜಾತಾಭಿಧಾನಂ (ನಾ. ಉ. ಅನುವಾಕ - 17).

ಸದ್ಯ - ಈಗ ಜಾತಾ ಹುಟ್ಟಿದವನು.

ಸದ್ಯೋಜಾತ - ಎಲ್ಲ ಜ್ಞಾನಗಳನ್ನು ತಿಳಿದಿರುವವನು, ಜ್ಞಾನಮಯ, ಜ್ಞಾನವೇ.

ಈ ಹೆಸರು ಮಹಾದೇವನಿಗೆ ಅನ್ವಯಿಸುತ್ತದೆ. ಮಹಾದೇವನ ಪಶ್ಚಿಮ ದಿಕ್ಕಿಗೆ ತಿರುಗಿರುವ ಮುಖವು ಅವ್ಯಕ್ತವಾಗಿರುವಸ್ಥಿತಿಯಿಂದ ವ್ಯಕ್ತವಾಗುವುದಕ್ಕೆ ಕಾರಣವೆಂದು ತಿಳಿದಿರುತ್ತೇವೆ. ಈ ಮುಖವು ಪ್ರತ್ಯಗ್ವೃತ್ತಿಗೆ ತಿರುಗಿರುವಾಗ ಜನನ ಮರಣಗಳ ಸರಣಿಯು ಪ್ರಾರಂಭವಾಗಿ ಸಂಸಾರವು ನಡೆಯುತ್ತದೆ. ಈ ಮುಖವು ಪ್ರಾಗ್ವೃತ್ತಿಯಲ್ಲಿರುವಾಗ (ಒಳಮುಖವಾದಾಗ) ಮಹಾದೇವನು ಜೀವಿಗಳಿಗೆ ಪ್ರಪಂಚದಿಂದ ಬಿಡುಗಡೆಯನ್ನು ಕೊಡುತ್ತಾನೆ. ಮಹಾದೇವನ ಈ ಪ್ರತ್ಯಗ್ವೃತ್ತಿ - ಪ್ರಾಗ್ವೃತ್ತಿಗಳು ಸದ್ಯೋಜಾತ ಎಂದು ಕರೆಯಲ್ಪಡುತ್ತವೆ.

ಜೀವಿಯು ಈ ಸಂಸಾರದಲ್ಲಿ ಇರುವ ಸ್ಥಿತಿಯಲ್ಲಿ ಸ್ವತಂತ್ರವಾಗಿರುವುದಿಲ್ಲ. ಪರಮೇಶ್ವರನಿಂದ ಏನನ್ನು ಪಡೆಯಲೂ ಸಹ ಏನೂ ಮಾಡಲಾರದೆ ಅಸಹಾಯಕ ಸ್ಥಿತಿಯಲ್ಲಿ ದೀನತ್ವದಲ್ಲಿದ್ದು ನಮಸ್ಕಾರವನ್ನು ಮಾತ್ರ ಮಾಡಬಹುದೇ ವಿನಃ ಇನ್ನೇನೂ ಸಾಧ್ಯವಿಲ್ಲ.

ಅದರಿಂದಲೇ ಸದ್ಯೋಜಾತಾಯ ನಮಃ ಎಂದು ನಮಸ್ಕರಿಸಬೇಕು.

ಮಹಾದೇವನಿಗೆ "ಈ ಭವಸಾಗರದಲ್ಲಿ ಪುನಃ ಪುನಃ ಜನನ - ಮರಣಗಳ ಸರಣಿಯಲ್ಲಿ ಹಾಕಬೇಡ" ಎಂದು ಪ್ರಾರ್ಥಿಸುವ ರೀತಿ ನಾರಾಯಣೋಪನಿಷತ್ತಿನಲ್ಲಿ 17ನೇ ಅನುವಾಕದಲ್ಲಿ ಈ ರೀತಿ ಇದೆ -

*ಸದ್ಯೋಜಾತಂ ಪ್ರಪದ್ಯಾಮಿ ಸದ್ಯೋಜಾಯ ವೈ ನಮೋ ನಮಃ ।*
*ಭವೇ ಭವೇ ನಾತಿ ಭವೇ ಭವಸ್ವ ಮಾಮ್ ।*
*ಭವೋದ್ಭವಾಯ ನಮಃ ॥*

ಅರ್ಥ-

ಸದ್ಯೋಜಾತನಲ್ಲಿ ನಾನು ಶರಣಾಗತನಾಗಿದ್ದೇನೆ. ಪುನಃ ಪುನಃ ಸದ್ಯೋಜಾತನಿಗೇನೇ ನಮಸ್ಕರಿಸುತ್ತೇನೆ.

ಭವೇ ಭವೇ - ಜನನ ಮರಣಗಳ ಸರಣಿಯಲ್ಲಿ ಮಾಂ - ನನ್ನನ್ನು, ನ - ಭವಸ್ವ - ಹಾಕಬೇಡ, ಅತಿಭವೇ - ಜನನ ಮರಣಗಳಿಗೆ ಮೀರಿದ ಸ್ಥಿತಿ, ಮುಕ್ತಿಗೆ ಭವಸ್ವ - ಹಾಕು,

ಭವೋದ್ಭವಾಯ - ಈ ಜನನ ಮರಣಗಳನ್ನು ಸೃಷ್ಟಿಸಿದ ಪರಮಾತ್ಮನಿಗೆ ನಮಃ ನಮಸ್ಕಾರಗಳು.

ಪರಮಾತ್ಮನ ರೂಪಗಳಲ್ಲಿ ಮಹಾದೇವನ ರೂಪವು ಬಹಳ ವಿಶಿಷ್ಟವಾದುದು. ಅವನು - ಅಂದರೆ ಶಿವನು ಬಹಳ ಬೇಗ ಭಕ್ತರಿಗೆ ಕೇಳಿದ್ದನ್ನು ದಯಪಾಲಿಸುತ್ತಾನೆ. ಆಶು -ತೋಷ, ಬಹಳ ಕಡಿಮೆಯ ಶ್ರಮದಲ್ಲಿ ಭಕ್ತರಿಗೆ ವರವನ್ನು ದಯಪಾಲಿಸುತ್ತಾನೆ. ಅನತಿ ದೂರದಲ್ಲಿ ಕ್ಷಿಪ್ರ ಪ್ರಸಾದವನ್ನು ಕೊಡುವವನು. ಅದೂ "ಸದ್ಯೋಜಾತ" ನಾಮದಿಂದ ಬಹುಬೇಗ ಬಹಳ ಸಂತುಷ್ಟನಾಗುತ್ತಾನೆ. ಈ ಮಂತವನ್ನು ಪಂಚಬ್ರಹ್ಮಮಂತ್ರ ಎಂದು ಕರೆಯುತ್ತಾರೆ. ಇದನ್ನು ಶಿವನು ನಾಲ್ಕು ದಿಕ್ಕುಗಳಿಗೆ ಒಂದೊಂದು ಮುಖವನ್ನೂ ಮತ್ತು ಒಂದು ಊರ್ಧ್ವ ದಿಕ್ಕಿಗೂ ಸೇರಿ ಪಂಚಮುಖ ಶಿವನೆಂದೂ ಪೂಜಿಸುತ್ತಾರೆ ಮತ್ತು ಧ್ಯಾನಕ್ಕೆ ಈ ರೀತಿಯ ಶಿವನ ರೂಪವು ಬಹಳ ಶ್ರೇಷ್ಠವಾದದು, ಭಕ್ತರು ಈ ರೂಪದಿಂದ ಶಿವನನ್ನು ಆರಾಧಿಸಿ, ಧ್ಯಾನಿಸಿ, ಮುಕ್ತಿಯನ್ನು ಪಡೆಯುತ್ತಾರೆ.

*ಪಂಚಬ್ರಹ್ಮಮಂತ್ರಗಳು*

1. *ಅನುವಾಕ 17*

*ಸದ್ಯೋಜಾತಂ ಪ್ರಪದ್ಯಾಮಿ ಸದ್ಯೋಜಾತಾಯ ವೈ ನಮೋ ನಮಃ ।*
*ಭವೇ ಭವೇ ನಾತಿಭವೇ ಭವಸ್ವ ಮಾಂ ।*
*ಭವೋದ್ಭವಾಯ ನಮಃ ॥ 1 ॥*

2. *ಅನುವಾಕ 18*

*ವಾಮದೇವಾಯ ನಮೋ ಜ್ಯೇಷ್ಠಾಯ ನಮಃ ಶ್ರೇಷ್ಠಾಯ ನಮೋ ರುದ್ರಾಯ ನಮಃ ಕಾಲಾಯ ನಮಃ ಕಲವಿಕರಣಾಯ ನಮೋ ಬಲಾಯ ನಮೋ ಬಲಪ್ರಮಥನಾಯ ನಮಃ ಬಲವಿಕರಣಾಯ ನಮೋ ಸರ್ವಭೂತದಮನಾಯ ನಮೋ ಮನೋನ್ಮನಾಯ ನಮಃ ॥ 1 ॥*

3. *ಅನುವಾಕ 19*

*ಅಘೋರೇಭ್ಯೋ ಥ ಘೋರೆಭ್ಯೋ ಘೋರ ಘೋರತರೇಭ್ಯಃ ।*
*ಸರ್ವತಃ ಶರ್ವ ಸರ್ವೇಭ್ಯೋ ನಮಸ್ತೇ ಅಸ್ತು ರುದ್ರರೂಪೇಭ್ಯಃ ॥ 1 ॥*

4. *ಅನುವಾಕ 20*

*ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ। ತನ್ನೋ ರುದ್ರ ಪ್ರಚೋದಯಾತ್ ॥ 1 ॥*

5. *ಅನುವಾಕ 21*

*ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವಭೂತಾನಾಂ ಬ್ರಹಾಧಿಪತಿ ಬ್ರಹ್ಮಣೋಧಿಪತಿ ಬ್ರಹ್ಮಾ ಶಿವೋ ಮೇ ಅಸ್ತು ಸದಾಶಿವೋಮ್ ॥1॥*

*(ಮಹಾನಾರಾಯಣೋಪನಿಷತ್ ಅ 17-21 = 5 ಮಂತ್ರಗಳು.)*

ಪೂಜೆಗೆ ಮತ್ತು ಧ್ಯಾನಕ್ಕೆ ಈ ಮಂತ್ರಗಳನ್ನು ತೆಗೆದುಕೊಳ್ಳುತ್ತಾರೆ.

13. ಸಾಧ್ಯಾಯ ನಮಃ

ಸಾಧ್ಯರು ಎಂದರೆ ದೇವತೆಗಳು.

ಸಾಧ್ಯ - ಎಂದರೆ ಸಾಧಿಸುವಂತಹ, ತರ್ಕ ಮಾಡಲು ಬರುವ ರೀತಿ ಮತ್ತು ಅದರ ಫಲ.

ಸಾಧ್ಯದ ಭಾವ - ಸಾಧನೆ.

ಪ್ರತಿ ಕರ್ಮವನ್ನು ಮಾಡುವ ಸಂಕಲ್ಪಕ್ಕೆ ಮತ್ತು ಮಾಡುವ ರೀತಿಗೆ ಸಾಧನೆ ಎಂದು ಹೇಳಬಹುದು

ಸಾಧ್ಯ ಕ್ರಿಯೆಯಲ್ಲಿ ದೇಹಶಕ್ತಿ, ವಾಕ್‌ಶಕ್ತಿ, ಮನಃಶಕ್ತಿ ಬುದ್ಧಿ (ಮೇಧಾಶಕ್ತಿ) ವಿವೇಚನಾ ಶೀಲತೆ ಮುಂತಾದವು ಇವೆ. ಇವೆಲ್ಲಕ್ಕೂ ಶಕ್ತಿರೂಪವನ್ನು ಒದಗಿಸುವವನು ಪರಮಾತ್ಮನೇ. ಅದರಿಂದ ಅವನಿಗೆ ''ಸಾಧ್ಯಾಯ ನಮಃ'' ಎಂದು ನಮಸ್ಕರಿಸುತ್ತೇವೆ. ಪರಮಾತ್ಮನ ಸಂಕಲ್ಪವಿಲ್ಲದೆ ಯಾವ ಕಾರ್ಯವೂ ನಡೆಯುವುದಿಲ್ಲ.

ಸಾಧ್ಯರು - ಎಂದರೆ ದೇವತ್ವವನ್ನು ಪಡೆದ ದೇವತೆಗಳು, ಸಿದ್ಧರು, ಸಾಧ್ಯರು, ಚಾರಣರು, ಯಕ್ಷರು, ಗಂಧರ್ವರು ಎಲ್ಲ ಅಂತರಿಕ್ಷದಲ್ಲಿ (ಭೂಮಿಯ ಮೇಲೆ ಮತ್ತು ಆಕಾಶದಿಂದ ಕೆಳಗೆ - ಇರುವ ಅಂತರದಭಾಗ - ) ಚಲಿಸುತ್ತಿರುತ್ತಾರೆ. ಇವರೆಲ್ಲರೂ ಮಾನವರಿಗಿಂತ ಉತ್ತಮ ಸ್ಥಿತಿಯನ್ನು ಪಡೆದಿರುತ್ತಾರೆ. ಪರಮಾತ್ಮನು ಸಕಲರಲ್ಲಿಯೂ ಅಂಶಮಾತ್ರದಲ್ಲಿ ಇರುವುದರಿಂದ ಅವನು ಸಾಧ್ಯನು. ಅದರಿಂದ ''ಸಾಧ್ಯಯ ನಮಃ'' ಎಂದರೆ ಸಾಧ್ಯರೂಪದ ದೇವತೆಗೆ ನಮಸ್ಕಾರಗಳು ಎಂದಾಗುತ್ತದೆ.

**14. ವೈದ್ಯುತಾಯ ನಮಃ**

ದ್ಯುತಿ - ಸೌಂದರ್ಯ, ಬೆಳಕು, ಕಾಂತಿ, ತೇಜಸ್ಸು, ವೈಭವ ಮುಂತಾಗಿ, ವಿಶೇಷವಾದ ದ್ಯುತಿಯುಳ್ಳವನು ಯಾರೋ ಅವನು - ವೈದ್ಯುತನು.

ದ್ಯುತ್ - ಪ್ರಕಾಶಿಸು, ಬೆಳಕನ್ನು ಕೊಡು ಎಂದು ಅರ್ಥ.

ದ್ಯುತ್ ಇರುವಿಕೆಗೆ ದ್ಯುತಿ -

ವಿಶೇಷವಾದ ದ್ಯುತಿ - ವೈದ್ಯುತಿ - ವೈದ್ಯುತನು. ಹೀಗೆ ಎಲ್ಲ ಜೀವಿಗಳಲ್ಲಿಯೂ ಪ್ರಕಾಶಕೊಡುವ ತೇಜಸ್ಸು ಇರುತ್ತದೆ. ಅದು ಬುದ್ಧಿಯ ಮೂಲಕ, ವಾಕ್ ಮೂಲಕ, ಮನಸ್ಸಿನ ಜಾಗ್ರತೆಯ ಮೂಲಕ ಹೊರಬರುತ್ತದೆ. ಇದು ಅನೇಕ ಸಲ ತಾತ್ಕಾಲಿಕ, ಮತ್ತು ಸಾಮಾನ್ಯವಾಗಿ ಮಾಯೆ ಮತ್ತು ಅವಿದ್ಯೆಯಿಂದ ಮುಚ್ಚಲ್ಪಟ್ಟಿರುತ್ತದೆ. ಆದರೆ ಪರಮಾತ್ಮನ ಕೃಪೆಯಿಂದ, ಸಂಕಲ್ಪಮಾತ್ರದಿಂದ ಮಾಯೆ ಮತ್ತು ಅವಿದ್ಯೆ ನಾಶವಾಗಿ ತೇಜಸ್ಸು (ದ್ಯುತಿಯು) ಹೊರಬರುತ್ತದೆ.

ಆದರೆ ಪರಮಾತ್ಮನೇ ಆದ ಸೂರ್ಯ ಚಂದ್ರರು ನಕ್ಷತ್ರ ಮುಂತಾದವುಗಳು ತಮ್ಮ ಪ್ರಕಾಶವನ್ನು ಪರಮಾತ್ಮನಿಂದಲೇ ಪಡೆಯುತ್ತಾರೆ. ಇವು ಸ್ಥಿರವಾದ ಪ್ರಕಾಶವಾದರೂ ಯಾವುದೋ ಒಂದು ಕಾಲಕ್ಕೆ ನಾಶವಾಗತಕ್ಕವು. ಯಾವಾಗ ಅವನ ಸಂಕಲ್ಪವು ಬದಲಿಸುವುದೋ ಆಗ ಮುಕ್ತಾಯವಾಗುತ್ತವೆ. ಅದರಿಂದ ವಿಶೇಷವಾಗಿ ಸದಾ ಇರತಕ್ಕ ತೇಜಸ್ಸುಳ್ಳವನು - ವೈದ್ಯುತನು ಪರಮಾತ್ಮನೇ ವಿನಹ ಬೇರೆಯವರಲ್ಲ. ಇವನೇ ವಿಶೇಷವಾದ ದ್ಯುತಿಯುಳ್ಳವನು - ಅದರಿಂದ ವೈದ್ಯುತಾಯ ನಮಃ ಎಂದು ನಮಸ್ಕರಿಸುವುದು.

**15. ಅಧ್ವಾತೀತಾಯ ನಮಃ**

ಅಧಿ - ಅತೀತ,

ಅತೀತ - ಕಳೆದುಹೋದ್ದು, ಗತಿಸಿದ ವೇಳೆ, ಕಾಲಗರ್ಭದಲ್ಲಿ ಸೇರಿಹೋದ್ದು, ದಾಟಿಹೋದ್ದು.

ಅಧಿ - ಇದಕ್ಕಿಂತ ಮೇಲಿನದು, ಶ್ರೇಷ್ಠವಾದುದು.

ಅಂದರೆ ಕಾಲಗರ್ಭದಲ್ಲಿ ಎಂದಿನಿಂದ ಕಳೆದು ಹೋದ ಘಟನೆಗಳು ಸೇರಿ ಹೋಗುತ್ತಿರುವುವೋ ಅದಕ್ಕಿಂತ ಹಿಂದಿನದು - ಅಧ್ವಾತೀತ.

ಪರಮಾತ್ಮನು ಕಾಲದೇವನಿಗೂ ಹಿಂದಿನವನು. ಪರಮಾತ್ಮನು ಎಂದಿನಿಂದ ಇದ್ದಾನೆ, ಎಲ್ಲಿಯವರೆಗೆ ಇರುತ್ತಾನೆ, ಎಂದಿನಿಂದ ಇಲ್ಲ, ಎಂದಿನವರೆಗೆ ಇಲ್ಲ ಇವೆಲ್ಲವೂ ಪ್ರಶ್ನೆಗಳಾಗಯೇ ಉಳಿಯುತ್ತವೆಯೇ ಹೊರತು ಪರಮಾತ್ಮನು ಇವುಗಳ ಉತ್ತರಕ್ಕೆ ಒಳಪಡುವುದಿಲ್ಲ. ಏಕೆಂದರೆ ಅವನು ಅಪರಿಮಿತನು, ಅಧ್ವಾತೀತನು. ಅಧ್ವಾತೀತಾಯ ನಮಃ.

16. ಸತ್ವಾಯ ನಮಃ

ಸತ್ವ - ಎಂದರೆ ಅಸ್ತಿತ್ವ, ಮೂಲದ ರೂಪ, ಸತ್ಯ, ಮೂಲಶಕ್ತಿ.

ಸತ್ - ಸದಾಚಾರದ ಗುಣ, ಒಳ್ಳೆಯದು.

ಪರಮಾತ್ಮನು ಎಲ್ಲದಕ್ಕೂ ಮೂಲಕಾರಣನು, ಮೂಲಶಕ್ತಿ, ಪರಮಾತ್ಮನಿಲ್ಲದೆ ಪ್ರಪಂಚದಲ್ಲಿ ಯಾವುದೂ ಇರಲು ಸಾಧ್ಯವಿಲ್ಲ. ಇವನ ಕಾರಣದಿಂದಲೇ, ಇವನ ಶಕ್ತಿಯಿಂದಲೇ ಸರ್ವವೂ ಇರುವುದು. ಜಗತ್ತಿನ, ಪ್ರಪಂಚದ, ಸೃಷ್ಟಿಯಲ್ಲಿ ಏನೇನಿದೆಯೋ ಆ ಎಲ್ಲವೂ ಇವನ ಸಂಕಲ್ಪದಂತೆಯೇ ನಡೆಯುತ್ತದೆ.

ಮನುಷ್ಯನಲ್ಲಿ ಸತ್ವವಿದೆ ಎಂದರೆ ಸದಾಚಾರ ಗುಣವಿದೆ ಅಂತಶ್ಶಕ್ತಿ ಇದೆ ಎಂದು ನಾವು ತಿಳಿಯುತ್ತೇವೆ. ಅಥವಾ

ಸತ್ವವೆಂದರೆ ನಿಜಸ್ಥಿತಿ ಎಂದು ಅರ್ಥಮಾಡಬಹುದು. ಮತ್ತೆ ಸಂಪತ್ತು, ವಿದ್ಯಾಶಕ್ತಿ, ಬುದ್ಧಿಶಕ್ತಿ, ಅರ್ಹತೆ ಎಂದು ನಾನಾ ರೀತಿಯಲ್ಲಿ ಸದ್ಭಾವನೆಯ ರೂಪದಲ್ಲಿ ತಿಳಿಯಬಹುದು. ಇವೆಲ್ಲವೂ ಇರತಕ್ಕವನು ಪರಮಾತ್ಮನೊಬ್ಬನೇ. ಆ ಸತ್ವಭಾವವೇ ಪರಮಾತ್ಮ, ಆದರಿಂದ ಸತ್ವಾಯ ನಮಃ ಎಂದು ಅವನನ್ನೇ ನಮಸ್ಕರಿಸುತ್ತೇವೆ.

17. ವಾಗಾತೀತಾಯ ನಮಃ

ವಾಕ್ - ಎಂದರೆ ಮಾತಿಗೆ, ಅತೀತ - ಮೀರಿದವನು ಯಾರೋ ಅವನು ಪರಮಾತ್ಮ.

ಕಾಯಾ ವಾಚಾ ಮನಸಾ ಎಂದು ತ್ರಿಕರಣಗಳು, ಇವುಗಳಿಗೆ ಮೀರಿದವನು ಅಂದರೆ ಇವುಗಳಿಂದ ತಿಳಿಯಲು ಸಾಧ್ಯವಿಲ್ಲದವನು. ವಾಕ್‌ನಿಂದ ಪರಮಾತ್ಮನು "ಹೀಗೆಯೇ" ಅಥವಾ "ಹೀಗೆ ಅಲ್ಲ" ಎಂದು ತಿಳಿಯಲು ಸಾಧ್ಯವಿಲ್ಲ

ಪರಮಾತ್ಮ ರೂಪ, ಇರುವ ಸ್ಥಳ ಶಕ್ತಿ ಮುಂತಾದವನ್ನು ತಿಳಿಯಲು ಹೋಗಿ, ಹುಡುಕಿ, ಹುಡುಕಿ ಕೊನೆಗೆ "ಯತೋ ವಾಚೋ ನಿವರ್ತತೇ ಅಪ್ರಾಪ್ಯ ಮನಸಾ ಸಹ" - ಮಾತು ಮತ್ತು ಮನಸ್ಸು ಸೋತು ಹಿಂದಿರುಗುತ್ತದೆ. ಆದರಿಂದ ಪರಮಾತ್ಮನು ವಾಗಾತೀತನು. ಅದಕ್ಕೆ ಅವನಿಗೆ ವಾಗಾತೀತಾಯ ನಮಃ ಎಂದು ನಮಸ್ಕರಿಸುತ್ತೇವೆ.

ವಾಕ್ ಶಕ್ತಿಯೇ ಪರಮಾತ್ಮನಾದ್ದರಿಂದ ಅವನನ್ನು ಅವನೇ ಹುಡುಕಿದರೆ ಏನು ಲಾಭ. ಎರಡೂ ಪರಮಾತ್ಮ, ಅವನ ಮಾಯೇ ಅವನು ಮಾಯೆಗೆ ಒಳಪಡುವುದಿಲ್ಲ. ಅತೀತನು ವಾಗಾತೀತನು.

18. ವಾಗ್ಮಿನೇ ನಮಃ

ವಾಗ್ಮಿ - ಪ್ರಚಂಡ ಮಾತುಗಾರ,

ಪ್ರಚಂಡ ವಾಕ್ ಶಕ್ತಿಯಿರುವವನು,

ಪರಮಾತ್ಮನಿಂದಲೇ ಎಲ್ಲ ಶಕ್ತಿಗಳೂ ಹೊರಬರುವುದರಿಂದ ಅವನು ಶಕ್ತಿಗಳ ಗಣಿ, ಆಗರ,

ವಾಕ್ ಶಕ್ತಿಯುಳ್ಳವನು - ಇದರಲ್ಲಿ ಪರಮಾತ್ಮನನ್ನು ಮೀರಿಸಿದವರು ಯಾರೂ ಇಲ್ಲ. ಎಲ್ಲಕ್ಕೂ ಅವನು ಮೀರಿದವನಾದ್ದರಿಂದ ಅವನು ಪ್ರಚಂಡ, ಎಂದರೆ ಯಾರೂ ಸೋಲಿಸದಂತಹ ವಾಕ್ ಶಕ್ತಿಯುಳ್ಳವನು ಮತ್ತು ಚಾಕಚಕ್ಯತೆಯಿಂದ, ಚತುರತೆಯಿಂದ ಪ್ರದರ್ಶಿಸುವವನು, ವಾಗ್ಮಿನೇ ನಮಃ.

ಮನುಷ್ಯರಲ್ಲಿ ಈ ಶಕ್ತಿ ಇದೆ. ಅನೇಕ ವಾಗ್ಮಿಗಳು ಇರಬಹುದು. ವಾದ ವಿವಾದದಲ್ಲಿ, ಪ್ರದರ್ಶಿಸುವುದರಲ್ಲಿ ಅನೇಕರಿರಬಹುದು. ಆದರೆ ಪರಮಾತ್ಮನಲ್ಲಿ ಈ ಶಕ್ತಿಯು ಹೇರಳವಾಗಿರುತ್ತದೆ ಮತ್ತು ಇದರ ಆಳವನ್ನು ತಿಳಿಯುವವರು ಯಾರೂ ಇಲ್ಲ. ಅದರಿಂದಲೇ ಪರಮಾತ್ಮನು ''ವಾಗ್ಮಿನೇ ನಮಃ'' ಆದನು.

*ವಾಗೀಶ್ವರಾಯ ಗೋಪಾಯ ಗೋಪ್ತ್ರೇ ಗೋಹಿತಕಾರಿಣೇ ।*
*ಪರ್ಜನ್ಯಾಯ ಪ್ರಬುದ್ಧಾಯ ಪ್ರಧಾನಪುರುಷಾಯ ಚ ।।68।।*
*(419-425)*

19. ವಾಗೀಶ್ವರಾಯ ನಮಃ

ವಾಕ್ - ಮಾತನಾಡುವುದು - ಮಾತನಾಡುವ ಶಕ್ತಿ, ವಾಚಾಳತ್ವ, ವಾಕ್‌ಪಟುತ್ವ,

ಇದಕ್ಕೆ, ಈಶ್ವರ - ಶಕ್ತಿದೇವತೆ;

ವಾಗೀಶ್ವರ - ವಾಗ್ದೇವತೆ, ಪರಮಾತ್ಮ.

ಪರಮಾತ್ಮನು ತನ್ನ ಇಚ್ಛೆಯಂತೆ ಅನೇಕ ದೇವ, ದೇವತೆಗಳನ್ನು ತನ್ನಿಂದಲೇ ವಿಭಾಗಿಸಿಕೊಂಡಿದ್ದಾನೆ. ಇದರಲ್ಲಿ ವಾಗ್ದೇವತೆಯೂ ಒಂದು. ಈ ದೇವತೆಯ ಕೃಪೆಯಿಂದಲೇ ನಾವು ಮಾತನಾಡುವ ಶಕ್ತಿಯನ್ನು ಪಡೆಯುತ್ತೇವೆ. ಹಾಗೆಯೇ, ನಾವು ಹೇಳುವುದು - ಪರಮಾತ್ಮನ ಕೃಪೆಯಿಂದ - ಅವನ ಸಂಕಲ್ಪದಿಂದಲೇ ಮತ್ತು ನಮ್ಮ ಸಂಸ್ಕಾರ ಬಲದಿಂದ ಅವನು -

*ಮೂಕಂ ಕರೋತಿ ವಾಚಾಲಂ ।*
*ಪಂಘುಂ ಲಂಘಯತೇ ಗಿರಿಂ ।*
*ಯತ್ಕೃಪಾ ತಮಹಂ ವಂದೇ ।*
*ಪರಮಾನಂದ ಮಾಧವಮ್ ।।*

ಪರಮಾತ್ಮನ ಕೃಪೆಯಿಂದ ಪಡೆಯದಿರುವುದು ಯಾವುದೂ ಇಲ್ಲ. ಆದರಲ್ಲೂ ವಾಗ್ದೇವಿಯಿಂದ, ಸರಸ್ವತಿಯ ಕೃಪೆಯಿಂದ ವಾಚಲತ್ವವನ್ನು ಕ್ಷಣಮಾತ್ರದಲ್ಲಿ ಪರಮ ಶ್ರೇಷ್ಠ ವಾಕ್ಪಟುತ್ವವನ್ನು ಪಡೆಯಬಹುದು. ಆದರೆ ದೇವರ ಕೃಪೆಯ

ಜೊತೆಗೆ ನಮ್ಮ ಪರಮ ಶ್ರದ್ಧೆ ಮತ್ತು ಭಕ್ತಿಯೂ ಬೇಕು. ಆಳವಾದ ಪ್ರಾರ್ಥನೆಯೂ ಅಗತ್ಯ. ಮುಖ್ಯವಾಗಿ ಪರಮಾತ್ಮನ ಪ್ರಚೋದನೆಯೂ ಅಗತ್ಯ, ಅವನ ಇಚ್ಛೆಯಿಲ್ಲದೆ ಏನೂ ನಡೆಯುವುದಿಲ್ಲ - ಅದಕ್ಕೆ ಹೇಳುವುದು - ''ತೇನ ವಿನಾ ತೃಣಮಪಿ ನ ಚಲತಿ''.

20. ಗೋಪಾಯ ನಮಃ

ಗೋ - ಎಂದರೆ ಹಸುಗಳನ್ನು ಪ - ಪಾಲಿಸುವವನು,

ಗೋಪ - ಗೋವುಗಳನ್ನು ಪಾಲಿಸುವವನು, ಆದರಿಂದ ಗೋಪಾಲ, ಗೋಪಾಲಕ, ಮುಂತಾದ ಹೆಸರುಗಳು ಅವನಿಗೆ.

ಚತುಷ್ಪಾದಿಗಳಲ್ಲಿ ಗೋವು ಬಹಳ ಶ್ರೇಷ್ಠವಾದ ಪ್ರಾಣಿ. ಇದರಲ್ಲಿಯೇ ಕಾಮಧೇನು, ನಂದಿನಿ ಎಂದು ಇವೆ. ಇವು ಬೇಡಿದ್ದನ್ನು ಕೊಡುತ್ತದೆ. ಗೋವಿನಿಂದ ಸಕಲರೂ ಪವಿತ್ರರಾಗಬಹುದು.

ಗೋ - ದನಗಳು, ಪಶುಗಳು, ಆಕಾಶ, ನಕ್ಷತ್ರ, ಸೂರ್ಯ, ಚಂದ್ರ ಮತ್ತು ಅನೇಕ ಅರ್ಥಗಳು ಇವೆ.

ಒಟ್ಟಿನಲ್ಲಿ ಇವೆಲ್ಲ ಸೃಷ್ಟಿಯಲ್ಲಿ ಇರುವುದರಿಂದ, ಪರಮಾತ್ಮನಿಂದಲೇ ಆಗುವುದರಿಂದ ಪರಮಾತ್ಮನೇ ಇವುಗಳನ್ನು ಕಾಪಾಡುವವನು. ಎಲ್ಲದಕ್ಕೂ ಪರಿಪಾಲಕನಾಗಿರುವುದರಿಂದ ಗೋಪಾಯ ನಮಃ ಎಂದಾಗುತ್ತದೆ.

21. ಗೋಪ್ತ್ರೇ ನಮಃ

ಪರಮಾತ್ಮನು ಗೋ - ತಾನು ಸೃಷ್ಟಿಸಿದ ಸಕಲ ಚರಾಚರ ವಸ್ತುಗಳಿಗೂ ಮತ್ತು ಜೀವಕೋಟಿಗೂ ಬಹಳ ಆಪ್ತನಾದವನು. ಯಾವ ಯಾವ ಯೋನಿಯ ಯಾವ ಯಾವ ಜೀವಿಗೂ ಅವನೊಬ್ಬನೇ ಬಹಳ ಬೇಕಾದವನು. ಇಷ್ಟವಾದವನು, ಇವನಿಗೆ ಅವನು ಇಷ್ಟವಾದವನು. ಅವನಿಗೆ ಇವನು ಇಷ್ಟವಾದವನು. ಪರಸ್ಪರ ಬೇಕಾದವನು.

ಸೃಷ್ಟಿಯಲ್ಲಿ ಪರಮಾತ್ಮನನ್ನು ಇಷ್ಟಪಡದವರು ಯಾರೂ ಇಲ್ಲ. ಅವನಿಗೆ ಆಕರ್ಷಣೆಯಾಗದವರು ಯಾರೂ ಇಲ್ಲ. ಅವನೇ ಗೋಪ್ತ್ರನು. ಅವನಿಗೆ ನಮಸ್ಕಾರಗಳು.

22. ಗೋಹಿತಕಾರಿಣೇ ನಮಃ

ಪರಮಾತ್ಮನು ಗೋವುಗಳಿಗೆ ಸದಾ ಹಿತವನ್ನು ಮಾಡುವವನು. ತನ್ನ ಸೃಷ್ಟಿಯಲ್ಲಿ ತನ್ನಿಂದಲೇ ವಿಭಾಗವಾದ ಪ್ರಕೃತಿ, ಪುರುಷ, ಮಾಯೆಗಳಲ್ಲಿ ಸಿಕ್ಕಿ ಹಾಕಿಕೊಂಡಿರುವ ಸಕಲ ಜೀವಕೋಟಿಗಳಲ್ಲಿಯೂ ಸದಾ ಹಿತವನ್ನೇ ಮಾಡುತ್ತಾನೆ. ಪರಮಾತ್ಮನು ಯಾರಿಗೂ, ಯಾವ ಸಮಯದಲ್ಲೂ, ಯಾವ

ಸ್ಥಿತಿಯಲ್ಲಿಯೂ ಕೆಟ್ಟದ್ದನ್ನು ಬಯಸುವುದಿಲ್ಲ, ಮಾಡುವುದಿಲ್ಲ. ಏಕೆಂದರೆ ಅವನು ಪಡೆಯಬೇಕಾದ್ದು ಏನೂ ಇಲ್ಲ. ತನ್ನ ಲೀಲಾವಿನೋದಕ್ಕಾಗಿಯೇ ಈ ಅಖಿಲಾಂಡ ಕೋಟಿ ಬ್ರಹ್ಮಾಂಡಗಳನ್ನು ಸೃಷ್ಟಿಸಿ, ಅವುಗಳಿಗೆ ನಾಯಕನಾಗಿ, ಸೂತ್ರಧಾರನಾಗಿ ನಡೆಸುತ್ತಾನೆ. ತಾನೇ ಸೃಷ್ಟಿಸಿದ್ದರಿಂದ, ತನ್ನ ಇಚ್ಛೆಯಿಂದಲೇ ಈ ಭವಸಾಗರವನ್ನು ಕಲ್ಪಾಂತದಿಂದ ಕಲ್ಪಾದಿ ಮತ್ತು ಮುಂದೆಯೂ ನಿರಂತರ ನಡೆಸುತ್ತಾನೆ. ಸದಾ ಹಿತವಾಗುವ ಕೆಲಸವನ್ನೇ ಮಾಡುತ್ತಾನೆ. ಅದಕ್ಕೇನೆ ''ಗೋಹಿತಕಾರಿಣೇ ನಮಃ'' ಎಂದು ನಮಸ್ಕರಿಸುತ್ತೇವೆ.

23. ಪರ್ಜನ್ಯಾಯ ನಮಃ

ಪರ್ಜನ್ಯ - ಮೋಡ, ಮಳೆಯ ದೇವತೆ - ಇಂದ್ರ, ಮಳೆ,

ಪರ್ಜನ್ಯ ಮಂತ್ರವನ್ನು ಮಳೆ ಕರೆಸುವುದಕ್ಕೆ ಹೇಳುತ್ತಾರೆ.

ಪರ್ಜನ್ಯ ಎಂದರೆ ಇಂದ್ರ, ವರುಣ ಎಂದು ಹೇಳಬಹುದು. ವರುಣ ಮತ್ತು ಇಂದ್ರರನ್ನು ಆಳವಾಗಿ ಪ್ರಾರ್ಥಿಸಿದರೆ ಮಳೆಯು ಬರುತ್ತದೆ. ಇಂದ್ರನು ಮೋಡಗಳ ಅಧಿದೇವತೆ. ಮಳೆಯು ಸಕಾಲದಲ್ಲಿ ಬರದಿದ್ದರೆ ''ಪರ್ಜನ್ಯ'' ಜಪವನ್ನು ಮಾಡಿ ದೇವರನ್ನು ತೃಪ್ತಿಪಡಿಸಿ ಮಳೆಯನ್ನು ಪಡೆಯುತ್ತಾರೆ. ಪರಮಾತ್ಮನು ದೇವತೆಗಳನ್ನು ಮತ್ತು ಮನುಷ್ಯರನ್ನು ಸೃಷ್ಟಿಮಾಡಿ ಈ ರೀತಿ ಹೇಳಿದನು.ಮನುಷ್ಯರು ಯಜ್ಞ ಯಾಗಾದಿಗಳನ್ನು ಮಾಡಿ ಹವಿಸ್ಸಿನ ಮೂಲಕ ದೇವತೆಗಳನ್ನು ತೃಪ್ತಿ ಪಡಿಸಲಿ. ಆಯಾ ದೇವತೆಗಳಿಗೆ ಹವ್ಯವಾಹನನಾದ ಅಗ್ನಿಯು ಹವಿಸ್ಸನ್ನು ತೆಗೆದುಕೊಂಡು ಮುಟ್ಟಿಸಲಿ. ಇದರಿಂದ ಸುಪ್ರೀತರಾದ ದೇವತೆಗಳು ಭೂಮಿಯಲ್ಲಿ ಮಳೆ ಬೆಳೆಗಳನ್ನು ಕೊಡಲಿ ಮತ್ತೆ ಮನುಷ್ಯ ಯಜ್ಞಯಾಗಾದಿಗಳನ್ನು ಮಾಡಲಿ ಎಂದು ಹೇಳಿದನು. ಹೀಗೆ ದೇವತೆಗಳು ಮತ್ತು ಮನುಷ್ಯರು ಪರಸ್ಪರ ಭಾವಿಸಿ ಯಥೇಚ್ಛವಾಗಿ ವೃದ್ಧಿಹೊಂದಲಿ ಎಂದನು.

ಆದರಿಂದ ಮನುಷ್ಯರು ಪರ್ಜನ್ಯಮಂತ್ರ, ಯಜ್ಞಯಾಗಗಳಿಂದ ದೇವತೆಗಳನ್ನು ತೃಪ್ತಿ ಪಡಿಸಬೇಕು. ಪರಮಾತ್ಮನು ಭೂಮಿಯಲ್ಲಿ ಸಸ್ಯಸಮೃದ್ಧಿಯನ್ನು ಕೊಡುತ್ತಾನೆ. ಪರಮಾತ್ಮನಿಗೆ ಪರ್ಜನ್ಯಾಯ ನಮಃ ಎಂದೂ ನಮಸ್ಕರಿಸುತ್ತೇವೆ.

24. ಪ್ರಬುದ್ಧಾಯ ನಮಃ

ಪ್ರಬುದ್ಧ - ಪೂರ್ಣ ಅರಳಿದವನು, ಪಾರಂಗತನು, ಚತುರನು,

ಬುದ್ಧ - ಎಚ್ಚತ್ತವನು, ಜಾಗೃತನು, ಗೌತಮ ಬುದ್ಧ,

ಪ್ರ - ಮುಂದೆ - ಬುದ್ಧ - ಜಾಗೃತನು,

ಪ್ರಬುದ್ಧಾ - ತಿಳಿವಳಿಕೆಯಲ್ಲಿ ಪೂರ್ಣ ಜಾಗೃತನು,

ಪರಮಾತ್ಮನು ಅತ್ಯಂತ ಜಾಗೃತನು ಮತ್ತು ಜ್ಞಾನಿ. ತಿಳಿದವನು ಇವನಿಗೆ ಸಮರು ಯಾರೂ ಇಲ್ಲ.

ಹೇಗೆಂದರೆ, ಇಂತಹ ವಿಚಿತ್ರ ಭೂಮಂಡಲ ಮತ್ತು ಬ್ರಹ್ಮಾಂಡವನ್ನು ಸೃಷ್ಟಿಸಿ, ನಡೆಸುತ್ತ, ಲಯ ಮಾಡುತ್ತಾ, ನಿರಂತರ ನಡೆಸುತ್ತಿರುವ, ಸೂತ್ರಧಾರನಾದ ಪರಮಾತ್ಮನು ಅತ್ಯಂತ ಪ್ರಬುದ್ಧನು. ಕೇವಲ ಸೂತ್ರಧಾರನಾಗಿರುತ್ತ ಸರ್ವಕ್ಕೂ ಕಾರಣನಾಗಿ ಒಳಗೆ ಹೋಗದೆ ನಡೆಸುತ್ತಾನೆ. ಇದಲ್ಲಿರುವ ಪ್ರಬುದ್ಧತೆ ಯಾರಿಗೂ ತಿಳಿಯುವುದಿಲ್ಲ. ತಿಳಿದರೆ ಅವನು ಅಪಾರ ಮಹಾಮಹಿಮ ಜ್ಞಾನಿಯಾಗಿರಬೇಕು. ಇಷ್ಟೊಂದು ಜ್ಞಾನವಿರುವುದರಿಂದ ಮತ್ತು ಯಾವ ಕ್ಷಣದಲ್ಲಿ, ಎಲ್ಲಿ, ಎಷ್ಟು ಜ್ಞಾನಬೇಕೋ ಅಷ್ಟನ್ನೆ ಉಪಯೋಗಿಸಿಸುವುದರಿಂದ ಇವನು ಪ್ರಬುದ್ಧನು. ಇವನಿಗೆ ಸಮರು ಯಾರೂ ಇಲ್ಲ.

25. ಪ್ರಧಾನಪುರುಷಾಯ ನಮಃ

ಪರಮಾತ್ಮನು ಸರ್ವವನ್ನು ನಡೆಸುವ ಸೂತ್ರಧಾರಿ,

ಪುರುಷರಲ್ಲಿ ಪುರುಷನು, ಅವರಿಗೆ ಮುಖ್ಯವಾದವನು, ಅದರಿಂದ ಇವನು ಪ್ರಧಾನಪುರುಷನು.

ಪರಮಾತ್ಮನು ಅಖಿಲಾಂಡ ಕೋಟಿ ಬ್ರಹ್ಮಾಂಡಗಳಿಗೆ ನಾಯಕನಾಗಿ ಅವುಗಳನ್ನು ಸೃಷ್ಟಿಸಿ ಜಗದ್ವ್ಯಾಪಾರ ಮಾಡಬೇಕೆಂದು ತಾನು ಇಚ್ಛಿಸಿದನು. (ಸೋಽಕಾಮಯತ ಪ್ರಜಾಃ ಸೃಜೇಯೇತಿ.) ನಂತರ ಸೃಷ್ಟಿಸಿದ ಜಗತ್ತಿನಲ್ಲಿ ತನ್ನದೇ ಆದ ತನ್ನನ್ನೇ ಪ್ರಕಟಿಸುವ ತನ್ನ ಅಂಶಗಳಿಂದ ವಿಭೂತಿಗಳಾಗಿ ವಿಭಾಗ ಮಾಡಿಕೊಂಡನು. ಮಹತ್ತು, ಪಂಚಮಹಾಭೂತಗಳು, ಜೀವಕೋಟಿಗಳು, ಬ್ರಹ್ಮಾದಿಗಳು, ಲೋಕಗಳು. ಇವುಗಳು ಪರಸ್ಪರ ಸಂಪರ್ಕ ಹೊಂದಿದಾಗ ಜೀವಕೋಟಿಗಳು ಕಾಲದ ದಾರಿಯಲ್ಲಿ ನಡೆಯಲು ಬೇಕಾದ ಅನ್ನಾದಿ ಆಹಾರಗಳು, ಜನ್ಮಗಳು, ಜೀವಿಗಳಿಗೆ ಬೇಕಾದ ದೇಹಗಳು, ಲೋಕಗಳು - ಎಲ್ಲವನ್ನು ಕಾಲ ಕಾಲಕ್ಕೆ ನಡೆಯುವಂತೆ ಮತ್ತು ಲಭಿಸುವಂತೆ ಮಾಡಿದನು. ಜಗದ್ವ್ಯಾಪಾರವು ನಿರಂತರ ನಡೆಯಲು ತನ್ನನ್ನೆ ಪುರುಷ, ಪ್ರಕೃತಿ, ಮಾಯೆ ಎಂಬುದಾಗಿ ವಿಭಾಗಿಸಿಕೊಂಡನು. ಪ್ರಜಾಸೃಷ್ಟಿಗಾಗಿ ಜೀವಿಗಳಿಗೆ (ತನ್ನ ಅಂಶರೂಪವಾದ ಆತ್ಮಗಳಿಗೆ) ಪ್ರಕೃತಿ, ಪುರುಷ ಎಂಬ ಲಿಂಗ ಭೇದವನ್ನು ಜಗತ್ತಿನಲ್ಲಿರುವವರೆಗೆ ನಿಯಮಿಸಿದನು. ಪುರುಷನು ಪ್ರಕೃತಿಯಲ್ಲಿ ಮಿಲನವಾಗಿ ಪ್ರಜಾಸೃಷ್ಟಿಯು ಪ್ರಾರಂಭವಾಯಿತು. ಈ ಪುರುಷಗಳಿಗೆಲ್ಲ ಉತ್ತಮವಾದ ಪುರುಷನು ತಾನೇ ಆಗಿ ಪುರುಷೋತ್ತಮನೆಂದು ಕರೆಸಿಕೊಂಡನು. ಅವನೇ ಸೂತ್ರಧಾರಿಪುರುಷ ಪ್ರಧಾನಪುರುಷ.

ಪುರುಷ ಸೂಕ್ತದಲ್ಲಿ ಈ ಪುರುಷನ ರೂಪವನ್ನು ವಿವರಿಸಿದೆ. ಪರಮಾತ್ಮನನ್ನು ಸಂಪೂರ್ಣವಾಗಿ ತಿಳಿಯಲಾಗದಿದ್ದರೂ, ಈ ಸೂಕ್ತಗಳು ಅವನ ರೂಪ,

ಸಾಕಾರವಾದ್ದು, ನಿರಾಕಾರವಾದ್ದು ಎಲ್ಲವನ್ನು ಋಷಿಗಳು ತಿಳಿದು ನಿರ್ಧರಿಸಿದಂತೆ ಹೇಳುತ್ತೇವೆ. ಇದರ ಕರ್ತೃ ಯಾರೆಂದು ಹೇಳಲು ಸಾಧ್ಯವಿಲ್ಲದಿದ್ದರೂ ಭಕ್ತನಿಗೆ, ಜೀವಕೋಟಿಗೆ ಪರಮಾತ್ಮನನ್ನು ಸೇರಿ ಈ ಸಂಸಾರಸಾಗರದಿಂದ ಬಿಡುಗಡೆ ಹೊಂದಲು ಸಾಧ್ಯವಾಗುತ್ತದೆ.

ಇದಕ್ಕೆ ದಾರಿ - ಭಗವಂತನನ್ನು ಕುರಿತು ನಿರಂತರ ಪೂಜೆ, ಭಜನೆ, ಧ್ಯಾನ, ಜಪಗಳನ್ನು ಮಾಡುವುದು, ನಿರಂತರ ಅವನ ಚಿಂತನ.

ಮಂತ್ರಪುಷ್ಪದಲ್ಲಿ ದೇಹದಲ್ಲಿ ಹೃದಯದಲ್ಲಿ ಆತ್ಮವು ಹೇಗೆ ಇರುತ್ತದೆ ಎಂಬುದು ಹೇಳಲ್ಪಟ್ಟಿದೆ, ಸಕಲ ವೇದ, ಉಪನಿಷತ್ತುಗಳು, ಶೃತಿ, ಸ್ಮೃತಿಗಳು ಭಗವಂತನ ಸ್ವರೂಪವನ್ನು ಅವನನ್ನು ಸೇರುವ ದಾರಿಯನ್ನು ಉತ್ತಮೋತ್ತಮ ಗುರಿಯನ್ನೂ ನಿರ್ದೇಶಿಸುತ್ತವೆ.

ಪರಮೋಚ್ಚಗುರಿಯೇ "ಭಗವಂತನಲ್ಲಿ ಐಕ್ಯವಾಗುವುದು. ಪ್ರಧಾನಪುರುಷನಲ್ಲಿ ಸಾರೂಪ್ಯ, ಸಾಲೋಕ್ಯ, ಸಾಮಿಪ್ಯ ಮತ್ತು ಸಾಯುಜ್ಯ ಸ್ಥಿತಿಯನ್ನು ಅಂದರೆ ಮತ್ತೆ ಭಗವಂತನಿಂದ ಬೇರ್ಪಡದ ಸ್ಥಿತಿಯನ್ನು ಹೊಂದುವುದು" - ಇದಕ್ಕೆ ಪ್ರಧಾನಪುರುಷನ ಕೃಪೆ ಮತ್ತು ನಮ್ಮ ಅನವರತ ಪ್ರಯತ್ನಗಳು ಬೇಕು, ಇದಕ್ಕೇನೇ ಪ್ರಧಾನಪುರುಷಾಯ ನಮಃ ಎಂದು ಪುನಃ ಪುನಃ ನಮಸ್ಕರಿಸುವುದು.

*ಪದ್ಮಗರ್ಭಾಯ ಪದ್ಮಾಯ ಪದ್ಮನಾಭಾಯ ಭಾಸಿನೇ |*
*ಪದ್ಮನೇತ್ರಾಯ ಪದ್ಮಾಯ ಪದ್ಮಾಯಾಃ ಪತಯೇ ನಮಃ ||69||*
*(426-432)*

26. ಪದ್ಮಗರ್ಭಾಯ ನಮಃ

ಪದ್ಮವನ್ನೇ ಗರ್ಭವಾಗಿ ಹೊಂದಿರುವವನು - ಮಹಾವಿಷ್ಣು ಅಥವಾ ಪದ್ಮದಂತೆ ಗರ್ಭವಿರುವವನು - ಮಹಾವಿಷ್ಣು.

ಪದ್ಮ - ಕಮಲದ ಹೂವು, ತಾವರೆಯ ಹೂವು, ಆನೆ

ಮಹಾವಿಷ್ಣುವು ತಾವರೆಯ ನಾಳದ ಮೂಲಕ ತನ್ನ ಗರ್ಭದಲ್ಲಿರುವ ಬ್ರಹ್ಮದೇವರು ಹೊರಬರುವಂತೆ ಮಾಡಿದನು, ಬ್ರಹ್ಮದೇರನ್ನು ಹೊಂದಿರುವ ಗರ್ಭವಾದ್ದರಿಂದ ಮತ್ತು ತಾವರೆಯ ನಾಳ ಮತ್ತು ತಾವರೆಯ ಹೂವುಗಳ ಮೂಲಕ ಬ್ರಹ್ಮದೇವರು ಹೊರಬಂದಿದ್ದರಿಂದ ಗರ್ಭವನ್ನು ಪದ್ಮಗರ್ಭ ಎಂದು ಹೇಳಿದೆ. ಈ ಪದ್ಮಗರ್ಭವನ್ನು ಹೊಂದಿರುವ ಮಹಾವಿಷ್ಣುವಿಗೆ ಪದ್ಮಗರ್ಭ ಎಂದು ಹೆಸರಾಯಿತು. ಅದರಿಂದ ಪದ್ಮಗರ್ಭಾಯ ನಮಃ ಎಂದು ವಿಷ್ಣುವಿಗೆ ನಮಸ್ಕರಿಸುತ್ತೇವೆ.

27. ಪದ್ಮಾಯ ನಮಃ

ಪದ್ಮ - ಕಮಲ, ತಾವರೆಗಳು ಮಹಾವಿಷ್ಣುವಿನ ನಾಭಿಯಿಂದ ಬಂದುದರಿಂದ,

ಬ್ರಹ್ಮದೇವರಿಗೆ ಜನನ ಸ್ಥಾನವಾದ್ದರಿಂದ, ಬ್ರಹ್ಮರೂ ಪರಮಾತ್ಮನ ಸ್ವರೂಪವಾದ್ದರಿಂದ, ಪರಮಾತ್ಮನು ಪದ್ಮದ ಭಾವಹೊಂದಿ ತಾನೇ ತಾನಾಗಿ ಪದ್ಮವಾಗಿದ್ದಾನೆ. ಅದರಿಂದ ಅವನು ಪದ್ಮವೇ - ಸಾಕ್ಷಾತ್ ಮಹಾವಿಷ್ಣು. ಪದ್ಮಾಯ ನಮಃ ಎಂದು ವಿಷ್ಣುವಿಗೇ ಹೇಳುತ್ತೇವೆ.

28. ಪದ್ಮನಾಭಾಯ ನಮಃ

ಯಾವನ ನಾಭಿಯಿಂದ ಪದ್ಮವೂ ಹೊರ ಹೊಮ್ಮಿತೋ, ಅವನು ಪದ್ಮನಾಭ - ಅವನೇ ಮಹಾವಿಷ್ಣು.

ಮುಂದೆ ಬ್ರಹ್ಮದೇವರಿಂದ ಸೃಷ್ಟಿಯಾಗಬೇಕಾಯಿತು. ಮಹಾವಿಷ್ಣುವು ಪ್ರಕೃತಿ ಮತ್ತು ಮಾಯೆಯೆಂದು ವಿಭಾಗವಾಗುವ ಮೊದಲು ತನ್ನ ನಾಭಿಯಿಂದ ಕಮಲವನ್ನು ಹೊರ ಹೊಮ್ಮಿಸಿ ಅದರಲ್ಲಿ ಬ್ರಹ್ಮದೇವರನ್ನು ಪ್ರಕಟಿಸಿದನು. ಆದರಿಂದ ಮಹಾವಿಷ್ಣುವಿಗೆ ಪದ್ಮ ಮತು ನಾಭಿಗಳ ಕಾರಣದಿಂದ ಪದ್ಮನಾಭ ಎಂದು ಹೆಸರಾಯಿತು.

29. ಭಾಸಿನೇ ನಮಃ

ಭಾಸ್ - ಎಂದರೆ ಕಾಂತಿ, ತೇಜಸ್ಸು, ಪ್ರಕಾಶ, ವೈಭವ, ಶೋಭೇ, ಹಾಗೆ. ಪರಮಾತ್ಮನಲ್ಲಿ ಅಪೂರ್ವ ತೇಜಸ್ಸಿದೆ. ಈ ಎಲ್ಲವೂ ಪರಮಾತ್ಮನಲ್ಲಿ ಅಡಕವಾಗಿವೆ. ಇದನ್ನು ಉಳ್ಳವನು - ಭಾಸವುಳ್ಳವನು - ಭಾಸಿನೇ ನಮಃ.

ಪ್ರತಿಯೊಂದು ದೇಹದಲ್ಲಿಯೂ ಆತ್ಮವು ಮನೆ ಮಾಡಿಕೊಂಡಿದೆ. ಅಥವಾ ಪ್ರತಿ ಆತ್ಮವೂ ದೇಹವನ್ನು ಹೊಂದಿ ಅದರಲ್ಲಿ ಪ್ರಕಾಶವನ್ನು ಬೆಳಗುತ್ತದೆ. ಅದರಿಂದ ಭಾಸಿನೇ ನಮಃ ಎಂದರೆ ಆತ್ಮಕ್ಕೆ ನಮಸ್ಕಾರ ಎಂದಾಯಿತು.

ಪರಮೋಚ್ಚವಾದ, ಅಸಮನಾದವನು ಪರಮಾತ್ಮನು. ಅವನೇ ಪರಮ ಪವಿತ್ರವಾದ ನಿಜಸ್ಥಿತಿಯಲ್ಲಿ "ಭಾಸಿನೇ ನಮಃ" ಎಂದು ನಮಸ್ಕರಿಸಲ್ಪಡುತ್ತಾನೆ.

30. ಪದ್ಮನೇತ್ರಾಯ ನಮಃ

ಪ್ರಪಂಚದಲ್ಲಿ ಅತಿ ಸುಂದವಾದದು ಪುಷ್ಪಗಳು,

ಪುಷ್ಪಗಳಲ್ಲಿ ಅತಿ ಮನೋಹರವಾದುದು ಕಮಲದ ಹೂ, ತಾವರೆ, ಪದ್ಮಗಳು.

ದೇಹದಲ್ಲಿ ಅತಿ ಮುಖ್ಯವಾದದು ಶಿರ, ಶಿರದಲ್ಲಿಯೇ ಕಿವಿಗಳು 2, ಕಣ್ಣುಗಳು 2, ನಾಸಿಕ 1(ಎರಡು ಹೊಳ್ಳೆಗಳು), ಬಾಯಿ 1= ಆರು ಮತ್ತು ಒಂದು ದ್ವಾರಗಳಿವೆ. ನವದ್ವಾರವಿರುವ ಈ ದೇಹವೆಂಬ ಪುರದಲ್ಲಿ ಪುರುಷನೆಂಬ ಆತ್ಮನು ತನಗಿಚ್ಛೆ ಬಂದಷ್ಟು ಕಾಲ ವಾಸಿಸುತ್ತಾನೆ. ಎಂದ ಮೇಲೆ ಶರೀರಕ್ಕೆ ಕಲಶಪ್ರಾಯವಾದುದು ಶಿರ, ಅದರಲ್ಲಿ ಪ್ರಪಂಚ ವ್ಯಾಪಾರ ಮಾಡಲು, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಷಡ್ವರ್ಗವನ್ನು

ಅಂತಃಮುಖಮಾಡಿ ಭಗವಂತನ ಕಡೆಗೆ ತಿರುಗಿಸಿದಾಗ ಸದಾನಂದವು ದೊರಕುತ್ತದೆ. ಇತರ ವಸ್ತುಗಳನ್ನು ಗ್ರಹಿಸಬೇಕಾದರೆ, ಕಣ್ಣು, ಕಿವಿ, ಮೂಗು, ಬಾಯಿಗಳ ಅವಶ್ಯಕ. ಮೊದಲು ಎಲ್ಲರೂ ಕೇಳುವುದು, ದೃಷ್ಟಿಶಕ್ತಿ, ಶ್ರವಣ ಶಕ್ತಿ, ಕಥನಶಕ್ತಿಯನ್ನು, ಅದರಲ್ಲಿ ದೃಷ್ಟಿಶಕ್ತಿಯನ್ನು ಕೊಡುವ ನಯನಗಳು ಬಹು ಬೇಗ ಆಕರ್ಶಿಸುತ್ತವೆ. ಪರಮಾತ್ಮನ ಸ್ವರೂಪಗಳಾದ ಇತರ ಜೀವಿಗಳನ್ನು ನಮ್ಮ ನಯನದಿಂದ ನೋಡಿ ಸಂತೋಷಿಸುತ್ತೇವೆ. ಇದಕ್ಕೆ ಪ್ರತಿಯಾಗಿ ಅವರ ದೃಷ್ಟಿಯು ನಮ್ಮ ದೃಷ್ಟಿಗೆ ಏಕಕಾಲದಲ್ಲಿ ಸ್ಪಂದಿಸಿದರೆ ಮತ್ತೂ ಸಂತೋಷವಾಗುತ್ತದೆ. ಹೀಗೆ ಪರಮಾತ್ಮನ ರೂಪವನ್ನು ನೋಡಿದಾಗ ಅವನು ತನ್ನ ನಯನಗಳಿಂದ ನಮ್ಮ ಮೇಲೆ ಕೃಪಾದೃಷ್ಟಿಯನ್ನು ವರ್ಷಿಸುತ್ತಾನೆ.

ಎದುರಾಗಿ ಅಲ್ಲದಿದ್ದರೂ ಕಣ್ಣುಗಳ ಕೊನೆಯಿಂದ ಬರುವ ಕೃಪಾದೃಷ್ಟಿಯೆ ಪರಮ ಸಂತೋಷವನ್ನು ಕೊಡುತ್ತವೆ.

ಪರಮಾತ್ಮನ ನಯನಗಳು ಮನೋಹರವಾದವುಗಳು. ಪದ್ಮರೂಪದಲ್ಲಿರುವ ನಯನಗಳು ಬಹಳ ಆಪ್ಯಾಮಾನವಾಗಿರುತ್ತವೆ. ಈ ನಯನಗಳಿಗೆ ಪದ್ಮನೇತ್ರಗಳೆಂದೂ ಮತ್ತು ಅದನ್ನು ಹೊಂದಿರುವ ಪರಮಾತ್ಮನಿಗೆ ಪದ್ಮನೇತ್ರನೆಂದೂ ಅವನನ್ನು ಪದ್ಮನೇತ್ರಾಯ ನಮಃ ಎಂದೂ ನಮಸ್ಕರಿಸುತ್ತೇವೆ.

ಕಾಲದ ಗಣನೆಯಲ್ಲಿ ಪದ್ಮ ಎಂದರೆ ಬಹುದೊಡ್ಡದು, ಊಹಿಸಲಸಾಧ್ಯವಾದುದು, ಅಂತಹ ದೊಡ್ಡದಾದ, ವಿಶಾಲವಾದ, ತೀಕ್ಷ್ಣವಾದ, ಸೂಕ್ಷ್ಮವಾದ ಕಣ್ಣುಗಳು ಉಳ್ಳವನು ಮತ್ತು ದೃಷ್ಟಿಯುಳ್ಳವನು.

ಎಂದರೆ ಭಗವಂತನ ದೃಷ್ಟಿಪಥದಿಂದ ತಪ್ಪಿಸಿಕೊಳ್ಳಲು ಸಾಧ್ಯವಾದ್ದು ಯಾವುದೂ ಇಲ್ಲ. ಅಂತಹ ನೇತ್ರವುಳ್ಳವನು - ಪದ್ಮನೇತ್ರನು - ಪದ್ಮನೇತ್ರಾಯ ನಮಃ.

### 31. ಪದ್ಮಾಯ ನಮಃ

ಭಗವಂತನು ಪದ್ಮವೇ, ಕಮಲದಹೂವೇ ಪರಮಾತ್ಮ. ಅದು ಪರಮ ಸೃಷ್ಟಿಕರ್ತನಾದ ಬ್ರಹ್ಮದೇವರ ಜನ್ಮಸ್ಥಾನ. ಮಹಾಲಕ್ಷ್ಮಿಯ ಪಾದಗಳನ್ನು ಸೇವಿಸುತ್ತಿರುವ ಪರಮ ಪವಿತ್ರವಾದ ಪುಷ್ಪ, ಪದ್ಮದಲ್ಲಿಯೇ ಬ್ರಹ್ಮನನ್ನು ಮತ್ತು ಮಹಾಲಕ್ಷ್ಮಿಯನ್ನು ಅಡಗಿಸಿಕೊಂಡಿರುತ್ತಾನೆ. ಅವರಿಗೆ ಆಧಾರಭೂತನಾಗಿದ್ದಾನೆ. ಪದ್ಮದ ಪುಷ್ಪವನ್ನೇ ಶ್ರೀಮನ್ನಾರಾಯಣನು ಹಿಡಿದುಕೊಂಡು ಶಾಂತಿಯನ್ನು ಮತ್ತು ಸಾತ್ವಿಕತೆಯನ್ನು ಪ್ರಕಟಿಸುತ್ತಾ ಇರುತ್ತಾನೆ. ಇಂತಹವನಿಗೆ - ಪದ್ಮಾಯ ನಮಃ ಎಂದು ವಂದಿಸುವುದು ಬಹಳ ಶ್ರೇಷ್ಠವಾದುದು.

432. ಪದ್ಮಾಯಾಃ ಪತಯೇ ನಮಃ

ಮಹಾಲಕ್ಷ್ಮಿಯು ಕ್ಷೀರಸಾಗರ ಕನ್ಯೆ. ಇವಳಿಗೆ ಪದ್ಮ ಎಂದು ಹೆಸರು. ಇವಳು ಪದ್ಮದಲ್ಲಿಯೇ ನಿಂತಿರುವವಳು. ಪದ್ಮಪುಷ್ಪವು ಇವಳನ್ನು ಸೇವಿಸುತ್ತಿರುವುದರಿಂದ ಪದ್ಮ ಎಂದು ಹೆಸರು ಬಂತು. ಇವಳ ಪತಿಯಾದ್ದರಿಂದ ಪದ್ಮಾಯಾಃಪತಯೇ ನಮಃ ಎಂದಾಯಿತು. ಮಹಾವಿಷ್ಣುವಿಗೆ ಪದ್ಮಾಯಾಃ ಪತಯೇ ನಮಃ ಎಂದು ನಮಸ್ಕರಿಸುತ್ತೇವೆ.

*ಪದ್ಮೋದ್ಭವಾಯ ಪೂತಾಯ ಪದ್ಮಕಲ್ಪೋದ್ಭವಾಯ ಚ ।*
*ನಮೋ ಹೃತ್ಪದ್ಮವಾಸಾಯ ಭೂಪದ್ಮೋದ್ಧಾರಣಾಯ ಚ ॥70॥*

*(433-438)*

433. ಪದ್ಮೋದ್ಭವಾಯ ನಮಃ

ಪದ್ಮ - ಕಮಲದಲ್ಲಿ, ಉದ್ಭವ - ಹುಟ್ಟಿದವನು - ಬ್ರಹ್ಮ.

ಸೃಷ್ಟಿಕರ್ತನಾದ ಬ್ರಹ್ಮನು ಪದ್ಮದಲ್ಲಿ ಉದ್ಭವನಾದವನು. ಬ್ರಹ್ಮನು ಪರಮಾತ್ಮನ ಒಂದು ರೂಪ. ಪರಬ್ರಹ್ಮನಾದ ಶ್ರೀಮನ್ನಾರಾಯಣನು ತನ್ನ ಇಚ್ಛೆಯಂತೆ ಬ್ರಹ್ಮಾಂಡವನ್ನು ಸೃಷ್ಟಿಸಿ ತನ್ನಲ್ಲಿ ತಾನೇ ಸಂತೋಷಪಡಲು ತನ್ನನ್ನೆ ತಾನು ಬ್ರಹ್ಮ, ವಿಷ್ಣು, ಮಹೇಶ್ವರರಾಗಿ ವಿಭಾಗಿಸಿಕೊಂಡನು. ಎಂದಮೇಲೆ ಈ ಮೂರು ರೂಪವೂ ಕಾರ್ಯಾರ್ಥವಾಗಿದೆಯಾದರೂ ಈ ಅಂತರದಲ್ಲಿ ಒಂದೇ ಆದ ಪರಬ್ರಹ್ಮಮೂರ್ತಿಯು. ಸಕಲಕ್ಕೂ ಸೂತ್ರಧಾರನಾದ ಮಹಾವಿಷ್ಣುವೇ, ಅದರಿಂದ ನಾನಾ ಕಾರಣಗಳುಳ್ಳ ಆಯಾ ನಾಮದಿಂದ ನಮಿಸುತ್ತೇವೆ. - ಪದ್ಮೋದ್ಭವಾಯ ನಮಃ.

434. ಪೂತಾಯ ನಮಃ

ಪೂತ - ಪವಿತ್ರನಾದವನು, ಸ್ವಚ್ಛವಾದವನು.

ಯಾವುದೇ ದೃಷ್ಟಿಯಲ್ಲಿ ವಿಮರ್ಶೆಮಾಡಿದರೂ ಜೀವಕೋಟಿಯ ಪ್ರತಿಯೊಂದು ಆತ್ಮವೂ ಪರಮ ಪವಿತ್ರವಾದುದು, ನಿರ್ಮಲವಾದುದು, ಕಲಂಕರಹಿತವಾದುದು, ಗ್ರಹಿಸಲು, ನಿರ್ಣಯಿಸಲು ಅಸಾಧ್ಯವಾದು. ಪಂಚಭೂತಗಳಿಂದಲೂ, ಪಂಚಜ್ಞಾನ ಮತ್ತು ಪಂಚಕರ್ಮೇಂದ್ರಿಯಗಳಿಂದಲೂ ಗ್ರಹಿಸಲು ಮತ್ತು ಅದರ ಸ್ವರೂಪವೂ ಹೀಗೆಯೆ ಇದೆ ಎಂದು ನಿರ್ಣಯಿಸಲು ಸಾಧ್ಯವಾಗದುದು. ಸಕಲ ಜೀವಿಗಳ ಆತ್ಮವೇ ಈ ರೀತಿಯಾಗಿರಬೇಕಾದರೆ ಪರಮೋಚ್ಚನಾದ ಪರಮಉತ್ತಮನಾದ "ಪರಮಾ[illegible] ಹೇಗಿರಬೇಕು ಎಂಬುದು ಊಹಾತೀತ.

ಸಂಸಾರ ಸಾಗರದ ಅಂಟುಗಳು ಇರುವುದೆಲ್ಲ ಆತ್ಮಕ್ಕೆ. ಪವಿತ್ರವಾದ ಆತ್ಮವು ಪರಮಾತ್ಮನಿಂದ ಬಂದು ಸಂಸಾರಸಾಗರದಲ್ಲಿ ಮುಳುಗಿ

ಸಂಪರ್ಕಹೊಂದಿ ಸಂಸ್ಕಾರವನ್ನು ಕ್ಷಣ ಕ್ಷಣಕ್ಕೂ ಧೂಳಿನೋಪಾದಿಯಲ್ಲಿ ಅಂಟಿಸಿಕೊಳ್ಳುತ್ತದೆ. ಈ ಸಂಸ್ಕಾರವೇ ಇಂದ್ರಿಯ, ಮನಸ್ಸು, ಬುದ್ಧಿ, ಅಹಂಕಾರ ಚಿತ್ತರೂಪಗಳೊಡನೆ ಆತ್ಮವನ್ನು ಸುತ್ತಿಕೊಂಡು ಆತ್ಮವು ಬಿಡುಗಡೆ ಹೊಂದದಂತೆ ಮಾಡುತ್ತದೆ. ಪರಮಾತ್ಮನ ದಿವ್ಯಕೃಪೆಯ ಫಲವಾಗಿ ಯಾವಾಗಲೋ, ಯಾವುದೋ ಸನ್ನಿವೇಶದಲ್ಲಿ ಆತ್ಮವು ಇವುಗಳಿಂದ ಬಿಡಿಸಿಕೊಂಡು ಪರಮಾತ್ಮನ ಸಾನ್ನಿಧ್ಯವನ್ನು ಸೇರುತ್ತದೆ.

ಪರಮಾತ್ಮನೂ ಆತ್ಮವೂ ಎರಡೂ ಒಂದೇ. ಪರಮಾತ್ಮನು ತನ್ನ ಕ್ರಿಯೆಗಳಿಂದ ಹೊರಗೆ ಇರುತ್ತಾನೆ. ಆತ್ಮವು ಮೋಹದಲ್ಲಿ ಸೇರಿ, ಮಾಯೆಯ ಪ್ರಭಾವಕ್ಕೆ ಒಳಗಾಗುತ್ತದೆ. ಇದೇ ವ್ಯತ್ಯಾಸ. ಇಷ್ಟೆಲ್ಲ ಮಾಡಿದರೂ, ಪರಮಾತ್ಮನು ಪರಮ ಪವಿತ್ರನಾಗಿಯೇ ಉಳಿಯುತ್ತಾನೆ. ಅದರಿಂದ ಇವನು ಪೂತನು - ಪರಮ ಪವಿತ್ರನು - ಪೂತಾಯ ನಮಃ ಎನ್ನುವುದು ಇವನಿಗೇನೇ - ಆತ್ಮಕ್ಕೂ ಪೂತನು ಎನ್ನುವುದು ಸಮಂಜಸವೇ. ಆದರೆ ಪರಮಾತ್ಮನಿಗೆ "ಪೂತ" ಎನ್ನುವುದು ಮತ್ತೂ ಸಮಂಜಸ.

35/ ಪದ್ಮಕಲ್ಪೋದ್ಭವಾಯ ನಮಃ

ಬ್ರಹ್ಮದೇವರು ಸೃಷ್ಟಿಕರ್ತ, ಬ್ರಹ್ಮದೇವರ ಒಂದು ಹಗಲು ಮತ್ತು ಒಂದು ರಾತ್ರಿಗೆ ಬ್ರಹ್ಮನ ದಿನವೆಂದು ನಿರ್ಣಯವಿದೆ. ಹಗಲಿನಲ್ಲಿ ಸೃಷ್ಟಿಯೂ ರಾತ್ರಿಯಲ್ಲಿ ಬ್ರಹ್ಮನ ನಿದ್ರೆಯೂ ನಡೆಯುತ್ತದೆ. ಒಂದು ದಿನಕ್ಕೆ ಒಂದು ಕಲ್ಪ ಎಂದು ಹೆಸರು.. ಈಗ ನಡೆಯುತ್ತಿರುವುದು ಶ್ವೇತವರಾಹ ಕಲ್ಪ. ಪದ್ಮಕಲ್ಪವೂ ಒಂದು ಬ್ರಹ್ಮನ ಕಲ್ಪ. ಈ ಪದ್ಮಕಲ್ಪದಲ್ಲಿ ಉದ್ಭವನಾದ ಬ್ರಹ್ಮನಿಗೆ ಈ ಹೆಸರು. ಇವನಿಗೆ ನಮಸ್ಕರಿಸುವುದರಿಂದ ಪದ್ಮಕಲ್ಪೋದ್ಭವಾಯ ನಮಃ ಎಂದು ಹೇಳಬಹುದು.

ಅಥವಾ,

ಪ್ರತಿಯೊಂದು ಕಲ್ಪದಲ್ಲಿಯೂ ಶ್ರೀಮನ್ನಾರಾಯಣನು ವಟಪತ್ರಶಾಯಿಯಾಗಿರುವಾಗ ಕಲ್ಪಾಂತವಾದಾಗ, ಅವನ ನಾಭೀಕಮಲದಲ್ಲಿ ಬಂದ ಕಮಲದ ನಾಳದ ಮೂಲಕ ಬರುವ ಪದ್ಮದಿಂದ ಉದ್ಭವನಾಗುವುದರಿಂದ ಬ್ರಹ್ಮದೇವರಿಗೆ ಈ ಹೆಸರು. ಬ್ರಹ್ಮನು ಪದ್ಮಕಲ್ಪೋದ್ಭವನು. ಅಥವಾ,

ಬ್ರಹ್ಮನೂ ಪರಮಾತ್ಮನೇ ಆದ್ದರಿಂದ ಶ್ರೀಮನ್ನಾರಾಯಣನು ಸಹ ಪದ್ಮಕಲ್ಪೋದ್ಭವನು.

ಅಥವಾ ಎಲ್ಲವೂ ಸಹ, ಎಲ್ಲೆಲ್ಲಿ ನೋಡಿದರೂ, ಎಲ್ಲೆಲ್ಲಿಯೂ ಪರಮಾತ್ಮನ ವಿಭೂತಿಗಳೇ ಆದ್ದರಿಂದ ಪರಮಾತ್ಮನೇ - ಪದ್ಮಕಲ್ಪೋದ್ಭವನು.

36. ಹೃತ್ಪದ್ಮವಾಸಾಯ ನಮಃ

ಹೃದಯವೇ ಆತ್ಮದ ವಾಸಸ್ಥಾನ, ದೈಹಿಕ ಹೃದಯ ಮತ್ತು ಆಧ್ಯಾತ್ಮಿಕ ಹೃದಯ ಎಂದು ಎರಡು ಹೃದಯಗಳು ಪ್ರತಿಯೊಂದು ದೇಹದಲ್ಲಿಯೂ ಇರುತ್ತವೆ. ಇದು ಯಾವ ಯೋನಿಯ ಯಾವ ದೇಹಕ್ಕೂ ವ್ಯತ್ಯಾಸವಿಲ್ಲ. ದೇಹದಲ್ಲಿರುವ ದೇಹಿಗೆ ಉತ್ತಮವಾದ ವಾಸಸ್ಥಾನವನ್ನು ಸಾಕ್ಷಾತ್ ಪರಮಾತ್ಮನೇ ಕಲ್ಪಿಸಿರುತ್ತಾನೆ. ಆಧ್ಯಾತ್ಮಿಕ ಹೃದಯದಲ್ಲಿ ಆತ್ಮವು ವಾಸವಾಗಿರುವ ವೈಶಿಷ್ಟ್ಯವನ್ನು ಬಹಳ ಕೂಲಂಕುಶವಾಗಿ ಮಂತ್ರಪುಷ್ಪದಲ್ಲಿ ಹೇಳಿದೆ. ಇದನ್ನು ಮಹಾನಾರಾಯಣೋಪನಿಷತ್ತಿನಲ್ಲಿ 13ನೇ ಅನುವಾಕದಲ್ಲಿ 12 ಶ್ಲೋಕಗಳಲ್ಲಿ ವಿಶಾಲವಾಗಿ ವಿವರಿಸಿಲಾಗಿದೆ. ಹೃದಯ ಪದ್ಮವನ್ನು ಪರಮಾತ್ಮನ ವಾಸಸ್ಥಾನವೆಂದೂ ವಿವರಿಸಿದೆ.

ಆತ್ಮದ ವಾಸಸ್ಥಾನ ಹೃದಯ ಪದ್ಮ.

ಆತ್ಮನೇ ಪರಮಾತ್ಮ ಅಥವಾ ಪರಮಾತ್ಮನನ್ನು ಆಹ್ವಾನಿಸಿ ಅದರಲ್ಲಿ ಹೃದಯ ಪದ್ಮದಲ್ಲಿ ಸಿಂಹಾಸನದಲ್ಲಿ ಅಲಂಕರಿಸಿ, ವಿರಾಜಿಸಲು ಪ್ರಾರ್ಥಿಸಿ ಧ್ಯಾನಮಾಡುತ್ತೇವೆ. ಎಲ್ಲಿಯವರೆಗೆ ಮನುಷ್ಯನು ಪ್ರಾಪಂಚಿಕ ವಿಶಯದಲ್ಲಿ ಮನಸ್ಸಿಡುತ್ತಾನೆಯೋ ಅಲ್ಲಿಯವರೆಗೆ ಅವನ ಹೃದಯವು ಕೆಳಮುಖವಾಗಿರುವ ತಾವರೆಯ ಮೊಗ್ಗಿನಂತೆ (ರಾತ್ರಿಯಲ್ಲಿರುವ ಮೊಗ್ಗಿನ ಹಾಗೆ) ಇರುತ್ತದೆ. ಯಾವಾಗ ಅವನು ಪರಮಾತ್ಮನ ವಿಚಾರದಲ್ಲಿ ಮಗ್ನನಾಗುತ್ತಾನೆಯೋ ಮತ್ತು ಪ್ರಾಪಂಚಿಕ ವಿಶಯ ಸುಖಗಳಿಂದ ದೂರನಾಗುವನೋ ಆಗ ಅವನ ಮನಸ್ಸು ಮತ್ತು ಹೃದಯವು ಪರಿವರ್ತನೆಯಾಗುತ್ತದೆ (ತಾವರೆಯು) ಹೃದಯ ಕಮಲವು ಮೇಲ್ಮುಖವಾಗಿ ಬೆಳಕನ್ನು ಪಡೆಯಲು ಮತ್ತು ಸೂರ್ಯನಿಂದ ಬರುವ ತೇಜಸ್ಸನ್ನು ತೆಗೆದುಕೊಳ್ಳಲು ಅನುವಾಗುತ್ತದೆ.

*"ಅನಂತಮವ್ಯಯಂ ಕವಿಗ್‌ಂ ಸಮುದ್ರೇಽನ್ತಂ ವಿಶ್ವಶಂಭುವಮ್ ।*
*ಪದ್ಮಕೋಶಪ್ರತೀಕಾಶಗ್‌ಂ ಹೃದಯಂ ಚಾಪ್ಯಧೋಮುಖಮ್ ॥6॥"*

ನಾರಾಯಣನು ಎಲ್ಲದರಲ್ಲಿಯೂ ವ್ಯಾಪಕನಾಗಿರುತ್ತಾನೆ. ಸಕಲ ದೇಹದಲ್ಲಿರುವ ಹೃದಯಾಕಾಶದಲ್ಲಿ ಹರಡಿಕೊಂಡಿರುತ್ತಾನೆ.

ಹೀಗೆ ನಾರಾಯಣನ ವಾಸಸ್ಥಾನವನ್ನು ನಮ್ಮ ಹೃದಯದಲ್ಲಿ ನಿರ್ದೇಶಿಸಿ ಕೊನೆಯಲ್ಲಿ ನಾರಾಯಣನೇ ಸರ್ವರೂಪದವನೆಂದೂ, ಪರಬ್ರಹ್ಮನೇ ಸರ್ವೋತ್ತಮನೆಂದು ಈ ಸೂಕ್ತದಲ್ಲಿ ತಿಳಿಸುತ್ತದೆ.

*...ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ ।*
*ಸ ಬ್ರಹ್ಮ ಸ ಶಿವಃ (ಸ ಹರಿಃ) ಸೇಂದ್ರಃ ಸೋಽಕ್ಷರಃ ಪರಮಃ ಸ್ವರಾಟ್*
*॥12॥*

ಇದರಿಂದ ತಿಳಿಯುವ ಸಾರಾಂಶವೆಂದರೆ -

ಪರಮಾತ್ಮನೇ ನಾರಾಯಣ, ಸಕಲ ಜೀವಿಗಳ ಉದ್ಧಾರಕ್ಕಾಗಿ ಅವನು ಜೀವಿಗಳ ಹೃದಯ ಕಮಲದಲ್ಲಿ ಚಿಕ್ಕ ಸ್ವರೂಪನಾಗಿ ನಿಂತಿರುತ್ತಾನೆ, ಅವನೇ ಸೃಷ್ಟಿಕರ್ತ, ಸ್ಥಿತಿಕರ್ತ, ಲಯಕರ್ತ, ಅವನೇ ವಿರಾಟ್, ಸ್ವರಾಟ್, ಪರಮ ಸ್ವರಾಟ್. ಅವನು ತನ್ನ ಪ್ರಕಾಶದಿಂದ ಹೊರಹೊಮ್ಮುತ್ತಾನೆ. ಸಕಲ ಸಗುಣರೂಪದ ದೇವ ದೇವತೆಗಳು, ನಿರ್ಗುಣರೂಪದ ದೇವ ದೇವತೆಗಳು, ಇವುಗಳಿಂದ ನೇತಿ ನೇತಿಯಾದ ದೈವಗಳು - ಎಲ್ಲರೂ ನಾರಾಯಣನಲ್ಲಿ ಲೀನವಾಗುತ್ತಾರೆ. ಈ ರೀತಿ ಭಾವಿಸಿ ಧ್ಯಾನಿಸುವವರು ಸಂಸಾರ ಸಾಗರದಿಂದ ಬಿಡುಗಡೆ ಹೊಂದುತ್ತಾರೆ. ಅದರಿಂದಲೇ ಅವನಿಗೆ ''ಹೃತ್ಪದ್ಮವಾಸಾಯ ನಮಃ'' ಎಂದು ನಮಸ್ಕರಿಸುತ್ತೇವೆ.

ಸಾಕ್ಷಾತ್ ಬ್ರಹ್ಮದೇವರೇ ಈ ರೀತಿ ಸಹಸ್ರನಾಮದಲ್ಲಿ ಸ್ಮರಿಸಿರುವುದರಿಂದ ಈ ನಾಮಕ್ಕೆ ಅತ್ಯಂತ ವೈಶಿಷ್ಟ್ಯತೆ ಬರುತ್ತದೆ.

37. ಭೂಪದ್ಮೋದ್ಧಾರಣಾಯ ನಮಃ

ಭೂ - ಪದ್ಮ - ಉತ್ ಧಾರಣಾಯ ನಮಃ

ಭೂ - ಭೂಮಂಡಲವು, ಪದ್ಮ - ಕಮಲ ಸ್ವರೂಪವಾದ್ದು,

ಉತ್ - ಮೇಲೆ, ಧಾರಣಾಯ - ಧರಿಸಿದವನಿಗೆ, ನಮಃ - ನಮಸ್ಕಾರಗಳು.

ಭೂದೇವಿಯನ್ನು ಹಿರಣ್ಯಾಕ್ಷನು ತೆಗೆದುಕೊಂಡು ಪಾತಾಳಲೋಕದಲ್ಲಿ ಸಮುದ್ರದ ಒಳಗೆ ಬಚ್ಚಿಟ್ಟನು. ಶ್ರೀಹರಿಯು ವರಾಹ ರೂಪದಲ್ಲಿ ಅವತರಿಸಿ ಸಮುದ್ರದಲ್ಲಿ ಹಾರಿ ಪಾತಾಳದ ತನಕ ಹೋಗಿ ಭೂದೇವಿಯನ್ನು ತನ್ನ ಸರ್ವಶಕ್ತಿಯುತವಾದ ಕೋರೆದಾಡೆಯ ಮೇಲೆ ಇಟ್ಟು ಸಮುದ್ರದ ಆಚೆಗೆ ಮೇಲೆ ಬಂದನು. ಇಷ್ಟು ಕ್ರಿಯೆಯನ್ನು ಈ ಒಂದು ನಾಮದಲ್ಲಿ ಅಡಗಿಸಿದೆ. ಈ ಕಾರಣಕ್ಕಾಗಿ ಪರಮಾತ್ಮನನ್ನು ಭೂಪದ್ಮೋದ್ಧಾರಣಾಯ ನಮಃ ಎಂದಿದೆ.

*ಶಬ್ದಬ್ರಹ್ಮಸ್ವರೂಪಾಯ ಬ್ರಹ್ಮರೂಪಧರಾಯ ಚ ।*
*ಬ್ರಹ್ಮಣೇ ಬ್ರಹ್ಮರೂಪಾಯ ಬ್ರಹ್ಮನೇತ್ರೇ ನಮೋ ನಮಃ ॥71॥*
*(438 - 442)*

38. ಶಬ್ದಬ್ರಹ್ಮಸ್ವರೂಪಾಯ ನಮಃ

ಆಕಾಶ ತತ್ವದಿಂದ ಶಬ್ದವು ಉತ್ಪನ್ನವಾಗುತ್ತದೆ.

ಆಕಾಶವು ಮೊದಲು ಸೃಷ್ಟಿಯಾಯಿತು, ನಂತರ ಕ್ರಮವಾಗಿ ವಾಯು, ಅಗ್ನಿ, ಆಪಃ, ಪೃಥಿವಿಗಳು ಉತ್ಪನ್ನವಾದವು. ಲಯವಾಗುವ ಸಮಯದಲ್ಲಿ ಭೂಮಿಯು ನೀರಿನಲ್ಲಿಯೂ, ನೀರು ಅಗ್ನಿಯಲ್ಲಿಯೂ, ಅಗ್ನಿಯು

ವಾಯುವಿನಲ್ಲಿಯೂ, ವಾಯುವು ಆಕಾಶದಲ್ಲಿಯೂ ಲೀನವಾಗುತ್ತವೆ. ಇದೇ ರೀತಿ ಆಕಾಶದಿಂದ ಶಬ್ದವು ಅಧಿಭೂತವಾಗುತ್ತದೆ.

| ಮಹಾಭೂತಗಳು | ಅಧ್ಯಾತ್ಮ ಇಂದ್ರಿಯಗಳು | ಅಧಿಭೂತಗಳು | ಅಧಿದೈವ ಅಧಿಷ್ಠಾತೃ ದೇವತೆ |
|---|---|---|---|
| 1. ಆಕಾಶ | ಶ್ರೋತ್ರ | ಶಬ್ದ | ದಿಕ್ಕುಗಳು |
| 2. ವಾಯು | ತ್ವಕ್ | ಸ್ಪೃಷ್ಟವ್ಯಂ | ವಿದ್ಯುತ್ |
| 3. ಜ್ಯೋತಿ | (ಕಣ್ಣು) ಚಕ್ಷು | ರೂಪ | ಸೂರ್ಯ |
| 4. ಆಪೋ | ಜಿಹ್ವಾ | ರಸ | ಸೋಮ |
| 5. ಪೃಥಿವೀ | ಘ್ರಾಣ | ಗಂಧ | ವಾಯು |

ಎಲ್ಲ ಭೂತಗಳೂ ಆಕಾಶದಲ್ಲಿ ಲೀನವಾಗುವುದರಿಂದ, ಅಧ್ಯಾತ್ಮ ಇಂದ್ರಿಯಗಳು ಶ್ರೋತ್ರವಿನಲ್ಲಿ ಲೀನವಾಗುತ್ತವೆ. ಹಾಗೆಯೇ ಅಧಿಭೂತಗಳು ಶಬ್ದದಲ್ಲಿಯೂ, ಅಧಿದೈವಗಳು ದಿಕ್ಕುಗಳಲ್ಲಿಯೂ ಲೀನವಾಗಿ ಕೊನೆಯಲ್ಲಿ ಆಕಾಶ, ಶ್ರೋತ್ರ, ಶಬ್ದ ದಿಕ್ಕುಗಳು ಮಾತ್ರ ಉಳಿಯುತ್ತವೆ. ಇದೇ ಸೃಷ್ಟಿಯ ಮೊದಲ ಪಂಚಮಹಾಭೂತ ಮತ್ತು ಅದರ ಅಧ್ಯಾತ್ಮ ಇಂದ್ರಿಯ, ಅಧಿಭೂತ ಮತ್ತು ಅಧಿದೈವ, ಆಕಾಶವು ಮಹತ್ತತ್ತ್ವದಲ್ಲಿ ಲೀನವಾಗಿ ಕೊನೆಗೆ ಪರಮಾತ್ಮನಲ್ಲಿ ಲೀನವಾಗುತ್ತವೆ. ಆಕಾಶದಿಂದ ಉತ್ಪನ್ನವಾದ ಶಬ್ದವು ಶಬ್ದಬ್ರಹ್ಮ ಎಂದೂ ತಿಳಿಯಲ್ಪಡುತ್ತದೆ.

ಇದು ಪರಮಾತ್ಮನ ಒಂದು ರೂಪ,

ಮೇಲೆ ಹೇಳಿರುವ ಎಲ್ಲವೂ ಪರಮಾತ್ಮನ ರೂಪಗಳೇ, ಸ್ಥೂಲ, ಸೂಕ್ಷ್ಮರೂಪದಲ್ಲಿ ಪರಮಾತ್ಮನೇ ಆಗಿರುತ್ತವೆ.

ಅಥವಾ ಪರಮಾತ್ಮನ ಸ್ವರೂಪ, ಸ್ವಭಾವ, ಸ್ವಗುಣದಲ್ಲಿ ಆಕಾಶ ತತ್ತ್ವವೂ ಶಬ್ದ ಅಧಿಭೂತವೂ ಲೀನವಾಗಿರುತ್ತವೆ. ಪರಮಾತ್ಮ ಇಚ್ಛೆ ಬಂದಾಗ ಇವು ಅವನಿಂದ ಹೊರಹೊಮ್ಮುತ್ತವೆ.

ಶಬ್ದ ಬ್ರಹ್ಮವನ್ನು ನಾದಬ್ರಹ್ಮ ಎಂದು ಸಂಗೀತದ ವೈಶಿಷ್ಟದಲ್ಲಿ ಗಣಿಸುತ್ತಾರೆ.

ಶಬ್ದಬ್ರಹ್ಮ - ವೇದಗಳು. ವೇದಗಳಿಗೆ ಶಬ್ದಬ್ರಹ್ಮ ಎಂದು ಹೆಸರು. ವೇದಗಳು ಪರಮಾತ್ಮನಿಂದ ಉತ್ಪನ್ನವಾಗಿರುವುದರಿಂದ ಮತ್ತು ಪರಮಾತ್ಮನ ಸ್ತೋತ್ರ, ಸ್ವರೂಪ, ಮುಂತಾದುವುಗಳನ್ನು ಹೊಂದಿರುವುದರಿಂದ ಇವು ಪರಮಾತ್ಮನೇ. ಮೊದಲು ವೇದಗಳು ಋಷಿಗಳಿಂದ ಪರಮಾತ್ಮನ ದೃಷ್ಟಾರರಿಂದ ಶಬ್ದದ ಮೂಲಕವೇ ಗುರು ಶಿಷ್ಯ ಪರಂಪರೆಯಲ್ಲಿ ಶ್ರೋತ್ರದ ಮೂಲಕ ಬಂದು ಕೊನೆಗೆ ಶ್ರೀಮನ್ನಾರಾಯಣನ ವ್ಯಾಸ ಅವತಾರದಿಂದ ವಿಭಾಗಿಸಲ್ಪಟ್ಟವು.

ಅದರಿಂದ ವ್ಯಾಸರು - ಶಬ್ದ - ಋಷಿಮುನಿಗಳು - ದೃಷ್ಟಾರರು - ವೇದದ ವಿಭಾಗಕ್ಕೆ ಕಾರಣರಾದ್ದರಿಂದ ಎಲ್ಲವನ್ನು ಒಳಗೊಂಡು ಪರಮಾತ್ಮನನ್ನು ಶಬ್ದಬ್ರಹ್ಮಸ್ವರೂಪನು ಎಂದು ಬ್ರಹ್ಮದೇವರು ನರಸಿಂಹ ಸಹಸ್ರನಾಮದಲ್ಲಿ ಪರಮಾತ್ಮನನ್ನು ಬಣ್ಣಿಸಿದರು.

39. ಬ್ರಹ್ಮರೂಪಧರಾಯ ನಮಃ

ಶ್ರೀಮನ್ನಾರಾಯಣನು ತನ್ನ ನಾಭೀಕಮಲದಿಂದ ಬ್ರಹ್ಮ ದೇವರನ್ನು ಹೊರ ಹೊಮ್ಮಿಸಿದನು. ಬ್ರಹ್ಮನೇ ಸೃಷ್ಟಿಯಲ್ಲಿ ಮೊದಲಿಗನು. ಈ ರೂಪವು ಪ್ರಳಯಾನಂತರ ಮೊದಲು ಆದ್ದರಿಂಲೂ, ಪರಮಾತ್ಮನು ತನ್ನ ಲೀಲೆಗಾಗಿ ಸೃಷ್ಟಿಮಾಡಲು ಪ್ರಾರಂಭಿಸಿದ್ದರಿಂದ ಬ್ರಹ್ಮದೇವರ ರೂಪವು ಪರಮಾತ್ಮನದೇ ಸ್ವರೂಪವಾಗಿದ್ದಿತು.

ಪರಮಾತ್ಮನು ಯಾವಾಗ ಯಾವ ರೂಪವನ್ನು ಧರಿಸುತ್ತಾನೆಯೋ ಆಗ ಅವನು ಆ ರೂಪದಲ್ಲಿ ನಿರ್ದೇಶಿಸಲ್ಪಟ್ಟ ಕಾರ್ಯಗಳನ್ನು ನಿರಂತರ ಮಾಡುತ್ತಾನೆ. ಬ್ರಹ್ಮಾಂಡದ ನಡೆಯುವಿಕೆಗಾಗಿ ಬ್ರಹ್ಮನು ಸೃಷ್ಟಿಕಾರ್ಯವನ್ನು ತನ್ನ ದಿನದ ಹಗಲಿನಲ್ಲಿ ನಿರಂತರ ನಡೆಸುತ್ತಾ ಸಕಲ ಜೀವಿಗಳ ಆಗು ಹೋಗುಗಳನ್ನು ನಿರ್ಧರಿಸುತಾ , ಚರಾಚರ ವಸ್ತುಗಳನ್ನೂ ಸಹ ನಿರಂತರ ಸೃಷ್ಟಿಸುತ್ತಾ ಪರಮಾತ್ಮನಿಂದ ನಿರ್ದೇಶಿಸಲ್ಪಟ್ಟ ಸೃಷ್ಟಿಕಾರ್ಯವನ್ನು ನಡೆಸುತ್ತಾನೆ. ತನ್ನ ರಾತ್ರಿಯಲ್ಲಿ ನಿದ್ರಿಸುತ್ತಾನೆ. ಮತ್ತು ಸೃಷ್ಟಿಕಾರ್ಯವು ಈ ''ರಾತ್ರಿ'' ಕಾಲದಲ್ಲಿ ನಡೆಯುವುದಿಲ್ಲ. ಪ್ರತಿದಿನದ ಕಾರ್ಯದಲ್ಲಿ ಸೃಷ್ಟಿ, ಪ್ರಳಯಗಳು ನಡೆಯುತ್ತವೆ. ಇದಕ್ಕೆ ನಿತ್ಯಪ್ರಳಯವೆಂದು ಹೇಳುತ್ತಾರೆ. ಯಾವಾಗ ಬ್ರಹ್ಮನ ''ನೂರು'' ವರ್ಷಗಳು ಮುಗಿಯುತ್ತವೆಯೋ ಆಗ ಬ್ರಹ್ಮನ ಆಯುಃಪ್ರಮಾಣ ಸಂಪೂರ್ಣವಾಗುತ್ತದೆ. ಆಗ ಮಹಾಪ್ರಳಯವಾಗುತ್ತದೆ. ಆಗ ಸಕಲ ಬ್ರಹ್ಮಾಂಡ, ಬ್ರಹ್ಮದೇವರು, ಏನೇನನ್ನೂ ಪರಮೇಶ್ವರನು ಕಾಮಿಸಿ ನಡೆಸಿದ್ದನೋ ಸಕಲವೂ ಪರಬ್ರಹ್ಮದಲ್ಲಿ ಲೀನವಾಗುತ್ತದೆ. ಲವಲೇಶವೂ ಉಳಿಯುವುದಿಲ್ಲ. ಬ್ರಹ್ಮನೂ ಉಳಿಯುವುದಿಲ್ಲ. ಇದಕ್ಕೇನೆ ಹೇಳುವುದು - ಆ ಬ್ರಹ್ಮಸ್ಥಂಬ ಪರ್ಯತ ಸಕಲವೂ ನಾಶ ಹೊಂದುವಂತಹದ್ದೇ. ಪರಬ್ರಹ್ಮನೊಬ್ಬನೇ ಉಳಿದು ಎಲ್ಲವನ್ನು ತನ್ನ ಉದರದಲ್ಲಿ ಅಡಗಿಸಿಕೊಳ್ಳುತ್ತಾನೆ.

ನಂತರ ಯಾವಾಗಲೋ ಮತ್ತೆ ಶ್ರೀಮನ್ನಾರಾಯಣನು ಕಾಮಿಸಿದಾಗ ಪರಬ್ರಹ್ಮನಿಂದ ಮತ್ತೆ ಸೃಷ್ಟಿ ಪ್ರಾರಂಭವಾಗುತ್ತದೆ. ಇವುಗಳನ್ನು ತಿಳಿಯುವುದರಲ್ಲಿ ಉಪಯೋಗವೇನೆಂದರೆ -

1. ನಾವುಗಳು ಈ ಬ್ರಹ್ಮಾಂಡದ ಆಯುಃ ಪ್ರಮಾಣದಲ್ಲಿ ಅಗಣಿತ ಜೀವಕೋಟಿಗಳಲ್ಲಿ, ಈ ಆದಿ, ಅಂತವಿಲ್ಲದ ಕಾಲಗಣನೆಯಲ್ಲಿ ನಮ್ಮ

ಈ ಕೇವಲ ಹೇಳಲ್ಪಡುವ ನೂರು ವರ್ಷ (ಮಾನುಷಗಣನೆ) ವು ಏನೂ ಇಲ್ಲ. ನಮ್ಮ ದಿನ ನಿತ್ಯದ ಕಾರ್ಯಗಳು, ಸಂಯೋಗ ವಿಯೋಗಗಳು ಏನೂ ಗಣಿಸಲು ಯೋಗ್ಯವಲ್ಲ.

2. ಪ್ರಪಂಚಕ್ಕೆ ನಾವು ಯಾವ ಮುಖ್ಯತೆಯನ್ನು ಹೊಂದಿಲ್ಲ.
3. ಪರಸ್ಪರ ಜೀವ ಸಂಬಂಧ ದ್ವಂದ್ವ ಸುಖ ದುಃಖಗಳು, ಮುಂತಾದವು ಯಾವ ಲೆಕ್ಕಕ್ಕೂ ಬರುವುದಿಲ್ಲ.
4. ಪರಮಾತ್ಮನು ಸೃಷ್ಟಿಸಿರುವ, ನಿಯಮಿಸಿರುವ ದೇವತೆಗಳೂ ಸಹ ನಮ್ಮ ಲೆಕ್ಕದಲ್ಲಿ ಅಪಾರ ಶಕ್ತಿ ದೇವರುಗಳಾದರೂ ಪರಮಾತ್ಮನ ಅಪರಿಮಿತ ಶಕ್ತಿ ಯುಕ್ತಿಗಳಲ್ಲಿ ದೇವತೆಗಳೂ ಸಹ ಲೆಕ್ಕಕ್ಕೆ ಬರುವುದಿಲ್ಲ.
5. ದೇವತೆಗಳು ಬ್ರಹ್ಮದೇವರು ಸಹಿತ ನಾಶವಾಗತಕ್ಕವುಗಳು.
6. ನಮ್ಮ ಕ್ಷೀಣತ್ವವು ಏನೂ ಇಲ್ಲ.
7. ಪರಮಾತ್ಮನೊಬ್ಬನನ್ನು ಸೇರಿ ಸಾಮೀಪ್ಯ, ಸಾರೂಪ್ಯ, ಸಾಯುಜ್ಯ, ಸಾಲೋಕ್ಯ ಪದವನ್ನು ಪಡೆಯುವುದೇ ನಮ್ಮ ಗುರಿಯಾಗಿರಬೇಕು.
8. ಎಲ್ಲವನ್ನು ತ್ಯಜಿಸಿ ನಿಷ್ಕಾಮ ಭಾವನೆಯಿಂದ ಪರಮಾತ್ಮನನ್ನು ಸೇವಿಸಿದರೆ ನಮ್ಮ ಸಂಸ್ಕಾರ, ಅನೇಕ ಜನ್ಮಗಳಲ್ಲಿ ಗಳಿಸಿದ ಕರ್ಮಗಳು ಅವನ ಕೃಪೆಯಿಂದ ಕ್ಷಣಮಾತ್ರದಲ್ಲಿ ನಾಶವಾಗುತ್ತದೆ.
9. ದೈವಕೃಪೆಗಿಂತ ಮಿಗಿಲಾದುದು ಏನೂ ಇಲ್ಲ.
10. ನಮ್ಮ ಸ್ವಾರ್ಥತೆಯಿಂದ ಯಾವ ಲಾಭವೂ ಇಲ್ಲ.

**40. ಬ್ರಹ್ಮಣೇ ನಮಃ**

ಪರಮಾತ್ಮನು ಬ್ರಹ್ಮನೇ, ಸಕಲವನ್ನು ಸೃಷ್ಟಿಸಿ ಪೋಷಿಸುವವನು.

ಬ್ರಹ್ಮ - ಸೃಷ್ಟಿಕರ್ತಾ, ಎಲ್ಲವನ್ನು ತಿಳಿದವನು.

ಶ್ರೀಮನ್ನಾರಾಯಣನ ನಾಭೀಕಮಲದಲ್ಲಿ ಸಂಭವನಾದವನು. ಸಕಲ ಬ್ರಹ್ಮಾಂಡದಲ್ಲಿ ಮಹತ್ತಾದ ಸೃಷ್ಟಿ ಕಾರ್ಯವನ್ನು ನಡೆಸಲು ಪರಮಾತ್ಮನು ನಿಯಮಿಸಲ್ಪಟ್ಟವನು.

ಬ್ರಹ್ಮಣೇ ನಮಃ ಎಂದರೆ ಬ್ರಾಹ್[illegible]ಗ ನಮಸ್ಕಾರ.

ಬ್ರಾಹ್ಮಣ ರೂಪದಿಂದ ಸಮಸ್ತರಿಗೆ ವೇದವನ್ನು ಕಲಿಸುವವನು (ವಿ.ಸ.667).

**41. ಬ್ರಹ್ಮರೂಪಾಯ ನಮಃ**

ಮಹಾವಿಷ್ಣುವು ಬ್ರಹ್ಮನ ರೂಪದಲ್ಲಿ ಸೃಷ್ಟಿಕಾರ್ಯವನ್ನು ಮಾಡುತ್ತಾನೆ. ಬ್ರಹ್ಮನ ರೂಪವೇ ಪರಬ್ರಹ್ಮ.

ಅಥವಾ, ಪರಮಾತ್ಮನು ಬ್ರಹ್ಮನ ರೂಪದಲ್ಲಿ ವಿರಾಜಿಸುತ್ತಾನೆ.

42. ಬ್ರಹ್ಮನೇತ್ರೇ ನಮಃ

ಬ್ರಹ್ಮನ ಕಣ್ಣುಗಳು ಸಕಲ ಬ್ರಹ್ಮಾಂಡವನ್ನು ಎಲ್ಲ ಜೀವ ಜೀವಿಗಳ ಸಮಸ್ತ ಚರಾಚರ ವಸ್ತುಗಳ ಆಗು ಹೋಗುಗಳನ್ನು ಪ್ರತಿಕ್ಷಣವೂ ನೋಡುತ್ತಿರುವುದರಿಂದ ಇವನ ನೇತ್ರಗಳಿಗೆ ಶಕ್ತಿಕೊಡುವವನು ಪರಬ್ರಹ್ಮವೇ.

ಅಥವಾ

ಪರಮಾತ್ಮನು ಏನು ಬೇಕಾದರೂ ಆಗಲು ಶಕ್ತನಾದ್ದರಿಂದ ಬ್ರಹ್ಮನ ಕಣ್ಣುಗಳಲ್ಲಿ ತಾನೇ ಕುಳಿತು ಸಕಲವನ್ನು ನೋಡುವುದರಿಂದ ಪರಬ್ರಹ್ಮನಿಗೆ ಬ್ರಹ್ಮನೇತ್ರೇ ನಮಃ ಎಂದು ನಮಸ್ಕರಿಸುತ್ತೇವೆ.

*ಬ್ರಹ್ಮಾದಯೇ ಬ್ರಾಹ್ಮಣಾಯ ಬ್ರಹ್ಮ ಬ್ರಹ್ಮಾತ್ಮನೇ ನಮಃ ।*
*ಸುಬ್ರಹ್ಮಣ್ಯಾಯ ದೇವಾಯ ಬ್ರಹ್ಮಣ್ಯಾಯ ತ್ರಿವೇದಿನೇ ।।72।।*
*(443-450)*

43. ಬ್ರಹ್ಮಾದಯೇ ನಮಃ

ಪ್ರಪಂಚದ ಸೃಷ್ಟಿಗಾಗಿ ಪರಮಾತ್ಮನು ತನ್ನನ್ನೇ ತಾನು ಮೂರು ಭಾಗಗಳಾಗಿ ವಿಭಾಗಿಸಿಕೊಂಡನು. ಸಕಲ ಬ್ರಹ್ಮಾಂಡವನ್ನು ಪ್ರಥಮದಲ್ಲಿ ಸೃಷ್ಟಿಸಲು, ನಂತರ ಅದನ್ನು ನಡೆಯಿಸಲು (ಸ್ಥಿತಿ), ಮತ್ತು ನಂತರ ನಾಶ ಅಥವಾ ಲಯ ಮಾಡಲು ಕ್ರಮವಾಗಿ ಬ್ರಹ್ಮ, ವಿಷ್ಣು, ಮಹೇಶ್ವರರಾಗಿ ವಿಭಾಗಿಸಿಕೊಂಡನು. ಈ ಮೂವರನ್ನು ತ್ರಿಮೂರ್ತಿಗಳೆಂದು ವೇದ, ಶಾಸ್ತ್ರ, ಪುರಾಣೇತಿಹಾಸಗಳು ಸಾರುತ್ತವೆ. ಉಳಿದ ಇತರ ದೇವ, ದೇವತೆಗಳು ಈ ಮೂವರ ಕಾರ್ಯಗಳಿಗೆ ಸಹಕಾರಿಯಾಗುತ್ತಾರೆ. ದೇವತೆಗಳು, ಮಾನವರು, ಜೀವಜಂತುಗಳು ಪರಸ್ಪರ ಸಹಕಾರದಿಂದ ಪ್ರಪಂಚದಲ್ಲಿ ಶಾಂತಿ, ಆಹಾರ ಸಮೃದ್ಧಿಯಾಗಿ ಇರುವಂತೆ ಮಾಡುತ್ತಾರೆ. ವೇದ ಶಾಸ್ತ್ರಗಳ ಆಧಾರದ ಮೇಲೆ ಮಾನವರು ದೇವತೆಗಳನ್ನು ಉದ್ದೇಶಿಸಿ ಯಜ್ಞಯಾಗ, ಪೂಜೆಗಳನ್ನು ಮಾಡುತ್ತಾರೆ. ಇದರಲ್ಲಿ ಅವರವರ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಪಡೆಯುವ ಮಹದುದ್ದೇಶವಿರುತ್ತದೆ. ಹವನ, ಹೋಮ, ಯಜ್ಞಯಾಗಗಳನ್ನು ಮಾಡಿ ದೇವ ದೇವತೆಗಳನ್ನು ತೃಪ್ತಿಪಡಿಸುತ್ತಾರೆ. ಅಗ್ನಿದೇವನು ತೃಪ್ತಿ ಪಟ್ಟು ಹವ್ಯಗಳನ್ನು ತೆಗೆದುಕೊಂಡು ಉದ್ದೇಶಿತ ದೇವತೆಗಳಿಗೆ ತಲಪಿಸುತ್ತಾನೆ. ಇದರಿಂದ ತೃಪ್ತಿಹೊಂದಿದ ದೇವತೆಗಳು, ಮನುಷ್ಯರು ಕೋರಿದ ಇಷ್ಟಗಳನ್ನು ವರ ರೂಪದಲ್ಲಿ ಕೊಡುತ್ತಾರೆ. ಇದು ಸಾಮಾನ್ಯವಾಗಿ ಸತ್ಯ ಧರ್ಮ ಪರಿಪಾಲಕರಾದ ಮನುಷ್ಯರು ಮಾಡಬೇಕಾದ ಕರ್ತವ್ಯ. ಇಹಪರ ಸಾಧನೆಗೆ ಈ ದಾರಿಯನ್ನು ಭಗವಂತನು ಕಲ್ಪಿಸಿದ್ದಾನೆ.

ಯಾವಾಗ ಈ ನಿಯಮವು ಚಾಚೂತಪ್ಪದೆ ನಡೆಯುವುದಿಲ್ಲವೋ ಆಗ

ಪರಿಸ್ಥಿತಿ ಪಲ್ಲಟವಾಗುತ್ತದೆ ಮತ್ತು ವಿಕೋಪಕ್ಕೆ ಗುರಿಯಾಗುತ್ತದೆ. ಮಾನವರು ಯಜ್ಞಯಾಗಗಳು, ಪೂಜೆ, ಭಜನೆ, ಧ್ಯಾನ, ಜಪಗಳನ್ನು ಮಾಡಬೇಕಾದ ನಿಯಮದಂತೆ ಮಾಡುವುದಿಲ್ಲ. ದೇವತೆಗಳಿಗೆ ಹವ್ಯಗಳು ಕಾಲಕಾಲಕ್ಕೆ ಲಭಿಸುವುದಿಲ್ಲ. ಪರಸ್ಪರ ವಿಕೋಪ ಉಂಟಾಗುತ್ತದೆ. ಮಳೆಗಳು ಬರುವುದಿಲ್ಲ, ನಾಶಕ್ಕೆ, ಅಧರ್ಮದ ವೃದ್ಧಿಗೆ ಕಾರಣವಾಗುತ್ತದೆ.

ಆಗ ಈ ತ್ರಿಮೂರ್ತಿಗಳು ಪರಮ ಉತ್ತಮ ಕಾರ್ಯಕ್ಕೆ ಪ್ರವರ್ತರಾಗುತ್ತಾರೆ. ವಿಷ್ಣುವು ಧರ್ಮ ಸಂಸ್ಥಾಪನೆಗೂ, ಶಿವನು ಲಯಕಾರ್ಯಕ್ಕೂ, ಬ್ರಹ್ಮನು ವಿಕೃತಿ ಸೃಷ್ಟಿಗೂ ಪ್ರಾರಂಭಿಸಿ ಸ್ಥಿರತೆಗೆ ತೊಡಗುತ್ತಾರೆ.

ಎಲ್ಲ ಕಾರ್ಯಗಳಿಗೂ ಈ ತ್ರಿಮೂರ್ತಿಗಳೇ ಬೇಕು. ಇವರು ಕೊಡುವ ವರಗಳು ಪರಮಶ್ರೇಷ್ಠವಾದುವುಗಳು ಮತ್ತು ಲೋಕಕಲ್ಯಾಣಕ್ಕೆ ಅವಶ್ಯಕವಾದವುಗಳು.

ಬ್ರಹ್ಮಾದಿಗಳು - ಎಂದರೆ ಮೊದಲಲ್ಲಿ ಬಂದವರು - ಕ್ರಮವಾಗಿ ವಿಷ್ಣು, ಬ್ರಹ್ಮ, ರುದ್ರರು. ವಿಷ್ಣುವು ಶ್ರೀಮನ್ನಾರಾಯಣನ ರೂಪ, ಬ್ರಹ್ಮನು ಮಹಾವಿಷ್ಣುವಿನ ನಾಭೀಕಮಲದಲ್ಲಿ ಬಂದವನು, ರುದ್ರನು ಬ್ರಹ್ಮನು ಕೃದ್ಧನಾದಾಗ ಅವನ ಹಣೆಯಲ್ಲಿ ಜನಿಸಿದನು - ಈ ಮೂವರು ಪರಮ ಪೂಜ್ಯರು ಮತ್ತು ಸರ್ವಕ್ಕೂ ಮೂಲ ದೇವರುಗಳು - ಅದರಿಂದ ಬ್ರಹ್ಮಾದಯೇ ನಮಃ ಎಂದು ಸಂಭೋಧಿಸುತ್ತೇವೆ.

## 44. ಬ್ರಾಹ್ಮಣಾಯ ನಮಃ

ಬ್ರಾಹ್ಮಣ - ''ಬ್ರಾಹ್ಮಣೋಽಸ್ಯ ಮುಖಮಾಸೀತ್'', ''ಬ್ರಾಹ್ಮಣನು ಇವನೇ ವಿರಾಟ್ ಪುರುಷನ ಮುಖವಾದನು (ಮುಖದಲ್ಲಿ ಇದ್ದನು)'' - ಎಂದು ಪುರುಷ ಸೂಕ್ತದಲ್ಲಿ ಹೇಳಿದೆ. ವಿರಾಟ್ ಪುರುಷನು ಸಾಕ್ಷಾತ್ ಭಗವಂತನೇ - ಉತ್ತಮ ಪುರುಷನಾದ್ದರಿಂದ ಇವನು ಪುರುಷೋತ್ತಮನು - ಬ್ರಾಹ್ಮಣನು, ಚತುರ್ವರ್ಣಗಳಲ್ಲಿ ಮೊದಲನೆಯ ವರ್ಣದವನು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂದು ಗುಣ, ಕರ್ಮಗಳನ್ನು ಅನುಸರಿಸಿ ಮಾಡಿದ ಮಾನವರ ವರ್ಗಗಳು, ಎಂದು ಶ್ರೀಕೃಷ್ಣ ಪರಮಾತ್ಮನು ಗೀತೆಯಲ್ಲಿ ಅರ್ಜುನನಿಗೆ ತಿಳಿಸುತ್ತಾನೆ.

ಪುರುಷಸೂಕ್ತದಲ್ಲಿರುವಂತೆ ಇವರ ವಾಸಸ್ಥಾನ / ಉತ್ಪತ್ತಿಸ್ಥಾನಗಳು ಋಷಿ ಮುನಿಗಳು, ವೇದದಲ್ಲಿ ಹೇಳಿರುವ ವಿರಾಟ್ ಪುರುಷನ ದೇಹದಲ್ಲಿ ಈ ರೀತಿ ಇದೆ -

*ಯತ್ಪುರುಷಂ ವ್ಯದಧುಃ / ಕತಿಧಾ ವ್ಯಕಲ್ಪಯನ್ /*
*ಮುಖಂ ಕಿಮಸ್ಯ ಕೌ ಬಾಹೂ / ಕಾವೂರೂ ಪಾದಾವುಚ್ಯೇತೇ /*

*ಬ್ರಾಹ್ಮಣೋಽಸ್ಯ ಮುಖಮಾಸೀತ್ । ಬಾಹೂ ರಾಜನ್ಯಃ ಕೃತಃ ॥*
*ಊರೂ ತದಸ್ಯ ಯದ್ವೈಶ್ಯಃ । ಪದ್ಭ್ಯಾಗ್‌ಂಶೂದ್ರೋ ಅಜಾಯತ ।*

*ಚಂದ್ರಮಾ ಮನಸೋ ಜಾತಃ । ಚಕ್ಷೋಸ್ಸೂರ್ಯೋ ಅಜಾಯತ ।*
*ಮುಖಾದಿಂದ್ರಶ್ಚಾಗ್ನಿಶ್ಚ । ಪ್ರಾಣಾದ್ವಾಯುರಜಾಯತ ।*

*ನಾಭ್ಯಾ ಆಸೀದಂತರಿಕ್ಷಮ್ । ಶೀರ್ಷ್ಣೋ ದ್ಯೌಸ್ಸಮವರ್ತತ ।*
*ಪದ್ಭ್ಯಾಂ ಭೂಮಿರ್ದಿಶಶ್ಶ್ರೋತ್ರಾತ್ । ತಥಾ ಲೋಕಾಗ್‌ಂ ಅಕಲ್ಪಯನ್॥"*

ಇಂತಹ ಪರಮ ಪುರುಷನನ್ನು ಋಷಿ ಮುನಿಗಳು, ದೇವತೆಗಳು ಕಂಡರು. ಇಷ್ಟೂ "ಬ್ರಾಹ್ಮಣನು" ಪರಮ ಪುರುಷನ ಮುಖದಲ್ಲಿ ವಾಸಮಾಡುತ್ತಾನೆ ಎಂದಾಯಿತು. ಇಂತಹ ಬ್ರಾಹ್ಮಣನಿಗೆ ಪರಮಾತ್ಮನ ಸ್ವರೂಪ ಎಂದು ತಿಳಿಯ ನಮಸ್ಕರಿಸುತ್ತಾರೆ.

ಬ್ರಹ್ಮನನ್ನು ಅಂದರೆ ವೇದವನ್ನು ತಿಳಿದವನು - ಬ್ರಾಹ್ಮಣ. ಸಮಾಜದ ಉದ್ಧಾರಕ್ಕೆ ಮೇಲಿನ ಗುಣ, ಕರ್ಮಗಳ ರೀತಿ ನಾಲ್ಕು ವರ್ಣದವರಿಗೂ ಒಂದೊಂದು ಕರ್ತವ್ಯವನ್ನು ವೇದಗಳು ನಿರ್ದಿಷ್ಟಮಾಡಿವೆ. ಅದರಂತೆ ವೇದಗಳನ್ನು ತಿಳಿದವನು ಸಮಾಜದಲ್ಲಿ ರಾಜಗುರುವಾಗಿ, ಇತರ ವರ್ಣದವರಿಗೆ ಕುಲಗುರುವಾಗಿ ಮಾರ್ಗದರ್ಶನ ಕೊಡುವಂತೆ ಭಗವಂತನು ವಿಭಾಗಮಾಡಿದ್ದಾನೆ. ಆದರಿಂದ ಇದರ ಸತ್ಯ ಸಂಗತಿಯಂತೆ ನಡೆದವನಿಗೆ ಮಾತ್ರ ಈ ಗುರುತ್ವ ಬರುತ್ತದೆ. ಅಂತಹ "ಬ್ರಾಹ್ಮಣಾಯ ನಮಃ" ಎಂದಾಗುತ್ತದೆ.

ಅರ್ಹನು ಪರಮಾತ್ಮನಲ್ಲಿಗೆ ದಾರಿ ತೋರಿಸುವುದರಿಂದ ಪರಮ ಗುರುವಾಗುತ್ತಾನೆ. ಅವನೆ ಗುರು ರೂಪ, ಪರಮ ಬ್ರಾಹ್ಮಣನು.

ವೇದಗಳಲ್ಲಿ "ಬ್ರಾಹ್ಮಣ" ಎಂದು ಭಾಗವಿದೆ. ವೇದಗಳೇ ಸರ್ವರಿಂದಲೂ ಆದರಿಸಲ್ಪಟ್ಟಿವೆ. ಅದರಲ್ಲಿರುವ ಪ್ರತಿಯೊಂದು ಭಾಗವೂ ಉದಾತ್ತವಾದ್ದು. ಆ "ಬ್ರಾಹ್ಮಣ" ಭಾಗವನ್ನುದ್ದೇಶಿಸಿ ಅದು ಪರಮಾತ್ಮನ ಸ್ವರೂಪವೆಂದೇ ಈ ನಾಮದ ಮೂಲಕ ನಮಸ್ಕರಿಸುತ್ತೇವೆ.

ಬ್ರಹ್ಮ - ವೇದ - ಅದನ್ನು ಕಲಿಸುವವನು "ಬ್ರಾಹ್ಮಣ".

45. ಬ್ರಹ್ಮಣೇ ನಮಃ

ಬ್ರಹ್ಮ - ಪರಬ್ರಹ್ಮನಿಗೆ ನಮಸ್ಕಾರ. ಇಲ್ಲಿ ಬ್ರಹ್ಮದೇವರು ನರಸಿಂಹ ಸ್ವಾಮಿಯನ್ನು ಸಹಸ್ರನಾಮಗಳಿಂದ ಸಂತೋಷಪಡಿಸುವಾಗ ನರಸಿಂಹಸ್ವಾಮಿಯು ಮಹಾವಿಷ್ಣುವಿನ ಅವತಾರವೆಂದು ತಿಳಿದು, ಆ ಮಹಾವಿಷ್ಣುವೇ ನಾಭಿ ಕಮಲದ ಮೂಲಕ ತಮಗೆ ಜನ್ಮದಾತನೆಂದೂ ತಿಳಿದು,

ಮಹಾವಿಷ್ಣುವು ಬೇರೆ ಯಾರೂ ಅಲ್ಲದೆ ಪರಮ ಪವಿತ್ರವಾದ, ಪರಮ ಪೂಜ್ಯವಾದ ಪರಬ್ರಹ್ಮನೆಂದೂ ಅವನೇ (ತಮ್ಮನ್ನೂ ಸಹ ಸೇರಿಕೊಂಡು) ಎಲ್ಲಕ್ಕೂ ಸೂತ್ರಧಾರನೆಂದೂ ತಿಳಿದು ''ಬ್ರಹ್ಮಣೇ ನಮಃ'' ಎಂದು ನಮಸ್ಕರಿಸಿದ್ದಾರೆ. ಇದು ಪರಮ ರಹಸ್ಯವಾದುದು, ಮತ್ತು ಬ್ರಹ್ಮ ದೇವರೊಬ್ಬರಿಗೆ ತಿಳಿದಿದ್ದರೂ ಸರ್ವರಿಗೂ ವೇದ್ಯವಾಗಲೆಂದು ಈ ಸಹಸ್ರನಾಮದಲ್ಲಿ ಸೇರಿಸಿದ್ದಾರೆಂದು ನಾವು ತಿಳಿದರೆ ಅದು - ಆ ತಿಳಿವಳಿಕೆ - ಅವರ ಪ್ರಚೋದನೆಯಿಂದಲೇ ಬಂದಿದೆ - ಎಂದರೆ ತಪ್ಪಿಲ್ಲ. ತಪ್ಪಿದ್ದರೂ ಅದು ಕ್ಷಮಾರ್ಹವಾದುದು.

ನರಸಿಂಹಸ್ವಾಮಿಯು ನಾವು ಏನೇ ಅರ್ಥಮಾಡಿ ಸ್ತೋತ್ರಮಾಡಿದರೂ ಅವನು ಅದನ್ನು ಸ್ವೀಕರಿಸಿಯೇ ಸ್ವೀಕರಿಸುತ್ತಾನೆ.

||ಓಂ ನಮೋ ನರಸಿಂಹಾಯ - ಬ್ರಹ್ಮಣೇ ನಮೋನ್ನಮಃ ||

## 46. ಬ್ರಹ್ಮಾತ್ಮನೇ ನಮಃ

ಬ್ರಹ್ಮ - ಬ್ರಹ್ಮದೇವರು, ಆತ್ಮ - ಎಂದರೆ ತೇಜಶ್ಶಕ್ತಿ, ಪರಮಾತ್ಮನಿಂದ ಹೊರ ಹೊಮ್ಮಿದ ಅಸಂಖ್ಯಾತ ಆತ್ಮಗಳು.

ಸೃಷ್ಟಿಕರ್ತನಾದ ಬ್ರಹ್ಮದೇವನು ಮಾಡುವ ಪ್ರಜಾಭಿವೃದ್ಧಿಗಾಗಿ ಪರಬ್ರಹ್ಮನು ತನ್ನ ದೇಹದಿಂದ ಅಸಂಖ್ಯಾತ ಆತ್ಮಗಳನ್ನು ಪ್ರಕಟಿಸಿದನು. ಜೊತೆಗೆ ಪಂಚಮಹಾಭೂತಗಳಾದ ಪೃಥಿವಿ, ಆಪಃ, ತೇಜಸ್ಸು, ವಾಯು ಆಕಾಶಗಳನ್ನು ಕೊಟ್ಟನು. ಮಹತ್ತತ್ವ, ಅಹಂಕಾರ, ಪ್ರಕೃತಿ, ಪುರುಷ, ಮಾಯೆ, ಇಂದ್ರಿಯಗಳು ಮತ್ತು ಅವುಗಳ ಅಭಿಮಾನಿ ದೇವತೆಗಳು, ಸತ್ವ ರಜಸ್ತಮೋಗುಣಗಳು - ಎಲ್ಲವೂ ಸೃಷ್ಟಿಯಾದವು. ಬ್ರಹ್ಮದೇವರು ಈ ಸಕಲ ವಸ್ತುಗಳನ್ನು ಕ್ರೋಢೀಕರಿಸಿ ಸೂಕ್ತ ಪ್ರಮಾಣಗಳಲ್ಲಿ ಸೇರಿಸಿ, ದೇಹಗಳನ್ನು ಸೃಷ್ಟಿಸಿ ಅವುಗಳೊಳಗೆ ದೇಹಿಯಾದ ಆತ್ಮನನ್ನು ನೆಲೆಗೊಳಿಸಿದರು.

ಇಂತಹ ಕಾರ್ಯವನ್ನು ನಡೆಸಿದ ಪ್ರಯುಕ್ತ ಈ ಕಾರ್ಯವು ಬ್ರಹ್ಮಾತ್ಮ ಕಾರ್ಯವೆಂದೂ ಪ್ರಸಿದ್ಧಿಯಾಯಿತು.

ಮತ್ತೆ ಬ್ರಹ್ಮನು ಪರಬ್ರಹ್ಮನ ಆತ್ಮವೇ ಆಗಿ ಬೇರೆ ರೂಪಧಾರಣೆ ಮಾಡಿದ್ದರಿಂದ ಬ್ರಹ್ಮಾತ್ಮನು ಆದನು. ಎಂದರೆ ಇವನು ಪರಮಾತ್ಮನಾದ ಪರಬ್ರಹ್ಮದ ಸ್ವರೂಪವೇ.

ಬ್ರಹ್ಮ ಎಂದರೆ ವೇದಗಳು - ಆತ್ಮ ಎಂದರೆ ಅವುಗಳಲ್ಲಿರುವ ಶಕ್ತಿ ಅಂದರೆ ಬ್ರಹ್ಮಾತ್ಮ ಎಂದರೆ ವೇದಗಳಲ್ಲಿರುವ ಗಹನವಾದ ಶಕ್ತಿ.

''ಓಂ ಇತಿ ಏಕಾಕ್ಷರಂ ಬ್ರಹ್ಮ'' - ಎಂದರೆ ಬ್ರಹ್ಮನು ''ಓಂ'' ಮಂತ್ರ, ಅದರ ಆತ್ಮ ಎಂದರೆ ಓಂ ಮಂತ್ರದ ಅಂತಃಶಕ್ತಿ - ಪರಬ್ರಹ್ಮ.

ಬ್ರಹ್ಮ ಎಂದರೆ ಸೃಷ್ಟಿಕರ್ತ. ಆತ್ಮ - ಅವನಲ್ಲಿರುವ ತೇಜಸ್ ಶಕ್ತಿ - ಎಂದರೆ ಸಕಲ ಅಖಿಲಾಂಡ ಕೋಟಿ ಬ್ರಹ್ಮಾಂಡಗಳನ್ನು ನಡೆಸುವ ಸೂತ್ರಧಾರ - ಪರಬ್ರಹ್ಮ ಅಥವಾ ಓಂ ಶಕ್ತಿ. (ಓಂಕಾರ ಶಕ್ತಿ)

**447.** ಸುಬ್ರಹ್ಮಣ್ಯಾಯ ನಮಃ

ಬ್ರಹ್ಮ ಶಕ್ತಿಯ ಭಾವ ಬ್ರಹ್ಮಣ್ಯ, ಅತ್ಯುತ್ತಮವಾದ ಬ್ರಹ್ಮ ಶಕ್ತಿಯ ಭಾವ - ಸುಬ್ರಹ್ಮಣ್ಯ. ಇದಕ್ಕೆ ನಮಸ್ಕಾರ ಎಂದರೆ ಸುಬ್ರಹ್ಮಣ್ಯಾಯ ನಮಃ.

ಶಿವ ಪಾರ್ವತಿಯರ ಪುತ್ರ ಸುಬ್ರಹ್ಮಣ್ಯದೇವರು. ಕಾರ್ತಿಕೇಯ, ದೇವಸೇನಾಪತಿ.

ಬ್ರಾಹ್ಮಣ - ಎಂದರೆ ನಾಲ್ಕು ವೇದಗಳಲ್ಲಿ ಮೊದಲನೆಯದು, ಅಗ್ನಿ ಅಥವ ಶೃತಿಗ್ರಂಥದೊಳಗಿನ ಭಾಗ. ಇದರೊಳಗಿನ ಭಾಗಕ್ಕೆ ಬ್ರಾಹ್ಮಣ, ಬ್ರಹ್ಮಣ್ಯ ಎಂದು ಹೆಸರು. ಅತ್ಯುತ್ತಮವಾದ್ದು - ಸುಬ್ರಹ್ಮಣ್ಯ - ಈ ಭಾಗಕ್ಕೆ - ಸುಬ್ರಹ್ಮಣ್ಯಾಯ ನಮಃ - ನಮಸ್ಕಾರ.

**448.** ದೇವಾಯ ನಮಃ

ಸಂಕ್ಷೇಪವಾಗಿ ಪರಮಾತ್ಮ, ಪರಬ್ರಹ್ಮ, ಬ್ರಹ್ಮ, ವಿಷ್ಣು, ಮಹೇಶ್ವರ, ಇತ್ಯಾದಿಯಾಗಿ ಕರೆಯುವ ಸಕಲ ನಾಮಗಳೂ ಒಂದೇ ಹೆಸರಿನಲ್ಲಿ "ದೇವ" ಎಂದು ಕರೆಯಬಹುದು. ಈ ನಾಮದಲ್ಲಿ ಎಲ್ಲ ಹೆಸರಿನ ದೇವರುಗಳೂ ಅಡಕವಾಗಿದ್ದಾರೆ. ದೇವನಿಗೆ ಪ್ರಾರ್ಥಿಸಿದರೆ ಎಲ್ಲ ದೇವರ ಶಕ್ತಿ, ವರಗಳೂ ಲಭ್ಯವಾಗುತ್ತವೆ. ಅಂದರೆ ಪರಬ್ರಹ್ಮನಿಗೇ ನಾಮ ಸಲ್ಲುತ್ತದೆ.

ದೇವ ಎಂದರೆ ದೇವತೆಯೂ ಸೇರಿದೆ. ಪುರುಷ ಮತ್ತು ಸ್ತ್ರೀ ದೇವತೆಗಳು ಎಂದು ಒಟ್ಟಿಗೆ ಹೇಳಬಹುದು. ಆದರೆ ದೇವಿ ಎಂದರೆ ನಿರ್ದೇಶಿತವಾಗಿ ಕರೆಯಬಹುದು. ದೇವಿ ಎಂದರೆ ಎಲ್ಲ ಸ್ತ್ರೀ ದೇವತೆಗಳೂ ಸೇರಿರುತ್ತಾರೆ ಮತ್ತು ದೇವಿಗೆ ಪ್ರಾರ್ಥಿಸಿದರೆ ಎಲ್ಲ ದೇವತೆಗಳಿಗೂ ಸೇರುತ್ತದೆ ಮತ್ತು ಎಲ್ಲರನ್ನು ತೃಪ್ತಿ ಪಡಿಸುತ್ತದೆ.

ದೇವ - ಎಂದರೆ ದ್ಯಾಲೋಕದಲ್ಲಿ ವಾಸಿಸುವ ಅಮರ ದೇವ / ದೇವಿ / ದೇವತೆ ಅಥವಾ ತೇಜಸ್ಸುಳ್ಳದೇವತೆ.

ದೇವ - ಎಂದರೆ ಪರಮಾತ್ಮನನ್ನು ನಿರ್ದೇಶಿಸುತ್ತದೆ.

ದೇವ - ಎಂದರೆ ಶಕ್ತಿಯಿರುವವರನ್ನು ಗೌರವದಿಂದ "ದೇವ" ಎಂದು ಕರೆಯುತ್ತೇವೆ.

**449.** ಬ್ರಹ್ಮಣ್ಯಾಯ ನಮಃ

ಸಕಲ ದೇವ ದೇವತೆಗಳನ್ನು ಉದ್ದೇಶಿಸಿ ಹೇಳುವಾಗ "ಬ್ರಹ್ಮಣೇ"

ಸೃಷ್ಟಿಕರ್ತ್ರೇ ನಮಃ, ಬ್ರಹ್ಮಣ್ಯಾಯ ನಮಃ ಎಂದು ಹೇಳುತ್ತೇವೆ. ಏಕೆಂದರೆ ಬ್ರಹ್ಮನೇ ಸಕಲ ದೇವತೆಗಳಿಗೂ ಮೊದಲಿಗನು, ಬ್ರಹ್ಮನ ತತ್ತ್ವವನ್ನು ಬ್ರಹ್ಮತತ್ತ್ವ ಎಂದು ಹೇಳುತ್ತೇವೆ. ಸಾಮಾನ್ಯವಾಗಿ ''ಹಣೆಯ ಬರಹ'' ಎಂದು ಉದ್ದೇಶಿಸಿ ಹೇಳುವಾಗ ಬ್ರಹ್ಮನೊಬ್ಬನೇ ಇದನ್ನು ತಿಳಿದವನು - ಇದನ್ನು ಬರೆಯುವವನು - ವಿಧಿ - ಬ್ರಹ್ಮಣ್ಯ ಎಂದು ಹೇಳುತ್ತೇವೆ.

ಬ್ರಹ್ಮತ್ತ್ವವನ್ನು ತಿಳಿಸುತ್ತದೆ.

50. ತ್ರಿವೇದಿನೇ ಮಃ

ತ್ರಿ - ಮೂರು, ವೇದಿ - ವೇದಗಳನ್ನು ತಿಳಿದವನು - ತ್ರಿವೇದಿ.

ತ್ರಿ - ಮೂರು - ಬ್ರಹ್ಮ, ವಿಷ್ಣು, ಮಹೇಶ್ವರರನ್ನು, ವೇದಿ - ತಿಳಿದಿರುವವನು.

ತ್ರಿ - ಮೂರು ಕಾಲಗಳನ್ನು ಭೂತ, ಭವಿಷ್ಯತ್ ವರ್ತಮಾನವನ್ನು, ವೇದಿ - ತಿಳಿದಿರುವವನು.

ಇವನು - ತ್ರಿವೇದಿಯು ಪರಬ್ರಹ್ಮನೇ.

ಈ ರೀತಿ ಮೂರು ಮೂರು ಭಾಗಗಳನ್ನು ತಿಳಿದಿರುವವನು ಪರಮಾತ್ಮ ಸ್ವರೂಪಿ ಪರಬ್ರಹ್ಮನೇ - ಸಕಲ ಕಾರ್ಯಕ್ಕೂ ಸೂತ್ರಧಾರನಾದ ಓಂಕಾರ ರೂಪಿ ಶ್ರೀಮನ್ನಾರಾಯಣನು ತ್ರಿವೇದಿ. ಅವನಿಗೆ ತ್ರಿವೇದಿನೇ ನಮಃ ಎಂದು ನಮಸ್ಕರಿಸುತ್ತೇವೆ.

ತ್ರಿ - ಮೂರು ಲೋಕಗಳನ್ನು, ವೇದಿ - ತಿಳಿದವನು.

ತ್ರಿ - ಮೂರು - ಸತ್ವರಜಸ್ತಮೋಗುಣಗಳನ್ನು ವೇದಿ - ತಿಳಿದವನು.

ಈ ರೀತಿ ಸೃಷ್ಟಿ, ಸ್ಥಿತಿ, ಲಯಗಳನ್ನು ವೇದಿ - ತಿಳಿದವನು.

ಸಕಲ ಅಖಿಲಾಂಡ ಕೋಟಿ ಬ್ರಹ್ಮಾಂಡದಲ್ಲಿ ನಡೆಯುವ ಸಕಲ ಕಾರ್ಯಗಳನ್ನು ಮೂರು ಭಾಗಮಾಡಿದರೆ ಅದನ್ನು ಸಂಪೂರ್ಣವಾಗಿ ತಿಳಿದವನು - ಪರಬ್ರಹ್ಮ.

ಅವನಿಗೆ ತ್ರಿವೇದಿನೇ ನಮಃ ಎಂದು ನಮಸ್ಕರಿಸುತ್ತೇವೆ.

ವೇದಗಳನ್ನು ಕಲಿತವರಿಗೆ ತಿಳಿದವರಿಗೆ ದ್ವಿವೇದಿ, ತ್ರಿವೇದಿ, ಚತುರ್ವೇದಿ ಎಂದು ಹೇಳುತ್ತಾರೆ.

*ಪರಬ್ರಹ್ಮಸ್ವರೂಪಾಯ ಪಂಚಬ್ರಹ್ಮಾತ್ಮನೇ ನಮಃ ।*
*ನಮಸ್ತೆ ಬ್ರಹ್ಮಶಿರಸೇ ನಮಃ ಖಶಿರಸೇ ನಮಃ ।।73।। (451-454)*

51. ಪರಬ್ರಹ್ಮಸ್ವರೂಪಾಯ ನಮಃ

ಶ್ರೀಮನ್ನಾರಾಯಣನು ತನ್ನನ್ನು ವಿಭಾಗ ಮಾಡಿ ತನ್ನ ಅಂಶದಲ್ಲಿ

ತ್ರಿಮೂರ್ತಿಗಳನ್ನು ಸೃಜಿಸಿದನು. ಇವರ ಕರ್ತವ್ಯಗಳನ್ನು ವಿಭಾಗ ಮಾಡಿದನು. ತಾನು ಪರಮಾತ್ಮನಾಗಿ ಈ ತ್ರಿಮೂರ್ತಿಗಳಿಗೂ ಹೆಚ್ಚಾಗಿ ಕೇಂದ್ರಿಕೃತನಾಗಿ ಪರಬ್ರಹ್ಮನಾಗಿ ಸೂತ್ರಧಾರನಾದನು. ಈ ಪರಬ್ರಹ್ಮಸ್ವರೂಪವೇ ಪರಮೋಚ್ಚ ಸ್ವರೂಪ, ಓಂಕಾರ ಸ್ವರೂಪ. ಯಾವ ದೇವತಾ ಸ್ವರೂಪವೇ ಆದರೂ ಅದರ ಶಕ್ತಿ, ವರಕೊಡುವ ಮಿತಿ, ಎಲ್ಲವೂ ಒಂದು ಪರಿಮಿತಿಯಲ್ಲಿರುತ್ತವೆ. ಆದರೆ ಪರಬ್ರಹ್ಮಸ್ವರೂಪವಾದ ಓಂಕಾರಮೂರ್ತಿಯದು ಅಪರಿಮಿತ, ಊಹಾತೀತ, ವೇದಾತೀತ, ಗುಣಾತೀತ. ಇಂತಹ ಪರಬ್ರಹ್ಮನಿಗೆ ನಮಸ್ಕಾರಗಳು.

52. ಪಂಚಬ್ರಹ್ಮಾತ್ಮನೇ ನಮಃ

ಪಂಚ - ಐದು, ಬ್ರಹ್ಮ - ಬ್ರಹ್ಮ ವಸ್ತು, ಬ್ರಹ್ಮ ಶಕ್ತಿ, ಆತ್ಮ - ಅಂತಃ ಶಕ್ತಿಯುಳ್ಳವನು - ಪಂಚಬ್ರಹ್ಮಾತ್ಮನು.

1. ಪಂಚಮಹಾಭೂತಗಳನ್ನು ಸೃಷ್ಟಿಕರ್ತ ಬ್ರಹ್ಮನನ್ನು ಮತ್ತು
2. ಪ್ರಾಣಾಪಾನವ್ಯಾನೋದಾನ ಸಮಾನವೆಂಬ ಪಂಚಪ್ರಾಣವಾಯುಗಳನ್ನು
3. ಹತ್ತು ಇಂದ್ರಿಯಗಳನ್ನು, ಮತ್ತು
4. ಅವುಗಳ ಅಧಿಷ್ಠಾತೃ ದೇವತೆಗಳನ್ನು
5. ಮನೋಬುದ್ಧಿ ಅಹಂಕಾರ ಚಿತ್ತ ಮತ್ತು ಆತ್ಮವೆಂಬ ಐದು ಅನ್ನು.

ಈ ಐದು ಸಮೂಹಗಳನ್ನು ವಿಶ್ವವೆಂಬ ತನ್ನ ಉದರದಲ್ಲಿರಿಸಿಕೊಂಡು ಅವುಗಳನ್ನು ಮೂಲದಲ್ಲಿ ಪರಬ್ರಹ್ಮ ಸ್ವರೂಪದಲ್ಲಿರಿಸಿಕೊಂಡಿರುವ ಪರಬ್ರಹ್ಮಸೂತ್ರಧಾರಿಗೆ ಪಂಚಬ್ರಹ್ಮಾತ್ಮನೆಂದು ಕರೆಯಬಹುದು.

ಸರ್ವವನ್ನು ಒಂದು ಓಂಕಾರದಲ್ಲಿ ಅಡಗಿಸಿರುವ ಪರಬ್ರಹ್ಮನು. ಅತ್ಯಾಶ್ಚರ್ಯಕರ ರೂಪಿಯು, ಅಂತಹವನಿಗೆ ನಮಸ್ಕಾರಗಳು.

53. ಬ್ರಹ್ಮಶಿರಸೇ ನಮಃ

ಚತುರ್ಮುಖ ಬ್ರಹ್ಮನು ನಾಲ್ಕು ದಿಕ್ಕುಗಳಿಗೂ ಒಂದೊಂದು ಮುಖವುಳ್ಳವನಾಗಿದ್ದಾನೆ.

ಪದ್ಮನಾಭನ ನಾಭಿಕಮಲದಿಂದ ಬ್ರಹ್ಮನು ಹೊರಬಂದನು. ಪ್ರಳಯಾಂಧಕಾರದಲ್ಲಿ ಏನನ್ನೂ ಕಾಣದವನಾದನು. ಕಮಲದಲ್ಲಿ ಕುಳಿತು ಒಂದೊಂದು ದಿಕ್ಕಿಗೆ ಒಂದೊಂದು ಮುಖಮಾಡಿಕೊಂಡು ವೀಕ್ಷಿಸಿದನು. ಊರ್ಧ್ವಮುಖದಿಂದ ಆಕಾಶವನ್ನು ನೋಡಿದನು. ಈ ಮುಖವು ಕಾರಣಾಂತರದಿಂದ ನಾಶವಾಯಿತು. ಇದಕ್ಕೆ ಬ್ರಹ್ಮಕಪಾಲವೆಂದು ಹೆಸರು ಬಂದಿತು.

ಬ್ರಹ್ಮನ ಶಿರಸ್ಸನ್ನು ಬ್ರಹ್ಮಶಿರಸೇ ನಮಃ ಎಂದು ಹೇಳಿದೆ.

ಪರಬ್ರಹ್ಮನು ಬ್ರಹ್ಮನಿಗೆ ಶಕ್ತಿ ಸ್ವರೂಪವಾಗಿ ನಿಂತು ಸಕಲ ಕೆಲಸಗಳನ್ನು ನಡೆಸುತ್ತಾನೆ. ಆದರಿಂದ ಅವನಿಗೆ ಪೂರ್ವ ಪ್ರಚೋದನಾ ಶಕ್ತಿ ಅಥವಾ ಬ್ರಹ್ಮ ಶಿರಸ್ಸು ಎಂದು ಹೇಳಿದೆ.

ಎಲ್ಲದಕ್ಕೂ ಜ್ಞಾನ ದಾತೃ - ಪರಬ್ರಹ್ಮ. ಬ್ರಹ್ಮನಿಗೂ ತಪಸ್ಸಿನ ಮೂಲಕ ಸೃಷ್ಟಿ ಜ್ಞಾನವನ್ನು ದಯಪಾಲಿಸಿದ ಪರಬ್ರಹ್ಮನಿಗೆ ಬ್ರಹ್ಮಶಿರಸೇ ನಮಃ ಎಂದು ಹೇಳಿದೆ.

54. ಖಶಿರಸೇ ನಮಃ

ಖ - ಆಕಾಶ, (ಸ್ವರ್ಗ, ಸ್ಪರ್ಶೇಂದ್ರಿಯ, ಬಿಂದು, ಒಡೆಯುವುದು).

ಆಕಾಶವನ್ನೇ ತಲೆಯಾಗಿರುವವನು ಯಾರೋ ಅವನು - ಖಶಿರ.

ಪರಮಾತ್ಮನು ಪುರುಷ ರೂಪದಲ್ಲಿ - ವಿಶ್ವವ್ಯಾಪಿಯಾಗಿ ಪಾತಾಳದಲ್ಲಿ ಪಾದವನ್ನೂ, ಭೂಲೋಕದಲ್ಲಿ ನಾಭಿಯನ್ನೂ, ಸ್ವರ್ಗ ಲೋಕದಲ್ಲಿ ಶಿರಸ್ಸನ್ನು ಬರವಂತೆ ಇದ್ದಾನೆ. ವಾಮನಾವತಾರದಲ್ಲಿ ವಟುವು ಬಲಿಯನ್ನು ನಿಗ್ರಹಿಸಲು ಮೂರು ಪಾದ ಭೂಮಿಯನ್ನು ಬೇಡಿ ಈ ರೀತಿ ಬೆಳೆದನು. ಮತ್ತು ಮಹದಾಕಾರವನ್ನು ತನಗೆ ತಾನೇ ತನ್ನ ಇಚ್ಛೆಯಂತೆ ಬೆಳೆಸಿದನು. ಮಹತೋ ಮಹೀಯಾನ್ - ಎಂಬುದಕ್ಕೆ ಇದು ಉದಾಹರಣೆ. ಅವನು ಇದಕ್ಕಿಂತಲೂ ಮಹತ್ತಾದವನು.

ಎಷ್ಟೇ ಮಹದ್ರೂಪನಾದರೂ ಅಣೋರಣೀಯಾನ್ ಆಗಿ ಬಿಂದುಸ್ವರೂಪದಲ್ಲಿ ಅಡಗಿಕೊಂಡು ಬಿಂದುವೇ ಆಗಿರುತ್ತಾನೆ. ಬಿಂದುರೂಪದಲ್ಲಿಯೇ ಜಗತ್ತಿಗೆ ಬೆಳಕನ್ನು ಕೊಡುತ್ತಾನೆ. ಆದರಿಂದ ಖಶಿರಸೇ ನಮಃ ಎಂದರೆ ಪರಬ್ರಹ್ಮರೂಪಿ ಓಂಕಾರನೇ. ಅವನಿಗೆ ನಮಃ.

ಖ - ಆಕಾಶಕ್ಕೆ, ಶಿರಸೇ - ಶಿರಸ್ಸಾಗಿರುವವನು - ಅದನ್ನು ಮೀರಿದವನು ಖಶಿರಸೇ ನಮಃ.

*ಅಥರ್ವಶಿರಸೇ ನಮಃ ನಿತ್ಯಮಶನಿಪ್ರಮಿತಾಯ ಚ ।*
*ನಮಸ್ತೇ ತೀಕ್ಷ್ಣದಂಷ್ಟ್ರಾಯ ಲೋಲಾಯ ಲಲಿತಾಯ ಚ ॥74॥*
*(455-459)*

55. ಅಥರ್ವಶಿರಸೇ ನಮಃ (ನಿತ್ಯಂ - ನಿತ್ಯಾಯ ನಮಃ)

ಅಥರ್ವ - ಅಥರ್ವಣ ವೇದಕ್ಕೆ, ಶಿರಸೇ - ಶಿರಸ್ಸಾಗಿ, ಇರುವವನು ಕಲಶಪ್ರಾಯನು, ಮೂಲದೇವನು, ಮೂಲಸ್ತುತ್ಯಮೂರ್ತಿಯು.

ಅಥರ್ವಣ ವೇದಕ್ಕೆ ಅಧಿ / ಮೂಲ ದೇವತೆಯು, ಆರಾಧ್ಯ ದೈವನು.

ಪರಬ್ರಹ್ಮನುಯ ಸಕಲ ಸೃಷ್ಟಿಗೂ ಅಧಿದೇವನಾಗಿರುತ್ತಾನೆ. ಇಲ್ಲಿ ಅಥರ್ವಣ

ವೇದವನ್ನು ಉದ್ದೇಶಿಸಿ ನಮಸ್ಕರಿಸಲಾಗಿದೆ. ವೇದಗಳು ಪರಮಾತ್ಮನನ್ನು ಕುರಿತು ಹೇಳುವ ವಿಶೇಷ ಮಂತ್ರಗಳು. ಓಂಕಾರವನ್ನು, ಬ್ರಹ್ಮನನ್ನು, ಸೃಷ್ಟಿ ವಿಚಾರಗಳನ್ನು ಹೇಳುತ್ತವೆ. ಇವುಗಳಲ್ಲಿ ಅಥರ್ವಣ ವೇದವು ಮೂರನೆಯ ವೇದ, ಇದು ಪರಮಾತ್ಮನೇ.

ನಿತ್ಯಯ ನಮಃ ಪರಮಾತ್ಮನು ನಿತ್ಯ ಸ್ವರೂಪನು, ಅವಿನಾಶಿ.

56. ಅಶನಿಪ್ರಮಿತಾಯ ನಮಃ

ಅಶನಿ - ವಜ್ರಾಯುಧ, ಮಿಂಚು, ಅಸ್ತ್ರ, ಇಂದ್ರ, ಬೆಂಕಿ, ಅಗ್ನಿ.

ಅಶನ - ಆಹಾರ,

ಪ್ರ - ಮಿತ - ಮಿತಗೊಳಿಸುವವನು,

ಇಂದ್ರ, ಅಗ್ನಿ ಮುಂತಾದವರ ಶಕ್ತಿಯನ್ನು ಎಷ್ಟುಬೇಕೋ ಅಷ್ಟನ್ನೇ ಕೊಡುವವನು.

ವಜ್ರಾಯುಧ, ಅಸ್ತ್ರಗಳಿಗೂ ಶಕ್ತಿಯನ್ನು ಉಚಿತವಾಗಿ ಕೊಡುವವನು.

ಸಕಲ ಚರಾಚರ ವಸ್ತುಗಳಿಗೂ, ದೇವತೆಗಳಿಗೂ, ಆಯುಧಗಳಿಗೂ ಸಾಕಷ್ಟು ಶಕ್ತಿಯನ್ನು ಸಕಾಲದಲ್ಲಿ ಮಿತವಾಗಿ ಕೊಡುತ್ತಾನೆ.

ಉದಾಹರಣೆಗಾಗಿ ಆಯುಧಗಳಲ್ಲಿ ಉತ್ತಮವಾದ ಇಂದ್ರನ ವಜ್ರಾಯುಧಕ್ಕೇನೆ ಅದರ ಶಕ್ತಿಗೆ ಮಿತಿಯಿದೆ ಎಂದರೆ ತಕ್ಷಣ ಊಹಿಸಲು ಕಷ್ಟ.

ಹಾಗೆಯೇ ದೇವತೆಗಳಿಗೂ ಶಕ್ತಿಯನ್ನು ಮಿತಮಾಡುವವನು ಎಂದರೆ ಇನ್ನೂ ಆಶ್ಚರ್ಯಕರವೇ.

ಇವು ನಮ್ಮ ಮನಸ್ಸು ಬುದ್ಧಿಗಳಿಗೆ ನಿಲುಕದ ವಿಚಾರ.

ಅಶನ - ಎಂದರೆ ಆಹಾರ, ಅಶನಿ - ಆಹಾರದಲ್ಲಿ, ಪ್ರಮಿತ - ಸಾಕ್ಷಷ್ಟು ಮಿತ ಮಾಡುವವನು ಎಂದರೆ ಪರಮಾತ್ಮನಿಂದಲೇ ಸಾಧ್ಯ. ಇತರ ಯಾರಿಂದಲೂ ಸಾಧ್ಯವಿಲ್ಲ.

ಪ್ರತಿಯೊಂದು ದೇಹಕ್ಕೂ ಮಿತಾಹಾರ ಮಾಡುವೆವೆಂದರೆ ಅದೂ ನಿರಂತರ ಹೀಗೆ ಸಕಾಲದಲ್ಲಿ ನಡೆಸುವುದೆಂದರೆ ಅಸಮಾನ್ಯವೇ ಸರಿ. ಪರಮಾತ್ಮನೊಬ್ಬನನ್ನು ಬಿಟ್ಟರೆ ಇದು ಯಾರಿಂದಲೂ ಸಾಧ್ಯವಿಲ್ಲ. ಅದರಿಂದ ಪರಮಾತ್ಮನು ಅಶನಿಪ್ರಮಿತಾಯ ನಮಃ ಎಂಬುದಕ್ಕೆ ಸರಿಯಾದವನು.

57. ತೀಕ್ಷ್ಣದಂಷ್ಟ್ರಾಯ ನಮಃ

ತೀಕ್ಷ್ಣ - ಎಂದರೆ ಚೂಪಾದ, ಕಠಿಣವಾದ, ಬಲವಾದ

ದಂಷ್ಟ್ರಾಯ - ಕೋರೆದಾಡೆಗಳುಳ್ಳವನು ಯಾರೋ ಅವನು.

ಸಿಂಹದ ಮುಖದಲ್ಲಿ ತೀಕ್ಷ್ಣವಾದ ಕೋರೆದಾಡೆಗಳಿವೆ. ಆದರಿಂದ ನರಸಿಂಹಸ್ವಾಮಿಯು ತೀಕ್ಷ್ಣದಂಷ್ಟ್ರನು. ಉಗ್ರ ಸ್ವರೂಪವನ್ನು ಈ ನಾಮವು ಉದ್ದೇಶಿಸುತ್ತದೆ.

58. ಲೋಲಾಯ ನಮಃ

ಲೋಲ - ಎಂದರೆ ಚಂಚಲ, ಅಸ್ಥಿರ, ಉತ್ಸುಕ, ಆಸಕ್ತನು.

ಲೋಲಾ - ಎಂದರೆ ಮಿಂಚು, ನಾಲಿಗೆ.

ಪರಮಾತ್ಮನು ಸರ್ವಕಾರ್ಯದಲ್ಲಿಯೂ ತನ್ನನ್ನೇ ಕಾರಣರೂಪನಾಗಿ ತೊಡಗಿಸಿಕೊಳ್ಳುತ್ತಾನೆ. ಸೂತ್ರಧಾರನಾಗಿ ಎಲ್ಲದರಲ್ಲಿಯೂ ಇರುತ್ತಾನೆ. ಇದರಿಂದ ಲೋಲಾಯ ನಮಃ ಎನ್ನುತ್ತೇವೆ.

ಲೋಲಾ ಎಂದು ಅರ್ಥಮಾಡಿದರೆ ಪರಮಾತ್ಮನ ಕಾರ್ಯವೆಲ್ಲವೂ ಮಿಂಚಿನಂತೆ ಪ್ರಕಾಶಮಾನವಾದುದು. ಸರ್ವದರಲ್ಲಿಯೂ ತನ್ನ ಅಂಶದಂತೆ ತೇಜಸ್ಸನ್ನು ತುಂಬುತ್ತಾನೆ. ಮತ್ತು ಚತುರತೆಯನ್ನು ಪ್ರಕಟಿಸುತ್ತಾನೆ.

59. ಲಲಿತಾಯ ನಮಃ

ಲಲಿತ - ಎಂದರೆ ಮೋಹವುಳ್ಳವನು, ಸುಂದರ ರೂಪನು, ರಮಣೀಯ, ಮೃದು ಸ್ವಭಾವದನು, ಸೌಂದರ್ಯದಿಂದ ಕೂಡಿದವನು.

ಪರಮಾತ್ಮನು ತನ್ನ ಯಾವುದೇ ದೇವತೆಯ ಅಥವಾ ದೇವರ ರೂಪದಲ್ಲಿದ್ದರೂ ತನ್ನದೇ ಆದ ವೈಶಿಷ್ಟ್ಯವನ್ನು ಇರಿಸಿರುತ್ತಾನೆ. ಮತ್ತು ಅದನ್ನು ಲಲಿತವಾಗಿ ಮಾಡುತ್ತಾನೆ. ಆದರಿಂದ ಲಲಿತಾಯ ನಮಃ ಎಂದು ಹೇಳುತ್ತೇವೆ.

ಸೃಷ್ಟಿಯಲ್ಲಿರುವ ಪ್ರತಿಯೊಂದು ವಸ್ತು, ಜೀವಿಯ ದೇಹಗಳು, ರೂಪಗಳು, ತಮ್ಮದೇ ಆದ ವೈಶಿಷ್ಟ್ಯವನ್ನು ತೋರ್ಪಡಿಸುತ್ತವೆ. ಲಲಿತ ಗುಣವನ್ನು ಹೊಂದಿರುತ್ತವೆ. ಆದರಲ್ಲಿ ಪರಮಾತ್ಮನ ಕಲ್ಪನೆಯ ಲಾಲಿತ್ಯವಿರುತ್ತದೆ. ಅದಕ್ಕೆ "ಲಲಿತಾಯ ನಮಃ" ಎಂದು ಸಂಬೋಧಿಸುತ್ತೇವೆ.

ಪರಮಾತ್ಮನು ಪುರುಷ, ಪ್ರಕೃತಿ, ಮಾಯೆ ರೂಪದಲ್ಲಿ ತನ್ನ ಕೋಮಲತೆ, ಮೃದು ಸ್ವಭಾವ, ಲಲಿತ ಗುಣವನ್ನು ತೋರ್ಪಡಿಸುತ್ತಾ, ಪ್ರಕೃತಿರೂಪದಲ್ಲಿ ತನ್ನ ಭಕ್ತರಿಗೆ ಕ್ಷಿಪ್ರ ಪ್ರಸಾದವನ್ನು ಕೊಡುತ್ತಾನೆ. ಅದರಿಂದ ಲಲಿತಾ ದೇವಿಯು "ಕ್ಷಿಪ್ರ ಪ್ರಸಾದಿನಿ" ಮತ್ತು ಭಕ್ತರನ್ನು ಮತ್ತು ಸಕಲ ಜೀವಿಗಳನ್ನು ತನ್ನ ಹತ್ತಿರ ಬಂದವರು, ಬರದವರು ಎಂಬ ತಾರತಮ್ಯವಿಲ್ಲದೆ ಕಾಯುತ್ತಾಳೆ. ತಾಯಿಯು ಮಕ್ಕಳನ್ನು ಪ್ರೀತಿಯಿಂದ ಲಾಲಿಸುವ ಹಾಗೆ ದೇವಿಯು ಸದಾ ತನ್ನ ಕೃಪಾಕಟಾಕ್ಷವನ್ನು ಬೀರುತ್ತಾಳೆ. ಆದರಿಂದಲೇ "ಲಲಿತಾ" ಎಂಬ ಹೆಸರು ಬಂದಿರುವುದು.

ಪುರುಷನು ಮತ್ತು ಮಾಯೆಯೂ ಸಹ ಪರಮಾತ್ಮನಲ್ಲಿ ವ್ಯಾಮೋಹ ಬರುವಂತೆ ಮಾಡಿ ತಮ್ಮ ಲಾಲಿತ್ಯವನ್ನು ಪ್ರಕಟಿಸುತ್ತವೆ.

ಪರಮಾತ್ಮನು ಯಾವ ರೂಪದಲ್ಲಿಯೇ ಇರಲಿ, ಸಕಲ ಜೀವಿಗಳ ಮೇಲೆ ತನ್ನ ಕರುಣಾರಸವನ್ನು ಹೇರಳವಾಗಿ ಕೊಟ್ಟು ಸಲಹುತ್ತಾನೆ. ಅವನು ಮೇಲ್ನೋಟದಲ್ಲಿ ಏನೇ ಮಾಡಲಿ, ಅದಕ್ಕೆ ಅವನ ಕೃಪೆ, ಸಂಕಲ್ಪವಿದ್ದೇ ಇರುತ್ತದೆ.

ಇದರಿಂದ ನಾವು ಪರಮಾತ್ಮನು ನಮ್ಮ ಯೋಗಕ್ಷೇಮದಲ್ಲಿ ಎಷ್ಟು ಕಾತುರನಾಗಿದ್ದಾನೆಂದು ತಿಳಿಯುವುದು ಹೋಗಲಿ, ಊಹಿಸಲೂ ಸಹಾ ಅಸಾಧ್ಯ. ಇದು ಅವನ ಲಾಲಿತ್ಯಸ್ವಭಾವ. ಅದಕ್ಕಾಗಿಯೇ ಲಲಿತಾಯ ನಮಃ ಎಂದು ಹೇಳಿ ನಮಸ್ಕರಿಸುವುದು.

*ಲಾವಣ್ಯಾಯ ಲವಿತ್ರಾಯ ನಮಸ್ತೇ ಭಾಸ್ಕರಾಯ ಚ ।*
*ಲಕ್ಷಣಜ್ಞಾಯ ಲಕ್ಷ್ಯಾಯ ಲಕ್ಷಣಾಯ ನಮೋ ನಮಃ ॥75॥*
*(460-465)*

60. ಲಾವಣ್ಯಾಯೇ ನಮಃ

ಲಾವಣ್ಯ - ಎಂದರೆ ಸುಂದರವಾಗಿರುವುದು, ಮನಮೋಹಕ ರೀತಿಯಲ್ಲಿ ಇರುವುದು, ಆಕರ್ಷಕ ರೀತಿಯಲ್ಲಿ ತೋರ್ಪಡಿಸುವುದು, ಒಳಗೂ, ಹೊರಗೂ ಒಂದೇ ರೀತಿ ಭಾವನೆಯಿರುವುದು.

ಇಷ್ಟೆಲ್ಲ ರೀತಿಯಲ್ಲಿ ಪ್ರತಿ ಯೋನಿಯಲ್ಲಿಯ ಜೀವಿಯು ತನ್ನಂತಿರುವ ಇತರರ ಹಾಗೆ ಇರುವುದು ಕಷ್ಟ ಮತ್ತು ಅಪರೂಪ. ಬೇರೆ ಯೋನಿಯಲ್ಲಿ ಇರಬಹುದೇನೋ, ಮನುಷ್ಯ ಯೋನಿಯಲ್ಲಿ ಇರುವುದು ಬಹಳ ಅಪರೂಪ, ಅದು ಇದ್ದರೂ ಮೇಲ್ನೋಟಕ್ಕೆ ಮಾತ್ರ ಇರಬಹುದು.

ಒಳಗೆ ಆ ರೀತಿ ಭಾವನೆ ಉತ್ಪನ್ನವಾಗುವುದು ಅಸಾಧ್ಯ.

ಆದರೆ ಪರಮಾತ್ಮನಲ್ಲಿ ಈ ಗುಣ ಇದ್ದೇ ಇದೆ. ಅದನ್ನು ಅವನು ತನ್ನ ಪ್ರತಿಯೊಂದು ಅಂಗಾಂಗಗಳಲ್ಲಿಯೂ ಪ್ರಕಟಿಸುತ್ತಾನೆ. ಸಕಲ ಯೋನಿಗಳ ಸಕಲ ಜೀವಿಗಳನ್ನು ತತ್‌ಕ್ಷಣದಲ್ಲಿ ಆಕರ್ಷಿಸುತ್ತಾನೆ. ಒಂದು ಸಲ ತನ್ನ ಕಡೆಗೆ ಎಳೆದನೆಂದರೆ ಆ ಜೀವಿಯು ಮತ್ತೆ ಈ ಸಂಸಾರ ಕೂಪಕ್ಕೆ ಬೀಳಲು ಸಾಧ್ಯವಿಲ್ಲ.

ಮನ ಮೋಹಕವಾದ ಪರಮಾತ್ಮನಿಗೆ ಒಳಗೆ ಹೊರಗೆ ಎಂಬ ಭೇದವಿಲ್ಲ. ಅವನು ಎಲ್ಲೆಲ್ಲೂ ಇದ್ದಾನೆ ಮತ್ತು ತನ್ನ ಇರುವಿಕೆಯನ್ನು ಪ್ರಕಟಿಸುತ್ತಲೇ ಇರುತ್ತಾನೆ. "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ" ಎಂದು ಅದರಿಂದ ಅವನು ಲಾವಣ್ಯ ಸ್ವರೂಪನು ಎಂದು ಪ್ರಕಟಿಸುತ್ತಾನೆ.

ಲಾವಣ್ಯ ಗುಣವುಳ್ಳವನು, ಸರ್ವರಿಗೂ ಸಮಾನ ರೀತಿಯಲ್ಲಿ ಲಭ್ಯನು. ಆದರೆ ಜೀವಿಗಳು ಅವನನ್ನು ಪಡೆಯುವ ಸ್ಥಿತಿಯನ್ನು ಹೊಂದಬೇಕು. ಒಂದು ಸಾರಿ ಅವನನ್ನು ಲಾವಣ್ಯ ರೀತಿಯಲ್ಲಿ ಊಹಿಸಿಕೊಂಡರೆ ಸಾಕು, ಭಕ್ತನು ಪರವಶನಾಗಿ ತನ್ನ ಸ್ವಂತ ರೀತಿಯ ಪ್ರಾಪಂಚಿಕ ಇರುವಿಕೆಯಿಂದ ಬೇರ್ಪಟ್ಟು, ಆತ್ಮಸ್ವರೂಪವನ್ನು ಹೊಂದುತ್ತಾನೆ ಮತ್ತು ಪರಮಾತ್ಮನನ್ನು ಕಂಡುಕೊಳ್ಳುತ್ತಾನೆ. ಇದು ಅವನ ಕೃಪೆ, ಭಕ್ತನ ಸಂಸ್ಕಾರ, ಪರಮಾತ್ಮನನ್ನು ಸೇರಬೇಕೆಂಬ ಉತ್ಕಟ ಆಸೆ, ಪರಿತಪಿಸುವಿಕೆಗಳಿಂದಲೇ ಸಾಧ್ಯ. ಇದಕ್ಕೆ ಅವನೇ ಒಬ್ಬ ಗುರುವನ್ನು ಕಲ್ಪಿಸಿ ತನಗೂ, ಭಕ್ತನಿಗೂ ಸೇತುವೆಯಾಗಿರುವಂತೆ ಗುರುವನ್ನು ಒದಗಿಸುತ್ತಾನೆ. ಇದೇ ಅವನ ಲಾಲಿತ್ಯ ಗುಣ "ಲಲಿತಾಯ ನಮಃ".

ಪ್ರಪಂಚವನ್ನು ತನ್ನ ಸ್ವ - ಇಚ್ಛೆಯಿಂದ ಸೃಷ್ಟಿಸಿ, ತಾನು ಲೀಲಾ ವಿನೋದದಿಂದ ಸಂತೋಷಪಡುವುದು ಅವನ "ಲಾಲಿತ್ಯ" ಕಲೆ. ಅದರಿಂದಲೇ ಅವನಿಗೆ "ಲಲಿತಾಯ ನಮಃ" ಎಂದು ಗೌರವಿಸುತ್ತೇವೆ. ಲಾವಣ್ಯಾಯ ನಮಃ ಎಂದು ಹೇಳುತ್ತೇವೆ.

51. ಲವಿತ್ರಾಯ ನಮಃ

ಲವ ಎಂದರೆ ಅಂಶ, ಕಣ

ಅಂಶಗಳಿಂದ ಮತ್ತು ತನ್ನ ಕಣಗಳಿಂದ ಜೀವಿಗಳನ್ನು ಸಂಸಾರ ಸಾಗರಕ್ಕೆ ಹೊರ ಹೊಮ್ಮಿ ಮತ್ತೆ ಅವುಗಳಿಗೆ ಮುಕ್ತಿಯನ್ನು ಪರಮಾತ್ಮನೇ ಕೊಡುತ್ತಾನೆ.

ಈ ಅಂಶ, ಕಣಗಳಿಗೆ ಲವ ಎಂದು ಹೆಸರು.

ಲವರೂಪವನ್ನು ತನ್ನಲ್ಲಿ ಇಟ್ಟುಕೊಂಡಿರುವವನು ಯಾರೋ ಅವನು ಪರಮಾತ್ಮ - ಲವಿತ್ರನು.

ಅಥವಾ ಲವರೂಪಗಳು ಅವನಿಂದ ಬಂದಿರುವುದರಿಂದ ಅವನಿಗೆ ಲವಿತ್ರವೆಂದು ಹೆಸರು - ಅದರಿಂದ ಲವಿತ್ರಾಯ ನಮಃ.

ಅಥವಾ ಸಕಲ ಜೀವಕೋಟಿ, ಚರಾಚರ ವಸ್ತುಗಳೂ, ಸೃಷ್ಟಿಯಲ್ಲಿರುವ ಸಕಲ ದೇವತೆ, ದೇವರುಗಳು, ಬ್ರಹ್ಮಾಂಡಗಳು, ಗ್ರಹಗಳು, ಪಂಚಮಹಾಭೂತಗಳು - ಎಲ್ಲವನ್ನು ಪ್ರಳಯಕಾಲದಲ್ಲಿ ಲವ ರೂಪಮಾಡಿ, ಕ್ರೋಢೀಕರಿಸಿ ತನ್ನ ಉದರದಲ್ಲಿ ಅಡಗಿಸಿಕೊಳ್ಳುವುದರಿಂದ ಇವನನ್ನು "ಲವಿತ್ರ" ಎಂದು ಬ್ರಹ್ಮ ದೇವರು ನರಸಿಂಹನನ್ನು ತೃಪ್ತಿಪಡಿಸಲು, ಕ್ರೋಧರೂಪದಿಂದ ಶಾಂತತೆಗೆ ತರಿಸಲು ಈ ರೀತಿ ಪೊಗಳಿದ್ದಾರೆ. ಅದರಿಂದ ಉಗ್ರನರಸಿಂಹಸ್ವಾಮಿಯೂ ಶಾಂತನಾಗಿ ಲಕ್ಷ್ಮೀ ನರಸಿಂಹನಾಗಿ ಕಂಗೊಳಿಸಿ ವರಗಳನ್ನು ದಯಪಾಲಿಸಿದನು.

**462. ಭಾಸ್ಕರಾಯ ನಮಃ**

ಭಾಃ ತೇಜಸ್ಸು, ಬೆಳಕು, ಪ್ರಕಾಶ, ಇದನ್ನು ಕರ - ಮಾಡುವವನು, ಭಾಸ್ಕರ - ಸೂರ್ಯ.

ಸಕಲ ಜೀವಕೋಟಿ, ಚರಾಚರ ವಸ್ತುಗಳಿಗೆ ಸಮಾನವಾಗಿ ಬೆಳಕನ್ನು ಕೊಡುವವನು - ಸೂರ್ಯನು.

ಚಂದ್ರನಿಗೆ ಬೆಳಕನ್ನು ಕೊಡುವವನು - ಸೂರ್ಯದೇವನು.

ಸೂರ್ಯನನ್ನೇ ಕೇಂದ್ರವಾಗಿ ನಿಲ್ಲಿಸಿ, ಪರಮಾತ್ಮನು ತನ್ನ ಸಂಕಲ್ಪಮಾತ್ರದಿಂದ ಸಕಲ ಗ್ರಹಗಳನ್ನು, ಭೂಮಂಡಲವನ್ನು ಸೂರ್ಯಮಂಡಲದಲ್ಲಿ ತಿರುಗಿಸುತ್ತಾನೆ. ಆದರೆ ಸೂರ್ಯನು ಚಲಿಸುವನೆಂದು ಅವನ ಚಲನೆಯಿಂದ ಹಗಲು ರಾತ್ರಿಗಳು ಉಂಟಾಗುವುದೆಂದು ನಂಬಿಕೆ ಇದೆ.

ಪ್ರತಿಯೊಂದು ದೇಹದಲ್ಲಿಯೂ ಜೀವಿಯು ಇರುತ್ತದೆ. ಈ ಆತ್ಮವು ಪ್ರಕಾಶಮಾನವಾಗಿ ದೇಹಕ್ಕೆ ತೇಜಸ್ಸನ್ನು ಉಂಟುಮಾಡುತ್ತದೆ. ಆತ್ಮವು ಪರಮಾತ್ಮನಿಂದ ಹೊರ ಹೊಮ್ಮಿದ ಪ್ರಕಾಶಮಾನವಾದ ಅಂಶ, ತೇಜಃಪುಂಜ, ಆತ್ಮವೇ ಜ್ಯೋತಿ. ಈ ಆತ್ಮಜ್ಯೋತಿಯನ್ನು ಕಂಡುಕೊಳ್ಳುವುದೇ ಪರಮಗುರಿ. ದೇಹವೇ ನಾನು ಎಂಬ ಅಭಿಮಾನದಿಂದ ಸಂಸಾರ ಸಾಗರದಲ್ಲಿ ಮುಳುಗಿ ತೇಲುತ್ತಿರುವಾಗ ಆತ್ಮವೆಂಬ ಒಂದು ತೇಜಸ್ಸು ತನ್ನಲ್ಲಿಯೇ ಇದೆ ಎಂಬುದು ಅರಿವಿಗೆ ಬರುವುದಿಲ್ಲ. ಯಾವಾಗ ಇದು ಅರಿವಿಗೆ ಬರುವುದೋ ಆಗ ''ನಾನು'' ಎಂಬುದು ಹೋಗಿ ಆತ್ಮಜ್ಯೋತಿಯು ಬುದ್ಧಿ ಮನಸ್ಸಿನಲ್ಲಿ ಪ್ರಕಾಶಿಸುತ್ತದೆ. - ಅದು ''ಭಾಸ್ಕರ'' ಆಗುತ್ತದೆ.

ಪ್ರತಿಯೊಬ್ಬರಲ್ಲಿಯೂ ಆತ್ಮವು ಭಾಸ್ಕರರೂಪದಲ್ಲಿ ಇರುತ್ತದೆ. ಅದೇ ಪರಮಾತ್ಮನ ಅಂಶ - ಅಥವಾ ಪರಮಾತ್ಮ - ಇದು ಪರಮಾತ್ಮನಲ್ಲಿ ಲೀನವಾಗುವುದೇ ಎಲ್ಲಾ ಜೀವಿಗಳ ಪರಮ ಗುರಿ - ಸಾಧನೆ.

ಸಕಲ ಜೀವಿಗಳಿಗೂ, ಸಕಲ ಬ್ರಹ್ಮಾಂಡಕ್ಕೂ ಬೆಳಕನ್ನು ಕೊಡುವವನು ಪರಮಾತ್ಮ - ಅವನು ಅದರಿಂದ ಭಾಸ್ಕರ ಎಂದಾಗಿದ್ದಾನೆ.

ಪರಮಾತ್ಮನೇ ದಿವ್ಯಜ್ಯೋತಿ, ಜ್ಯೋತಿಗಳಿಗೆ ಜ್ಯೋತಿ - ''ತೇಜಸಾಂ ಅಪಿ ತೇಜಸ್ವಿ''.

ಈ ಕಾರಣದಿಂದ ಪರಬ್ರಹ್ಮನನ್ನು ಭಾಸ್ಕರ ಎಂದು ನಮಿಸುತ್ತೇವೆ.

ಜೀವಕೋಟಿಗೆ ಮಾತ್ರವಲ್ಲ, ಸಕಲ ದೇವ ದೇವತೆಗಳಿಗೂ ಇಹ ಪರಲೋಕದಲ್ಲಿರುವ ಶಕ್ತಿಗಳಿಗೂ ಬೆಳಕನ್ನು ಕೊಡುವವನು ಅವನೇ - ಅವುಗಳಲ್ಲಿ ಇರುವವನೂ ಅವನೇ - ಅವನಿಲ್ಲದಿದ್ದರೆ ಅವೆಲ್ಲ ಪಂಚಭೂತಗಳ

ಜಡದೇಹ - ಕೆಲಸಕ್ಕೆಬಾರದವು. ಆತ್ಮದ ಒಂದು ವಿಶೇಷವೆಂದರೆ ಆತ್ಮವು ಯಾವಾಗ ದೇಹವನ್ನು ಬಿಟ್ಟು ಹೊರ ಹೊರಡುವುದೋ ಆಗ ತನ್ನ ಜೊತೆಯಲ್ಲಿ ಪಂಚಪ್ರಾಣಗಳನ್ನೂ, ಮನಬುದ್ಧಿ ಅಹಂಕಾರ ಚಿತ್ತಗಳನ್ನು ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯಗಳನ್ನು ಸತ್ವರಜಸ್ತಮೋಗುಣಗಳನ್ನು ಒಂದು ಸಮುದಾಯ ರೂಪದಲ್ಲಿ ತೆಗೆದುಕೊಂಡು ಹೋಗುತ್ತದೆ. ಬಿಡಿ ಬಿಡಿಯಾದ ಇವುಗಳೊಡನೆ ಸಂಸಾರ ಸಾಗರದಲ್ಲಿ ಸಂಗ್ರಹಿಸಿದ ಕರ್ಮಗಳನ್ನು ಸಂಸ್ಕಾರ ರೂಪದಲ್ಲಿ ಅಂಟಿಸಿಕೊಂಡು ಹೋಗುತ್ತದೆ. ಭಗವಂತನ ಕೃಪೆಯಿಂದ ಇವುಗಳು ಒಂದೊಂದಾಗಿ ಕಳಚಿ ಹೋಗುವವರೆಗೆ ಅದು - ಆತ್ಮಜ್ಯೋತಿ - ಆತ್ಮ ಭಾಸ್ಕರನು - ದೇಹದಿಂದ ದೇಹಕ್ಕೆ ಹೋಗುತ್ತಾ ಇರುತ್ತದೆ. ಇದು ಭಗವಂತನ ಸಂಕಲ್ಪ.

63. ಲಕ್ಷಣಜ್ಞಾಯ ನಮಃ

ಲಕ್ಷಣ - ಗುಣಗಳನ್ನು, ಸ್ವಭಾವಗಳನ್ನು, ಜ್ಞ - ತಿಳಿದವನು.

ಸಂಪೂರ್ಣವಾಗಿ ಆತ್ಮಕ್ಕೆ ಅಂಟಿರುವ ವಾಸನೆಗಳ ಪ್ರಭಾವವನ್ನು ತಿಳಿದಿರುವವನು. ಸಂಸಾರ ಸಾಗರದ ವಿಕಾರಗಳನ್ನು ತಿಳಿದವನು. ಜೀವಿಗಳ ಸಂಕಟಗಳನ್ನು ತಿಳಿದಿರುವವನು, ಜನ್ಮ, ಹುಟ್ಟು ಸಾವುಗಳ ರಹಸ್ಯವನ್ನು ತಿಳಿದಿರುವವನು, ಇಹ ಪರಲೋಕಗಳ ವಿಚಾರವನ್ನು ತಿಳಿದಿರುವವನು, ತಾನೇ ರೂಪಿಸಿದ ಬ್ರಹ್ಮಾಂಡದ ಲಕ್ಷಣಗಳನ್ನು ತಿಳಿದಿರುವವನು, ಕಾಲದೇವನ ಆದಿ ಅಂತ್ಯಗಳನ್ನು ಅರಿತವನು, ಕಲ್ಪ, ಪ್ರಳಯ ಮತ್ತು ಅಂತಹ ಅಂತರಕಾಲದಲ್ಲಿ ನಡೆಯುವುದನ್ನು ಅರಿತವನು. ಹೀಗಿರುವಾಗ ಈ ಸೂತ್ರಧಾರನಾದ ಪರಬ್ರಹ್ಮ - ಓಂಕಾರದ ಪ್ರಭಾವವನ್ನು ಅರಿಯುವವರು ಯಾರು? ಅವನಲ್ಲದೆ ಬೇರೆ ಯಾರಿದ್ದಾರೆ - ಅವನು ಅಸಮಭವನು. ಸರ್ವ ಲಕ್ಷಣಗಳನ್ನು ತಿಳಿದಿರುವವನಿಗೆ ಲಕ್ಷಣಜ್ಞಾಯ ನಮಃ ಎನ್ನುವುದು ಎಷ್ಟು ಸಮಂಜಸ.

ಪರಮಾತ್ಮನು ಸರ್ವಜ್ಞನು. ಸರ್ವಲಕ್ಷಣ ಸಂಪನ್ನನು ಅದರಿಂದ ಲಕ್ಷಣಜ್ಞಾಯ ನಮಃ ಎಂದು ನಮಸ್ಕರಿಸುತ್ತೇವೆ.

64. ಲಕ್ಷ್ಯಾಯ ನಮಃ

ಲಕ್ಷ್ಯ ಎಂದರೆ ಗುರಿ, ಇಂತಹದನ್ನು ಸಾಧಿಸಿ ಮುಟ್ಟಬೇಕೆಂಬ ಸಂಕಲ್ಪಕ್ಕೆ ಲಕ್ಷ್ಯ ಎನ್ನುತ್ತೇವೆ. ಮನಸ್ಸಿನಲ್ಲಿ ಮಾಡಿದ ನಿರ್ಧಾರಕ್ಕೆ ಸಂಕಲ್ಪ ಎನ್ನುತ್ತೇವೆ. ಈ ಸಂಕಲ್ಪದ ವೈಶಿಷ್ಟ್ಯವೆಂದರೆ, ನಿರ್ಧರಿಸಿ ಅದನ್ನು ಕಾರ್ಯರೂಪಕ್ಕೆ ತರುವ ಮೊದಲು, ಇಲ್ಲವೆ ತಂದು ಸಾಧಿಸುತ್ತಿರುವಾಗ ಅಥವಾ ಸಾಧನೆಯು ಪೂರ್ಣಕಾರ್ಯಗತವಾಗುವುದರೊಳಗೆ ಇನ್ನೊಂದು ಸಂಕಲ್ಪವು ಇದರ ಮೇಲೆ ಪ್ರಭಾವ ಬೀರಿ ಮೊದಲಿನ ಸಂಕಲ್ಪವನ್ನು ಬದಿಗೊತ್ತುವಂತೆ ಮಾಡುತ್ತದೆ. ಆಶ್ಚರ್ಯವೆಂದರೆ ಪ್ರತಿಯೊಂದು ಸಂಕಲ್ಪದ ಮೇಲೆ ಹೀಗೆಯೇ

ಹಲ್ಲೆಯಾಗುತ್ತಿರುತ್ತದೆ, ಕಾರಣ ಬುದ್ಧಿ ಮನಸ್ಸುಗಳಿಗೆ ತಮ್ಮ ನಿರ್ಧಾರ ಬದಲಾಯಿಸುವ ಗುಣವಿರುವುದರಿಂದ ಹೀಗಾಗುತ್ತದೆ. ಮನಸ್ಸು ಗಗನಾಕಾರವಾದ್ದು, ಲೆಕ್ಕವಿಲ್ಲದಷ್ಟು ವಿಚಾರಗಳು ಒಂದೇ ಸಮಯದಲ್ಲಿ ಪ್ರಕಟವಾಗಿ ತಮ್ಮ ತಮ್ಮ ಸಾರ್ಥಕತೆಯನ್ನು ಪಡೆಯಲು ಹೊಡೆದಾಡುವುದು ಸಾಮಾನ್ಯ. ಹೀಗಾಗಿ ಮನಸ್ಸು ತನ್ನಲ್ಲಿರುವ ಚಂಚಲತೆಯನ್ನು ಹಿಡಿತದಲ್ಲಿಡುವುದು ಸಾಧ್ಯವಿಲ್ಲ, ಗೀತೆಯಲ್ಲಿ ಅರ್ಜುನನು ಕೃಷ್ಣನಿಗೆ ಹೇಳುತ್ತಾನೆ "ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಡಮ್ ||"

ಕೃಷ್ಣನ ಉತ್ತರ - ಅಸಂಶಯಂ ಮಹಾಬಾಹೋ, ವಾಯೋರಿವ ಸುದುಷ್ಕರಮ್ ||

ಗುರಿಯನ್ನು ಸಾಧಿಸಬೇಕಾದರೆ ಮನೋ ನಿಗ್ರಹ ಬೇಕು. ಇದಕ್ಕೆ ಪರಮಾತ್ಮನ ಕೃಪೆಯೇ ಸಹಾಯಕವಾಗುತ್ತದೆ.

ಮನುಷ್ಯನ ಗುರಿಗಳು ಹರಿತವಾಗಿರುತ್ತವೆ. ಇತರ ಪ್ರಾಣಿಗಳ ಗುರಿಗಿಂತ ಉತ್ತಮ. ಏಕೆಂದರೆ ಮನುಷ್ಯನಲ್ಲಿ ಮನಸ್ಸು, ಬುದ್ಧಿಗಳು ಜೊತೆ ಜೊತೆಯಾಗಿ ವಿಕಸನವಾಗುವುದಕ್ಕೆ ಸಾಧ್ಯ. ಬುದ್ಧಿಯು ತನ್ನ ವಿವೇಕತನದಿಂದ ಉತ್ತಮವಾಗಿ ನಿರ್ಧರಿಸಲು ಶಕ್ಯ.

ಪ್ರಪಂಚದಲ್ಲಿ ಜೀವಿಗಳು ಸಾಧಿಸಬೇಕಾದ ಪರಮೋಚ್ಚ ಗುರಿ ಎಂದರೆ ಪರಮಾತ್ಮನ ಕೃಪೆಯನ್ನು ಪಡೆಯುವುದು, ಮನಶ್ಶಾಂತಿಯನ್ನು ಪಡೆಯುವುದು, ಪಡೆದ ಶಾಂತಿಯು ಚಿರಕಾಲ ಇರುವಂತೆ ಮಾಡುವುದು. ಪ್ರಾಪಂಚಿಕ ಇಚ್ಛೆಗಳಿಗಿಂತ ಉತ್ತಮವಾದ ಗುರಿ ಪರಮಾತ್ಮನನ್ನು ಸೇರಿ ಮತ್ತೆ ಈ ಜನನ ಮರಣ, ಸಂಸಾರಚಕ್ರದಿಂದ ಬಿಡುಗಡೆ ಹೊಂದುವುದು, ನಂತರ ಪರಮಾತ್ಮನಲ್ಲಿಯೇ ಸದಾಕಾಲಕ್ಕೂ ಲೀನವಾಗಿಬಿಡುವುದು.

ಈ ಗುರಿಗಳು ಮುಂದಿನದು ಹಿಂದಿನದಕ್ಕಿಂತ ಉದಾತ್ತವಾದುವುಗಳು. ಹಿಂದಿನದನ್ನು ಸಾಧಿಸಿದ ಮೇಲೆಯೇ ಮುಂದಿನದು ಲಭ್ಯವಾಗುತ್ತದೆ. ಇದಕ್ಕೆ ಪರಮಾತ್ಮನ ಸಂಕಲ್ಪ, ನಮ್ಮ ಸಂಸ್ಕಾರ, ಶ್ರದ್ಧೆ, ಭಕ್ತಿಗಳು ಮುಖ್ಯ. ಅನನ್ಯ ಶ್ರದ್ಧೆ, ಅವ್ಯಭಿಚಾರಿಣೀ ಭಕ್ತಿಗಳು ಈ ಸಾಧನೆಯ ಜೀವಾಳ. ಪರಮಾತ್ಮನೇ "ಲಕ್ಷ್ಯ" - ಗುರಿಯಾದ ಮೇಲೆ ಯಾರೂ ನಿರಾಶರಾಗುವುದಿಲ್ಲ. ಇದು ಪರಮ ಸತ್ಯ. ಪರಮಾತ್ಮನ ನಿರಂತರ ಪ್ರೇಮ. ಅವನು ಭಕ್ತರನ್ನು ಕೈಬಿಡುವುದಿಲ್ಲ ನ ಮೇ ಭಕ್ತಃ ಪ್ರಣಶ್ಯತಿ - ಭಕ್ತಾಸ್ತೇಽತಿವ ಮೇ ಪ್ರಿಯಃ -

*ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು /*
*ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ //*

*(ಗೀತಾ 6.18 ಶ್ಲೋ. 65)*

ಹೀಗೆ ಅರ್ಜುನನಿಗೆ ಶ್ರೀಕೃಷ್ಣ ಪರಮಾತ್ಮನು ಅನೇಕ ಸಲ ಅನೇಕ ರೀತಿಯಲ್ಲಿ ಭರವಸೆಯನ್ನು ಕೊಟ್ಟಿರುತ್ತಾನೆ. ಆದ್ದರಿಂದ ಮನಸ್ಸಿನಲ್ಲಿ ಬುದ್ಧಿಯಲ್ಲಿ ಅವನನ್ನೇ ಸದಾ ಪರಿಚಿಂತಿಸುತ್ತಿರುವಾಗ ನಿರಾಶೆಯ ಪ್ರಶ್ನೆಯೇ ಏಳುವುದಿಲ್ಲ. ಅದರಿಂದ ಅವನು ಪರಮ ಪೂಜ್ಯ - ಲಕ್ಷ್ಯಾಯ ನಮಃ - ನಮಸ್ಕಾರಗಳು.

65. **ಲಕ್ಷಣಾಯ ನಮಃ**

ಲಕ್ಷಣಗಳೇ ಅವನು, ಅವನೇ ಲಕ್ಷಣ, ಸುಂದರ, ಮೋಹಕರ, ಮಾಯಾವಿ, ಮೋಹಿನಿ ರೂಪದಲ್ಲಿ ಶಿವನನ್ನೇ ಪ್ರಭಾವಿಸಿದನು, ಮಾಯೆಯಲ್ಲಿ ಮುಳುಗಿಸಿದನು. ಅವನ ಲಕ್ಷಣಗಳನ್ನು, ಸೌಂದರ್ಯವನ್ನು ನೋಡಿ ಬೆರಗಾಗದವರೂ ಯಾರೂ ಇಲ್ಲ - ಅದಕ್ಕೆ ಅವನು - ''ಮಮ ಮಾಯಾ ದುರತ್ಯಯಾ'' ಎಂದು ಗೀತೆಯಲ್ಲಿ ಹೇಳಿದ್ದಾನೆ. ಈ ಮಾಯಾಲೋಕವನ್ನು ದಾಟಿ ಬಂದರೇನೇ ಪರಮಾತ್ಮನನ್ನು ಸೇರುವುದು.

ಪ್ರಕೃತಿ, ಪುರುಷ, ಮಾಯೆಯ ಜಾಲದಲ್ಲಿ ಬಿದ್ದ ಆತ್ಮಗಳು ಅವನ ಕೃಪೆಯಿಂದಲೇ ಬಿಡಿಸಿಕೊಳ್ಳಬೇಕು. ಸಂಸಾರ ಸಾಗರದಲ್ಲಿ ಹಾಕಿದವಳೂ ಮಾಯೆಯೇ, ಅದರಿಂದ ಬಿಡಿಸುವವಳೂ, ದಾಟಿಸುವವಳೂ ಅವಳೇ - ಭವತಾರಿಣಿ. ಅವಳ ಕೃಪೆಯಿಂದ ಭವಸಾಗರವನ್ನು ದಾಟಿದವರು ಅಗಣಿತ, ದಾಟದೆ ಉಳಿದವರೂ ಅಗಣಿತ.

ಪರಮಾತ್ಮನ ಲಕ್ಷಣಗಳು ಎಲ್ಲರನ್ನು ಅವನಲ್ಲಿಗೆ ಎಳೆದು ಸಂಸ್ಕಾರಗಳು ಭಸ್ಮವಾಗುವ ಹಾಗೆ ಮಾಡುತ್ತವೆ. ಅವನ ಲಕ್ಷಣಗಳು ಭವದಲ್ಲಿ ಇರಿಸುವುದಕ್ಕೂ ಬಿಡಿಸುವುದಕ್ಕೂ ಕಾರಣವಾಗುತ್ತವೆ. ಭವ ಬಂಧನ, ಭವತರಣ ಎರಡೂ ಅದೇ ಅವನ ರೂಪ, ಗುಣಗಳಿಂದ ಸಾಧ್ಯ.

ಪರಮಾತ್ಮನ ಎಲ್ಲ ಅವತಾರಗಳೂ ಭಕ್ತರನ್ನು ತನ್ನಲ್ಲಿಗೆ ಸೆಳೆದು ಉದ್ಧರಿಸುವಂತಹವುಗಳು, ಕಾರಣ ಅವುಗಳಲ್ಲಿ ಅಡಗಿರುವ ಗೋಪ್ಯ, ಅವ್ಯಕ್ತ, ವ್ಯಕ್ತ ಲಕ್ಷಣಗಳು, ಮನೋಹಾರಿಗಳು, ತನ್ನದೇ ಆದ ಲಕ್ಷಣ ಗುಣಗಳಿಂದ ಪರಮಾತ್ಮನು ಎಲ್ಲರ ಮನಸ್ಸನ್ನು ಅಪಹರಿಸುತ್ತಾನೆ. ಅದರಿಂದಲೇ - ''ಚೋರಾಗ್ರಗಣ್ಯಂ ಶಿರಸಾ ನಮಾಮಿ''.

*ಅವಲಿಪ್ತಾಯ ಲಿಪ್ತಾಯ ವಿಷ್ಣವೇ ಪ್ರಭವಿಷ್ಣವೇ ।*
*ವೃಷ್ಟಿ ಮೂಲಾಯ ಕೃಷ್ಣಾಯ ಶ್ರೀಮಹಾವಿಷ್ಣವೇ ನಮಃ ।।76।।*

*(466-472)*

66. **ಅವಲಿಪ್ತಾಯ ನಮಃ**

ಅವಲಿಪ್ತ - ಪವಿತ್ರವಾದವನು, ಯಾವುದರಿಂದಲೂ ಅಂಟಲ್ಪಟ್ಟು ಅಪವಿತ್ರನಾಗದವನು.

ಈ ಅ[illegible]ಪ ಕೋಟಿ ಬ್ರಹ್ಮಾಂಡವನ್ನು ತನ್ನ ಇಚ್ಛಾಮಾತ್ರದಿಂದ ತನ್ನ ಲೀಲಾ ವಿನೋದಕ್ಕಾಗಿ ಯಾರಿಗೂ ತಿಳಿಯದಂತಹ ಕಾರಣಗಳಿಗಾಗಿ ಸೃಷ್ಟಿಮಾಡಿ, ಪ್ರತಿಕ್ಷಣದಲ್ಲಿಯೂ ಸೂತ್ರಧಾರನಾಗಿ ಸುಸೂತ್ರವಾಗಿ ನಡೆಸುತ್ತಿದ್ದಾನೆ. ಹಾಗಿದ್ದರೂ ಅವುಗಳ ಒಳಗೆ ಹೊರಗೆ ''ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ'' - ಅಂದರೆ ಒಳಗೆ ಹೊರಗೆ ಸರ್ವವ್ಯಾಪಿಯಾಗಿ ನಿಂತು ನಡೆಸುತ್ತಿದ್ದಾನೆ. ಹಾಗಾದರೂ ಅವನು ''ಅವಲಿಪ್ತ''. ಸಂಸಾರ ಸಾಗರದ ಉದ್ದಗಲ, ಎತ್ತರ - ಆಳದಲ್ಲಿ ಎಲ್ಲೆಲ್ಲಿಯೂ ಒಂದು ಲವ ಲೇಶವೂ ಎಡಬಿಡದೆ ಹರಡಿಕೊಂಡು ತಾನಿಲ್ಲದ ಜಾಗವಿಲ್ಲ ಎಂದು ಪ್ರಸಿದ್ಧನಾಗಿದ್ದಾನೆ. ಸಕಲ ಜೀವಿಗಳನ್ನು ಉದ್ಧರಿಸ ಹೊರಟಿದ್ದಾನೆ. ಸಕಲ ಹದಿನಾಲ್ಕು ಲೋಕಗಳನ್ನೂ ನಡೆಸುತ್ತಿದ್ದಾನೆ. ಆದರೂ ಅವನು ಅವಲಿಪ್ತ, ಸರ್ವ ಸ್ವತಂತ್ರ, ಏನೂ ನಡೆಯಲೇ ಇಲ್ಲವೋ ಎಂಬಂತೆ ತನ್ನ ಪಾಡಿಗೆ ತಾನೇ ವಟಪತ್ರಶಾಯಿಯಾಗಿಯೂ, ಸರ್ವಲಕ್ಷಣ ಸಂಪನ್ನನಾಗಿಯೂ ಅವಲಿಪ್ತನಾಗಿ ಸಚ್ಚಿದಾನಂದ ಘನವಾಗಿ ವಿರಾಜಿಸುತ್ತಿದ್ದಾನೆ.

ಸಕಲ ಜೀವಿಗಳೂ ಸಂಸಾರದಲ್ಲಿ ಲಿಪ್ತರೇ ಆಗಿದ್ದಾರೆ. ಅವಲಿಪ್ತಸ್ಥಿತಿಗೆ ಜೀವಿಗಳು ಬರಲು ಸಾಧ್ಯ. ಸಕಲ ರೀತಿಯ ಬಂಧನಗಳನ್ನು, ಮೋಹಗಳನ್ನು, ''ನಾನು, ನನ್ನದು'' ಎಂಬ ''ಅಹಂ''ಕಾರವನ್ನು ಬಿಟ್ಟರೆ ಅಥವಾ ಅವುಗಳಲ್ಲಿಡುವ ಶ್ರದ್ಧೆ, ಭಕ್ತಿ ಮನಸ್ಸು ಬುದ್ಧಿಗಳನ್ನು ಪರಮಾತ್ಮನ ಕಡೆಗೆ ತಿರುಗಿಸಿದ್ದರೆ ಅವಲಿಪ್ತಸ್ಥಿತಿಯು ಸಾಧ್ಯ.

ಪರಮಾತ್ಮನ ಕೃಪೆಯಿಂದ ಈ ಪರಿವರ್ತನೆ ಸಾಧ್ಯ. ಆತ್ಮನಿಗೆ ಸಂಸ್ಕಾರದಿಂದ ಬಿಡುಗಡೆ ಯಾಗಬೇಕಾದರೆ ಅವಲಿಪ್ತ ಸ್ಥಿತಿಯಿಂದಲೇ ಸಾಧ್ಯ. ಇದನ್ನು ತನ್ನ ಸಂಸ್ಕಾರದಿಂದ, ತನು ಮನಬುದ್ಧಿಗಳ ನಿಗ್ರಹದಿಂದ ಮಾತ್ರ ಪಡೆಯಬಹುದು. ಇದು ಪರಮೋತ್ತಮ ಗುರಿ, ಬಿಡುಗಡೆಯ ದಾರಿ - ಏಕೈಕ ದಾರಿ - ಸಂಸಾರದಲ್ಲಿ, ಭವಸಾಗರದಲ್ಲಿ ಅವಲಿಪ್ತತೆ - ಪರಮಾತ್ಮನಂತೆ ಇರಬೇಕು - ಆಗ ಇಲ್ಲಿದ್ದರೂ ನಾವು ಪರಮಾತ್ಮನಂತೆ ಆಗಬಹುದು. ''ಅವಲಿಪ್ತಾಯ ನಮಃ'' - ಜೈ ಜಗದ್ಗುರುವೇ ನಮಃ. ಈ ದಾರಿಯನ್ನು ತೋರಿಸಿದ, ಪ್ರೇರಣೆ ಮಾಡಿದ ಗುರುವಿಗೆ ನಮಸ್ಕಾರಗಳು. ಕೋಟಿ ಕೋಟಿ ನಮಸ್ಕಾರಗಳನ್ನು ಮಾಡಿದರೂ ಈ ಜ್ಞಾನಕ್ಕೆ, ಜ್ಞಾನದಿಂದ ದೊರಕುವ ನಿರ್ಲಿಪ್ತ ಸ್ಥಿತಿಗೆ ಸಮನಾಗಲಾರದು - ಏಕೆ, ಸಮನಾಗುವುದಿಲ್ಲ - ನಿಶ್ಚಯ.

### 67. ಲಿಪ್ತಾಯ ನಮಃ

ಲಿಪ್ತನಾದವನು - ಹಚ್ಚಿಕೊಂಡಿರುವವನು, ಅಪವಿತ್ರವಾದದು, ಪರಮಾತ್ಮನು ಲಿಪ್ತನಾದವನು, ಹಚ್ಚಿಕೊಂಡಿರುವವನು. ಸ್ವತಂತ್ರತೆಗೆ ಸಂಸಾರ ಸಾಗರಕ್ಕೆ,

ತಾನು ಸೃಷ್ಟಿಸಿದ, ತಾನೇ ನಡೆಯಿಸುವ ಬ್ರಹ್ಮಾಂಡಕ್ಕೆ ಅಂಟಿಕೊಳ್ಳಬಾರದೆಂಬ ಸ್ವತಂತ್ರತೆಗೆ ಲಿಪ್ತನಾದವನು. ತನ್ನ ಧ್ಯೇಯಕ್ಕೆ ಅಂಟಿಕೊಂಡಿರುವವನು.

ಭಕ್ತರನ್ನು ಕಾಪಾಡುವ ಮತ್ತು ದುಷ್ಟರನ್ನು ಶಿಕ್ಷಿಸುವ ಧ್ಯೇಯಕ್ಕೆ ಲಿಪ್ತನಾಗಿರುವವನು - ಪರಮಾತ್ಮ. ಇದನ್ನು ನರಸಿಂಹಸ್ವಾಮಿಯು ಪ್ರಹ್ಲಾದನನ್ನು ಕಾಪಾಡಿ, ಹಿರಣ್ಯಕಶಿಪುವನ್ನು ಸಂಹಾರಮಾಡಿ ತೋರಿಸಿದ್ದಾನೆ. ಇಂತಹವನಿಗೆ ಲಿಪ್ತಾಯ ನಮಃ ಎನ್ನುತ್ತೇವೆ.

ಲಿಪ್ತನಾಗಬೇಕಾದರೆ ನಾವೂ ಸಹ ಪರಮಾತ್ಮನ ಧ್ಯೇಯವನ್ನು ಅನುಕರಿಸಬೇಕು. ಮನಸ್ಸನ್ನು ಧೃಡೀಕರಿಸಬೇಕು. ಎಂದ ಮೇಲೆ ನಮಗೆ ಪರಮಾತ್ಮನ ಲಿಪ್ತತೆ, ಅವಲಿಪ್ತತೆ ಎರಡೂ ಬೇಕು.

ನಮ್ಮ ಮನಸ್ಸನ್ನು ''ಪರಮಾತ್ಮನ ವಿನಃ ನಮ್ಮ ಉದ್ಧಾರಕರು ಗುರುಗಳು ಯಾರೂ ಇಲ್ಲ'' ಎನ್ನುವುದಕ್ಕೆ ನಾವು ಲಿಪ್ತರಾಗಬೇಕು. ಇದು ನಮ್ಮ ಜೀವನದ ಪರಮ ಗುರಿಯಾಗಬೇಕು, ಆಗಲೇ ಈ ಸಂಸಾರವನ್ನು ನಿಸ್ಸಾರವೆಂದು ತ್ಯಜಿಸಲು ಸಾಧ್ಯವಾಗುತ್ತದೆ.

68. ವಿಷ್ಣವೇ ನಮಃ

ತಾನು ಸೃಷ್ಟಿಸಿದ ಸಕಲ ವಿಶ್ವದಲ್ಲಿ - ಏಕೆ, ಸಕಲ ಬ್ರಹ್ಮಾಂಡದಲ್ಲಿ - ಮೂಲೆ ಮೂಲೆಗಳಲ್ಲಿ ಎಲ್ಲೂ ಎಡಬಿಡದೆ ವಿಶಾಲವಾಗಿ ಹರಡಿರುವ ಪರಮಾತ್ಮನು - ವಿಷ್ಣುವು.

ಶ್ರೀಮಹಾವಿಷ್ಣುವು ತನ್ನ ಈ ಸೃಷ್ಟಿಯಲ್ಲಿ ಸದಾಕಾಲದಲ್ಲಿ ನಡೆಯಿಸಲು ಅನೇಕ ವಿಶೇಷ ರೂಪಗಳನ್ನು ಹೊಂದಿದ್ದಾನೆ. - ದಶಾವತಾರಗಳು, ಪ್ರತಿ ಜೀವಿಗೂ ಆತ್ಮಕ್ಕೂ ಒಂದೊಂದು ದೇಹ - ಕಾಲಯಾನದಲ್ಲಿ - ಎಡೆಬಿಡದೆ ಇರುವುದು - ಕೊನೆಗೆ ಮುಕ್ತಿ - ಇವೆಲ್ಲವೂ ಶ್ರೀಮಹಾವಿಷ್ಣುವು, ನಾರಾಯಣೋಪನಿಷತ್ತಿನಲ್ಲಿ ಮಂತ್ರಪುಷ್ಪದಲ್ಲಿ ಹೇಳಿರುವಂತೆ -

*ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ ।*
*ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥*

ಅವನೇ ವಿಷ್ಣುವು.

ಇಂತಹ ಮಹಾವಿಷ್ಣುವಿನ ಅವತಾರವಾದ ನರಸಿಂಹಸ್ವಾಮಿಗೆ ಅನಂತ ಕೋಟಿ ನಮಸ್ಕಾರಗಳು. ಅವನ ಕರುಣೆಯಿಂದಲೇ ಇದೆಲ್ಲಾ ಹೊರ ಹೊಮ್ಮುತ್ತಿದೆ. - ವಿಷ್ಣವೇ ನಮಃ.

ವಿಶ್ - ಎಂದರೆ ಪ್ರವೇಶಿಸುವುದು, ಒಳಗೆ ಹೋಗುವುದು. ಪರಮಾತ್ಮನು ಎಲ್ಲೆಂದರಲ್ಲಿ ಏನನ್ನೂ ಬಿಡದೆ ಪ್ರವೇಶಿಸುತ್ತಾನೆ. ಆದರಿಂದ ವಿಷ್ಣು ಎಂದು ಹೆಸರು.

469. ಪ್ರಭವಿಷ್ಣವೇ ನಮಃ

ಸಕಲ ಕಾರ್ಯಗಳಿಗೂ ಪ್ರಭುವಾಗಿರುವುದರಿಂದ ಪ್ರಭವಿಷ್ಣುವು, ಪ್ರಭವ - ಮಹಾಭೂತಗಳು (ಪ್ರಕೃಷ್ಟ) ವಿಶೇಷವಾದ ರೀತಿಯಲ್ಲಿ ಸೃಷ್ಟಿಸಲ್ಪಡುತ್ತವೆ. ಆದುದರಿಂದ ಭಗವಂತನಿಗೆ ಪ್ರಭವ ಎಂದು ಹೆಸರು.

ಪ್ರ - ಮುಂದೆ, ಸಮೀಪ, ಬಹಳ, ಶ್ರೇಷ್ಠ ಎಂದು ನಾನಾ ಅರ್ಥಗಳು.

ಭವ - ಪ್ರಪಂಚ, ಸೃಷ್ಟಿ,ಸಂಸಾರ ಸಾಗರ,

ವಿಶ್ - ಪ್ರವೇಶಿಸು, ಒಳ ಹೋಗುವುದು.

ಪರಮಾತ್ಮನು ಬಹಳ ನಿಗೂಢವಾದ ಶ್ರೇಷ್ಠವಾದ ರೀತಿಯಲ್ಲಿ ಈ ಸಂಸಾರ ಸಾಗರದಲ್ಲಿ ಪ್ರವೇಶಿಸಿಯೂ ಪ್ರವೇಶಿಸದಂತೆ ಇರುತ್ತಾನೆ. ಆದರಿಂದ ಪ್ರಭವಿಷ್ಣುಃ - ಅವನಿಗೆ ನಮಸ್ಕಾರಗಳು - ಎಂದರೆ ಪ್ರಭವಿಷ್ಣವೇ ನಮಃ. ಪರಮಾತ್ಮನ ಕಾರ್ಯಗಳೇ ವಿಚಿತ್ರ. ಸಾಮಾನ್ಯ ಪ್ರಜ್ಞೆಗೆ ತಿಳಿಯುವುದಿಲ್ಲ.

ಪ್ರಭವ - ಉತ್ಪತ್ತಿ, ಮೂಲ, ಸೃಷ್ಟಿಕರ್ತ, ಪ್ರಭವಿಷ್ಣು - ಮಹಾವಿಷ್ಣು. ಮಹಾವಿಷ್ಣುವು ಪ್ರಭವಿಷ್ಣು ಎಂದೂ ಕರೆಯಲ್ಪಡುತ್ತಾನೆ.

470. ವೃಷ್ಣಿಮೂಲಾಯ ನಮಃ

ವೃಷ್ಣಿಕುಲಕ್ಕೆ ಮೂಲಪುರುಷನು, ಶ್ರೀಕೃಷ್ಣನು ವಸುದೇವನ ಮಗನು. ಶ್ರೀಕೃಷ್ಣನ ಹಿಂದಿನ 14ನೇ ತಲೆಮಾರಿನಲ್ಲಿ ವೃಷ್ಣಿ ಇದ್ದನು. ಇವನ ಹಿಂದಿನ 15ನೇ ತಲೆಮಾರಿನಲ್ಲಿ ''ಯದು'' ಇದ್ದನು. ಹೀಗೆ ಯದುವಂಶದ ಪರಂಪರೆ. ಶ್ರೀಕೃಷ್ಣನು ಪರಮಾತ್ಮನ ಪರಿಪೂರ್ಣ ಅವತಾರ. ಈ ಅವತಾರಕ್ಕೆ ಮೂಲಪುರುಷನು ವೃಷ್ಣಿ. ಅದರಿಂದ ಮೂಲದಲ್ಲಿ ವೃಷ್ಣಿ ಇರುವುದರಿಂದ ಇವನು (ಶ್ರೀಕೃಷ್ಣನು) ವೃಷ್ಣಿಮೂಲನು (ವೃಷ್ಣಿಯನ್ನು ಮೂಲವಾಗಿಟ್ಟುಕೊಂಡಿರುವವನು.) ಅದರಿಂದ ಇವನಿಗೆ ವೃಷ್ಣಿಮೂಲಾಯ ನಮಃ ಎಂದು ನಮಸ್ಕಾರ ಮಾಡುತ್ತೇವೆ.

ವೃಷ್ - ಎಂದರೆ ಮಳೆಯಾಗು, ಮಳೆಬೀಳು, ಮಳೆಕೊಡು,

ವೃಷ್ಣಿ - ಮಳೆ ಕರೆಯುವುದು, ಇದಕ್ಕೆ ಮೂಲ - ಮೋಡವಾಗುತ್ತದೆ. ಅದಕ್ಕೆ ಮೂಲ - ನೀರು. ನೀರು ತೇಜಸ್ಸಿನ ಸಹಾಯದಿಂದ ಮೋಡವಾಗುತ್ತದೆ. ವಾಯುವಿನ ಸಹಾಯದಿಂದ ಮೋಡಗಳು ಚಲಿಸುತ್ತವೆ. ಇಂದ್ರವರುಣರ ಕೃಪೆಯಿಂದ ಮಳೆ ಕರೆಯುತ್ತದೆ. ಇಂದ್ರನ ಕೃಪೆಯಾಗಬೇಕಾದರೆ ಅವನು ಯಜ್ಞಗಳ ಹವಿಸ್ಸಿನಿಂದ ತೃಪ್ತನಾಬೇಕು. ಇದಕ್ಕೆ ದೈವಶಕ್ತಿ, ದೈವಕೃಪೆ, ಯಜ್ಞ ಎಲ್ಲ ಬೇಕು, ಯಜ್ಞಗಳನ್ನು ಮನುಷ್ಯರು ದೇವತೆಗಳನ್ನು ತೃಪ್ತಿಪಡಿಸಲು ಮಾಡಬೇಕು. ಕಾಲ ಕಾಲಕ್ಕೆ ಮಳೆಯಾಗಬೇಕಾದರೆ ದೇವತೆಗಳ ಮತ್ತು ಮನುಷ್ಯರ ಸಂಪರ್ಕ ಅವಶ್ಯಕ. ಇದು ಭಗವಂತನು ನಿಯಮಿಸಿರುವ ಸೃಷ್ಟಿಚಕ್ರ. ಆದರಿಂದ ವೃಷ್ಣಿ - ಮೂಲಾಯ ನಮಃ ಎಂದರೆ ಪರಮಾತ್ಮನಿಗೆ ಸಲ್ಲುತ್ತದೆ.

ಅವನು ಪರಬ್ರಹ್ಮನಾದ ಶ್ರೀಮನ್ನಾರಾಯಣನೇ - ಓಂಕಾರದಲ್ಲಿ ಸ್ಥಿತನಾಗಿರುವ ಸಾಕಾರ ನಿರಾಕಾರ ಮೂರ್ತಿಯೇ ಅವನು. ವೃಷ್ಟಿಮೂಲಾಯ ನಮಃ - ಎಂದು ಕರೆಯುವುದು ಆ ಓಂಕಾರ ಮೂರ್ತಿಯನ್ನೇ ಹೊರತು ಬೇರೆಯವರನ್ನಲ್ಲ.

71. ಕೃಷ್ಣಾಯ ನಮಃ

ಕೃಷ್ಣ - ಶ್ರೀಕೃಷ್ಣ ಪರಮಾತ್ಮ. ಜಗತ್ತಿನ ಸಮಸ್ತ ಜೀವ ಕೋಟಿಗಳನ್ನೂ ದೇವ ದೇವತೆಯರನ್ನು ಸಮಸ್ತ ಜೀವಿಗಳನ್ನು ದರ್ಶನ, ಚಿಂತನ ಮಾತ್ರದಲ್ಲಿ ಸಂಪೂರ್ಣವಾಗಿ ತನ್ನ ಎಡೆಗೆ ಎಳೆದುಕೊಳ್ಳುವವನು.

ಕೃಷ್ಣಪಕ್ಷ - ಪೌರ್ಣಿಮೆಯ ನಂತರ ಅಮಾವಾಸ್ಯೆಯವರೆಗೆ ಬರುವ ದಿನಗಳು.

ಕೃಷ್ಣ - ಅರ್ಜುನನಿಗೆ ಮಹಾಭಾರತ ಯುದ್ಧದಲ್ಲಿ ಸಾರಥಿಯಾಗಿ ರಥವನ್ನು ನಡೆಸಿ ರಣರಂಗದಲ್ಲಿ ಗೀತೆಯನ್ನು ಬೋಧಿಸಿದವನು, ವಿಷ್ಣುವಿನ ಅವತಾರ - ವಸುದೇವ ದೇವಕಿಯರ ಮಗ - ಪರಿಪೂರ್ಣ ಅವತಾರ. ಕೃಷ್ಣಾಯ ನಮಃ ಎಂದರೆ ಇವನಿಗೆ ಸಲ್ಲುತ್ತದೆ.

72. ಶ್ರೀಮಹಾವಿಷ್ಣುವೇ ನಮಃ

ನರಸಿಂಹಸ್ವಾಮಿಯ ಅವತಾರವನ್ನು ಎತ್ತಿದ ಶ್ರೀಮಹಾವಿಷ್ಣುವಿಗೆ ನಮಸ್ಕಾರಗಳು.

ಮಹಾವಿಷ್ಣುವು ಮಾಡದೆ ಇರುವ ಕೆಲಸವಿಲ್ಲ, ಎತ್ತದ ಅವತಾರವಿಲ್ಲ. ಅವನೇ ವಟಪತ್ರಶಾಯಿಯಾಗಿ ಮಗುವಿನ ಆಕಾರದಲ್ಲಿ ಪ್ರಳಯಕಾಲದಲ್ಲಿ ಅಂಧಕಾರದಲ್ಲಿ ಒಬ್ಬನೇ ಇರುತ್ತಾನೆ. ಇದೇ ರೂಪವನ್ನು ಬ್ರಹ್ಮದೇವರು ಮೊದಲು ನೋಡಿದರು.

ಸಕಲ ಬ್ರಹ್ಮಾಂಡಗಳನ್ನು ರಚಿಸಿ ನಡೆಸುವವನು - ಶ್ರೀಮಹಾವಿಷ್ಣು.

ಎಲ್ಲ ದೇವ ದೇವತೆಗಳನ್ನೂ ಆಹ್ವಾನಿಸಿ ಪೂಜೆ ಮಾಡಬೇಕು. ವರಗಳನ್ನು ಕೇಳಬೇಕಾದರೆ ಆಹ್ವಾನಿಸಬೇಕು, ಶಕ್ತಿಗಳು ಅದೇ ರೀತಿ ಕರೆದರೆ ಬರುತ್ತವೆ. ಆದರೆ ಶ್ರೀಮನ್ಮಹಾವಿಷ್ಣುವು ತಾನಾಗಿಯೇ ಸಕಲದಲ್ಲಿಯೂ ಒಳಗೂ, ಹೊರಗೂ ವ್ಯಾಪಿಸಿಕೊಂಡಿರುವುದರಿಂದ ನಾವು ಈ ವಿಚಾರವನ್ನು ತಿಳಿದರೆ ಸಾಕು. ಹಾಗೆ ತಿಳಿದು ಬುದ್ಧಿಮನದಿಂದ ಸ್ಮರಿಸಿದರೆ ಸಾಕು - ಈ ಮಹಾವಿಷ್ಣುವಿನ ಪ್ರಭಾವಗಳು ತಾವಾಗಿಯೇ ಪ್ರಕಟವಾಗುತ್ತವೆ. ಇದೇ ಮಹಾವಿಷ್ಣುವಿನ ವೈಶಿಷ್ಟ್ಯ, ಅದರಿಂದ ಶ್ರೀಮನ್ಮಹಾವಿಷ್ಣುವೇ ನಮಃ.

*ಪಶ್ಯಾಮಿ ತ್ವಾಂ ಮಹಾಸಿಂಹಂ ಹಾರಿಣಂ ವನಮಾಲಿನಮ್ ।*
*ಕಿರೀಟಿನಂ ಕುಂಡಲಿನಂ ಸರ್ವಾಂಗಂ ಸರ್ವತೋಮುಖಮ್ ॥77॥*

*(473-479)*

473. ಮಹಾಸಿಂಹಾಯ ನಮಃ

ಮಹಾಸಿಂಹಾಯ ನಮಃ - ಪರಮಾತ್ಮನು ಮಹಾಸಿಂಹನು, ಎಂದರೆ ಬಹಳ ವಿಕ್ರಮನು. ಎಲ್ಲರನ್ನು ತನ್ನ ಅಂಕುಶದೊಳಗೆ, ತನ್ನ ಅಧಿಕಾರದ ಒಳಗೆ ಇಟ್ಟಿಕೊಂಡಿರುವವನು. ಸಾಮಾನ್ಯವಾಗಿ ಸಿಂಹವನ್ನು ವನಕ್ಕೂ ವನಚರಪ್ರಾಣಿಗಳಿಗೂ ರಾಜನೆಂದು ತಿಳಿದಿರುತ್ತೇವೆ. ಸಿಂಹವನ್ನು ಯಾರೂ ಎದುರಿಸಲು ಹೋಗುವುದಿಲ್ಲ, ಅದರಲ್ಲೂ ಮಹಾಸಿಂಹವಾಗಿರುವ ಪರಮಾತ್ಮನನ್ನು ಎಲ್ಲರೂ ಆಶ್ರಯಿಸುತ್ತಾರೆ. ಸಾಕ್ಷಾತ್ ಶ್ರೀನರಸಿಂಹಸ್ವಾಮಿಯ ಶಿರಸ್ಥಾನವನ್ನಲಂಕರಿಸಿರುವ ಸಿಂಹದ ಪುಣ್ಯವೆಷ್ಟಿರಬೇಕು. ಸಕಲ ಜೀವಿಗಳ ಶಿರಗಳನ್ನೂ ಬಿಟ್ಟು ಸಿಂಹದ ಶಿರವನ್ನೇ ತೆಗೆದುಕೊಂಡಿರುತ್ತಾನೆ ಸ್ವಾಮಿ. ತನಗೋಸ್ಕರವಾಗಿ ಮತ್ತು ತನ್ನ ಭಕ್ತನಾದ ಹಿರಣ್ಯಕಶಿಪುವಿನ ಸಂಹಾರಕ್ಕಾಗಿ, ಅವನು ಪಡೆದಿರುವ ವರದ ಈಡೇರಿಕೆಗಾಗಿ ಸಿಂಹದ ತಲೆಯನ್ನೇ ಸ್ವಾಮಿಯು ಆರಿಸಬೇಕಾಯಿತು. ಸಿಂಹದ ಪೌರುಷವನ್ನು, ಶಕ್ತಿಯನ್ನು ಮಹತ್ತತೆಯನ್ನು ಉಗ್ರತೆಯನ್ನೂ ಆರಿಸಬೇಕಾಯಿತು. ಪೂರ್ಣ ಸಿಂಹವೇ ಆಗಿದ್ದರೆ ವರಕ್ಕೆ ತಕ್ಕಂತೆ ಆಗುತ್ತಿರಲಿಲ್ಲ ಅಥವಾ ಮನುಷ್ಯನ ಪೂರ್ಣದೇಹವೇ ಆಗಿದ್ದರೂ ನಡೆಯುತ್ತಿರಲಿಲ್ಲ. ಆದರಿಂದ ಇತ್ತ ಪ್ರಾಣಿಯೂ ಆಗದೆ, ಅತ್ತ ಮನುಷ್ಯನೂ ಆಗದೆ ಹಿರಣ್ಯಕಶಿಪುವಿನ ಶಕ್ತಿಗನುಗುಣವಾಗಿ ಅವನು ವರ್ಜಿಸಿದ್ದ ನರ-ಸಿಂಹದ ಜೋಡಣೆಯಿಂದ ಬಂದ ನರಸಿಂಹ ಶರೀರವನ್ನು ಹೊತ್ತು ಕಂಬದಲ್ಲಿ ನಿಂತು ಕಂಬವನ್ನು ಹೊಡೆದ ತಕ್ಷಣ ಕಂಭವನ್ನು ಒಡೆದು ಹಿರಣ್ಯಕಶಿಪುವಿನ ಕೋರಿಕೆಯಂತೆಯೇ ಪ್ರತ್ಯಕ್ಷನಾದನು. ಹಿರಣ್ಯಕಶಿಪುವಿನೊಡನೆ ಅನೇಕ ಕಾಲ ಹೊಡೆದಾಡಿ, ಬ್ರಹ್ಮನು ಹಿರಣ್ಯಕಶಿಪುವಿಗೆ ದಯಪಾಲಿಸಿದ್ದ ವರಕ್ಕೆ ತಕ್ಕಂತೆ ಸನ್ನಿವೇಶಗಳನ್ನು ಸೃಷ್ಟಿಸಿ ಅಥವಾ ಅವುಗಳಿಗಾಗಿ ಸಮಯಕಾದು, ಕೊನೆಗೆ ತನ್ನ ಉಗುರಿನಿಂದ ಸಿಂಹ ಸ್ವಭಾವವನ್ನು ವ್ಯಕ್ತಪಡಿಸಿ ಕೊಂದನು. ಮತ್ತು ಸಿಂಹಸದೃಶವಾಗಿ ಕರುಳನ್ನು ತೆಗೆದು ತೆಗೆದು ಹಾರ ಹಾಕಿಕೊಂಡು ರಕ್ತವನ್ನು ಹೀರಿ ತನ್ನ ಸಿಂಹತ್ವಕ್ಕೆ - ಪಶುವಿಗೆ - ತಕ್ಕ ಭೀಕರತ್ವವನ್ನು ಉಗ್ರತ್ವವನ್ನು ವ್ಯಕ್ತಪಡಿಸಿದನು.

ಈ ನರಸಿಂಹನನ್ನು ಶಾಂತಮಾಡಲು ಬ್ರಹ್ಮದೇವರು ಸಹಸ್ರನಾಮಗಳನ್ನು ಮಹಾವಿಷ್ಣುವಿನ ''ಮಂತ್ರ ಜ್ಞಾನಕ್ರಿಯಾಯೋಗಸಾರಭೂತವಾದ'' ನಾಮರೂಪವಾಗಿ ನರಸಿಂಹನಿಗೆ ಹೇಳಿದರು. ನಂತರ ಈಗ 473ನೇ ನಾಮದಿಂದ ಅವನ ರೂಪವನ್ನೇ ಹೇಳುತ್ತಿದ್ದಾರೆ.

474. ಹಾರಿಣೇ ನಮಃ

ಹಾರಿ - ಪರಾಭವ ತರುವವನು.ಶ್ರೀಮನ್ನಾರಾಯಣನು,

ನರಸಿಂಹರೂಪದಲ್ಲಿ ಬಂದು ಹಿರಣ್ಯಕಶಿಪುವಿಗೆ ಸೋಲನ್ನು ತಂದನು, ಪರಾಭವಗೊಳಿಸಿದನು. ಕಡೆಗೆ ಅವನ ರಾಕ್ಷಸ ದೇಹವನ್ನು ಬಿಡಲು ಸಹಾಯಕನಾದನು ಮತ್ತು ಅವನ ಆತ್ಮವನ್ನು ದೇಹದಿಂದ ಬಿಡಿಸಿದನು ಮತ್ತು ತನ್ನ ಸನ್ನಿಧಾನಕ್ಕೆ ಬರಲು ಶಾಪನಿಮಿತ್ತ ಬಂದ ಮೂರು ಜನ್ಮಗಳಲ್ಲಿ ಮೊದಲನೆಯದನ್ನು ಬಿಡಿಸಿದನು. ಹೇಗೇ ಆದರೂ ನಾರಾಯಣನ ದ್ವಾರಪಾಲಕರಾದ ಜಯವಿಜಯರಲ್ಲವೇ!

ಇದೇ ರೀತಿ ನಮ್ಮ ಜನ್ಮದಲ್ಲಿ ಬಂದಿರುವ ಸಂಸ್ಕಾರಗಳನ್ನು ಬಿಡಿಸಿ ಮುಕ್ತಿನೀಡಲು ಆ ನರಸಿಂಹನೇ ಸಿದ್ಧನಾಗಿದ್ದಾನೆ. ಆದರೆ ನಾವು ಅವನಿಗೆ ಅದನ್ನು ದಯಪಾಲಿಸುವ ದಾರಿಯನ್ನು ಪಡೆಯಬೇಕು.

ಈ ಆತ್ಮವು ತನ್ನ ಮುಕ್ತಿಗಾಗಿ ಹಾತುರವಾಗಿದೆ. ಆದರೆ ಅದಕ್ಕೆ ಅಂಟಿರುವ ಸಂಸ್ಕಾರವೇ ಕಾರಣವಾಗಿದೆ. ಅದು ಪರಮಾತ್ಮನ ಕಡೆಗೆ ತಿರುಗಿಸಿಕೊಂಡರೆ ಪರಮಾತ್ಮನನ್ನು ಸೇರಲು ಸಾಧ್ಯ. ಅವನು ಆತ್ಮವನ್ನು ಸಂಸ್ಕಾರಗಳಿಂದ ಬಿಡಿಸಿ ಅದನ್ನು ತನ್ನೆಡೆಗೆ ಎಳೆದುಕೊಳ್ಳಬೇಕು. ಆಗ ಅವನು ನಮಗೆ ''ದಾರಿ''ಯಾಗುತ್ತಾನೆ. ಅಂತಹವನಿಗೆ ಸದಾ ಹಾರಿಣೇ ನಮಃ ಎಂದು ನಮಸ್ಕರಿಸಿದರೆ ಸಾಧ್ಯ.

75. ವನಮಾಲಿನೇ ನಮಃ

ವನಮಾಲೆಯನ್ನು ಧರಿಸಿರುವ ಶ್ರೀಮನ್ನಾರಾಯಣನು. ನರಸಿಂಹರೂಪದಲ್ಲಿರುವ ಶ್ರೀಮನ್ನಾರಾಯಣನು.

ವನಮಾಲೆ ಎಂದರೆ ಮೊಣಕಾಲು ಮುಟ್ಟುವವರೆಗಿದ್ದ ಹೂವಿನ ಮಾಲೆ.

ಇಂತಹ ಚೇತೋಹಾರಿಯಾದ ವನಮಾಲೆಯನ್ನು ಧರಿಸಿಕೊಂಡು ಶ್ರೀಮನ್ನಾರಾಯಣನು ತನ್ನ ಭಕ್ತರಿಗೆ ಸೌಮ್ಯವಾದ, ಸುಂದರವಾದ ರೂಪವನ್ನು ತೋರಿಸುತ್ತಾನೆ.

ನರಸಿಂಹನು ಲಕ್ಷ್ಮಿಯೊಡನೆ ಕುಳಿತು ವನಮಾಲೆಯನ್ನು ಧರಿಸಿ ಶಾಂತ, ಯೋಗ, ಭೋಗದ ಲಕ್ಷ್ಮಿನರಸಿಂಹ ಸ್ವರೂಪದಲ್ಲಿ ದರ್ಶನ ಕೊಡುತ್ತಿದ್ದಾನೆ. ಮತ್ತು ಭಕ್ತರನ್ನು ಸದಾ ಆನಂದಸಾಗರದಲ್ಲಿ ಮುಳುಗಿಸುತ್ತಿದ್ದಾನೆ ಮತ್ತು ದರ್ಶನದಷ್ಟು ಸಮಯ ಸಂಸಾರಸಾಗರದ ಬಂಧನದಿಂದ ಬುದ್ಧಿಮನಸ್ಸನ್ನು ಬಿಡಿಸಿರುತ್ತಾನೆ. ತಾನು ಅದೃಶ್ಯನಾದ ನಂತರ ಈ ರೂಪವನ್ನು ಅವರ ಬುದ್ಧಿಮನದಲ್ಲಿ ಸ್ಥಿರಗೊಳುವಂತೆ ಮಾಡಿ ಮನನಶಕ್ತಿ ಸ್ಮರಣಶಕ್ತಿಯನ್ನು ವರ್ಧಿಸಿ ಧ್ಯಾನ ಶಕ್ತಿಯಲ್ಲಿ ಇಳಿದು ನಾಮಜಪದಲ್ಲಿ ಮುಳುಗಿಸಿ ಪರಮಾತ್ಮನಲ್ಲೀ ಲೀನವಾಗುವಂತೆ ಮಾಡುತ್ತಾನೆ. ಇದು ಆ ವನಮಾಲಿಯ ಮಹತ್ವ. ಜೈ ಶ್ರೀ ಲೋಕಾಂಬಸಮೇತ ಶ್ರೀ ಶೀಬೀ ಲಕ್ಷ್ಮಿನರಸಿಂಹಾಯ ನಮಃ - ಸ್ವಾಮಿಗೆ ವನಮಾಲಿ ಎಂದು ಹೆಸರು.

**476. ಕಿರೀಟಿನೇ ನಮಃ**

ಕಿರೀಟವನ್ನು ಧರಿಸಿರುವವನು ಕಿರೀಟಿ, ಎಲ್ಲ ದೇವ ದೇವತೆಗಳಿಗೂ ಶಿರಸ್ಸಿಗೆ ಕಿರೀಟವಿರುತ್ತದೆ. ನಮ್ಮ ಮನಸ್ಸು ಬುದ್ಧಿ ಎಂತಹದೆಂದರೆ ನಮ್ಮ ಪ್ರಾರ್ಥನೆಯು ವರವಾಗಿ ಪರಮಾತ್ಮನಿಂದ ಕೊಡಲ್ಪಟ್ಟಾಗ ಮತ್ತು ಕಾರ್ಯಗತವಾದಾಗ ಪರಮಾತ್ಮನ ಅವಯವಗಳಲ್ಲಿ ಧರಿಸಿರುವ ಆಭರಣಗಳು, ಕಿರೀಟ ಮುಂತಾದುವುಗಳನ್ನು ನೋಡಿ ನಾವು ಸಂತೋಷಪಡುತ್ತೇವೆ ಮತ್ತು ಕೃತಜ್ಞತೆಯನ್ನು ಸಲ್ಲಿಸುತ್ತೇವೆ. ಇದು ಒಂದು ರೀತಿ.

ಎರಡನೆಯದು, ಬಹಳ ಅನನ್ಯ ಶ್ರದ್ಧೆಯಿಂದ ಮತ್ತು ಅವ್ಯಭಿಚಾರಿಣೀ ಭಕ್ತಿಯಿಂದ ಪ್ರಾರ್ಥಿಸುವಾಗ ಪರಮಾತ್ಮನ ರೂಪ, ಅಲಂಕಾರಗಳ ಮೇಲೆ ಮನಸ್ಸಿಟ್ಟು ನಮ್ಮ ಕಷ್ಟ ಕಾರ್ಪಣ್ಯಗಳಿಂದ ಕೆಲ ಸಮಯ ದೂರವಾಗುತ್ತೇವೆ.

ಮೂರನೆಯದು, ನಿಷ್ಕಾಮ ಸೇವೆಯಿಂದ ಆನಂದಪಡುವುದು, ಪರಮಾತ್ಮನ ಅವತಾರವಾದ ನರಸಿಂಹಸ್ವಾಮಿಯು ಲೋಕಕಲ್ಯಾಣಕ್ಕಾಗಿ ಹಿರಣ್ಯಕಶಿಪುವಿನ ಸಂಹಾರಮಾಡಿದ ನಂತರ ಲಕ್ಷ್ಮೀನರಸಿಂಹನಾಗಿ ಶಾಂತನಾಗಿ ವಿಜ್ರಂಭಿಸಿದನು. ಆಗ ಅವನು ಧರಿಸಿದ್ದ ಕಿರೀಟವು ಸರ್ವರಿಗೂ ನೆಮ್ಮದಿಯನ್ನು ಕೊಡುತ್ತಿದ್ದಿತು. ನರಸಿಂಹಸ್ವಾಮಿಯ ಅವತಾರವೇ ವಿಶಿಷ್ಟವಾದುದು. ಇದರಲ್ಲಿ ಸಾಧಿಸಿದ ಕೆಲಸ ವಿಶೇಷವಾದುದು. ಮತ್ತೆ ಅವನು ಧರಿಸಿರುವ ಕರೀಟವು ಕಲಶಪ್ರಾಯವಾಗಿದ್ದಿತು.

*"ಕಿರೀಟ ಹಾರ ಕೇಯೂರ ಕುಂಡಲಾಲಂಕೃತಾಯ ಚ ।*
*ಕೋಟಿ ಸೂರ್ಯಪ್ರಕಾಶಾಯ ದೇವಸಿಂಹಾಯ ಮಂಗಳಮ್ ॥"*

ಪರಮಾತ್ಮನು ಈ ರೀತಿ ವಿಜೃಂಭಿಸುತ್ತಿದ್ದನು.

ಕಿರೀಟಿ - ಅರ್ಜುನ - ಪಾಂಡವರಲ್ಲಿ ಅರ್ಜುನನೇ ಕೃಷ್ಣನು ಅಥವಾ ವಿಷ್ಣು.

**477. ಕುಂಡಲಿನೇ ನಮಃ**

ಕುಂಡಲಿ - ಕುಂಡಲ - ಕಿವಿಗೆ ಧರಿಸುವ ಆಭರಣಗಳು, ಕುಂಡಲಗಳನ್ನು ಧರಿಸಿರುವವನು ಕುಂಡಲಿನ್ - ಆದರಿಂದ ಕುಂಡಲಿನೇ ನಮಃ.

(ಕುಂಡಲ - ಕರ್ಣಾಭರಣ, ಕಿವಿಯ ಒಡವೆ, ಬಳೆ, ಕಂಕಣ)

ನರಸಿಂಹಸ್ವಾಮಿಯ ಕಿವಿಗಳು ಉಜ್ವಲವಾದ ಆಭರಣಗಳಿಂದ ಕಂಗೊಳಿಸುತ್ತಿವೆ. ತೇಜಸ್ಸಿನಿಂದ ಪ್ರಕಾಶಮಾನವಾಗಿವೆ, ಪ್ರಕಾಶವು ಕಣ್ಣುಗಳಿಗೆ ಹಿತವಾಗಿದೆ. ಶಾಂತತೆಯನ್ನು ಸಮಾಧಾನವನ್ನು ಕೊಡುತ್ತದ ಸಿಂಹದ ತಲೆಯ ಕಿವಿಗಳಾದರೋ ಈ ಕರ್ಣಕುಂಡಲಗಳಿಂದ ವಿಜ್ರಂಭಿಸುತ್ತಿವೆ. ಆಭರಣಗಳು ಹಿತವಾದಷ್ಟೂ ಧರಿಸಿರುವವರ ಮನಸ್ಸು ಅಷ್ಟು ನಿರ್ಮಲವಾಗಿರುತ್ತದೆ.

ಕುಂಡಲಿ - ಜನ್ಮರಾಶಿಕುಂಡಲಿ. ಜನನಕಾಲದಲ್ಲಿದ್ದ ಗ್ರಹಗಳ ಸ್ಥಾನಗಳು ನಿರ್ದೇಶಿಸಲ್ಪಟ್ಟಿರುತ್ತವೆ. ಗ್ರಹಗಳನ್ನು ಯೋಜಿಸುವ ಕಾರ್ಯವು ಪರಮಾತ್ಮನ ಸಂಕಲ್ಪಮಾತ್ರದಿಂದ ನಡೆಯುವುದರಿಂದ ಅವನೇ ಕುಂಡಲಿಯ ನಿರ್ಧಾರಕನು. ಅವನಿಗೆ ನಮಸ್ಕಾರಗಳು.

78. ಸರ್ವಾಂಗಾಯ ನಮಃ

ಎಲ್ಲಾ ಅಂಗಗಳೂ, ಅವಯವಗಳೂ ಪ್ರಮಾಣಕ್ಕೆ ತಕ್ಕಂತೆ ಶೋಭಿಸುತ್ತಿವೆ. ಯಾವ ಅಂಗವೂ ಹೆಚ್ಚು ಕಡಿಮೆ ಇಲ್ಲದೆ ಸುಂದರವಾಗಿ ಇದೆ. ಸಿಂಹದ ತಲೆ, ನರನ ದೇಹ, ಇವುಗಳಿಗೆ ಜೋಡಣೆಗೆ ತಕ್ಕ ಪ್ರಮಾಣ - ಎಷ್ಟು ಪರಿಪೂರ್ಣವಾಗಿದೆ ಎಂದರೆ ನಿಜವಾದ ದೇಹವೇ ನರಸಿಂಹ ರೂಪಿನದು - ಬೇರೆ ಬೇರೆ ಯೋನಿಯಲ್ಲಿ ಪ್ರಕಟವಾದುವುಗಳಲ್ಲ ಎನಿಸುತ್ತದೆ. ನರಸಿಂಹಸ್ವಾಮಿಯು ಸರ್ವಾಂಗ ಸುಂದರನು, ಮನ ಮೋಹಕನು, ಆಪ್ಯಾಯಮಾನ ರೂಪನು, ಬೇಡಿದ ಭಕ್ತರಿಗೆ ಬೇಡಿದ ವರಗಳನ್ನು ಸಂಪೂರ್ಣವಾಗಿ ನೀಡುತ್ತ ಲಕ್ಷ್ಮೀ ಸಮೇತನಾದ ನರಸಿಂಹನು ಲೋಕಾಂಬೆಯೊಡನೆ ಶ್ರೀ ಶೀಬಿಯಲ್ಲಿ ನಿಂತು ಹಸನ್ಮುಖನಾಗಿದ್ದಾನೆ. ಪರಮ ಪೂಜ್ಯನಾದ ಶೀಬೀನರಸಿಂಹನೇ ಇದನ್ನು ಬರೆಯಿಸುತ್ತಿದ್ದಾನೆ. (ಸರ್ವಾಂಗಾಯ ನಮಃ) ಸರ್ವಾಂಗಗಳಲ್ಲಿಯೂ ಸುಶೋಭಿತನಾಗಿ ಅಲಂಕೃತನಾಗಿದ್ದಾನೆ. ತನ್ನನ್ನು ನೋಡಿದವರ ಮನವನ್ನು ಎಳೆದುಕೊಳ್ಳುತ್ತಿದ್ದಾನೆ. ಇದು ಅವನ ಪರಮ ಧ್ಯೇಯ. ನೋಡುವುದಕ್ಕೆ ಏಕಾಗ್ರತೆಯನ್ನು ಕೊಡುವವನು ಅವನೇ. ಸರ್ವವೂ ಅವನೇ! "ಅವನೇ ನಮಗೆ ಬುದ್ಧಿ ಕೊಡುವವನು. ವಿದ್ಯೆ ಹೇಳುವವನು, ಉದ್ಧಾರಕರ್ತ ಮಮ ಸ್ವಾಮಿಯೇ ಅವನು. ಅವನಿರುವಾಗ ನಮಗೆ ಏತರ ಭಯವೂ ಇಲ್ಲ. ನಾವು ಯಾವ ರೀತಿಯಲ್ಲಿಯೂ ಬಡವರೂ ತಬ್ಬಲಿಗಳೂ ಅಲ್ಲ. ಶ್ರೀನಿಧೀ ಹರಿಯಿರುವ ತನಕ ನಾವು ಶ್ರೀಮಂತರು, ಸಂಪತ್ತು ಉಳ್ಳವರು. ಈ ಸಂಪತ್ತನ್ನು ಅಪಹರಿಸುವವರು ಯಾರೂ ಇಲ್ಲ".

ಹೇಗಿರುವನೋ ಹಾಗೆಯೇ ಅವನು ಇದ್ದಾನೆ. ನಾವು ಸುಮ್ಮನೆ ಹಾಗೆ ಇದ್ದಾನೆ, ಹೀಗೆ ಇದ್ದಾನೆ, ಹೇಗೆ ಇದ್ದಾನೆ ಎಂದು ಊಹಿಸುವುದು ವಿಸ್ಮಯಪಡುವುದು ನಮ್ಮ ಮನಸ್ಸನ್ನು ಬುದ್ಧಿಯನ್ನು ಹರಿತಗೊಳಿಸುವುದಕ್ಕೆ. ಭಕ್ತನೊಬ್ಬ ಹೇಳುತ್ತಾನೆ-

*"ಯಥಾ ತಥಾ ಯಥಾ ತಥಾ ತಥೈವ ಕೃಷ್ಣ ಸತ್ವಧಾ /*
*ಮಯಾ ಸ ದೈವ ಗೀಯತಾಂ ತಥಾ ಕೃಪಾವಿಧೇಮತಾಮ್ //"*

ಎಷ್ಟು ನಮ್ರವಾಗಿದೆ, ಶರಣಾಗತವಾಗಿ ಮನಸ್ಸು ಶಾಂತತೆಗೆ ಬರುತ್ತಿದೆ. ಇನ್ನೂ ಮುಂದೆ ಹೋದರೆ ಆ ರೂಪ, ಈ ರೂಪ, ಆ ಅವಯವ, ಈ

ಅವಯವ ಎಂದು ಧ್ಯಾನಿಸುವುದು ಹೇಗೆ, ಒಂದನ್ನು ಆರಿಸಿಕೊಂಡರೆ ಇನ್ನೊಂದು ಮುಂದೆ ಬರುತ್ತದೆ. ಮನಃಪಟವು ಇವುಗಳನ್ನು ನೋಡಿ ನೋಡಿ ಹರಿತವಾಗಬಹುದು ಇಲ್ಲಾ ಚಂಚಲವಾಗಬಹುದು. ಅಥವಾ ಇವೆಲ್ಲಕ್ಕಿಂತ ಓಂಕಾರ ಬಿಂದು ಹೊಳೆಯುವ ನಕ್ಷತ್ರವನ್ನು ಕುರಿತು ಧ್ಯಾನ ಮಾಡಬಹುದು. ಅಥವಾ ನಿರಾಕಾರ ಮೂರ್ತಿಯನ್ನು ಆಕಾಶವನ್ನು ಉದ್ದೇಶಿಸಿ ಧ್ಯಾನಿಸಬಹುದು. ಅಥವಾ ಸ್ವಯಂ ಚಿದಾಕಾಶವನ್ನು ಕುರಿತು ಧ್ಯಾನಿಸಬಹುದು. - ಹೇ ನರಸಿಂಹಸ್ವಾಮಿಯೇ, ಇದಕ್ಕೇನೇ ಅರ್ಜುನನು ಶ್ರೀಕೃಷ್ಣನನ್ನು ಗೀತೆಯಲ್ಲಿ ಕೇಳಿದ್ದು - ''ಕೇಷು ಕೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ಮಯಾ ||'' - ಎಷ್ಟು ಸಮಂಜಸವಾಗಿದೆ ಪ್ರಶ್ನೆ - ಇದಕ್ಕೆ ಉತ್ತರ ಭಗವಂತನ ''ವಿಭೂತಿಯೋಗ'' - ಇದು ಕೇಳಿದ್ದು ಸಾಲದೆಂದು ಅರ್ಜುನನು ಕೇಳಿದನು. - ನನ್ನನ್ನು ನೀನು ಯೋಗ್ಯನೆಂದು ತಿಳಿದ್ದದೇ ಆದರೆ ನಿನ್ನ ಮೇಲೆ ಹೇಳಿದ ರೂಪಗಳನ್ನು ನೋಡಬೇಕೆಂದು ಇಚ್ಛೆಯುಂಟಾಗಿದೆ, ನನಗೆ ತೋರಿಸು.

ಇದಕ್ಕೆ ಭಗವಂತನು ತನ್ನ ವಿಶ್ವರೂಪವನ್ನು ತೋರಿಸಿದನು - ಇಲ್ಲಿ ನೋಡಬೇಕಾದ್ದು ಸರ್ವಾಂಗಸಾದ ಪರಮೇಶ್ವರನು ಅಖಂಡವಿಶ್ವವನ್ನು ತನ್ನ ಶರೀರದಲ್ಲಿ ತೋರಿಸಿದನು - ವಿಶ್ವವೇ ಇವನ ಕೃಷ್ಣನ ಶರೀರದಲ್ಲಿ ಲೀನವಾಗಿ ಚಿಕ್ಕದಾಗಿ ಕಾಣಿಸಿತೋ ಅಥವಾ ಶ್ರೀಕೃಷ್ಣನ ಶರೀರವೇ ವಿಶ್ವದಷ್ಟು ಬೆಳೆಯಿತೋ ಇದನ್ನು ಅವನೇ ಬಲ್ಲ. ನಮ್ಮ ಬುದ್ಧಿ ಮನಸ್ಸು ಪರಿಗ್ರಹಿಸಲು ಸಾಧ್ಯವಿಲ್ಲ. ಇದನ್ನು ನೋಡಲು ಭಗವಂತನು ಅರ್ಜುನನಿಗೆ ಜ್ಞಾನಚಕ್ಷುವನ್ನು ಕೊಟ್ಟನು, ಇರುವ ಅವನ ಕಣ್ಣುಗಳಿಗೆ ಶಕ್ತಿ ಸಾಲಲಿಲ್ಲವೆಂದು.

ಯಶೋದೆಗೆ ಬಾಲಕೃಷ್ಣನು ಬ್ರಹ್ಮಾಂಡವನ್ನು ಬಾಯಿಯಲ್ಲಿ ತೆರೆದು, ಆ ಎಂದು ತೆರೆದು ತೋರಿಸಿದನು. ಇಲ್ಲಿಯೂ ಮಗುವಾದ ಬಾಲಕೃಷ್ಣನು ಬ್ರಹ್ಮಾಂಡವನ್ನು ತೋರಿಸುತ್ತಿದ್ದರೆ ಯಶೋದೆಯು ಮೈಮರೆತು ಕೃಷ್ಣನೇ ಪರಮೇಶ್ವರನೆಂದು ತನುಮನಬುದ್ಧಿಯನ್ನು ಅವನಲ್ಲಿ ಲೀನಮಾಡಿದಳು. ಎಲ್ಲಿ ತನ್ನ ಬಾಹ್ಯಸ್ಥಿತಿಗೆ ಅವಳು ಬರುವುದಿಲ್ಲವೋ ಎಂದು ಶ್ರೀಕೃಷ್ಣನೇ ಅವಳನ್ನು ''ಅಮ್ಮಾ'' ಎಂದು ಕೂಗಿ ಎಚ್ಚರಿಸಿದನು.

ಇಲ್ಲಿಯೂ ಬ್ರಹ್ಮಾಂಡ, (ಅವನ) ಶ್ರೀಕೃಷ್ಣನ ಬಾಯಿ, ಯಶೋದೆಯ ಕಣ್ಣು ಮನಗಳು ಯಾವುದು ಯಾವುದರಲ್ಲಿ ಲೀನವಾಗಿತ್ತು ಎನ್ನುವುದು ಆಶ್ಚರ್ಯ, ಇದನ್ನು ಅವರವರಿಗೇ ಬಿಟ್ಟು ನಾವು ಕೇಳಿದ್ದು, ಓದಿದ್ದು, ನೋಡಿದ್ದು ತಿಳಿದು, ನಮ್ಮ ಗಗನಾಕಾರದ ಮನಸ್ಸಿನಲ್ಲಿ ಇವುಗಳನ್ನು ಲೀನಮಾಡಿಕೊಂಡರೆ - ಮಾಡಿಕೊಂಡಾಗ - ನಾನು ಎನ್ನುವುದು ಹೋಗಿ ಬುದ್ಧಿ ಜ್ಞಾನ ಮನಸ್ಸುಗಳು ಅವನಲ್ಲಿ ಮುಳುಗಿ ಹೋಗುತ್ತವೆ. - ಇದೇ ಸರ್ವಾಂಗಸುಂದರನಾದ ಪರಮಾತ್ಮನ ಲೀಲೆ - ಹಿಂದಿನ ಮೆಟ್ಟಲು ಸಪ್ಪೆಯಾಗಿ ಮುಂದಿನ ಮೆಟ್ಟಲು

ಆನಂದದಾಯಕವಾಗುತ್ತದೆ. ಅದೂ ಸಪ್ಪೆಯಾಗಿರುವುದಕ್ಕೆ ಮುಂದೊಂದು ಮೆಟ್ಟಲಿದೆ - ಹೀಗೆಯೇ ಮುಂದೆ ಮುಂದೆ ಹೋದರೆ ಪರಮಾತ್ಮನ ಪರಮ ಸಾನ್ನಿಧ್ಯ ಕಾಣುತ್ತದೆ, ಸಿಕ್ಕುತ್ತದೆ ಅದರಲ್ಲಿ ನಮ್ಮ ಆತ್ಮ ಲೀನವಾಗುತ್ತದೆ...!!!

**479. ಸರ್ವತೋಮುಖಾಯ ನಮಃ**

ಸರ್ವತಃ - ಎಲ್ಲೆಲ್ಲಿಯೂ, ಎಲ್ಲೆಡೆಯಲ್ಲಿಯೂ ಹರಡಿರುವ, ಇಂತಹ ಸ್ಥಳ ಬೇಡವೆಂದು ಬಿಡದಿರುವ ಕಡೆಗಳಲ್ಲಿಯೂ, ಮುಖಃ - ಮುಖವನ್ನು, ತನ್ನ ವದನವನ್ನು ತಿರುಗಿಸಿರುವವನು ಯಾರೋ ಅವನು ಸರ್ವತೋಮುಖನು.

ಅಷ್ಟ ದಿಕ್ಕುಗಳು - ಊರ್ಧ್ವ, ಅಧಃ - ಎಂದರೆ ಹತ್ತು ದಿಕ್ಕುಗಳಲ್ಲಿಯೂ ಏನನ್ನೂ ಬಿಡದೆ ಮುಖದಿಂದ ನೋಡುವವನು - ಪರಮಾತ್ಮ.

ಸರ್ವತಃ ಎಲ್ಲ ರೀತಿಯಲ್ಲಿಯೂ, ಸರ್ವತೋಮುಖ - ಎಲ್ಲ ರೀತಿಯಿಂದಲೂ ಎಲ್ಲ ವಿಧದಿಂದಲೂ ಪರಿಪೂರ್ಣವಾಗಿರುವವನು.

ಯಾವ ಯಾವ ರೀತಿಯಲ್ಲಿ ವಿಮರ್ಶಿಸಿದರೂ ಆ ರೀತಿಗಳಲ್ಲಿಯೂ ಮತ್ತು ವಿಮರ್ಶಿಸಲು ತಿಳಿಯದಂತಹ ರೀತಿಗಳಲ್ಲಿಯೂ ಪರಮಾತ್ಮನು ಪರಿಪೂರ್ಣನು. ಶಾಂತಿ ಮಂತ್ರದಲ್ಲಿ ಹೇಳಿರುವ ಹಾಗೆ,

*''ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದುಚ್ಯತೇ।*
*ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥*
*ಓಂ ಶಾಂತಿಃ ಶಾಂತಿಃ ಶಾಂತಿಃ''*

ಈ ರೀತಿ ಸರ್ವತೋಮುಖನಾದ ನರಸಿಂಹಸ್ವಾಮಿಗೆ, ಪರಮಾತ್ಮನಿಗೆ ನಮಸ್ಕಾರಗಳು. ಬ್ರಹ್ಮದೇವರು ನರಸಿಂಹಸ್ವಾಮಿಯನ್ನು ಅವನ ಗುಣಗಳನ್ನು ವರ್ಣಿಸುತ್ತಿದ್ದಾರೆ. ಇಂತಹ ನರಸಿಂಹನನ್ನು ಪಶ್ಯಾಮಿ ತ್ವಾಂ - ನಿನ್ನನ್ನು ನೋಡುತ್ತಿದ್ದೇನೆ ಎಂದು ಹೇಳುತ್ತಿದ್ದಾರೆ. ಹಿರಣ್ಯಕಶಿಪುವಿನ ಸಂಹಾರಾನಂತರ ಉಗ್ರ ನರಸಿಂಹನಿಗೆ ಹೇಳುವ ಸನ್ನಿವೇಶ ಇದು. ಓಂ ಶ್ರೀ ನರಸಿಂಹಾಯ ಸರ್ವತೋಮುಖಾಯ ನಮಃ.

*ಸರ್ವತಃ ಪಾಣಿಪಾದೋರುಂ ಸರ್ವತೋಽಕ್ಷಿಶಿರೋಮುಖಮ್ ।*
*ಸರ್ವೇಶ್ವರಂ ಸದಾ ತುಷ್ಟಂ ಸತ್ವಥಂ ಸಮರಪ್ರಿಯಮ್ ॥78॥*

*(480-485)*

**480. ಸರ್ವತಃಪಾಣಿಪಾದೋರವೇ ನಮಃ**

ಪಾಣಿ - ಕೈಗಳು, ಹಸ್ತಗಳು. (ಅಭಯ, ವರದ ಹಸ್ತಗಳು)

ಪಾದ - ಪಾದಗಳು, ಕಾಲುಗಳು, ನಾಲ್ಕನೆಯ ಒಂದು ಭಾಗ, ಗಿಡದ ಬೇರು (ಅಶ್ವತ್ಥದ ಬೇರುಗಳು)

ಊರು - ತೊಡೆಗಳು. (ಊರೂ ತದಸ್ಯ ಯದ್ವೈಶ್ಯಃ)

ಸರ್ವತಃ - ಎಲ್ಲ ಕಡೆಗಳಲ್ಲಿಯೂ, ಪರಿಪೂರ್ಣವಾದ ರೀತಿ.

ಎಲ್ಲ ಕಡೆಗಳಲ್ಲಿಯೂ ಪರಮಾತ್ಮನು ಹರಡಿಕೊಂಡಿರುತ್ತಾನೆ. ಎಲ್ಲ ಕಡೆಗಳಲ್ಲಿಯೂ ಎಲ್ಲ ಜೀವಿಗಳಿಗೂ, ಸಚರಾಚರ ವಸ್ತುಗಳಿಗೂ ಪರಮಾತ್ಮನು ಮತ್ತು ಅವನ ಕರುಣೆಯು ಲಭ್ಯ. ಯಾವ ಪಕ್ಷಪಾತವೂ ಇಲ್ಲ.

ಪಾಣಿ - ಸರ್ವತಃ ಪಾಣಿ - ಎಲ್ಲ ಕಡೆಯಲ್ಲಿಯೂ ವಿಶಾಲವಾಗಿ ಅಡೆತಡೆಗಳಿಲ್ಲದೆ ಪಾಣಿಗಳನ್ನು ವರದ ಮತ್ತು ಅಭಯ ಹಸ್ತಗಳನ್ನು ಹರಡಿದ್ದಾನೆ. ಸಕಲ ಜೀವಕೋಟಿಯ ಪ್ರತಿ ಜೀವಿಯೂ ಅನಾಯಾಸವಾಗಿ ಅನಂತ ವಿಶ್ವಾಸದಿಂದ ಈ ಲಾಭವನ್ನು ಪಡೆಯಬಹುದು. ವರದ ಹಸ್ತಗಳಿಂದ ವರಗಳನ್ನೂ ಅಭಯ ಹಸ್ತದಿಂದ ಭಯನಿವಾರಣೆ (ಮೃತ್ಯು ಭಯವೇ ಅತಿ ದೊಡ್ಡ ಭಯ - ಇದನ್ನೂ ಸಹ ಎದುರಿಸಲು ಶಕ್ತಿಯನ್ನು)ಯನ್ನೂ ಕೊಡುತ್ತಾನೆ.

ಸರ್ವತಃ ಪಾದ - ಪರಮಾತ್ಮನು ವಾಮನಾವತಾರದಲ್ಲಿ ಬಲಿಯನ್ನು ಮೂರುಪಾದ ನೆಲವನ್ನು ಬೇಡುವ ನೆಪದಲ್ಲಿ ಒಂದು ಪಾದವನ್ನು ಸ್ವರ್ಗ (ಬ್ರಹ್ಮ) ಲೋಕದವರೆಗೂ ಇನ್ನೊಂದು ಪಾದವನ್ನು ಪಾತಾಳಲೋಕದವರೆಗೂ ಪ್ರಸರಿಸಿ ಮೂರನೆಯಪಾದವನ್ನು ಬಲಿ ಚಕ್ರವರ್ತಿಯ ತಲೆಯ ಮೇಲೆ ಇಟ್ಟನು. ಈ ರೀತಿ ತನ್ನ ವಿಪುಲ ಶಕ್ತಿಯನ್ನು ಅಲ್ಪಪಾದದಿಂದ ವಿಶಾಲವಾಗುವ ರೀತಿಯಲ್ಲಿ ಪ್ರಕಟಿಸಿದನು ಮತ್ತೆ ಬಲಿಯನ್ನು ಅಪಾರದಾನಿ, ಉದಾರಿ, ಸತ್ಯಸಂಧ ಎಂಬ ಎಲ್ಲೆಗೆ ಏರಿಸಿದನು.

ಸರ್ವತಃಪಾದ - ಎಂಬುದನ್ನು ಪಾದ ಎಂದರೆ ನಾಲ್ಕನೆಯ ಒಂದು ಎಂದು ಅರ್ಥಮಾಡಿದಾಗ, "ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ" ಎಂದೂ "ಪದ್ಭ್ಯಾಂ ಶೂದ್ರೋಽಜಾಯತ" ಎಂದೂ, "ಪದ್ಭ್ಯಾಂ ಭೂಮಿರ್ದಿಶಶ್ರೋತ್ರಾತ್" ಎಂದು ವಿಮರ್ಶೆ ಹೊರಹೊಮ್ಮುತ್ತದೆ. ಇದರಲ್ಲಿ ಪರಮಾತ್ಮನ ಮಹತೋ ಮಹೀಯಾನ್ ಎಂಬುದನ್ನು ತೋರಿಸುತ್ತದೆ.

ಸರ್ವತಃ ಪಾದಃ ಗಿಡದ ಬೇರು ಎಂದು ಅರ್ಥಮಾಡಿದಾಗ, ಸಂಸಾರವೇ ಅಶ್ವತ್ಥ ವೃಕ್ಷ, ಇದರ ಬೇರು ಮೇಲೆ ಇದೆ. ಛಂದಾಂಸಿ ಯಸ್ಯ ಪರ್ಣಾನಿ... ಎಂದು ಗೀತೆಯಲ್ಲಿ ಹೇಳಿದೆ ಎಂದ ಮೇಲೆ ಬೇರು ಮೇಲೆ ಹರಡಿದೆ ಎಂದರೆ ಸ್ವರ್ಗಲೋಕ, ವೈಕುಂಠಲೋಕಗಳು ಎಷ್ಟು ಉತ್ತಮವಾದವು. ಅಲ್ಲಿಂದಲೇ ಸರ್ವವೂ ಮರದ ರೂಪದಲ್ಲಿ ಹರಡಿದೆ ಎಂದು ತಿಳಿಯುತ್ತದೆ. ಇದೇ ಅಶ್ವತ್ಥ ವೃಕ್ಷ. ಇದಕ್ಕೆ ಸಮಾನವಾದ ವೃಕ್ಷವೇ ಇಲ್ಲ. ಪರಮಾತ್ಮನೇ ಮಹತ್ತರವಾದ ವೃಕ್ಷ. ಈ ವೃಕ್ಷವು ಪರಮಾತ್ಮನು ರೂಪ.

*"ಮೂಲತೋ ಬ್ರಹ್ಮರೂಪಾಯ ಮಧ್ಯತಃ ಶಿವರೂಪಿಣೇ |*

*ಅಗ್ರತೋ ವಿಷ್ಣುರೂಪಾಯ ವೃಕ್ಷರಾಜಾಯ ತೇ ನಮಃ ||"*

ಎಂದು ಹೇಳಿ ಅಶ್ವತ್ಥನಾರಾಯಣ ರೂಪಿಗೆ ಸೇವೆ ಸಲ್ಲಿಸುತ್ತೇವೆ.

ಸರ್ವತಃ ಊರು - ಎಲ್ಲೆಲ್ಲಿಯೂ ತೊಡೆಗಳು ಪ್ರಸರಿಸಿವೆ ಎಂದರ್ಥ. "ಊರೂ ತದಸ್ಯ ಯದ್ವೈಶ್ಯಃ" ಎಂದು ಪುರುಷ ಸೂಕ್ತದಲ್ಲಿ ಬರುತ್ತದೆ. ಎಂದರೆ ಪರಮಾತ್ಮನ ದೇಹದ ಅವಯವಗಳ ಕಲ್ಪನೆ ವಿಚಿತ್ರ. ಇದನ್ನು ನೋಡಿದವರು, ಹೇಳಿದವರು, ಪೊಗಳಿದವರು ಸಾಕ್ಷಾತ್ ಬ್ರಹ್ಮ ದೇವರೇನೇ. ನಮ್ಮ ಊಹೆಯಂತೂ ಈ ನಮ್ಮ ದೇಹದ ಆಚೆ ಹೋಗುವುದಿಲ್ಲ. ಇದೆಲ್ಲ ನೋಡಿದರೆ ಪರಮಾತ್ಮನು ಕಲ್ಪನಾತೀತ.

ಪರಮಾತ್ಮನ ದೇಹದ ಪಾಣಿ, ಪಾದ, ಊರು ಎಲ್ಲವೂ ಪರಿಪೂರ್ಣವಾದುದು. ಯಾವುದರಲ್ಲಿಯೂ ಹೆಚ್ಚು ಕಡಿಮೆ ಇರುವುದಿಲ್ಲ.

81. **ಸರ್ವತೋಽಕ್ಷಿಶಿರೋಮುಖಾಯ ನಮಃ**

ಈ ನಾಮವೂ ಸಹ ಬೃಹದಾಕಾರವನ್ನೇ ಹೇಳುತ್ತದೆ.

ಸರ್ವತಃ - ಎಲ್ಲೆಡೆ, ಪರಿಪೂರ್ಣವಾದ,

ಅಕ್ಷಿ - ಕಣ್ಣುಗಳು , ಶಿರ - ಶಿರಸ್ಸು, ತಲೆ, ಮುಖ - ವದನ, ಇರುವವನು.

ಇವನ ಕಣ್ಣುಗಳು, ತಲೆ, ಮುಖ ಎಲ್ಲವೂ ಪರಿಪೂರ್ಣವಾದವುಗಳು. ದೇವತೆಗಳು ಕಲ್ಪಿಸಿದ ಪರಮಾತ್ಮನು ರೂಪ, ಪ್ರಮಾಣ ಎಲ್ಲವೂ ಪರಿಪೂರ್ಣವಾದ್ದು. ಅವರು ಯಜ್ಞಕ್ಕಾಗಿ ಅವನನ್ನೇ ಯೂಪಸ್ತಂಭಕ್ಕೆ ಕಟ್ಟಿ ಯಜ್ಞಪಶುವಾಗಿ ಉಪಯೋಗಿಸಿದರು. ಪರಮಾತ್ಮನು ಸರ್ವದಿಕ್ಕಿನಲ್ಲಿಯೂ ಸದಾ ನೋಡುತ್ತಾನೆ. ಅವನು ಸಹಸ್ರಶೀರ್ಷಾ ಸಹಸ್ರಾಕ್ಷಃ.

ಪರಮಾತ್ಮನು "ಸಹಸ್ರಶೀರ್ಷಾ ಪುರುಷಃ। ಸಹಸ್ರಾಕ್ಷಃ ಸಹಸ್ರಪಾತ್।" ಎಷ್ಟು ವಿಶಾಲವಾದವನು ಎಂದು ಪುರುಷ ಸೂಕ್ತದಲ್ಲಿ ಅವನ ರೂಪವನ್ನೂ ಸೃಷ್ಟಿಯ ಕಲ್ಪನೆಯನ್ನೂ ತಿಳಿಸಿದೆ. ಯಾವ ರೀತಿ ಈ ಸೃಷ್ಟಿಯೆಲ್ಲವೂ ಅವನ ರೂಪದ ಅವಯವಗಳಿಂದಲೇ ಹೊರಹೊಮ್ಮಿದವೆಂದು ಮತ್ತು ಯಾವ ರೀತಿ ಅವನನ್ನೇ ಯಜ್ಞಪಶುವಾಗಿ ಯೂಪಸ್ತಂಭಕ್ಕೆ ಕಟ್ಟಿ ದೇವತೆಗಳು ಯಜ್ಞಮಾಡಿದರೆಂದು ಅದರಲ್ಲಿ ವಿವರಿಸಿದೆ.

ಹಾಗೆಯೇ ಅವನು ಮಹಾರೂಪವಾದರೂ, ಅಣುರೂಪವಾದರೂ ಸಕಲ ಅವಯವಗಳೂ ಪರಿಪೂರ್ಣವಾಗಿ ಉಳ್ಳವನು. ಅವನೇ ಏಕೆ ಅವನು ಸೃಷ್ಟಿಸಿರುವ ಸಕಲ ಜೀವಕೋಟಿಯ ಸಕಲ ಜೀವಿಗಳ ದೇಹವೂ ಅವನ ಹಾಗೆಯೇ ಪರಿಪೂರ್ಣವಾಗಿವೆ.

ಅವನನ್ನು ಸಾಕಾರಮೂರ್ತಿಯೆಂದೂ, ನಿರಾಕಾರಮೂರ್ತಿಯೆಂದು ಅವನ ತೇಜಶ್ಶಕ್ತಿಯನ್ನು ಓಂಕಾರಬಿಂದುವಿನಲ್ಲಿ ನಿಲ್ಲಿಸಿ ಧ್ಯಾನಿಸುವಂತೆ, ದೇಹಗಳಲ್ಲಿರುವ ತೇಜಸ್ಸು ಸಹ ಆತ್ಮಶಕ್ತಿಯಲ್ಲಿ ಬಿಂದುರೂಪದಲ್ಲಿಯೇ ನೆಲೆಯಾಗಿರುತ್ತದೆ.

ಪರಮಾತ್ಮನಿಂದ ಹೊರಬಂದ ಅಂಶಮಾತ್ರವೂ ಅವನ ಸ್ವಭಾವ, ಗುಣಗಳು, ರೂಪಗಳನ್ನು ಹೊಂದಿರುತ್ತವೆ. ಇದೇ ಪರಮಾತ್ಮ - ಆತ್ಮಗಳ ರಹಸ್ಯ. - ಈ ರಹಸ್ಯವನ್ನು ತಿಳಿದವನಿಗೆ ಈ ಸಂಸಾರ ಸಾಗರದಲ್ಲಿ ಸಂಪರ್ಕಕ್ಕೆ ಬರುವ ದೇಹ - ದೇಹಿಗಳ ಸಂಯೋಗ ವಿಯೋಗಗಳು ಸಾಮಾನ್ಯವಾಗಿಬಿಡುತ್ತವೆ ಮತ್ತು ಅವನು ಅಂಟಿದರೂ ಅಂಟದಂತೆಯೇ ಈ ಜಗತ್ತಿನಲ್ಲಿರುತ್ತಾನೆ. ಇತರರಿಗೆ ಸಾಕ್ಷಾತ್ಕಾರ ದಾರಿಯನ್ನೂ ತೋರಬಲ್ಲನು.

*''ಮುಕ್ತಾಶ್ಚಾನ್ಯಾನ್ ವಿಮೋಚಯೇತ್''*

*ದುರ್ಜನಃ ಸಜ್ಜನೋ ಭೂಯಾತ್ / ಸಜ್ಜನಃ ಶಾಂತೋ ಭೂಯಾತ್ /*

*ಶಾಂತೋ ಮುಚ್ಯೇತ ಬಂಧನಾತ್ / ಮುಕ್ತಾಶ್ಚಾನ್ಯಾನ್ ವಿಮೋಚಯೇತ್//*

ಎಂಬುದು ಸನಾತನ ಪ್ರಾರ್ಥನೆ. ಇದನ್ನು ಜೀವನ್ಮುಕ್ತನು ನಡೆಸುತ್ತಾನೆ.

82. ಸರ್ವೇಶ್ವರಾಯ ನಮಃ

ಪರಮಾತ್ಮನೇ ಎಲ್ಲದಕ್ಕೂ ಈಶ್ವರನು, ಸೂತ್ರಧಾರನು, ಎಲ್ಲವನ್ನೂ ನಡೆಸುವವನು. ಇವನ ಸಂಕಲ್ಪವಿಲ್ಲದೆ ಏನೂ ನಡೆಯುವುದಿಲ್ಲ. ಸೃಷ್ಟಿಯಲ್ಲಿ ಏನೇ ನಡೆಯಬೇಕಾದರೂ ಕಾಲ ದೇಶದ ನಿಯಮವಿಲ್ಲ. ಎಲ್ಲವೂ ಇವನ ಸಂಕಲ್ಪದಿಂದಲೇ ನಡೆಯುತ್ತದೆ. ಬೇರೆ ಯಾರ ಇಚ್ಛೆಯೂ ನಡೆಯುವುದಿಲ್ಲ. ಅದರಿಂದ ಸಮಾಧಾನ ಚಿತ್ತರಾಗಿ ಶಾಂತರಾಗಿರಬೇಕಾದರೆ ನಾವು ''ಸಕಲವೂ ಅವನ ಇಚ್ಛೆಯಂತೆಯೇ ನಡೆಯುತ್ತದೆ. ನಾವು ಅವನ ನಿಮಿತ್ತ ಮಾತ್ರರು'' ಎಂದು ಶರಣಾಗತರಾಗಬೇಕು. ಅವನೇ ಸರ್ವೇಶ್ವರನು. ಸರ್ವೇಶ್ವರಾಯ ನಮಃ ಎನ್ನೋಣ.

83. ಸದಾತುಷ್ಟಾಯ ನಮಃ

ಪರಮಾತ್ಮನು ಸದಾತುಷ್ಟನು - ಆನಂದದಿಂದ ಇರುವವನು.

ಆತ್ಮವು ಪರಮಾತ್ಮನಿಂದ ಹೊರಬಂದಿರುವುದರಿಂದ ಅದೊಂದೇ ಪ್ರತ್ಯೇಕವಾಗಿದ್ದರೆ ಪರಮಾತ್ಮನ ಗುಣಗಳನ್ನೇ ಹೊಂದಿರುತ್ತದೆ. ಸದಾ ಸಂತೋಷವಾಗಿರಲು ಸಾಧ್ಯ.

ಪರಮಾತ್ಮನು ತಾನು ನಿರ್ಮಿಸಿದ ಬ್ರಹ್ಮಾಂಡ, ಅದರ ವಿವಿಧ ಜೀವ ಯೋನಿಗಳ ವಿಭಾಗಗಳು, ಸಂಸಾರ ಸಾಗರ, ಮಹಾಭೂತಗಳು - ಇವೆಲ್ಲವನ್ನು ಸೇರಿ ಒಳಗೂ ಹೊರಗೂ ಪ್ರವೇಶಿಸಿದ್ದರೂ ಸಹ ತಾನು ಅವುಗಳಲ್ಲಿ ಅವಲಿಪ್ತನಾಗಿರುವುದರಿಂದ ಅವನು ಸದಾತುಷ್ಟನು.

ಆದರೆ ಆತ್ಮವು ಪ್ರಕೃತಿ, ಪುರುಷ, ಮಾಯೆಯಿಂದ ಕೂಡಿರುವ ಈ ಪ್ರಪಂಚದಲ್ಲಿ ತನ್ನ ಜೊತೆಯಿರುವ ಬುದ್ಧಿ ಮನಸ್ಸು, ಚಿತ್ತ, ಅಹಂಕಾರ,

ಇಂದ್ರಿಯಗಳು, ಸಂಸಾರದ ವಿಷಯಗಳೊಡನೆ ಬೆರೆತಿರುತ್ತಾನೆ. ಸಂಪರ್ಕ ಹೊಂದಿ ಸಂಸ್ಕಾರಗಳನ್ನು ಬೆಳೆಸುತ್ತಾನೆ. ಅದರಿಂದ ಅವಲಿಪ್ತನಾಗಿರಲು ಸಾಧ್ಯವಿಲ್ಲ. ಅಂದರೆ ಪರಮಾತ್ಮನಂತೆ ಸದಾತುಷ್ಟನಾಗಿರುಲು ಸಾಧ್ಯವಿಲ್ಲ. ಹಾಗಿದ್ದರೂ ಅಂತಹ ಸಮಯಗಳು ಕ್ಷಣಿಕ, ಪರಮಾತ್ಮನು ಸದಾತುಷ್ಟನಾಗಿರುವ ಹಾಗೆ ಆಗಬಹುದು. ಇದಕ್ಕೆ ಪರಮಾತ್ಮನ ಕೃಪೆ ಮತ್ತು ತನ್ನದೇ ಆದ ಪರಮಾತ್ಮನನ್ನು ಸೇರುವ ಉತ್ಕಟ ಅಪೇಕ್ಷೆಗಳು ಬರಬೇಕು.

484. ಸತ್ಪಥಾಯ ನಮಃ

ಪರಮಾತ್ಮನು ಬ್ರಹ್ಮಾಂಡವನ್ನು ನಡೆಸಲು ಅನುಸರಿಸುವ ದಾರಿ ಸಾತ್ವಿಕ ಗುಣಗಳಿಂದ ಕೂಡಿದ್ದು. ಹಾಗಿದ್ದ ಮೇಲೆ ಪ್ರತಿ ಜೀವಿಯ ಕಡೆಗೂ ಅವನ ಸತ್ಪಥಗಳೇ ಇರುತ್ತವೆ. ಇದನ್ನು ನಾವು ತಿಳಿಯದೆ ಅವನನ್ನು ದೂರುತ್ತೇವೆ. ಪ್ರತಿಯೊಂದು ಆತ್ಮವನ್ನು ಅದರ ಸಂಸ್ಕಾರಗಳಿಂದ ಬಿಡಿಸಿ ತನ್ನಲ್ಲಿ ಸೇರಿಸಿಕೊಳ್ಳುವುದೇ ಧ್ಯೇಯ - ಗುರಿಯಾಗಿರುವಾಗ ಬೇರೆಯ ದಾರಿ ಎಂದು ಅವನನ್ನು ದೂರುವುದು ನ್ಯಾಯವಲ್ಲ.

ನಾವು ನಮ್ಮ ಸಂಸ್ಕಾರ, ಮನಸ್ಸು, ಬುದ್ಧಿಗಳನ್ನು ತಿದ್ದಿಕೊಳ್ಳಬೇಕೇ ಹೊರತು ಪರಮಾತ್ಮನನ್ನು ದೂರುವುದು ಸರಿಯಲ್ಲ. ಈ ಪ್ರಪಂಚವು ಇದ್ದೇ ಇರುತ್ತದೆ. ಹಿಂದೆಯೂ ಇದ್ದಿತು, ಈಗಲೂ ಇದೆ, ಮುಂದೆಯೂ ಇರುತ್ತದೆ. ನಾವು ಮಾತ್ರ ಒಂದ ಸ್ವಲ್ಪಕಾಲ ಇದ್ದು ಹೋಗುತ್ತೇವೆ. ಇಲ್ಲಿ ಇರುವಷ್ಟು ಕಾಲ ಇದ್ದು ಪರಮಾತ್ಮನನ್ನು ಸೇರುವ ರೀತಿಯನ್ನು ತಿಳಿದು ಅನುಸರಿಸಿ ಸಾಧಿಸಿ ಹೋಗಬೇಕು. ಪ್ರಪಂಚಕ್ಕೆ ನಾವು ಒಬ್ಬರು ಮುಖ್ಯವಲ್ಲ. ನಮಗೆ ಪ್ರಪಂಚವನ್ನು ನಾವು ಪರಮಾತ್ಮನನ್ನು ಸೇರುವ ದಾರಿಗೆ ಉಪಯೋಗಿಸಬೇಕು. ಇದು ಪ್ರಪಂಚ. ನಮ್ಮ ಇಷ್ಟದಂತೆ ನಮ್ಮೊಬ್ಬರ ಇಚ್ಛೆಯಂತೆ ನಡೆಯಲು ಪರಮಾತ್ಮನು ನಿರ್ಮಿಸಿಲ್ಲ. ಅವನ ಸಂಕಲ್ಪದಂತೆ ಇರುತ್ತದೆ. ಯಾರನ್ನೂ ನಮ್ಮ ಮನಸ್ಸಿಗೆ ಹೊಂದುವಂತೆ ಇರಬೇಕೆಂದು ಅಪೇಕ್ಷಿಸುವುದು ಸರಿಯಲ್ಲ. ಅವರೂ ನಮ್ಮ ಹಾಗೆಯೇ ಅಪೇಕ್ಷಿಸಲು ಸಾಧ್ಯ. ಹಾಗೆ ಅಪೇಕ್ಷಿಸಿಯೇ ತೀರುತ್ತಾರೆ. ಒಟ್ಟಿನಲ್ಲಿ ನಮಗೆ ವಿರೋಧವೇ ಹೆಚ್ಚು. ಅದರಿಂದ ಪರಮಾತ್ಮನ ಕಡೆಗೆ ನಮ್ಮ ದೃಷ್ಟಿ, ಧ್ಯೇಯಗಳನ್ನು ಇಟ್ಟು ಇರುವಷ್ಟು ದಿನ ನಮ್ಮ ಗುರಿಯನ್ನು ಸಾಧಿಸಿ ಹೋಗಬೇಕು. ಸಾಧ್ಯವಾದರೆ ಬೇರೆಯವರಿಗೆ ಉಪಯೋಗವಾಗೋಣ. ಸತ್ಪಥದಲ್ಲಿರುವ ಪರಮಾತ್ಮನ ಗುಣಗಳನ್ನು ಉದಾತ್ತೀಕರಿಸಿ ಹೋಗೋಣ. ಇದೇ ನಮ್ಮ ಗುರಿಯಾಗಲಿ. ಇದೇ ಮನಸ್ಸಿಗೆ ಪರಮಾತ್ಮನ ಕೃಪೆಯಾಗಲಿ.

485. ಸಮರಪ್ರಿಯಾಯ ನಮಃ

ಯುದ್ಧದಲ್ಲಿ ಪ್ರಿಯನಾದವನು. ಪರಮಾತ್ಮನು ಮಾಡುವ ಯುದ್ಧವು ಧರ್ಮ ಸಂಸ್ಥಾಪನೆಗಾಗಿ, ಶಿಷ್ಟರಕ್ಷಣೆಗಾಗಿ, ದುಷ್ಟಶಿಕ್ಷೆಗಾಗಿ.

ಯುದ್ಧವೆಂದರೆ ವಾಕ್ ಯುದ್ಧವಾಗಬಹುದು, ದೈಹಿಕ ಯುದ್ಧವಾಗಬಹುದು, ಮಾನಸಿಕ ಯುದ್ಧವಾಗಬಹುದು. ಎಲ್ಲದರಲ್ಲಿಯೂ ಪರಮಾತ್ಮನ ಧ್ಯೇಯವು ಒಂದೇ, ಧರ್ಮಯುದ್ಧ. ಅಧರ್ಮದ ನಾಶಕ್ಕಾಗಿ ನಡೆಸುತ್ತಾನೆ. ಇಂತಹ ಸಮರದಲ್ಲಿ ಪರಮಾತ್ಮನು ತನಗೆ ಸರಿ ತೋರಿದ್ದನ್ನು ಪ್ರಿಯವಾದುದನ್ನು ತನ್ನ ಸಂಕಲ್ಪದಂತೆ ನಡೆಸುತ್ತಾನೆ. ಎಂದ ಮೇಲೆ ಪರಮಾತ್ಮನು ಪ್ರತಿಯೊಂದು ಜೀವಿಯ ಸಲುವಾಗಿ ಪ್ರತಿ ಜೀವ ಯೋನಿಯಲ್ಲಿ ಜೀವಕೋಟಿಯಲ್ಲಿ ಪ್ರತಿಕ್ಷಣದಲ್ಲಿಯೂ ನಿರಂತರ ಉದ್ಭವಿಸುತ್ತಿರುವ ದೈಹಿಕ, ಮಾನಸಿಕ, ವಾಕ್‌ನಂತೆ ವಿರೋಧವನ್ನು ಎದುರಿಸಿ ಆಯಾ ಆತ್ಮದಲ್ಲಿ ಮನಸ್ಸಿನಲ್ಲಿ ಬುದ್ಧಿಯಲ್ಲಿ ಶಾಂತಿ ನೆಲಸುವಂತೆ ಮಾಡುತ್ತಾನೆ. ಅದೇ ಅಷ್ಟೇ ಅಲ್ಲದೆ ತನ್ನ ಕಡೆಗೆ ಆತ್ಮವು ಬರುವ ರೀತಿಯಲ್ಲಿ ಸನ್ನಿವೇಶಗಳನ್ನು ಕಲ್ಪಿಸುತ್ತಾನೆ. ಇಂತಹ ಭಾವವನ್ನು ಹೊಂದಿರುವ ಪರಮಾತ್ಮನಿಗೆ ಸಮರಪ್ರಿಯಾಯ ನಮಃ ಎಂದು ಆದರಿಸಿ ನಮಸ್ಕರಿಸುವುದು ನಮಗೆ ಶ್ರೇಯಸ್ಸೇ.

*ಬಹುಯೋಜನವಿಸ್ತೀರ್ಣಂ ಬಹುಯೋಜನನಾಸಿಕಮ್ ।*
*ಮಹಾರೂಪಂ ಮಹಾವಕ್ತ್ರಂ ಮಹಾದಂಷ್ಟ್ರಂ ಮಹಾಭುಜಮ್ ॥79॥*
*(486-491)*

86. ಬಹುಯೋಜನವಿಸ್ತೀರ್ಣಾಯ ನಮಃ

1. ಯೋಜನ - ಎಂಟು ಮೈಲಿನ ಅಳತೆಗೆ ಯೋಜನ ಎಂದು ಹೆಸರು.
2. ಯೋಜನ - ವ್ಯವಸ್ಥೆ ಮಾಡುವುದು, ಮುಂದಿನ ಕಾರ್ಯಕ್ರಮವನ್ನು ರೂಪಿಸುವುದು.

ವಿಸ್ತೀರ್ಣ - ಉದ್ದ x ಅಗಲ ಉಳ್ಳ ಸ್ಥಳ.

ಬಹುಯೋಜನ ವಿಸ್ತೀರ್ಣಾಯ = ಲೆಕ್ಕವಿಲ್ಲದಷ್ಟು ಯೋಜನಗಳ ಉದ್ದ ಅಗಲವಿರುವ ವಿಶಾಲತೆಯುಳ್ಳವನು - ಪ್ರಸರಿಸಿರುವವನು.

ಎಂದರೆ ಭಗವಂತನು ಇರುವ ಸ್ಥಳವನ್ನು ಇಷ್ಟೇ ಎಂದು ನಿರ್ಧರಿಸಲಾಗದವನು.

ಎಂದರ ಪರಮಾತ್ಮನ ಪ್ರಭಾವವಿರುವ ವಿಶಾಲತೆಯನ್ನು ಇಷ್ಟೇ, ಇಂತಿಷ್ಟೇ ಎಂದು ಹೇಳಲಾಗದವನು.

ವಿಶಾಲತೆಯು ಸ್ಥಳದ ವಿಸ್ತಾರತೆಯಾಗಬಹುದು, ಅವನ ಕರುಣೆಯ ವಿಸ್ತೀರ್ಣವಾಗಬಹುದು, ಅವನ ರೂಪವು ಇಷ್ಟೇ ಎಂದು ಹೇಳಲಾಗದವನು.

ಅವನು ಮಾಡುವ ಕಾರ್ಯಗಳು, ಸಂಕಲ್ಪಗಳು ಇಷ್ಟೇ, ಇವೇ ಎಂದು ಯಾರಿಂದಲೂ ಊಹಿಸಲು ಸಾಧ್ಯವಿಲ್ಲ. ಅವನು ಹೀಗೆಯೇ ಎಂದು ಹೇಳಲು ಸಾಧ್ಯವಿಲ್ಲ. ಎಲ್ಲವೂ ಅವನೊಬ್ಬನಿಗೇ ತಿಳಿದಿರುತ್ತದೆ.

ಇದಕ್ಕೇನೆ ಬಹುಯೋಜನ ವಿಸ್ತೀರ್ಣಾಯ ನಮಃ ಎಂದು ನಮಸ್ಕರಿಸುತ್ತೇವೆ.

ಇದರಲ್ಲಿ ಪರಮಾತ್ಮನನ್ನು ಯಾವ ಭಾವನೆಯಿಂದ ವಿವರಿಸಿದರೂ ಮನನಮಾಡಿದರೂ ಅವನು ಅದಕ್ಕೆ ಒಳಪಡುವುದಿಲ್ಲ ಎಂಬ ರಹಸ್ಯವು ಅಡಗಿರುತ್ತದೆ.

ಭಕ್ತನ ಮನಸ್ಸಿನ ಆಳವನ್ನು ಮತ್ತು ಬುದ್ಧಿಯ ವಿವೇಕತೆಯ ಉನ್ನತಭಾವನೆಯನ್ನು ಈ ನಾಮದಲ್ಲಿ ಕಾಣಬಹುದು.

ಇದೇ ರೀತಿ ಪ್ರತಿಜೀವಿಯ ಮನಸ್ಸಿನ ವಿಶಾಲತೆಯನ್ನೂ ಊಹಿಸಬಹುದು. ''ಮನೋ ವೈ ಗಗನಾಕಾರಃ'' ಎಂದು ಉಪನಿಷತ್ತುಗಳು ಸಾರುತ್ತವೆ. ನಮ್ಮ ಸಂಕುಚಿತ ಮನಸ್ಸೇ ಹೀಗಿರುವಾಗ, ಎಲ್ಲ ಮನಗಳನ್ನು ಮೀರಿರುವ ಪರಮಾತ್ಮನ ಮನಸ್ಸನ್ನು ಮತ್ತು ಅದರ ವಿಶಾಲತೆಯನ್ನು ಊಹಿಸಲು ಸಾಧ್ಯವೇ ಇಲ್ಲ. ಈ ಕಾರಣದಿಂದಲೇ ಪರಮಾತ್ಮನು ಬಹುಯೋಜನ ವಿಸ್ತೀರ್ಣನು ಇದರ ಅಗಾಧತೆಗೆ ನಮೋ ನಮಃ.

87. ಬಹುಯೋಜನನಾಸಿಕಾಯ ನಮಃ

ನಾಸಿಕ ಎಂದರೆ ಮೂಗು, ಪರಮಾತ್ಮನ ಮೂಗು ಬಹುಯೋಜನ ಪ್ರಮಾಣದ್ದಾದರೆ ಪರಮಾತ್ಮನ ದೇಹ, ರೂಪವೆಷ್ಟು ಪ್ರಮಾಣದ್ದಾಗಿರಬೇಕು! ಊಹಿಸಲು ಸಾಧ್ಯವೇ!

ಅಥವಾ ನಾಸಿಕದ ಶಕ್ತಿ - ವಾಸನೆಯನ್ನು ಕಂಡುಹಿಡಿಯುವ ಅಥವಾ ಪ್ರಸರಿಸುವ ಶಕ್ತಿ, ಇದರ ಪ್ರಸಾರವು ಬಹುಯೋಜನದವರೆಗೆ ಹೋಗುತ್ತದೆ ಎಂದು ಅರ್ಥಮಾಡಬೇಕು.

ಸಣ್ಣ ಪ್ರಮಾಣದ ಮೂಗು - ಅದಕ್ಕೆ ತಕ್ಕ ದೇಹವೆಂದು ಗ್ರಹಿಸಿದರೆ ಅದರ ಶಕ್ತಿಮಾತ್ರ ವಿಸ್ತಾರವಾಗಿ ಪ್ರಸರಿಸುತ್ತದೆ ಎಂದು ಊಹಿಸಬಹುದು.

ಇಲ್ಲಿ ಪರಮಾತ್ಮನ ರೂಪ, ಶಕ್ತಿಯು ''ಮಹತೋ ಮಹೀಯಾನ್'' ಎಂಬುದರಲ್ಲಿ ಅಡಗಿರುತ್ತದೆ. ಸಕಲ ಬ್ರಹ್ಮಾಂಡಗಳನ್ನು ತನ್ನ ಉದರದಲ್ಲಿ ಅಡಗಿಸಿಕೊಂಡಿರುವವನ ರೂಪದ ವಿಸ್ತಾರ, ನಾಸಿಕ ಶಕ್ತಿ ಎಲ್ಲೆಲ್ಲಿಯೂ ಹರಡಿರುತ್ತದೆ. ಆದಿ, ಅಂತಗಳಿಲ್ಲದ ಅಥವಾ ಆದಿ, ಮಧ್ಯಾಂತರಹಿತವಾದ ಪರಮಾತ್ಮನು ಎಂಬ ವಿಮರ್ಶೆಯು ಇಲ್ಲಿ ಈ ನಾಮದಲ್ಲಿ ಸಲ್ಲುತ್ತದೆ. ಅದಕ್ಕೆ ಬಹುಯೋಜನ ನಾಸಿಕಾಯ ನಮಃ ಎಂದು ಹೇಳವುದು ಅವನಿಗೆ ತಕ್ಕ ಭಾವನೆಯೋ ಏನೋ ಎಂದು ಅನಿಸುತ್ತದೆ.

88. ಮಹಾರೂಪಾಯ ನಮಃ

ಪರಮಾತ್ಮನೇ ಮಹಾರೂಪನು, ಮಹತ್ತಾದ, ಮಹಿಮೆಯುಳ್ಳ, ಮಹತ್ವದ, ರೂಪ, ಶಕ್ತಿ, ಚತುರತೆ ಯುಕ್ತಿಯುಳ್ಳವನು. ಆದರಿಂದ ಮಹಾರೂಪನು.

ರೂಪದ ಪ್ರಮಾಣವೆಷ್ಟೇ ಇದ್ದರೂ ಅದರೊಳಗೆ ಅಡಗಿರುವ ಅವನ ಸಂಕಲ್ಪಶಕ್ತಿ, ಅಷ್ಟೇ ಪ್ರಮಾಣದ್ದು. ಅದರಲ್ಲಿ ರೂಪದ ವಿಸ್ತೀರ್ಣತೆಗೆ ತಕ್ಕಂತೆ ಎಂಬುದು ಇಲ್ಲ. ಅವನ ತೇಜಶ್ಶಕ್ತಿ ರೂಪವನ್ನು ಅನುಸರಿಸುವುದಿಲ್ಲ. ಆದರೆ ಮಹತ್ತಾದ ರೂಪಗಳಿಗಿಂತಲೂ ಮಹತ್ತಾದ ರೂಪವುಳ್ಳವನು ಎಂದು ತಿಳಿಯಬೇಕು. ಮಹತ್ತಾದ್ದಕ್ಕಿಂತಲೂ ಮಹತ್ತಾದ್ದು ಎಂದು ತಿಳಿಯುವುದು ಸರಿ ಏನೋ. ಅದು ಸರಿ ಎಂದಮೇಲೆ ನಾವು ಅವನನ್ನು ರೂಪ ಮೊದಲಾದ ಗುಣಗಳಿಗೆ ಹೊಂದಿಸಿದಂತಾಗುತ್ತದೆ. ಆದರೆ ಅವನು ಅಪರಿಮಿತನು. ಅಳತೆಗೆ ಸಿಕ್ಕದವನು. ಅದರಿಂದ ಹೀಗೆಯೇ ಎಂದು ತಿಳಿಯಲು ಸಿಕ್ಕುವವನಲ್ಲ. ಆದರೆ ನಮಗೆ ತಿಳಿಯಲು ಏನಾದರೂ ಒಂದು ಪ್ರಮಾಣವಿರಬೇಕಲ್ಲ. ಅದಕ್ಕಾಗಿಯೇ ಹೇಳುವುದು.

ಮಹಾರೂಪನು ಎಂದು ಹೇಳಿದರೆ ನಮ್ಮ ಮನಸ್ಸಿನ ಭಾವನಾ ಪ್ರಪಂಚಕ್ಕೆ ಒಂದು ರೀತಿಯ ವಿಚಿತ್ರ ಭಾವನೆ ಅಥವಾ ಪ್ರಚೋದನೆ ಉಂಟಾಗಿ ನಮ್ಮ ವಿಮರ್ಶನಾ ಶಕ್ತಿಯು ವಿಮರ್ಶೆಯನ್ನು ಈ ಅಂತಸ್ತಿನಲ್ಲಿ ನಿಲ್ಲಿಸಿ ಮನಸ್ಸನ್ನು ಶಾಂತಮಾಡಲು ಸಾಧ್ಯವಾಗುತ್ತದೆ.

89. ಮಹಾವಕ್ತ್ರಾಯ ನಮಃ

ಬಹಳ ದೊಡ್ಡದಾದ ಬಾಯಿಯುಳ್ಳವನು ಯಾರೋ ಅವನು - ಪರಮಾತ್ಮನೇ.

ಇದನ್ನು ಶ್ರೀಕೃಷ್ಣ ಪರಮಾತ್ಮನು ತನ್ನ ಅವತಾರದಲ್ಲಿ ತೋರಿಸಿದ್ದಾನೆ.

ಯಶೋದಾದೇವಿಯು ತನ್ನನ್ನು ಅವಳು ಮಣ್ಣುತಿಂದಿರುವೆ ಎಂದು ಗದರಿಸಿದಾಗ ಪರಮಾತ್ಮನು ತನ್ನ ಮಗುವಿನ ರೂಪದಲ್ಲಿದ್ದರೂ, ಪುಟ್ಟಬಾಯಿ ತೆರೆದಾಗ ಸಕಲ ಬ್ರಹ್ಮಾಂಡಗಳನ್ನೂ ಅವನ ಬಾಯಿಯಲ್ಲಿ ತೋರಿಸುತ್ತಾನೆ. ಇದು ಅವನ ಬಾಯಿಯು ಮಹಾವಕ್ತ್ರವಾಗಿ ಕಾಣುತ್ತದೆ.

ಪುಟ್ಟಬಾಯಿಯು ದೊಡ್ಡ ಆಕಾರವಾಗಿ ಬ್ರಹ್ಮಾಂಡಗಳನ್ನು ಇಟ್ಟುಕೊಂಡಿರಬಹುದು ಅಥವಾ ಬ್ರಹ್ಮಾಂಡಗಳೇ ಚಿಕ್ಕವಾಗಿ ಅವನ ಬಾಲರೂಪದ ಬಾಲಕೃಷ್ಣನ ಬಾಯಿಯಲ್ಲಿ ಅಡಗಿರಬಹುದು. ಯಾವುದು ನಮ್ಮ ಊಹೆಗೆ ನಿಲುಕವುದೋ ಅದನ್ನೇ ಸರಿ ಎಂದು ಒಪ್ಪುವುದು ಲೇಸು. ಪರಮಾತ್ಮನ ಲೀಲೆಯೇ ವಿಶೇಷ. ಅದರಲ್ಲಿ ಇದೂ ಒಂದು, ಮಹಾವಕ್ತ್ರಾಯ ನಮಃ.

ಅಥವಾ ಬಾಯಿಯಿಂದ ಬರುವ ಮಾತುಗಳು ಅಮೃತಸ್ವರೂಪದ್ದು. ಮಹತ್ತಾದ್ದು. ಅಮೃತವಾಣಿಗಳನ್ನು ಕೃಷ್ಣಾವತಾರದಲ್ಲಿ ಶ್ರೀಕೃಷ್ಣನು ಭಗವದ್ಗೀತೆಯನ್ನು ರಣರಂಗದಲ್ಲಿ ಹೇಡಿಯಾಗಿದ್ದ ಅರ್ಜುನನಿಗಾಗಿ

ಹೊರಡಿಸುತ್ತಾನೆ. ಇದರಿಂದ ಹೇಡಿ ಅರ್ಜುನನು ಕ್ರಿಯಾಶೀಲನಾಗಿ ಪರಿವರ್ತಿತನಾಗುತ್ತಾನೆ. ಅದರಿಂದ ಪರಮಾತ್ಮನ ಬಾಯಿಯು ಮಹಾವಕ್ತ್ರ.

ಆತ್ಮವು ಪರಮಾತ್ಮನ ಅಂಶವೇ ಆಗಿರುವುದರಿಂದ ಅವನ ಸ್ವಭಾವಗಳನ್ನು ಮೂಲತಃ ಹೊಂದಿರುತ್ತದೆ. ಆದರೆ ತನಗೆ ಅಂಟಿರುವ ಸಂಸ್ಕಾರಬಲದಿಂದ ಆ ಗುಣಗಳನ್ನು ಹೊರಪಡಿಸಲು ಸಾಧ್ಯವಾಗುತ್ತಿಲ್ಲ. ಯಾವಾಗ ಸಾತ್ವಿಕ ಗುಣಗಳು, ಸತ್ಸಂಕಲ್ಪಗಳು ಉಂಟಾಗುವುವೋ ಮತ್ತು ಪರಮಾತ್ಮನನ್ನು ಸೇರುವ ಉತ್ಕಟ ಆಕಾಂಕ್ಷೆಗಳು ಉಜ್ಜ್ವಲವಾಗಿ ಪ್ರಕಟವಾಗುವುವೋ, ಆಗ ಆ ಆತ್ಮ ವಾಸವಿರುವ ದೇಹವು ಸಾತ್ವಿಕವಾಗಿ ಪರಿಣಮಿಸಿ ಮಹಾವಕ್ತ್ರವಾಗುತ್ತದೆ. ಆಗ ಪ್ರಪಂಚವು ಮಹಾವಕ್ತ್ರನೆಂದು ಆತನನ್ನು ಗೌರವಿಸುತ್ತದೆ. ಆತನು ಸಜ್ಜನನಾಗಿ ಸಾತ್ವಿಕನಾಗಿ ತಾನು ಇತರರನ್ನು ಮೇಲೆ ಎತ್ತಲು ಬರುತ್ತಾನೆ. ಗುರುವಿನ ರೂಪವನ್ನು ತಾಳುತ್ತಾನೆ. ಇತರರನ್ನು ಪರಮಾತ್ಮನನ್ನು ಸೇರುವ ದಾರಿಗೆ ಯೋಜಿಸುತ್ತಾನೆ.

ಮಹಾವಕ್ತ್ರವೆಂದರೆ ಸಾತ್ವಿಕ ಅರ್ಥವೇ. ಅದರಲ್ಲಿ ಮಹತ್ವಪೂರ್ಣವಾದ ಶಬ್ದಗಳು ಹೊರಬರುತ್ತವೆ ಎಂದೇ ತಿಳಿಯಬೇಕು. ಅಪಚಾರದ ತುಚ್ಛ, ಅವಾಚ್ಯ ಶಬ್ದಗಳು ಎಂದು ತಿಳಿಯಬಾರದು.

ಮಾನವನು ಈ ಆಚಾರಸಂಹಿತೆಯನ್ನು ಅನುಸರಿಸಿದ್ದೇ ಆದರೆ ಮಹಾತ್ಮನಾಗುತ್ತಾನೆ. ಲೋಕವು ಅವನನ್ನು ಗೌರವಿಸುತ್ತದೆ.

**90. ಮಹಾದಂಷ್ಟ್ರಾಯ ನಮಃ**

ದಂಷ್ಟ್ರ - ಎಂದರೆ ಕೋರೆಹಲ್ಲು, ಮಹಾದಂಷ್ಟ್ರ - ಬಹಳ ಶಕ್ತಿಯುತವಾದ ಕೋರೆಹಲ್ಲುಗಳಿರುವವನು.

ಸಿಂಹದ ರೂಪದ ತಲೆಯಿರುವ ನರಸಿಂಹನಿಗೆ ಮಹಾದಂಷ್ಟ್ರ ಎಂದು ಹೆಸರು. ಅತ್ಯಂತ ಶಕ್ತಿಯುತವಾದ ಕೋರೆದಾಡೆಗಳು ಅವನಿಗೆ ಈ ಹೆಸರು ತಂದಿವೆ.

ಈ ಮಹಾದಂಷ್ಟ್ರಗಳಿಂದ ಏನನ್ನಾದರೂ ಸಾಧಿಸಬಲ್ಲವನು ಈ ನರಸಿಂಹ. ಅದರಿಂದ ಅವನಿಗೆ ಈ ಹೆಸರಿನಿಂದ ನಮಸ್ಕಾರ ಮಾಡೋಣ, ''ಮಹಾದಂಷ್ಟ್ರಾಯ ನಮಃ''.

**91. ಮಹಾಭುಜಾಯ ನಮಃ**

ಮಹಾಭುಜಾಯ ನಮಃ ಎಂದರೆ ಮಹಾಶಕ್ತಿಯುತವಾದ ಮಹಾತೇಜಸ್ಸಿನಿಂದ ಕೂಡಿದ ಮಹಾಮಹಿಮೆಯುಳ್ಳ ಭುಜಗಳುಳ್ಳವನು ಯಾರೋ ಅವನು ಪರಮಾತ್ಮ. ಅವನ ಅವತಾರಪುರುಷ ಶ್ರೀರಾಮಚಂದ್ರಮೂರ್ತಿ. ಮನೋಹರಕಾಯನಾದ ಶ್ರೀರಾಮಚಂದ್ರನು

ಮಹಾಭುಜನೆಂದು ಹೆಸರಾಗಿದ್ದಾನೆ. ಆಜಾನುಬಾಹುವಾದ ಈ ಶ್ರೀರಾಮನು ಕೋದಂಡವನ್ನು ಹಿಡಿದಾಗ ತನ್ನ ಮಹಾಭುಜಬಲದಿಂದ ಶೋಭಿಸುತ್ತಿದ್ದನು. ಪರಮಾತ್ಮನು ತನ್ನ ಶಕ್ತಿಯಿಂದ ಎಲ್ಲರನ್ನು ಕಾಪಾಡುತ್ತಾನೆ. ಈ ಭರವಸೆಯನ್ನು ಕೊಡುವುದರಿಂದ ಸಕಲ ಜೀವಿಗಳನ್ನು ತನ್ನ ಕಡೆಗೆ ಆಕರ್ಷಿಸುತ್ತಾನೆ.

ಶ್ರೀರಾಮಚಂದ್ರನು ಅರಣ್ಯದಲ್ಲಿ ದಂಡಕಾರಣ್ಯದಲ್ಲಿದ್ದಾಗ ಖರದೂಷಣರ ಹದಿನಾಲ್ಕು ಸಾವಿರ ರಾಕ್ಷಸ ಸೈನಿಕರನ್ನು ಏಕಾಂಗಿಯಾಗಿಯೇ ಸಮರದಲ್ಲಿ ಸಂಪೂರ್ಣವಾಗಿ ಸಂಹಾರಮಾಡಿದನು. ಇದರಿಂದ ಶ್ರೀರಾಮನ ಭುಜಬಲವೆಷ್ಟಿರಬಹುದು, ತಾಳ್ಮೆಯೆಷ್ಟಿರಬಹುದು, ಪರಾಕ್ರಮವೇನು ಎಂದು ತಿಳಿಯುತ್ತದೆ. ರಾಮನು ತನ್ನ ಪ್ರಿಯಳಾದ ಸೀತಾದೇವಿ ಮತ್ತು ತನ್ನ ಸಹೋದರ ಲಕ್ಷ್ಮಣನ ಸಮ್ಮುಖದಲ್ಲಿ ತನ್ನ ಪರ್ಣಶಾಲೆಯ ಸಮೀಪದಲ್ಲಿ ಮಾಡಿದ ಕಾರ್ಯವನ್ನು ರಾವಣನು ತಿಳಿದು ಬಹಳ ಚಕಿತನಾದನು. ಇದರಿಂದ ಶ್ರೀರಾಮ ಲಕ್ಷ್ಮಣ, ಸೀತಾದೇವಿಯರಿಗೆ ಅರಣ್ಯವಾಸದ ಕಷ್ಟ, ವಿರಹತಾಪಗಳು ಮುಂತಾಗಿ ಪ್ರಾರಂಭವಾದುವು.

ಮಹಾಭುಜಬಲನಾದರೂ ಶ್ರೀರಾಮನು ಸೀತಾ ವಿಯೋಗ, ವಿರಹತಾಪ, ಅನ್ವೇಷಣೆ, ಮುಂತಾಗಿ ಪಟ್ಟ ಕಷ್ಟ ಅಷ್ಟಿಷ್ಟಲ್ಲ.

ಸಾಕ್ಷಾತ್ ಹನುಮಂತನು ಮಹಾಭುಜಬಲಶಾಲಿ, ರಾಮಾಯಣದಲ್ಲಿ ಹನುಮಂತನು ತನ್ನ ಭುಜಬಲದಿಂದ ಶತಯೋಜನ ವಿಸ್ತೀರ್ಣವಾದ ಸಾಗರವನ್ನು ಒಂದೇ ಲಂಘನದಿಂದ ಹಾರಿ - ಮಾರ್ಗಮಧ್ಯದಲ್ಲಿ ತನ್ನ ಬಾಹುಬಲ, ಬುದ್ಧಿಬಲ, ತೀಕ್ಷ್ಣಬುದ್ಧಿ, ವಾಕ್‌ಚಾತುರ್ಯಗಳಿಂದ - ಹಾರಿ ಲಂಕೆಯನ್ನು ಸೇರಿದನು. ಅದರಿಂದ ಹನುಮಂತನು ಅತುಲಿತ ಭುಜಬಲನು. ಅದರಿಂದ ಮಹಾಭುಜಾಯ ನಮಃ ಎಂದು ನಮಸ್ಕರಿಸುತ್ತೇವೆ.

ಪ್ರತಿಯೊಂದು ಯೋನಿಯಲ್ಲಿ ಸಂಜಾತವಾದರೂ, ಪ್ರತಿಯೊಂದು ಯೋನಿಯಲ್ಲಿಯೂ ಮಹಾಭುಜಬಲಶಾಲಿಗಳಾದ ಜೀವಿಗಳು ಇದ್ದೇ ಇರುತ್ತಾರೆ. ಆದರೆ ಈ ಮಹಾಭುಜಶಾಲಿಗಳು ಶಕ್ತಿಯುತವಾಗಿ ಪ್ರಕಟವಾಗುವುದು ಕೆಲವು ಕಾಲಗಳಲ್ಲಿ ಕೆಲವು ಕ್ಷಣಗಳಲ್ಲಿ ಮಾತ್ರ.

ಆದರೆ ಪರಮಾತ್ಮನು ಸದಾಕಾಲ, ಸರ್ವದಾ ಮಹಾಭುಜಬಲಶಾಲಿ. ಪರಮಾತ್ಮನಿಗೂ ಇತರರಿಗೂ ಇದೇ ವ್ಯತ್ಯಾಸ, ಅದರಿಂದ ಅವನೇ ಸರ್ವೋತ್ತಮ ಮಹಾಭುಜಶಾಲಿಯು. ಅದರಿಂದ ಸರ್ವರೀತಿಯಲ್ಲಿಯೂ ಸರ್ವಕಾಲದಲ್ಲಿಯೂ, ಸರ್ವದೇಶದಲ್ಲಿಯೂ ಮಹಾಭುಜಾಯ ನಮಃ ಎನ್ನಲು ಸಮಂಜಸನಾದವನು.

ನರಸಿಂಹಸ್ವಾಮಿಯೂ ಸಹ ಮಹಾಭುಜಬಲದಿಂದ ಹಿರಣ್ಯಕಶಿಪುವನ್ನು ಸಂಹರಿಸಿದನು. ನರಸಿಂಹನು ಏಕಾಂಗಿಯಾಗಿಯೇ ದ್ವಂದ್ವಯುದ್ಧದಲ್ಲಿ

ಅತಿವಿಶೇಷವಾದ ವರಬಲವಿದ್ದ ಹಿರಣ್ಯಕಶಿಪುವನ್ನು ತನ್ನ ಭುಜಬಲ ಪರಾಕ್ರಮದಿಂದ ಸಂಹರಿಸಿದನು.

ನರಸಿಂಹನು ಮಹಾಭುಜಬಲಶಾಲಿಯು.

*ಮಹಾರೌದ್ರಂ ಮಹಾನಂದಂ ಮಹಾಕಾಯಮಹಾಬಲಮ್ ।*
*ಅನಾಭೇರ್ಬ್ರಹ್ಮಣೋ ರೂಪಮಾಗಲಾದ್ವೈಷ್ಣವಂ ತಥಾ ॥80॥*

*(492-497)*

92. ಮಹಾರೌದ್ರಾಯ ನಮಃ

ಮಹಾ - ಬಹಳ, ರೌದ್ರಾಯ - ಕೋಪವಿರುವವನು, ಉಗ್ರರೂಪದವನು, ನೋಡಲು ಸಾಧ್ಯವಿಲ್ಲದವನು.

ಪರಮಾತ್ಮನು ಬಹಳ ಕೋಪವಿರುವವನು. ನರಸಿಂಹಸ್ವಾಮಿಯು ಕಂಬದಿಂದ ಹೊರಬಂದು, ಹಿರಣ್ಯಕಶಿಪುವಿನೊಡನೆ ಬಹಳ ಕಾಲ ಯುದ್ಧಮಾಡಿದನು. ದ್ವಂದ್ವಯುದ್ಧದಲ್ಲಿ ಅನೇಕ ಆಯುಧಗಳು ನಾಶವಾದವು. ಬಹಳ ಕಾಲ ಯುದ್ಧವು ನಡೆಯಿತು. ಹಿರಣ್ಯಕಶಿಪುವಾಗಲೀ, ನರಸಿಂಹನಾಗಲೀ ಸೋಲಲಿಲ್ಲ. ಇದರಿಂದ ಇಬ್ಬರಿಗೂ ಬಹಳ ಕ್ರೋಧವುಂಟಾಗಿ ತಾಳ್ಮೆ ಮಿತಿಮೀರಿತು. ಈಗ ನರಸಿಂಹನು ತನ್ನ ಸಿಂಹದ ರೂಪದ ಶಿರಸ್ಸಿಗೆ ತಕ್ಕಂತೆ ರೌದ್ರತೆಯನ್ನು ತಾಳಿ ಅವನ ಶತ್ರುವಾದ ಹಿರಣ್ಯಕಶಿಪುವನ್ನು ತೊಡೆಯ ಮೇಲೆ ಮಲಗಿಸಿಕೊಂಡು ಅತಿ ಉಗ್ರರೂಪನಾಗಿ ಹಿರಣ್ಯನ ಹೊಟ್ಟೆಯನ್ನು ಬಗಿದು, ಕರುಳಿನ ಮಾಲೆಗಳನ್ನು ತೆಗೆದು ತನ ಶಿರಸ್ಸಿಗೆ ಕತ್ತಿಗೆ ಹಾರಗಳಾಗಿ ಹಾಕಿಕೊಂಡನು. ಸಿಂಹಕ್ಕೆ ತಕ್ಕ ಸ್ವಭಾವದಂತೆ ರಕ್ತವನ್ನು ತೆಗೆದು ಪಾನಮಾಡಿದನು, ತನ್ನ ಉಗುರುಗಳಿಂದ ಬಗಿದನು. ಈ ರೀತಿ ನಿಂತಿದ್ದ ನರಸಿಂಹನ ರೂಪವು ಮಹಾರೌದ್ರವಾಗಿದ್ದಿತು. ಎಂತಹವರಿಗೂ ಹೆದರಿಕೆಯನ್ನು ಹುಟ್ಟಿಸುತ್ತಿತ್ತು. ಎಲ್ಲ ದೇವ ದೇವತೆಗಳು ಬ್ರಹ್ಮನನ್ನೇ ಮುಂದೆಮಾಡಿ ಬಂದರು. ಬ್ರಹ್ಮದೇವರೇ ತನ್ನ ಪಿತನಾದ ನರಸಿಂಹನಿಗೆ ಸಾಸಿರನಾಮವನ್ನೇ ಹೇಳಿ ಪಾಡಿ, ಪೊಗಳಿ ಕೊಂಡಾಡಿ ಉಗ್ರರೂಪವನ್ನು ತ್ಯಜಿಸೆಂದು ಬೇಡಿದರು. ಎಲ್ಲ ಲೋಕಗಳೂ ನಡುಗುತ್ತಿದ್ದವು. ಅನೇಕ ರೀತಿಯಲ್ಲಿ ನಾಮಗಳನ್ನು ಹೇಳಿದ ನಂತರ ಈಗ ಈ ನಾಮದಲ್ಲಿ ನರಸಿಂಹನನ್ನೇ ಉದ್ದೇಶಿಸಿ ಆ ರೂಪವನ್ನೇ ಬ್ರಹ್ಮದೇವರು ಹೇಳುತ್ತಿದ್ದಾರೆ - ಮಹಾರೌದ್ರಾಯ ನಮಃ ಎಂದು.

ಪರಮಾತ್ಮನು ತನ್ನ ಇಚ್ಛೆಯಂತೆ ಸೃಷ್ಟಿ ಸ್ಥಿತಿ ಲಯಗಳನ್ನು ನಡೆಸುತ್ತಿದ್ದಾನೆ. ಲಯಕರ್ತನಾದ ಮಹಾದೇವನು ರುದ್ರರೂಪದಲ್ಲಿ ಸಕಲ ಜೀವಿಗಳ ಮತ್ತು ಚರಾಚರ ವಸ್ತುಗಳ ಅವಸಾನಕ್ಕೆ ಕಾರಣನಾಗಿದ್ದಾನೆ. ಈ ಕಾರಣ ಈ ರೂಪದಲ್ಲಿ ರೌದ್ರತೆ, ಕಾಠಿಣ್ಯತೆ ಮತ್ತು ನಿಷ್ಠುರತೆ ಕಾಣಬರುತ್ತದೆ. ದಯೆ ಎಂಬುದು

ಇಲ್ಲಿ ಈ ಕಾರ್ಯ ಮಾಡುವಾಗ ಸಾಧ್ಯವೇ ಇಲ್ಲ. ಆದರೆ ಪರಬ್ರಹ್ಮರೂಪನಾದ ರುದ್ರನಲ್ಲಿ ದಯೆಯಿದೆ ಎಂದು ಹೇಳಲೂ ಸಾಧ್ಯ. ಏಕೆಂದರೆ ಒಂದು ದೇಹದಿಂದ ಬೇರೆ ದೇಹ ಪ್ರವೇಶಿಸಬೇಕಾದರೆ ಹಿಂದಿನ ದೇಹವನ್ನು ತ್ಯಜಿಸಬೇಕು. ಉತ್ತಮ ಗತಿಯನ್ನು ಸೇರಬೇಕಾದರೆ ಅಧಮಗತಿಯನ್ನು ತ್ಯಜಿಸಲೇ ಬೇಕು. ಪರಮಾತ್ಮನನ್ನು ಸೇರಬೇಕಾದರೆ ಉದ್ಧಾರದ ದಾರಿ ಬಹಳ ಉದ್ದವಾದುದ್ದು. ಮತ್ತು ನಮಗಂಟಿರುವ ಸಂಸ್ಕಾರದ ಕಾರಣ, ಜ್ಞಾನೋದಯವಾದ ನಂತರ ಅನೇಕ ಯೋನಿಗಳನ್ನು ಪ್ರವೇಶಿಸಬೇಕು. ಹಿಂದೆ ಅನೇಕ ಯೋನಿಗಳನ್ನು ಹಾದು ಬಂದಿದ್ದೇವೆ. ಈ ಕಾರಣ ಪರಮಾತ್ಮನು ಮಹಾರೌದ್ರನೆಂದು ಆಗಲೇ ಬೇಕಾಗುತ್ತದೆ. - ಮಹಾರೌದ್ರಾಯ ನಮಃ ಎನ್ನಲೇಬೇಕು.

ಪ್ರತಿಜೀವಿಯೂ ತನ್ನ ಉದ್ಧಾರಕ್ಕಾಗಿ ದೇಹತ್ಯಾಗ ಮಾಡಿದಾಗ ಮೃತ್ಯುವೆಂಬ ದೇವತೆಯು ಈ ಆತ್ಮ, ಅದಕ್ಕಂಟಿರುವ ಸಂಸ್ಕಾರ, ಮನಬುದ್ಧಿ ಅಹಂಕಾರ ಚಿತ್ತ, ಪಂಚಕರ್ಮೇಂದ್ರಿಯಗಳು, ಪಂಚಜ್ಞಾನೇಂದ್ರಿಯಗಳು, ಪಂಚಪ್ರಾಣಗಳು - ಎಂದರೆ ಕಾರಣ ಶರೀರವನ್ನು ಒಂದು ದೇಹದಿಂದ ಮತ್ತೊಂದು ದೇಹಕ್ಕೆ ಒಯ್ಯುತ್ತದೆ. ಇದು ಪರಮಾತ್ಮನಿಂದ ನಿಗದಿಸಲ್ಪಟ್ಟ ಕ್ರಿಯೆ. ಇದು ಸೃಷ್ಟಿನಿಯಮ. ಈ ಕಾರ್ಯಗಳು ಬಹಳ ರೌದ್ರವಾದುದ್ದು. ಇಹಲೋಕದಲ್ಲಿ ಅಂಟಿಕೊಂಡಿರುವ ಮನಸ್ಸಿನ ದೃಷ್ಟಿಯಲ್ಲಿ ಇದು ಮಹಾರೌದ್ರವಾದ ಕಾರ್ಯ. ಪರಲೋಕದ ಮತ್ತು ಉದ್ಧಾರದ ಹಾದಿಯಲ್ಲಿ ಹಾದು ಬರಲೇಬೇಕಾದ ಅವಶ್ಯಕಾರ್ಯ. ಅದರಿಂದ ರೌದ್ರವೆನಿಸುವುದಿಲ್ಲ.

93. ಮಹಾನಂದಾಯ ನಮಃ

ಪರಮಾತ್ಮನು ಸದಾ ಆನಂದದಿಂದಿರುವವನು.

ಆನಂದ - ಸಂತೋಷ, ಮನಸ್ಸಿನ ಸಮಾಧಾನ ಸ್ಥಿತಿ, ಎಲ್ಲವನ್ನು ಮನಸ್ಸಿನ ಯೋಚನಾಪಟದಿಂದ ಹೊರದೂಡಿ ತತ್ಕಾಲದಲ್ಲಿ ಇರುವ ವಿಶಯದಲ್ಲಿಯೇ ಸಮಸ್ಥಿತಿಯಲ್ಲಿ ಲೀನವಾಗಿಬಿಡುವುದು ಮತ್ತು ಇತರ ವಿಷಯದಲ್ಲಿ ಪರಿವೆಯೇ ಇಲ್ಲದಂತಿರುವುದು.

ಇಂತಹ ಆನಂದಗಳಲ್ಲಿ ಅತಿ ಉತ್ತಮವಾದ ಆನಂದದಲ್ಲಿರುವುದು. ಯಾವ ಆನಂದವು ಅತ್ಯಂತ ಸಮಸ್ಥಿತಿಯನ್ನು ಬಹುಕಾಲ ಕೊಡುವುದೋ ಅದು ಮಹಾನಂದ.

ಇಂತಹ ಮಹಾನಂದವನ್ನು ಸರ್ವರೀತಿಯಲ್ಲಿಯೂ, ಸರ್ವಕಾಲದಲ್ಲಿಯೂ, ಸರ್ವದೇಶದಲ್ಲಿಯೂ ಹೊಂದಿರುವವನು ಯಾರೋ ಅವನು - ಪರಮಾತ್ಮನೇ - ಅವನನ್ನು ಬಿಟ್ಟರೆ ಯಾರೂ ಇತರರಿಲ್ಲ.

ಮತ್ತೂ ವಿಶೇಷ ವಿಚಾರವೆಂದರೆ ಈ ಸಕಲ ಬ್ರಹ್ಮಾಂಡಗಳನ್ನು ರಚಿಸಿ,

ಅದನ್ನು ನಡೆಸುವ ಕಾರ್ಯದಲ್ಲಿ ತೊಡಗಿದ್ದರೂ, ಅಂಟಿಕೊಳ್ಳದೆ ಮಹಾನಂದದಲ್ಲಿರುವವನು ಈ ಪರಮಾತ್ಮನೇ - ಅವನೊಬ್ಬನೇ.

ಪ್ರಸಕ್ತ ವಿಚಾರದಲ್ಲಿ - ನರಸಿಂಹ ಅವತಾರ ಎತ್ತಿದ ಶ್ರೀಮನ್ ಮಹಾವಿಷ್ಣುವಿನ ಮಹಾನಂದವೆಂದರೆ ನರಸಿಂಹನ ಅವತಾರವನ್ನು ಎತ್ತಿ ಅವತಾರದ ಉದ್ದೇಶಿತ ಕಾರ್ಯವಾದ ಹಿರಣ್ಯಕಶಿಪುವಿನ ಜನ್ಮವನ್ನು ಕೊನೆಗಾಣಿಸಿ ಪ್ರಹ್ಲಾದನನ್ನು ಉದ್ಧರಿಸುವುದು. ಸಂಹಾರ ಕಾರ್ಯವೈಖರಿ ಅಂತಹ ಸುಲಭವೇನಲ್ಲ. ಬ್ರಹ್ಮದೇವರು ಕೊಟ್ಟಿದ್ದ ಪರಮಗಹನವಾದ ವರ. ಈ ವರಕ್ಕೆ ತಕ್ಕಂತೆ ಸನ್ನಿವೇಶಗಳನ್ನು ಸಾಧಿಸಿ, ಅಳವಡಿಸಿಕೊಂಡು ರಕ್ಕಸನ ಸಂಹಾರ ಮಾಡಿದುದು. ನಂತರ ಭಕ್ತನನ್ನು ಪಾಲಿಸಿ, ಹಿರಣ್ಯಕಶಿಪುವಿನ ಜನ್ಮನಾಶದಿಂದ ಜಯ ವಿಜಯರಿಗೆ ಬಂದಿದ್ದ ಶಾಪವನ್ನು ಮಹಾವಿಷ್ಣುವು ತಾನೇ ವರವಿತ್ತಿದ್ದಂತೆ ಬಿಡಿಸಿದನು. ಇದು ಈ ಅವತಾರದಲ್ಲಿ ಮಹತ್ತರವಾದ ಸಾಧನೆ. ಈ ಸಾಧನೆಯನ್ನು ಕೈಗೂಡಿಸಿದ ನಂತರ ನರಸಿಂಹನಿಗೆ ಬಂದ ಆನಂದವೇ ಮಹಾನಂದ. ಅಂತಹ ಆನಂದ ಹೊಂದಿದ ನರಸಿಂಹನಿಗೆ ಮಹಾನಂದಾಯ ನಮಃ ಎಂದು ಬ್ರಹ್ಮ ದೇವರು ಸ್ತೋತ್ರಮಾಡಿದರು.

ಪರಮಾತ್ಮನ ಅಂಶಗಳಿಂದ ಬಂದ ಆತ್ಮಗಳು ಸಹ ಈ ಆನಂದವನ್ನು ಹೊಂದಿರುತ್ತವೆ. ಇದು ಮನಸ್ಸಿನ ಸ್ಥಿತಿ. ನಮಗೆ ಅಂಟಿರುವ ಸಂಸ್ಕಾರಗಳ ಬಲದಿಂದ ಈ ಸಮಸ್ಥಿತಿಯನ್ನು ಕಾಣಲಾರದಾಗಿದ್ದೇವೆ. ಇದು ಪರಮಾತ್ಮನೇ ಸೃಷ್ಟಿಸಿದ ಮಾಯೆ - ಪ್ರಕೃತಿ - ಪುರುಷ ಸಂಬಂಧದ ಪ್ರತೀಕ. ಸಂಸಾರದಿಂದ ಉತ್ತೀರ್ಣರಾದ ನಂತರ ಇದನ್ನು ಹೇರಳವಾಗಿ ಕಾಣುತ್ತೇವೆ.

ಯಾವಾಗ ನಾವು ಈ ಆಲೋಚನೆಗಳ ಅಂತರವನ್ನು ಅಂದರೆ ಎರಡು ಆಲೋಚನೆಗಳ ಮಧ್ಯದ ಕಾಲದ ಉದ್ದವನ್ನು ಹೆಚ್ಚಿಸುತ್ತೇವೆಯೋ ಆಗ ಮನಸ್ಸು ಶೂನ್ಯದಲ್ಲಿರುತ್ತದೆ. ಆ ಕಾಲವೇ ಮಹಾನಂದ ಸ್ಥಿತಿ - ಸತ್ - ನಿಜವಾದ, ಚಿತ್ - ಆತ್ಮದ, ಆನಂದ - ಸಂತೋಷದ ಮಹಾಕಾಲ. ಇದಕ್ಕೇನೇ ''ಮಹಾನಂದಾಯ ನಮಃ'' ಎನ್ನುವುದು ಎಷ್ಟು ಪ್ರಸ್ತುತ.

## 94. ಮಹಾಕಾಯಾಯ ನಮಃ

ಕಾಯ ಎಂದರೆ ದೇಹ, ಮಹಾಕಾಯ ಎಂದರೆ ಶಕ್ತಿಯುತವಾದ, ಮಹತ್ತಾದ, ಬಹಳ ದೊಡ್ಡದಾದ ದೇಹ, ಇದಕ್ಕೆ ಅತ್ಯುತ್ತಮವಾದ ಉದಾಹರಣೆ ಎಂದರೆ,

1. ಮತ್ಸ್ಯಾವತಾರ - ಒಬ್ಬ ರಾಜರ್ಷಿಯು ಅರ್ಘ್ಯಕೊಡುತ್ತಿದ್ದಾಗ ಬೊಗಸೆ ನೀರಿನಲ್ಲಿ ಒಂದು ಅಣುರೂಪದ ಮೀನು ಬಿದ್ದಿತು. ಇದು ಕ್ರಮ ಕ್ರಮವಾಗಿ ಬೆಳೆಯುತ್ತ ಬೊಗಸೆಯನ್ನು ಮೀರಿತು. ನಂತರ ಕುಂಡವನ್ನು ಮೀರಿತು.

ನಂತರ ಸಣ್ಣ ಕೊಳವನ್ನು ಮೀರಿತು. ನಂತರ ನದಿ, ಹೀಗೆ ಬೆಳೆಯುತ್ತಾ ಮಹಾಕಾಯವಾಯಿತು. ರಾಜನಿಗೆ ಆಕಾಶವಾಣಿಯಾಗಿ ಈ ಮೀನು ಯಾರೂ ಅಲ್ಲದೆ ಮಹಾವಿಷ್ಣುವೇ ಎಂದೂ ಮತ್ತು ಅಂದಿನಿಂದ ಏಳು ದಿನದಲ್ಲಿ ಪ್ರಳಯವಾಗುವುದೆಂದೂ ರಾಜನನ್ನು ಋಷಿಗಳನ್ನು ಮತ್ತು ಮೂಲಿಕೆಗಳನ್ನು ರಕ್ಷಿಸಲು ಒಂದು ನಾವೆಯು ಬರುವುದೆಂದೂ, ಇವರುಗಳು ಅದರಲ್ಲಿ ಇರಬೇಕೆಂದು ವಾಣಿಯಾಯಿತು. ನಂತರ ನಾವೆಯು ಸಮುದ್ರದಲ್ಲಿ ಅಂಧಕಾರದಲ್ಲಿ ಹೋಗುವುದು, ಒಂದು ಕೊಂಬುವುಳ್ಳ ಒಂದು ಹೊಳೆಯುವ ಮೀನು ಬರುವುದು, ಮತ್ತು ಅದರ ಕೊಂಬಿಗೆ ನಾವೆಯನ್ನು ಕಟ್ಟುವುದು ಎಂದಿತು. ಮೀನು ಬಂದದ್ದು ಬಹಳ ದೊಡ್ಡ ರೂಪವನ್ನು ತಾಳಿ ರಾತ್ರಿ ಎಲ್ಲ ತನ್ನ ಮಹಿಮೆಯನ್ನು ತೋರಿಸಿ ಬೆಳಗಾಗುತ್ತಲೆ ಮತ್ತೆ ಸೃಷ್ಟಿ ಮಾಡಲು ಬ್ರಹ್ಮನಿಗೆ ಸಹಾಯಕವಾಯಿತು. ಈ ರೀತಿ ಬೊಗಸೆಯಲ್ಲಿದ್ದ ಸಣ್ಣಮೀನು ಪ್ರಳಯಾಕಾರವಾಗಿ ಮಹಾಕಾಯವನ್ನು ಹೊಂದಿ ಮಹತ್ಕಾರ್ಯವನ್ನು ಸಾಧಿಸಿತು.

2. ವರಾಹಾವತಾರ - ಇದರಲ್ಲಿ ಸಣ್ಣ ವರಾಹವು ಬ್ರಹ್ಮನ ಮೂಗಿನ ಒಂದು ಹೊಳ್ಳೆಯಿಂದ ಬಂದು ಕ್ರಮೇಣ ದೊಡ್ಡದಾಗಿ ಬೆಳೆದು ಪರಮ ಮಹಾಕಾಯನಾಗಿ ಬೆಳೆಯಿತು. ಇದು ಸಮುದ್ರದಲ್ಲಿ ಹಾರಿ, ಇನ್ನೂ ಮಹಾಕಾಯನಾಗಿ ಬೆಳೆದು, ಪಾತಾಳಲೋಕದ ಹತ್ತಿರ ಹೋಗಿ ಭೂಮಂಡಲವನ್ನು ತನ್ನ ಕೋರೆದಾಡೆಯ ಮೇಲೆ ಇಟ್ಟುಕೊಂಡು ಸಮುದ್ರದಿಂದ ಹೊರಬಂದು ಭೂದೇವಿಯನ್ನು ರಕ್ಷಿಸಿತು. ಇದು ಪರಮ ಮಹಾಕಾಯನಾದ ವರಾಹಸ್ವಾಮಿಯ ಮಹತ್ಕಾರ್ಯ. ಹಾಗೂ ಹಿರಣ್ಯಾಕ್ಷನನ್ನು ಸಂಹರಿಸಿತು. ಇದೂ ಸಹ ದೊಡ್ಡ ಕೆಲಸವೇ.

3. ನರಸಿಂಹಾವತಾರವೂ ಹೀಗೆಯೇ. ವಿಶೇಷವಾದ ಕಂಬದಿಂದ ವಿಶೇಷ ರೂಪವನ್ನು ಹೊಂದಿ ಹಿರಣ್ಯಕಶಿಪುವನ್ನು ಸಂಹರಿಸಿದನು. ಇಲ್ಲಿಯೂ ಸ್ವಾಮಿಯು ಮಹಾಕಾಯನೇ.

4. ಇತರ ಅವತಾರ - ವಾಮನ ಅವತಾರದಲ್ಲಿ ವಟು ವೇಷದ ವಾಮನನು ಮಹತ್ತಾಗಿ ದೇಹವನ್ನು ಬೆಳೆಸಿ ಮೂರು ಪಾದಗಳಿಂದ ಸಕಲ ಸ್ವರ್ಗದಿಂದ ಪಾತಾಳದವರೆಗೆ ಅಳೆದನು. ಇದು ಮಹಾಕಾಯವೇ.

5. ಪರಶುರಾಮ, ರಾಮಾವತಾರಗಳಲ್ಲಿ ಮಹಾಶಕ್ತಿಯುತ ದೇಹವನ್ನು ಹೊಂದಿರುವುದು - ಮಹಾಕಾಯಾಯ ನಮಃ.

6. ಕೃಷ್ಣಾವತಾರದಲ್ಲಿ ವಿಶೇಷ ಬುದ್ಧಿಬಲದಿಂದ ಅನೇಕ ಕಾರ್ಯಗಳನ್ನು ನಡೆಸಿದನು.

7. ನಮ್ಮ ದೇಹದಲ್ಲಿಯೂ ಯಾವಾಗ ತೇಜಸ್ಸಿನಿಂದ ಮತ್ತು ಶಕ್ತಿಯಿಂದ

ಮತ್ತು ಮನೋಬಲದಿಂದ ತುಂಬಿರುವುದೋ ಆಗ ದೇಹವು ಏನನ್ನಾದರೂ ಅನಿರೀಕ್ಷಿತ ಮಹತ್ತಾದ್ದನ್ನು ಸಾಧಿಸುತ್ತದೆ. ಮಹಾಕಾಯವಾಗುತ್ತದೆ.

495. ಮಹಾಬಲಾಯ ನಮಃ

ನರಸಿಂಹನು ಮಹಾಬಲಶಾಲಿಯು, ಮಹಾವಿಷ್ಣುವು ಮಹಾಬಲಶಾಲಿಯು, ಇವನಿಗಿಂತ ಬಲಶಾಲಿಗಳು ಯಾವ ಯೋನಿಯಲ್ಲಿಯೂ ಯಾವ ಜೀವಿಯಲ್ಲಿಯೂ ಸಾಧ್ಯವಿಲ್ಲ. ಪರಮಾತ್ಮನನ್ನು ಯಾವ ರೀತಿಯಲ್ಲಿಯೂ ಯಾರೂ ಮೀರಿಸಲು ಸಾಧ್ಯವಿಲ್ಲ.

ಅತ್ಯುತ್ತಮವಾದ, ಅತಿಶಕ್ತಿಯುತವಾದ ರೂಪದಲ್ಲಿರುವ ದೇಹ ಹೊಂದಿರುವವನು.

ಈಶ್ವರನು - ಮಹಾಬಲೇಶ್ವರನು, ರಾವಣನು ಶಿವನ ಆತ್ಮಲಿಂಗವನ್ನು ಭೂಮಿಯಿಂದ ಎಳೆಯುತ್ತಿರಲು ಲಿಂಗವು ಹೊರಗೆ ಬರಲೇ ಇಲ್ಲ. ರಾವಣನ ಬಲಕ್ಕಿಂತಲೂ ಲಿಂಗದ ಬಲವು ಜಾಸ್ತಿಯಾಗಿ ಅಲ್ಲಿಯೇ ನಿಂತಿತು. ಈ ಕಾರಣದಿಂದ ಶಿವನಿಗೆ ಮಹಾಬಲೇಶ್ವರನೆಂದಾಯಿತು. ಇದು ಗೋಕರ್ಣ ಕ್ಷೇತ್ರದ ದೇವರು.

ಪರಮಾತ್ಮನ ಶಕ್ತಿಗಿಂತ ಅಮಿತಿವಾದ್ದು ಇಲ್ಲವೇ ಇಲ್ಲ. ಆದ ಕಾರಣ ''ಮಹಾಬಲಾಯ ನಮಃ'' ಎನ್ನುತ್ತೇವೆ.

496. ಅನಾಭೇರ್ಬ್ರಹ್ಮಣೋರೂಪಾಯ ನಮಃ

ಆ - ನಾಭೇಃ - ಬ್ರಹ್ಮಣಃ - ರೂಪಃ, ನಾಭಿಯ ಮೊದಲಿಲ್ಲದವನು. ಪರಮಾತ್ಮನಾದ ಮಹಾವಿಷ್ಣುವಿನ ನಾಭೀಕಮಲದಲ್ಲಿ ಬಂದ ಕಮಲನಾಳದ ಮೇಲೆ ಇದ್ದ ಕಮಲದಲ್ಲಿ ಹುಟ್ಟಿಬಂದ ಬ್ರಹ್ಮದೇವರ ರೂಪವೇ - ಪರಮಾತ್ಮನ ಒಂದು ರೂಪ.

ಇಂತಹ ಬ್ರಹ್ಮದೇವರಿಗೆ ನಮಸ್ಕಾರಗಳು.

ಪರಮಾತ್ಮನು ತಾಳುವ ರೂಪಗಳು ಅಪರಿಮಿತ, ಆಶ್ಚರ್ಯ ಕಾರಕಗಳು.

ಮನುಷ್ಯ ಯೋನಿಯಲ್ಲಿ ಜನಿಸುವ ಮಕ್ಕಳು ತಮ್ಮ ನಾಭಿಯಿಂದ ತಾಯಿಯ ಸಂಬಂಧ ಹೊಂದಿ ನಾಭಿಯ ಮೂಲಕವೇ ಗರ್ಭದಲ್ಲಿ ಜೀವಿಸುತ್ತ ಬೆಳೆಯುತ್ತವೆ. ಈ ಮಕ್ಕಳೂ ಸಹ ಪರಮಾತ್ಮನ ಅಂಶದಿಂದ ಬರುವುದರಿಂದ ಒಂದು ರೀತಿಯಲ್ಲಿ ಈ ನಾಮವನ್ನೇ ಹೊಂದಬಹುದು. ಅನಾಭೇರ್ಬ್ರಹ್ಮರೂಪಾಯ ನಮಃ ಎಂದು ವಿಷ್ಣುರೂಪವಾದ ಮಕ್ಕಳನ್ನು ದೇವರೆಂದು ನಮಸ್ಕರಿಸುತ್ತೇವೆ.

497. ಅಗಲಾದ್ವೈಷ್ಣವಾಯ ನಮಃ

ಆಗಲಾತ್ - ವಿಷ್ಣುವಿನ ಭಾವವನ್ನು ಅನುಸರಿಸುವವನು ವೈಷ್ಣವ, ಎಲ್ಲೆಲ್ಲೂ ವಿಷ್ಣುವಿನ ಭಾವವೇ ಇರುವುದು, ಇಂತಹ ಭಾವವನ್ನು ಹೊಂದಿದವನು ವೈಷ್ಣವನು.

ಬೇರೆ ಭಾವವೇ ಇಲ್ಲದ ನರಸಿಂಹನು ಯಾವ ವಿಧದಲ್ಲಿ ನೋಡಿದರೂ ಮಹಾವಿಷ್ಣುವಿನ ಸಂಪೂರ್ಣ ರೂಪವೇ ಆಗಿರುವವನು.

ಬ್ರಹ್ಮದೇವರು ನರಸಿಂಹನಲ್ಲಿ ನರ ಮತ್ತು ಸಿಂಹದ ರೂಪವನ್ನು ಕಂಡರೂ ಎಲ್ಲ ರೀತಿಯಲ್ಲಿಯೂ ತಮ್ಮ ತಂದೆಯಾದ ಶ್ರೀಮನ್ ಮಹಾವಿಷ್ಣುವನ್ನೇ ಕಾಣುತ್ತಿದ್ದರು. ಬೇರೆಯ ಭಾವನೆಯೇ ಅವರಿಗೆ ಬರುತ್ತಿರಲಿಲ್ಲ. ತಂದೆಯ ರೂಪವನ್ನು ಹೊಗಳಬೇಕಾದಾಗ ಸಾಕ್ಷಾತ್ ವಿಷ್ಣುವೇ ಪ್ರತ್ಯಕ್ಷವಾಗುತ್ತಿದ್ದನು ಎಂದೂ ಅರ್ಥಮಾಡಬಹುದು.

*ಆಶೀರ್ಷಾದ್ರೌದ್ರಾಮೀಶಾನಂ ತದಗ್ರೇ ಸರ್ವತಃ ಶಿವಮ್ ।*
*ನಮೋಽಸ್ತು ನಾರಾಯಣ ನಾರಸಿಂಹ ನಮೋಽಸ್ತು ನಾರಾಯಣ ವೀರಸಿಂಹ*
*॥81॥ (498-502)*

98. **ಆಶೀರ್ಷಾದ್ರೌದ್ರಾಯ ನಮಃ**

ಆಶೀರ್ಷಾತ್ - ರೌದ್ರಾಯ - ನಮಃ.

ಶಿರದಿಂದ ಹಿಡಿದು ಪಾದದವರೆಗೂ ಘೋರವಾದ, ಉಗ್ರವಾದ, ಕಠಿಣವಾದ, ಭಯಂಕರವಾದ ದೇಹವನ್ನು ಹೊಂದಿದವನು ಯಾರೋ ಅವನು - ಪರಮಾತ್ಮನು - ನರಸಿಂಹನೇ.

ನರಸಿಂಹಸ್ವಾಮಿಯು ಅವತಾರವೆತ್ತಿದ್ದು ಕಂಬದಲ್ಲಿ ಹಿರಣ್ಯಕಶಿಪುವಿನ ಎದುರಿಗೆ. ಹಿರಣ್ಯಕಶಿಪುವು ತೋರಿಸಿದ ಕಂಬದಲ್ಲಿ ಪರಮಾತ್ಮನು ಬಂದನು. ಕಂಬವು ಹಿರಣ್ಯಕಶಿಪುವಿನ ಗದಾಪ್ರಹಾರದಿಂದಲೂ, ನರಸಿಂಹನ ಉಗ್ರಕೋಪದಿಂದಲೂ ಛಟ ಛಟ ಘಟ ಘಟ ಶಬ್ದದಿಂದಲೂ ಕಂಬವು ಬಿರಿದು ಪುಡಿ ಪುಡಿಯಾಯಿತು. ನರಸಿಂಹನು ತನ್ನ ರೂಪದಿಂದ ಸಕಲ ಜೀವಿಗಳನ್ನು ಹೆದರಿಸಿದನು. ಸಿಂಹದ ತಲೆಯಿರುವ ಮನುಷ್ಯನ ದೇಹವು ಯಾರು ನೋಡಿದರೂ ದಿಗ್ಭ್ರಮೆ ಹುಟ್ಟಿಸುತ್ತಿತ್ತು. ವಿಚಿತ್ರ ರೂಪ, ವಿಚಿತ್ರ ಕೋಪ, ಮೇಲೆ ಮತ್ತೆ ಶತ್ರುವನ್ನು ಕೊಲ್ಲಬೇಕೆಂಬ ವಿಚಿತ್ರ ಭಯಂಕರ ರೂಪ, ದೇವ ದೇವತೆಗಳು ಸಹ ಹೆದರಿದರು. ಮೂರು ಲೋಕಗಳು ಈ ಉರುತರದ ಉಗ್ರರೂಪವನ್ನು ನೋಡಿ ತಲ್ಲಣಿಸಿದವು. ಹಿರಣ್ಯಕಶಿಪುವಿನ ಸಂಹಾರವಾದ ನಂತರ ನರಸಿಂಹನ ಕರಾಳರೂಪ, ಕರುಳಿನ ಮಾಲೆಗಳನ್ನು ಹಾಕಿಕೊಂಡು ಇರುವ ರೂಪವನ್ನು ನೋಡಿದ ಎಲ್ಲರೂ ತಲ್ಲಣಿಸಿದರು. ಭಯಂಕರ ರೂಪ, ರೌದ್ರರೂಪ, ತಲೆಯಿಂದ ಪಾದದವರೆಗೆ ದೇಹದ ಎಲ್ಲ

ಭಾಗಗಳೂ ಎಲ್ಲಿ ನೋಡಿದರಲ್ಲಿ ಕಾಣುವ ರೌದ್ರತೆ ತಾಂಡವವಾಡುತ್ತಿತ್ತು. ಈ ಕಾರಣಗಳಿಂದಲೇ ನರಸಿಂಹನು ಮಹಾರೌದ್ರನು ''ಆಶೀರ್ಷಾದ್ರೌದ್ರಾರೂಪಾಯ ನಮಃ'' ಎನ್ನುವುದು ನರಸಿಂಹನ ದೇಹದ ಕಣಕಣದಲ್ಲಿನ ಭಯಂಕರತೆಗೆ ಸಮಂಜಸನಾಮ.

ಯಾರಿಗೆ ಆಗಲೀ ಕೋಪಬಂದರೆ ''ನಖ - ಶಿಖಾಂತ ಕ್ರೋಧ'' ಎನ್ನುತ್ತೇವೆ. ಕೋಪವು ವಿಕಾರವಾದಾಗ ಅದು ದೇಹವನ್ನೆಲ್ಲ ಪ್ರಸರಿಸುತ್ತದೆ. ಇದು ಶಮನವಾಗಬೇಕಾದರೆ ಬಹಳ ಕಾಲ ಬೇಕು, ಬಲು ಕಷ್ಟ, ತಾಳ್ಮೆ, ಶಾಂತಿ ಬರುವುದು ಬಹಳ ನಿಧಾನ.

**99. ಈಶಾನರೂಪಾಯ ನಮಃ**

ಈಶಾನ - ಎಂದರೆ ಶಿವ, ಒಡೆಯ, ತೇಜಸ್ಸು, ಬೆಳಕು, ಪರಮಾತ್ಮನು ಈಶಾನರೂಪನು ಎಂದರೆ ಶಿವಸ್ವರೂಪಿ.

ಸಕಲ ಬ್ರಹ್ಮಾಂಡಕ್ಕೆ ಒಡೆಯ, ಸೃಷ್ಟಿಕರ್ತ, ಸೂತ್ರಧಾರ.

ಪರಮಾತ್ಮನು ತೇಜೋಮಯನು ಅವನು ಅಗ್ನಿಯೇ, ತೇಜಸ್ಸೇ ಅವನು. ತೇಜಸ್ಸು ಪಂಚಮಹಾಭೂತಗಳಲ್ಲಿ ಒಂದು. ಇದು ಅವನ ಸೃಷ್ಟಿಯಿಂದ ಆದರೂ ಅವನ ಕಾಮನೆಯಿಂದ ಆದುದು. ಆದರಿಂದ ಪರಮಾತ್ಮನಿಗೂ ತೇಜಸ್ಸಿಗೂ ಭೇದವಿಲ್ಲ.

ತೇಜಸ್ಸು ಜ್ಞಾನದ ಒಂದು ರೂಪ.

ಎಲ್ಲಿ, ಯಾವಾಗ ತೇಜಸ್ಸು ಬೆಳಕು ಪ್ರಕಟವಾಗುವುದೋ ಅಲ್ಲಿ ಪರಮಾತ್ಮನು ಆವಿರ್ಭವಿಸಿರುತ್ತಾನೆ. ಕತ್ತಲೆಯು ಬೆಳಕಿನಿಂದ ಓಡಿಸಲ್ಪಡುತ್ತದೆ. ''ತಮಸಃ ಪರಸ್ತಾತ್ - ಜ್ಯೋತಿಃ''.

ಈಶಾನ ದೇವನ ದಿಕ್ಕು ಈಶಾನ್ಯ - ಉತ್ತರ ಪೂರ್ವದಿಕ್ಕುಗಳ ಮಧ್ಯಭಾಗ.

**00. ತದಗ್ರೇ ಸರ್ವತಃ ಶಿವಾಯ ನಮಃ**

ತತ್ - ಅಗ್ರೇ - ಸರ್ವತಃ - ಶಿವ

ಪರಮಾತ್ಮನು ಇರುವ ಎಲ್ಲಾ ಕಾಲ, ದೇಶಗಳಲ್ಲಿಯೂ ಶಾಂತಿಯು ನೆಲಸಿರುತ್ತದೆ. ಪರಮಾತ್ಮನೇ ಶಾಂತಿ ಸ್ವರೂಪನು. ಅವನು ತನ್ನ ಇರುವಿಕೆಯಿಂದ ಅಶಾಂತಿ, ಅಸಮಾಧಾನಗಳನ್ನು ತೊಲಗಿಸುತ್ತಾನೆ.

ಅಗ್ರೇ ಎಂದರೆ ಮೊದಲು, ಪರಮಾತ್ಮನ ಪ್ರಥಮಕಾರ್ಯ ಅಶಾಂತಿಯನ್ನು ತೊಲಗಿಸುವುದು.

ಎಲ್ಲ ರೀತಿಯ ಅಸಮಾಧಾನ, ಅಶಾಂತಿ, ದುಃಖ, ನಷ್ಟ ದ್ವಂದ್ವಗಳನ್ನು ನಾಶಮಾಡುವವನು - ಪರಮಾತ್ಮನೇ.

ಅವನು ಶುಭದಾಯಕನು, ಈಶ್ವರನು (ಶಿವ).

ಕಿರೀಟಪ್ರಾಯನು, ಪರಮಾತ್ಮ.

ಸಕಲ ಸೃಷ್ಟಿ, ಬ್ರಹ್ಮಾಂಡಗಳಿಗೂ ಸೂತ್ರಧಾರಿ,

ಕಿರೀಟಪ್ರಾಯನು, ಅದಕ್ಕೆ ಅವನನ್ನು ತದಗ್ರೇ ಸರ್ವತಃ ಶಿವಾಯ ನಮಃ ಎಂದು ಕರೆಯುತ್ತೇವೆ.

ತತ್ - ಎಂದರೆ ಪರಮಾತ್ಮ. ಯಾವುದನ್ನು ನಿರ್ದೇಶಿಸಿ ''ಹೀಗೆಯೇ, ಇದೇ ಎಂದು ಅಥವಾ ಹಾಗೆಯೇ ಅದೇ ಎಂದು'' ಹೇಳಲು ಸಾಧ್ಯವಿಲ್ಲವೋ ಅದನ್ನು ''ತತ್'' ಎಂದು ಹೇಳುತ್ತೇವೆ. ಇದು ಪರಮಾತ್ಮನನ್ನು ತೋರುವ ಚಿಹ್ನೆ.

ತತ್ ಎಂಬುದರ ಅಗ್ರೇ ಎಂದರೆ ಮುಂದೆ ಕಾಣುವುದು ಅಥವಾ ಇರುವುದು. ಎಲ್ಲವೂ, ಎಲ್ಲೆಲ್ಲಿಯೂ (ಸರ್ವತಃ) ಶಾಂತಿಯೇ. ಇದೇ ಸಚ್ಚಿದಾನಂದ ರೂಪ, ಸದಾ ಆನಂದವನ್ನು ಚೆಲ್ಲುವ ಸ್ಥಾನ, ಇದು ಪರಮಾತ್ಮನೇ. ಇವನನ್ನೇ ಶಿವನೆಂದು, ವಿಷ್ಣುವೆಂದು, ಪರಬ್ರಹ್ಮನೆಂದೂ ಏನೆಲ್ಲ ಹೆಸರಿನಿಂದ ಕರೆಯುತ್ತೇವೆ. ಈ ರೂಪಗಳಲ್ಲಿ ಪರಮಾತ್ಮನು ಸರ್ವಭಾಗಗಳಲ್ಲಿಯೂ ವಾಸಿಸುತ್ತಾನೆ.

ಆದರೆ ಇನ್ನೊಂದು ಈ ರೀತಿಯಲ್ಲಿ ಧ್ಯಾನಿಸುವುದೆಂದರೆ ಸಕಲ ಅವಯವಗಳನ್ನು ಒಂದೊಂದಾಗಿ ರೂಪಿಸಿಕೊಂಡು ಮುಂದೆ ಮುಂದೆ ಹೋಗುವಾಗ ಭಾವನೆಗಳಲ್ಲಿ ಹಿಂದಿನ ರೂಪಗಳು ಮೆಟ್ಟಲುಗಳಂತೆ, ಮನಸ್ಸಿನಿಂದ ಬಿಟ್ಟು ಹೋಗುತ್ತವೆ. ಮನಸ್ಸನ್ನು ಸ್ಥಿರೀಕರಿಸಲು ಒಂದು ಕೇಂದ್ರಬಿಂದುವು ಇದ್ದರೆ ಸುಲಭ. ಅನೇಕ ರೂಪಗಳನ್ನು ಅವುಗಳ ನಾಮ ಸಹಸ್ರಗಳನ್ನು ಸ್ಮರಣೆ, ಮನನಮಾಡುವಾಗ ಮನಸ್ಸಿನಲ್ಲಿ ಒಂದರಿಂದ ಒಂದಕ್ಕೆ ಹಾರುವ ಸ್ಥಿತಿ ಬರುತ್ತದೆ. ಆಗ ಇನ್ನು ಉತ್ತಮವಾದ ಸೋಪಾನವೆನ್ನಿಸುವುದು ''ಒಂದು ಕೇಂದ್ರಬಿಂದು''. ನಾನಾ ರೂಪಗಳ ಬದಲು ಒಂದು ಬಿಂದುವನ್ನು ''ಓಂಕಾರ''ವನ್ನು ತೆಗೆದುಕೊಂಡು ನಾಮಜಪವನ್ನು ಮಾಡಿದರೆ ಮನಸ್ಸನ್ನು ಹಿಡಿಯಲು ಬರುವ ಶಕ್ತಿ ಯಾವುದಕ್ಕೂ ಸಮವಾಗುವುದಿಲ್ಲ.

ಓಂಕಾರಸಹಿತ ನಮಃದೊಡನೆ ನಾಮಜಪವೇ ಅತ್ಯಂತ ಶ್ರೇಷ್ಠವಾಗುತ್ತದೆ. ಉದಾ. ಓಂ ನಮೋ ನಾರಾಯಣಾಯ, ''ಓಂ ನಮಃ ಶಿವಾಯ''....

ಸಹಸ್ರನಾಮ ಸ್ತೋತ್ರ ಪಠನ, ಮನನಕ್ಕಿಂತ, ಸಹಸ್ರನಾಮಗಳು ಉತ್ತಮಫಲದಾಯಕ, ಸಹಸ್ರನಾಮಗಳಿಗಿಂತ ಒಂದೇ ನಾಮದ ಜಪ ಶ್ರೇಷ್ಠ. ಈ ಮೂರರಲ್ಲಿ ಕೇಳಿಸುವಂತೆ ಹೇಳುವುದು, ಉಪಾಂಶು, ಮನಸ್ಸಿನಲ್ಲಿ ಹೇಳುವುದು ಎಂದು ಮೂರು ವಿಧ. ಪ್ರತಿಯೊಂದರಲ್ಲಿಯೂ ಮನಸ್ಸಿನಲ್ಲಿ ಹೇಳುವುದು - ಅಂದರೆ ಮನನವು ಶಕ್ತಿಯುತವಾದ್ದು. ಎಲ್ಲಕ್ಕಿಂತ ಮಾನಸಿಕ

## ಎರಡನೆಯ ಸಂಪುಟಕ್ಕೆ ಪೀಠಿಕೆ

ಮೊದಲ ಸಂಪುಟದ ಪ್ರಾರಂಭದಲ್ಲಿ ಪ್ರಸ್ತಾವನೆಯಾಗಿ ಪ್ರಸ್ತಾಪಮಾಡಿರುವ ಅನುಗ್ರಹ ಪತ್ರಗಳು, ಮುನ್ನುಡಿ, ಪೀಠಿಕೆಗಳಲ್ಲಿ ಉಲ್ಲೇಖಿಸಿದಂತೆ ಈ ಗ್ರಂಥವು ಬೃಹತ್ತಾದ್ದರಿಂದ ಎರಡು ಸಂಪುಟಗಳಲ್ಲಿ ಹೊರತರಲು ಉದ್ದೇಶಿಸಲಾಗಿದೆ.

ಅದರಂತೆ ಇಲ್ಲಿಗೆ, ಈ ತನಕ ಶ್ರೀ ನರಸಿಂಹಸ್ವಾಮಿಯವರ ಸಹಸ್ರನಾಮಗಳಲ್ಲಿ ಮೊದಲನೆಯ ಐದುನೂರು ನಾಮಗಳಿಗೆ ಅರ್ಥ, ತಾತ್ಪರ್ಯ ಮತ್ತು ವ್ಯಾಖ್ಯಾನಗಳನ್ನು ಕೊಡಲಾಗಿದೆ.

ಹಾಗೂ ಅನೇಕ ಭಗವದ್ಭಕ್ತರಿಗೆ ಪ್ರೇರಿತವಾಗಿ ಮೊದಲಲ್ಲಿ ಬ್ರಹ್ಮದೇವರಿಂದ ಸ್ತೋತ್ರಮಾಡಲ್ಪಟ್ಟ ಶ್ಲೋಕ ರೂಪದಲ್ಲಿರುವ ಶ್ರೀ ನೃಸಿಂಹ ಸಹಸ್ರನಾಮಸ್ತೋತ್ರವನ್ನು ಪಾರಾಯಣಕ್ಕಾಗಿಯೂ ಮತ್ತು ನೃಸಿಂಹ ಸಹಸ್ರನಾಮಾವಳಿಯನ್ನು ಪೂಜಾಕಾರ್ಯಕ್ಕಾಗಿಯೂ ಕೊಡಲಾಗಿದೆ. ಮತ್ತು ನೃಸಿಂಹ ಅಷ್ಟೋತ್ತರಶತನಾಮಾಗಳನ್ನು ಕೊಡಲಾಗಿದೆ.

ನಂತರ ಎರಡನೆಯ ಸಂಪುಟದಲ್ಲಿ ಮುಂದಿನ ಅಂದರೆ ಐದುನೂರ ಒಂದನೇ ನಾಮದಿಂದ ಸಾವಿದರ ನಾಮದವರೆಗೆ ಅರ್ಥ, ತಾತ್ಪರ್ಯ ಮತ್ತು ವ್ಯಾಖ್ಯಾನಗಳನ್ನು ಕೊಡಲಾಗುವುದು. ತದನಂತರ ಬ್ರಹ್ಮದೇವರು ಉಗ್ರ ನರಸಿಂಹನನ್ನು ಶಾಂತನಾಗಿ ದರ್ಶನ ನೀಡಲು ಪ್ರಸನ್ನನಾಗುವುದಕ್ಕೆ ಮಾಡಿದ ಪ್ರಾರ್ಥನೆ, ಶ್ರೀ ನರಸಿಂಹ ಸ್ವಾಮಿಯವರು ಶಾಂತರಾಗಿ ಶ್ರೀ ಲಕ್ಷ್ಮೀ ನರಸಿಂಹ ಸ್ವಾಮಿಯಾಗಿ ಅಲ್ಲಿ ನೆರೆದಿದ್ದ ದೇವದೇವತೆ ಯಕ್ಷ ಕಿನ್ನರ ಕಿಂಪುರುಷ ಋಷಿ ಮುನಿಗಳು - ಇತ್ಯಾದಿಯಾಗಿ ನೆರೆದ ಭಕ್ತರೆಲ್ಲರಿಗೂ ಪೂರ್ಣಹೃದಯದಿಂದ ಇತ್ತ ವರರೂಪದ ವಾಣಿಯನ್ನೂ, ತದನಂತರ ಬ್ರಹ್ಮಗೀತ ಈ ಸಹಸ್ರನಾಮವು ಯಾವ ರೀತಿ ಬ್ರಹ್ಮದೇವರಿಂದ ನಮ್ಮ ತನಕ ಹರಿದು ಬಂದಿದೆ - ಎಂಬವುಗಳನ್ನು ಕೊಡಲಾಗಿದೆ.

ನಾವು ನಮ್ಮ ಆತ್ಮಗಳನ್ನು ಭವಸಾಗರದಿಂದ ದಾಟಿಸಿ ಆ ಪರಮ ಪಾವನವಾದ ಪರಮ ಪದದಲ್ಲಿ ಸಾಲೋಕ್ಯ, ಸಾಮಿಪ್ಯ, ಸಾರೂಪ್ಯ, ಸಾಯುಜ್ಯ ಪದವಿಯನ್ನು ಸೇರಲು (ಪ್ರತಿ ಆತ್ಮಕ್ಕೂ) ಅವಕಾಶವಿದೆ ಎಂಬುದನ್ನು ಆ ಪರಮ ಕರುಣಾಮೂರ್ತಿಯಾದ ಶ್ರೀ ಲಕ್ಷ್ಮೀನರಸಿಂಹಸ್ವಾಮಿಯ ಪ್ರೇರಣೆ, ಕೃಪಾಕಟಾಕ್ಷದಿಂದ ಬಂದ ಧಾರೆಯನ್ನು ಕೊಡಲಾಗಿದೆ.

ಮತ್ತು ಶ್ರೀ ಲಕ್ಷ್ಮೀ ನರಸಿಂಹಸ್ವಾಮಿಯ ಅನೇಕ ಸ್ತೋತ್ರಗಳನ್ನು ಸಂಗ್ರಹಿಸಿ ಕೊಡಲಾಗಿದೆ.

ಪರಮಶ್ರೇಷ್ಠರಾದ ಭಗವದ್ಭಕ್ತರ ಸೇವೆಯನ್ನು ಮಾಡಿ ಪಾವನವಾಗಬೇಕೆಂದು ಇಚ್ಛಿಸಿ ಅಂತಹ ಸೇವಾಭಾಗ್ಯವನ್ನು ಕರುಣಿಸಿದ ಪರಮಾತ್ಮನಿಗೆ ನಮಿಸಿ ಭಕ್ತವೃಂದಕ್ಕೆ ನಮಸ್ಕರಿಸುತ್ತಾ ಈ ಎರಡನೇ ಸಂಪುಟಕ್ಕೆ ಪ್ರವೇಶಿಸಲು ಈ ನಾಲ್ಕು ವಾಕ್ಯಗಳನ್ನು ಭಕ್ತರಾದ ತಮ್ಮ ಮುಂದಿಡುತ್ತಿದ್ದೇನೆ.

30.09.96 ಇತಿ ಪರಮ ಭಕ್ತರ ಸೇವಾಕಾಂಕ್ಷಿ

ತುಮಕೂರು **ಹೆಚ್. ಎನ್. ನರಸಿಂಹಮೂರ್ತಿ**

ನಾಮಜಪವು ಬಹಳ ಉನ್ನತವಾದುದು.

ಜಪದಲ್ಲಿಯೂ ಒಂದು ಎರಡರಿಂದ ಫಲವಿಲ್ಲ. ಸಾವಿರಗಳು ಲೆಕ್ಕವಿಲ್ಲ. ಲಕ್ಷಗಳೂ ಸಾಲದು. ಕೋಟಿ ಕೋಟಿ ಜಪಮಾಡಿದರೆ ಉನ್ನತ ಫಲ ಸಾಧ್ಯ. ಆದರಿಂದ ಜಪದ ಗುರಿ ''ಕೋಟಿಗಟ್ಟಲೆ'' ಇರಬೇಕು. ಜೀವಮಾನವನ್ನು ಇತರ ಕಾರ್ಯ, ಜವಾಬ್ದಾರಿಯ ಜೊತೆಗೆ ''ನಾಮಜಪ'' ಕ್ಕೆ ಮುಡಿಪಾಗಿಡಬೇಕು. ಆಗಲೇ ಪರಮಾತ್ಮನನ್ನು ಸಾಕ್ಷಾತ್ಕರಿಸಿ, ಇತರ ಜೀವಿಗಳಿಗೆ ಉದ್ಧಾರವಾಗುವ ದಾರಿಯನ್ನು ತೋರಿಸಬಹುದು. ಇದು ಬಹಳ ಉನ್ನತವಾದ ಗುರಿ. ಇಲ್ಲಿಯೇ ಹೇಳುವುದು ''ತದಗ್ರೇ ಸರ್ವತಃ ಶಿವಾಯ ನಮಃ'' ಎಂದು. ಇನ್ನು ಮುಂದೆ ಸಾಧಿಸಬೇಕಾದ ಕೆಲಸವಿಲ್ಲ.

ಇಂತಹವರು ಸಾಕ್ಷಾತ್ ಪರಮಾತ್ಮನೇ ಆಗುತ್ತಾರೆ. ಮತ್ತು ಅವನ ಶಕ್ತಿಯನ್ನೇ ಪಡೆಯುತ್ತಾರೆ. ತಮ್ಮ ಪ್ರಭಾವವನ್ನು ಇತರರಿಗೆ ಹಂಚುತ್ತಾರೆ. ಇತರರಿಗೆ ಪರಮಾತ್ಮನೇ ಆಗುತ್ತಾರೆ. ಇದೇ ಸಜ್ಜನರ, ಸತ್ಪುರುಷರ, ಸಂನ್ಯಾಸಿಗಳ, ಪರಮ ಸದ್ಗುರುಗಳ ಆದರ್ಶ ಜೀವನ - ಇವರೆಲ್ಲ ಜೀವನ್ಮುಕ್ತರು. ಪ್ರಾಪಂಚಿಕ ಆಸಕ್ತಿಯೇ ಇರುವುದಿಲ್ಲ. ಹಾಗೆಂದರೆ ಪಾರಮಾರ್ಥಿಕದಲ್ಲಿಯೂ ಆಸಕ್ತಿ ಇರುವುದಿಲ್ಲ. ಇವರು ಸಾಧಿಸಬೇಕಾದ್ದನ್ನು ಸಾಧಿಸಿದ್ದಾಗಿರುತ್ತೆ. ಮುಂದೆ ಸಾಧಿಸುವುದು ಏನೂ ಉಳಿದಿರುವುದಿಲ್ಲ. ಇವರಿಗೆ ''ತದಗ್ರೇ ಸರ್ವತಃ ಶಿವಾಯ ನಮಃ'' ಎನ್ನಬೇಕು.

---